ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ — ೯

ಪ್ರಧಾನ ಸಂಪಾದಕ :
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ಹಣ ಪ್ರಪಂಚ




ಶ್ರೀ|| ಎಸ್. ಎಸ್. ಸುಬ್ಬರಾವ್
ಎಂ.ಎ. (ಕ್ಯಾಂಟಬ್.), ಬಾರ್-ಅಟ್-ಲಾ, ಅವರ
ಮುನ್ನುಡಿಯೊಡನೆ



ಲೇಖಕರು :
ವಿ. ಸೀತಾರಾಮಯ್ಯ

ಮೈಸೂರು :
**ಮೈಸೂರು ವಿಶ್ವವಿದ್ಯಾನಿಲಯ**
೧೯೩೭

# FOREWORD

I have been asked to write a foreword to Mr. V. Sitharamiah's monograph on **Finance** and I do so with great pleasure for two reasons. For one–, Mr. Sitharamiah is an old pupil of mine for whom I have learnt to have very high regard. For another, the present work constitutes an important contribution not only to the spread of correct knowledge among the people of the country but also to the development of Kannada on, what I consider, right lines. We have had too long a spell of Poetry and Drama, with a variation of stories, romantic and otherwise. I believe what the people in Karnataka need is a large addition to Kannada Prose of works on Economics, Politics and other branches of Social Sciences and works also on various branches of the Physical and Natural Sciences. 'Literature of Knowledge' is what our people urgently need at the present time, and in this respect Kannada is singularly lacking. The temptation to write verse or drama is insidious and therefore it is a matter for special satisfaction to me as a student of Economics that a pupil of mine, with acknowledged competence both in Economics and Kannada, should have turned towards this most fruitful field of service.

As regards the work itself, I need say very little. I have had numerous opportunities of discussing

with Mr. Sitharamiah the several chapt
were written by him, and I can tes
scholarship and thorough knowledge wit
has handled the extremely complicated
are grouped under the general term
It is a first venture, and it is quite p
both exposition and terminology may nee
but that is inevitable and not at all a s
in the case of a pioneer work like this.
the work will find a large number of r
will be the forerunner of others, which w
to fill the long-felt gaps among Kannad
our shelves.

BANGALORE N.S. SUB
10 · 3 · 1937

# ಮುನ್ನುಡಿ

ಶ್ರೀ ವಿ. ಸೀತಾರಾಮಯ್ಯನವರ 'ಹಣ ಪ್ರಪಂಚ'ಕ್ಕೆ ಮುನ್ನುಡಿ ಬರೆಯಬೇಕೆಂದು ನನ್ನನ್ನು ಕೇಳಿದ್ದಾರೆ. ಅದನ್ನು ಬರೆಯಲು ನನಗೆ ಎರಡು ಕಾರಣಗಳಿಂದ ಬಹಳ ಸಂತೋಷವಾಗುತ್ತದೆ: ಒಂದು, ಸೀತಾರಾಮಯ್ಯನವರು ನನ್ನ ಹಿಂದಿನ ಶಿಷ್ಯರಲ್ಲಿ ಒಬ್ಬರು; ಅವರ ವಿಷಯದಲ್ಲಿ ನನಗೆ ಹೆಚ್ಚಿನ ವಿಶ್ವಾಸವುಂಟು. ಎರಡನೆಯದಾಗಿ, ದೇಶದ ಜನದಲ್ಲಿ ಸರಿಯಾದ ತಿಳಿವಳಿಕೆಯನ್ನು ಹರಡುವ ಕೆಲಸದಲ್ಲಿ ಈ ಪುಸ್ತಕ ಒಂದು ಮುಖ್ಯ ಸಾಧನವಾಗುವುದು. ಅದರ ಜೊತೆಗೆ ನನಗೆ ಸರಿಯೆಂದು ತೋರುವ ದಾರಿಯಲ್ಲಿ ಕನ್ನಡ ಭಾಷೆ ಬೆಳೆಯುವುದಕ್ಕೂ ಇದು ಸಾಧಕವಾಗುವುದು. ಕವಿತೆ ಮತ್ತು ನಾಟಕಗಳಿಂದಲೂ, ಅವು ತಪ್ಪಿದರೆ, ಕಾದಂಬರಿ ಸಣ್ಣಕಥೆ ಮುಂತಾದ ಕಟ್ಟು ಕಥೆಗಳಿಂದಲೂ ಬಹುಕಾಲ ನಾವು ತೃಪ್ತರಾಗುತ್ತಿದ್ದೆವು. ಈಗ ಕರ್ನಾಟಕದಲ್ಲಿ ಜನಕ್ಕೆ ಆವಶ್ಯಕವಾಗಿರುವುದು ಹೆಚ್ಚು ಹೆಚ್ಚಾಗಿ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದ ಸಮಾಜಶಾಸ್ತ್ರದ ಬೇರೆ ಬೇರೆ ಅಂಗಗಳನ್ನೂ, ಭೌತ ಮತ್ತು ಪ್ರಕೃತಿ ವಿಜ್ಞಾನದ ವಿವಿಧ ಶಾಖೆಗಳನ್ನೂ ವಿವರಿಸುವ ಗದ್ಯ ಗ್ರಂಥಗಳು. ಎಂದರೆ ನಮ್ಮ ಜನರಿಗೆ ಈಗ್ಗೆ ಅತ್ಯಗತ್ಯವಾಗಿ ಬೇಕಾಗಿರುವುದು ಜ್ಞಾನಾಭಿವೃದ್ಧಿ ಮಾಡುವ ಸಾಹಿತ್ಯ. ಈ ಭಾಗದಲ್ಲಿ ಕನ್ನಡ ವಿಶೇಷ ಕೊರತೆಯುಳ್ಳದ್ದಾಗಿದೆ. ಪದ್ಯವನ್ನೊ ನಾಟಕವನ್ನೊ ಬರೆಯಲು ಆಕರ್ಷಣೆ ಯಾವಾಗಲೂ ಹೆಚ್ಚು; ಆದುದರಿಂದ ಅರ್ಥಶಾಸ್ತ್ರ, ಕನ್ನಡ ಎರಡರಲ್ಲಿಯೂ ವಿದಿತವಾದ ಯೋಗ್ಯತೆಯುಳ್ಳ ನನ್ನ ಶಿಷ್ಯರೊಬ್ಬರು ಅತ್ಯಂತ ಫಲಕಾರಿಯಾದ ಈ ಸೇವಾಕ್ಷೇತ್ರದ ಕಡೆಗೆ ತಿರುಗಿದುದು ಅರ್ಥಶಾಸ್ತ್ರದ ವಿದ್ಯಾರ್ಥಿಯಾದ ನನಗೆ ವಿಶೇಷ ತೃಪ್ತಿಯನ್ನು ಉಂಟುಮಾಡುವ ಸಂಗತಿಯಾಗಿದೆ.

ಗ್ರಂಥವನ್ನೇ ಕುರಿತು ನಾನು ಹೆಚ್ಚಿಗೆ ಹೇಳಬೇಕಾಗಿಲ್ಲ. ಸೀತಾರಾಮಯ್ಯನವರು ಬೇರೆ ಬೇರೆ ಪ್ರಕರಣಗಳನ್ನು ಬರೆಯುತ್ತಿರುವಾಗಲೇ ದೊರೆತ ಹಲವು ಅವಕಾಶಗಳಲ್ಲಿ ಅವನ್ನು ಅವರೊಡನೆ ಚರ್ಚಿಸಿದ್ದೇನೆ. ಇಂಗ್ಲಿಷಿನಲ್ಲಿ 'ಫಿನಾನ್ಸ್' ಎಂಬ ಒಟ್ಟು ಹೆಸರಿನಲ್ಲಿ ಅಡಕವಾಗುವ ಅತಿ ತೊಡಕಿನ ವಿಷಯಗಳನ್ನು ವಿವರಿಸುವುದರಲ್ಲಿ ಅವರು

with Mr. Sitharamiah the several chapters as they were written by him, and I can testify to the scholarship and thorough knowledge with which he has handled the extremely complicated topics that are grouped under the general term '**Finance**'. It is a first venture, and it is quite possible that both exposition and terminology may need revision; but that is inevitable and not at all a serious fault in the case of a pioneer work like this. I hope that the work will find a large number of readers, and will be the forerunner of others, which will help us to fill the long-felt gaps among Kannada books on our shelves.

BANGALORE
10 · 3 · 1937

N.S. SUBBA RAO

# ಮುನ್ನುಡಿ

ಶ್ರೀ ಪಿ. ಸೀತಾರಾಮಯ್ಯನವರ 'ಹಣ ಪ್ರಪಂಚ'ಕ್ಕೆ ಮುನ್ನುಡಿ ಬರೆಯಬೇಕೆಂದು ನನ್ನನ್ನು ಕೇಳಿದ್ದಾರೆ. ಅದನ್ನು ಬರೆಯಲು ನನಗೆ ಎರಡು ಕಾರಣಗಳಿಂದ ಬಹಳ ಸಂತೋಷವಾಗುತ್ತದೆ: ಒಂದು, ಸೀತಾರಾಮಯ್ಯನವರು ನನ್ನ ಹಿಂದಿನ ಶಿಷ್ಯರಲ್ಲಿ ಒಬ್ಬರು; ಅವರ ವಿಷಯ ದಲ್ಲಿ ನನಗೆ ಹೆಚ್ಚಿನ ವಿಶ್ವಾಸವುಂಟು. ಎರಡನೆಯದಾಗಿ, ದೇಶದ ಜನದಲ್ಲಿ ಸರಿಯಾದ ತಿಳಿವಳಿಕೆಯನ್ನು ಹರಡುವ ಕೆಲಸದಲ್ಲಿ ಈ ಪುಸ್ತಕ ಒಂದು ಮುಖ್ಯ ಸಾಧನವಾಗುವುದು. ಅದರ ಜೊತೆಗೆ ನನಗೆ ಸರಿಯೆಂದು ತೋರುವ ದಾರಿಯಲ್ಲಿ ಕನ್ನಡ ಭಾಷೆ ಬೆಳೆಯುವುದಕ್ಕೂ ಇದು ಸಾಧಕ ವಾಗುವುದು. ಕವಿತೆ ಮತ್ತು ನಾಟಕಗಳಿಂದಲೂ, ಅವು ತಪ್ಪಿದರೆ, ಕಾದಂಬರಿ ಸಣ್ಣಕಥೆ ಮುಂತಾದ ಕಟ್ಟುಕಥೆಗಳಿಂದಲೂ ಬಹುಕಾಲ ನಾವು ತೃಪ್ತರಾಗುತ್ತಿದ್ದೆವು. ಈಗ ಕರ್ಣಾಟಕದಲ್ಲಿ ಜನಕ್ಕೆ ಆವಶ್ಯಕ ವಾಗಿರುವುದು ಹೆಚ್ಚು ಹೆಚ್ಚಾಗಿ ಅರ್ಥಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದ ಸಮಾಜಶಾಸ್ತ್ರದ ಬೇರೆ ಬೇರೆ ಅಂಗಗಳನ್ನೂ, ಭೌತ ಮತ್ತು ಪ್ರಕೃತಿ ವಿಜ್ಞಾನದ ವಿವಿಧ ಶಾಖೆಗಳನ್ನೂ ವಿವರಿಸುವ ಗದ್ಯಗ್ರಂಥಗಳು. ಎಂದರೆ ನಮ್ಮ ಜನರಿಗೆ ಈಗ್ಗೆ ಅತ್ಯಗತ್ಯವಾಗಿ ಬೇಕಾಗಿರುವುದು ಜ್ಞಾನಾಭಿವೃದ್ಧಿ ಮಾಡುವ ಸಾಹಿತ್ಯ. ಈ ಭಾಗದಲ್ಲಿ ಕನ್ನಡ ವಿಶೇಷ ಕೊರತೆಯುಳ್ಳ ದ್ದಾಗಿದೆ. ಪದ್ಯವನ್ನೂ ನಾಟಕವನ್ನೂ ಬರೆಯಲು ಆಕರ್ಷಣೆ ಯಾವಾಗಲೂ ಹೆಚ್ಚು; ಆದುದರಿಂದ ಅರ್ಥಶಾಸ್ತ್ರ, ಕನ್ನಡ ಎರಡರಲ್ಲಿಯೂ ವಿದಿತವಾದ ಯೋಗ್ಯತೆಯುಳ್ಳ ನನ್ನ ಶಿಷ್ಯರೊಬ್ಬರು ಅತ್ಯಂತ ಫಲಕಾರಿಯಾದ ಈ ಸೇವಾ ಕ್ಷೇತ್ರದ ಕಡೆಗೆ ತಿರುಗಿದುದು ಅರ್ಥಶಾಸ್ತ್ರದ ವಿದ್ಯಾರ್ಥಿಯಾದ ನನಗೆ ವಿಶೇಷ ತೃಪ್ತಿಯನ್ನು ಉಂಟುಮಾಡುವ ಸಂಗತಿಯಾಗಿದೆ.

ಗ್ರಂಥವನ್ನೇ ಕುರಿತು ನಾನು ಹೆಚ್ಚಿಗೆ ಹೇಳಬೇಕಾಗಿಲ್ಲ. ಸೀತಾರಾಮಯ್ಯನವರು ಬೇರೆ ಬೇರೆ ಪ್ರಕರಣಗಳನ್ನು ಬರೆಯುತ್ತಿರು ವಾಗಲೇ ದೊರೆತ ಹಲವು ಅವಕಾಶಗಳಲ್ಲಿ ಅವನ್ನು ಅವರೊಡನೆ ಚರ್ಚಿಸಿದ್ದೇನೆ. ಇಂಗ್ಲಿಷಿನಲ್ಲಿ 'ಫಿನಾನ್ಸ್' ಎಂಬ ಒಟ್ಟು ಹೆಸರಿನಲ್ಲಿ ಅಡಕವಾಗುವ ಅತಿ ತೊಡಕಿನ ವಿಷಯಗಳನ್ನು ವಿವರಿಸುವುದರಲ್ಲಿ ಅವರು

ಪಾಂಡಿತ್ಯವನ್ನೂ ತುಂಬಿದ ತಿಳಿವಳಿಕೆಯನ್ನೂ ಪ್ರಯೋಗಿಸಿದ್ದಾರೆಂದು ನಾನು ಗೊತ್ತಾಗಿ ಹೇಳಬಲ್ಲೆನು. ಇಂತಹ ಸಾಹಸಗಳಲ್ಲಿ ಈ ಗ್ರಂಥವೇ ಮೊದಲನೆಯದಾಗಿರುವುದರಿಂದ ವಿಷಯದ ಪ್ರತಿಪಾದನೆಯಲ್ಲಿಯೂ ಪಾರಿಭಾಷಿಕ ಪದ ಪ್ರಯೋಗದಲ್ಲಿಯೂ ಪರಿಷ್ಕರಣಕ್ಕೆ ಇನ್ನೂ ಅವಕಾಶ ಇರಬಹುದು. ಆದರೆ ಅದು ಅನಿವಾರ್ಯ. ಈ ಬಗೆಯ ಪ್ರಥಮ ಸಾಹಸಗಳಲ್ಲಿ ಅದೇನೂ ದೊಡ್ಡ ದೋಷವೂ ಅಲ್ಲ. ಈ ಗ್ರಂಥವನ್ನು ಅನೇಕರು ಓದುವರೆಂದೂ ನಮ್ಮ ಪುಸ್ತಕ ಭಂಡಾರಗಳಲ್ಲಿ ಕನ್ನಡ ಪುಸ್ತಕಗಳ ನಡುವೆ ಬಹುಕಾಲದಿಂದ ಇರುವ ಲೋಪಗಳನ್ನು ತುಂಬಬೇಕಾಗಿರುವ ಪುಸ್ತಕಗಳಿಗೆ ಇದು ಮುಂದಾಳಾಗುವುದೆಂದೂ ನಾನು ನಂಬಿದ್ದೇನೆ.

ಬೆಂಗಳೂರು
೧೦.೩.೧೯೩೭

ಎಸ್.ಎಸ್. ಸುಬ್ಬರಾವ್

# ಅರಿಕೆ

ನಾನು ಕೊಟ್ಟ ತೊಂದರೆಗಳನ್ನೆಲ್ಲಾ ಸಹಿಸಿ, ಕಷ್ಟ ವಿಷಯವನ್ನು ಸುಲಭಮಾಡಿ ಗ್ರಂಥವನ್ನು ಬರೆದುಕೊಟ್ಟ ಸುಪ್ರಸಿದ್ಧ ಸಾಹಿತಿಗಳಾದ ಶ್ರೀಮಾನ್ ವಿ. ಸೀತಾರಾಮಯ್ಯನವರಿಗೂ, ಗ್ರಂಥ ರಚನೆಗೆ ಉತ್ಕೃಷ್ಟವಾದ ಸಲಹೆಗಳನ್ನಿತ್ತು ಬೆಲೆಯುಳ್ಳ ಮುನ್ನುಡಿಯನ್ನು ಅನುಗ್ರಹಿಸಿದ ಅರ್ಥಶಾಸ್ತ್ರಾಧಿಕಾರಿಗಳೂ ಶಿಕ್ಷಣ ಶಾಖಾಧಿಕಾರಿಗಳೂ ಆದ ಶ್ರೀಮಾನ್ ಎನ್. ಎಸ್. ಸುಬ್ಬರಾಯರವರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಜನಾಂಗದ ಸರ್ವ ಪುರುಷಾರ್ಥಗಳಿಗೂ ಆರ್ಥಿಕಜ್ಞಾನ ಮತ್ತು ಸಂಪತ್ತು ತಳಹದಿ ಎಂದು ಅರಿತುಕೊಳ್ಳುತ್ತಿರುವ ಕಾಲದಲ್ಲಿ ಈ ಸಣ್ಣ ಗ್ರಂಥದಿಂದ ಕನ್ನಡಿಗರಿಗೆ ಪ್ರಯೋಜನವಾದೀತೆಂದು ಪ್ರಕಟನ ಸಮಿತಿ ನಂಬುತ್ತದೆ.

ಬೆಂಗಳೂರು
೧೦.೩.೧೯೩೭

ಬಿ. ಎಂ. ಶ್ರೀಕಂಠಯ್ಯ
ಪ್ರಧಾನ ಸಂಪಾದಕ

* * *

ಈ ಪುಸ್ತಕವನ್ನು ಬರೆಯುವಂತೆ ಅಪ್ಪಣೆಮಾಡಿದ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪ್ರಕಟನ ಸಮಿತಿಯ ಅಧಿಕಾರಿಗಳಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಸಮಾಜದಲ್ಲಿ ಹಣದ ಸಂಚಾರ, ಅದರ ಕಾರ್ಯ ಮತ್ತು ವ್ಯವಸ್ಥೆಗಳಿಗೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಕುರಿತು ಇದರಲ್ಲಿ ನಾಲ್ಕು ಮಾತು ಹೇಳಿದೆ. ಆರ್ಥಿಕ ಉದ್ಯಮಗಳನ್ನು ಹಣದ ಕಡೆಯಿಂದ ನೋಡುವ ನೋಟ ಮಾತ್ರ ಇಲ್ಲಿನದು. ಉದ್ಯೋಗ, ಉತ್ಪತ್ತಿ, ಸಂಪತ್ತಿನ ಹಂಚಿಕೆ, ಭೋಗದ ವಿತರಣೆ, ಜೀವನ ಸೌಕರ್ಯ ರಚನೆ, ಮುಂತಾದವನ್ನೇ ಕುರಿತು ಸ್ಥಿತಿಗತಿ ಧರ್ಮಗಳನ್ನು ವಿವರಿಸುವ ಕೆಲಸ ಇನ್ನೂ ಅನೇಕವಾಗಿ ಆಗಬೇಕಾಗಿದೆ. ವಿಷಯದ ಒಂದು ಮುಖ ಮಾತ್ರ ಇಲ್ಲಿ ಕಾಣಿಸುವುದು. ಸುಸ್ಥಾಪಿತವಾಗಿಲ್ಲದ ಇನ್ನೂ ಚರ್ಚೆ ವಿವಾದಗಳಲ್ಲಿರುವ ಸಂಗತಿಗಳನ್ನು ತೇಲಿಸಿ ಬರೆದಿದೆ; ಇಲ್ಲವೇ ಸರಿಸಿ, ದಾಟಿ ನಡೆಯಲಾಗಿದೆ.

ಸಮಾಜದ ಅಚ್ಚು, ಕಟ್ಟು, ಕಾಯಿದೆ, ಗುರಿ ನಾಲ್ಕು ಕಡೆಯಲ್ಲಿಯೂ ಬದಲಾಗುತ್ತಿರುವ ಈ ಕಾಲದಲ್ಲಿ ಅರ್ಥಶಾಸ್ತ್ರದ ಮೂಲ ಸೂತ್ರಗಳಲ್ಲಿಯೇ ಹಲವು ವ್ಯತ್ಯಾಸಗಳುಂಟಾಗಿವೆ. ಹಣ ಪ್ರಪಂಚಕ್ಕೆ ಸೇರಿದ ಶಾಸ್ತ್ರಾಂಶಗಳಲ್ಲಿ ಈ ಪುಸ್ತಕವನ್ನು ಬರೆಯತೊಡಗಿದಂದಿನಿಂದ ಈಚೆಗೆ ತೀವ್ರವಾದ ವ್ಯತ್ಯಾಸಗಳಾಗಿರುವುದರಿಂದ ಮೊದಲೇ ಕಷ್ಟವಾದ ಇಲ್ಲಿನ ವಿಷಯ ವಿವರಣೆ ಮತ್ತಷ್ಟು ಕಷ್ಟವಾಗಿರುವುದು. ಸುಮಾರು ಮೂರು ನಾಲ್ಕನ್ನು ಬಿಟ್ಟರೆ ಅರ್ಥಶಾಸ್ತ್ರವನ್ನು ಕುರಿತ ಪುಸ್ತಕಗಳು ಕನ್ನಡದಲ್ಲಿ ನಮ್ಮ ಕಡೆಯಲ್ಲಂತೂ ಇಲ್ಲ. ಪಾರಿಭಾಷಿಕ ಪದಗಳು ಬೇಕಾದುವೆಲ್ಲ ದೊರಕವು: ಅಲ್ಲದೆ ಕೆಲವು ಬಗೆಯ ಕೆಲಸ, ಸಂಸ್ಥೆ, ನಡವಳಿಕೆಗಳ ಬಳಕೆ, ಅನುಭವ ನಮ್ಮಲ್ಲಿ ಯಾರಿಗೂ ಇಲ್ಲ. ಒಂದು ನೋಟಿನಲ್ಲಿ ಏನು ಬರೆದಿರುವುದೆಂದು ಅರಿತ ಜನ ಕೂಡ ವಿರಳ. ಪರಿಚಿತವಲ್ಲದ ಹಲವು ಸಂಗತಿಗಳನ್ನು ಹೇಳಿದ ಮೊರತು, ವಿಷಯವನ್ನು ಹೊಗುವುದು ಹಾಗಿರಲಿ ಅದರ ಹತ್ತಿರ ಸುಳಿಯುವುದು ಕೂಡ ಅಸಾಧ್ಯವಾಗುತ್ತದೆ. ಆದರೂ ಹಣ ಕಾಸು, ಲೇವಾದೇವಿ, ವ್ಯಾಪಾರ, ಮಾರುಮೆ, ಬ್ಯಾಂಕು ವ್ಯವಹಾರ ಮುಂತಾದವಕ್ಕೆ ಸಂಬಂಧಿಸಿದ ಸಮಸ್ಯೆ ವಿಚಾರಗಳು ದಿನಬೆಳಗೆದ್ದರೆ ಏಳುತ್ತಿರುವ ಈ ಕಾಲದಲ್ಲಿ ವಿಷಯದ ನೆಲಸು ಯಾವುದು? ಯಾವುದರ ಗುಣ, ಕಾರ್ಯ, ಹದ ಏನು ಎಂಬುದರ ಲಘು ಪರಿಚಯವಾದರೂ ಈ ಪುಸ್ತಕದಿಂದ ಆಗುವುದಾದರೆ ನನ್ನ ಕಾರ್ಯ ಸಫಲವಾದಂತೆ.

ಇದನ್ನು ನಾನು ಬರೆಯಲು ಸಾಧ್ಯವಾದುದು ನನ್ನ ಪೂಜ್ಯ ಗುರುಗಳಾದ ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ.ಎ. (ಕ್ಯಾಂಟಬ್.), ಬಾರ್-ಅಟ್-ಲಾ, ಅವರು ನನಗೆ ಮೊದಲಿಂದಲೂ ಕೊಟ್ಟ ಸಹಾಯದಿಂದ, ಧೈರ್ಯದಿಂದ. ಅರ್ಥಶಾಸ್ತ್ರದ ಹೃದಯವನ್ನು ತೋರಿಸಿ ಅದರಲ್ಲಿ ಶ್ರದ್ಧೆ ಹುಟ್ಟಿಸಿದವರು ಅವರು. ಇಲ್ಲಿ, ವಿಷಯವನ್ನು ನಕ್ಷೆಹಾಕುವ ಮೊದಲಿಂದ ಹಿಡಿದು ಪುಸ್ತಕ ಮುಗಿಯುವವರೆಗೂ ಈಗಿಗೂ ಅವರ ಸಲಹೆ ನನ್ನ ಮನಸ್ಸನ್ನೂ ಬರವಣಿಗೆಯನ್ನೂ ಸಂತತವಾಗಿ ನಡಸಿದೆ. ಅಮೂಲ್ಯವಾದ ವಾತ್ಸಲ್ಯಪೂರಿತವಾದ ಅವರ ಮುನ್ನುಡಿಯಿಂದ ನನಗೂ ಈ ಪುಸ್ತಕಕ್ಕೂ ಆಶೀರ್ವಾದ ದೊರಕಿದುದು ನನ್ನ ಒಂದು ಸೌಭಾಗ್ಯ. ಇಲ್ಲಿನ ನಾಲ್ಕು

ಅಕ್ಷರ ಅವರ ಒಪ್ಪಿಗೆ ಪಡೆದು, ಕಿರಿಯನೊಬ್ಬನ ಕಾಣಿಕೆಯೆಂದು ಅದನ್ನು ಅವರು ಸ್ವೀಕರಿಸುವರಾದರೆ ನಾನು ಕೃತಾರ್ಥನಾದೆನು.

ಕೈಬರಹದ ಸ್ಥಿತಿಯಲ್ಲಿಯೂ ಅಚ್ಚಿನ ಕರಡು ಪ್ರತಿಗಳ ಪರಿಶೋಧನೆಯಲ್ಲಿಯೂ ಈ ಪುಸ್ತಕವನ್ನು ಕಣ್ಣಲ್ಲಿ ಕಣ್ಣಿಟ್ಟು ಹಲವಾರು ಸಲ ಬೇಸರವಿಲ್ಲದೆ ಓದಿ, ತಿದ್ದಿ, ಹಸಗಿ ಮಾಡಿರುವ ಉಪಕಾರ ನನ್ನ ಇನ್ನೊಬ್ಬ ಪೂಜ್ಯ ಗುರುಗಳಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರದು. ವಿಷಯವನ್ನು ಸ್ಫುಟಗೊಳಿಸಿ ಬರವಣಿಗೆಯನ್ನು ಆದಷ್ಟು ವಿಶದ ಮಾಡಿ ಕನ್ನಡಿಗರಿಗೆ ತಿಳಿಯುವಂತೆ ಮಾಡಿರುವುದು ಅವರ ಕೈ. ಹಸ್ತಪ್ರತಿಯನ್ನು ಬರೆದುಕೊಟ್ಟಾಗಿನಿಂದ ಇದಕ್ಕಾಗಿ ಅವರು ವಹಿಸಿರುವ ತೊಂದರೆ, ತೋರಿಸಿರುವ ಕ್ಷಮೆ ಆದರಗಳಿಗೆ ನಾನು ಸರ್ವಥಾ ಋಣಿಯಾಗಿದ್ದೇನೆ.

ಕತ್ತಲಲ್ಲಿ ತೆವಳುತ್ತಿದ್ದ ನನಗೆ ಹಲವು ಬಗೆಯಲ್ಲಿ ಬೆಳಕು ಕೊಟ್ಟಿರುವ ಈ ಗುರುವರ್ಯರಿಬ್ಬರಿಗೂ ನನ್ನ ಅನಂತವಾದ ಭಕ್ತಿಯನ್ನು ಅರ್ಪಿಸುತ್ತಿದ್ದೇನೆ.

ಇಲ್ಲಿ ವಿಷಯವನ್ನು ವಿಸ್ತರಿಸುವ ರೀತಿ, ಬಹುತರ, ಕೇಂಬ್ರಿಜ್ ಪ್ರಗತಿ ಪಂಥಕ್ಕೆ ಸೇರಿದುದು. ಅದರಲ್ಲಿಯೂ ಜೆ. ಎಂ. ಕೇನ್ಸ್ ಅವರ ದಾರಿಯಲ್ಲಿ ನಡೆದುದು. ಅವರ ಸ್ಫೂರ್ತಿಯ ವಜ್ರವಾಣಿಯಾಗಲಿ ಪಾಂಡಿತ್ಯದ ವೈಭವವಾಗಲಿ ಇಲ್ಲಿಲ್ಲ. ಅವರ ನೆರಳಿನಲ್ಲಿ ಹತ್ತಿರ ಹತ್ತಿರ ಕುಂಟಿ ನಡೆಯಲು ಪ್ರಯತ್ನ ಮಾಡಿದ್ದೇನೆ. ಮ್ಯಾಕ್ಮಿಲನ್ ಸಮಿತಿಯ ವರದಿಯಿಂದಲೂ ಇಂಡಿಯನ್ ಬ್ಯಾಂಕಿಂಗ್ ಪರಿಶೀಲನ ಸಮಿತಿಯ ವರದಿಯಿಂದಲೂ ಪಿಗೂ, ಹಾಟ್ರೀ, ರಾಬರ್ಟ್‌ಸನ್, ಸ್ಟ್ಯಾಂಪ್, ಕ್ಯಾಸೆಲ್, ಗ್ರೆಗೊರಿ, ಡಾಲ್ಟನ್, ಗ್ರುನ್ಸೆಲ್, ವಾಡಿಯಾ ಮುಂತಾದವರ ಬರವಣಿಗೆಯಿಂದಲೂ ನನಗೆ ಬಹಳ ಪ್ರಯೋಜನ ದೊರೆತಿದೆ. ಇಕಾನೊಮಿಸ್ಟ್ ಇಂಡಿಯನ್ ಫಿನಾನ್ಸ್, ಮುಂತಾದ ವಾರಪತ್ರಿಕೆಗಳಲ್ಲಿಯೂ ಲೀಗ್ ಆಫ್ ನೇಷನ್ಸಿನ ಪ್ರಕಟನೆಗಳಲ್ಲಿಯೂ ದೊರಕುವ ಅಂಕಿ ಅಂಶಗಳ ಸಹಾಯವನ್ನು ಎರಡನೆಯ ಅನುಬಂಧದ ತುಂಬ ಕಾಣಬಹುದು. ಪ್ರತ್ಯಕ್ಷ ಪರೋಕ್ಷವಾಗಿ ದೊರೆತ ಈ ಎಲ್ಲ ಸಹಾಯಗಳಿಗೂ ನಾನು ಋಣಿ.

ಇದರ ಪ್ರತಿಯನ್ನು ತಯಾರಿಸುವಾಗಲೂ ಇತರವಾಗಿಯೂ ಉಪಕರಿಸಿದ ನನ್ನ ಸಹೋದ್ಯೋಗಿಗಳಾದ ಶ್ರೀ॥ ಎಸ್. ಮಂಜನಾಥ್, ಎಂ.ಎ. ಅವರಿಗೂ ಆ ಕಡೆ ಬಳಕೆಯಲ್ಲಿರುವ ಪರಿಭಾಷೆಯ ಅಂಶಗಳನ್ನು ಒದಗಿಸಿ ನೆರವಾದ ಮುಂಬೈ ಸರಕಾರದ ಸೆಕ್ರೆಟರಿಗಳೂ ಗೆಳೆಯರೂ ಆದ ಶ್ರೀ॥ ಎಚ್. ವಿ. ಆರ್. ಅಯ್ಯಂಗಾರ್, ಐ.ಸಿ.ಎಸ್. ಅವರಿಗೂ ನನ್ನ ಅಭಿವಂದನೆಗಳು.

ಇದನ್ನು ಅಚ್ಚು ಮಾಡುವುದರಲ್ಲಿ ಎಂದಿನಂತೆ ಎಲ್ಲ ಸೌಕರ್ಯಗಳನ್ನೂ ಒದಗಿಸಿಕೊಟ್ಟ ಬೆಂಗಳೂರು ಪ್ರೆಸ್ಸಿನವರಿಗೂ ವಂದನೆ.

ಬೆಂಗಳೂರು
೧೦.೩.೧೯೩೭

ವಿ. ಸೀತಾರಾಮಯ್ಯ

# ವಿಷಯ ಸೂಚಿಕೆ



## ಅನುಬಂಧಗಳು

# ವಿಷಯ ಸಂಗ್ರಹ

ಈಗಿನ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಂತೆ ದಿನಚರಿಯ ಬದುಕಿನಲ್ಲಿ ಅನೇಕ ಮೇಲು ಬೀಳುಗಳೂ ಕಷ್ಟ ಸುಖಗಳೂ ನ್ಯಾಯ ಅನ್ಯಾಯಗಳೂ ಹಣದಿಂದ ಉಂಟಾಗುತ್ತವೆ. ಸಂಪತ್ತಿನ ಉತ್ಪತ್ತಿ, ಮಾರುವೆ, ಹಂಚಿಕೆ, ಭೋಗಸಾಧನೆಗಳಲ್ಲೆಲ್ಲ ಹಣದ ಸ್ಥಾನ ದೊಡ್ಡದು. ಹಣವೆಂದರೆ ಚಾಲ್ತಿ ಹಣ: ಜನರ ಸ್ವಂತದ್ದಾಗಲಿ ಸಾಲದ್ದಾಗಲಿ ದೇಶದಲ್ಲಿ ಸಂಚರಿಸುವ ನಾಣ್ಯ, ನೋಟು, ಚೆಕ್ಕು. ಸರಕಾರಗಳವರೂ ಬ್ಯಾಂಕು ಗಳವರೂ ಅದರ ಪ್ರಚಾರಕರು.

ಇತರ ಪದಾರ್ಥಗಳಿಗೆ ಹೇಗೋ ಹಾಗೆಯೇ ಹಣಕ್ಕೂ ಬೆಲೆಯುಂಟು. ಈ ಬೆಲೆ ಏರಿಳಿಯುವುದುಂಟು. ಅಂಥ ಏರಿಳಿತಗಳಿಂದ ಜನವರ್ಗಕ್ಕೆ ಬಗೆ ಬಗೆಯ ತೊಂದರೆ ತೊಡಕು ಅನ್ಯಾಯ ಲಾಭ ನಷ್ಟ ಆಗುತ್ತವೆ. ಆದ್ದರಿಂದ ಹಣದ ಪ್ರಚಾರಕರು ಅದನ್ನು ಒಂದು ಹದದಲ್ಲಿ ಹದ್ದಿನಲ್ಲಿ ನಡಸಬೇಕಾದುದು ಅಗತ್ಯವಾಗುವುದು.

ಒಳವ್ಯಾಪಾರದಲ್ಲಿ ಧಾರಣೆವಾಸಿಗಳೂ, ಹೊರವ್ಯಾಪಾರದಲ್ಲಿ ಮಾರುವೆಯ ದರವೂ ಹಣದ ಬೆಲೆಯನ್ನು ಅಳೆಯುವುವು. ಇವೆರಡಕ್ಕೂ ಸಂಬಂಧವಿದೆ. ಧಾರಣೆವಾಸಿಯನ್ನು ಒಂದು ಧಾತುವಿನಲ್ಲಿ ನಡಸಿದರೆ ದೇಶದ ಒಳಸೌಖ್ಯವನ್ನು ಸಾಧಿಸಬಹುದಲ್ಲದೆ ಮಾರುವೆಯ ದರವನ್ನು ತಿದ್ದಿ ಸರಿಮಾಡಿಕೊಳ್ಳಬಹುದೆಂದು ಹಲವರ ಮತ. ಇದನ್ನು ಸಾಧಿಸಲು ಸಂಸ್ಥೆ ಸಾಧನಗಳೂ ಕಾರ್ಯವಿಧಾನಗಳೂ ಪೇಟೆಯ ವ್ಯವಸ್ಥೆಯೂ ಹೇಗಿರ ಬೇಕು? ಯಾವ ನಿಯಮ ಶಾಸನಗಳು ಕಾರ್ಯಗತಿಯನ್ನು ನಿರ್ಧರಿಸಬೇಕು? ಎಂಬ ಸಂಗತಿಗಳು ಇಲ್ಲಿ ಮುಖ್ಯವಾಗುವುವು.

ಚಾಲ್ತಿ ಹಣ (೧) ಕಿರುವಾಯಿದೆಯ ಎಂದರೆ ಮೂರು ತಿಂಗಳ ಅವಧಿಗೆ ಏರಾರದ ಸಾಲದ ಹಣ ವ್ಯಾಪಾರದ ಪೇಟೆಗೆ ಬೇಕು; (೨) ನಿಡು ವಾಯಿದೆಯದು ಬಂಡವಾಳದ ಪೇಟೆಗೆ ಬೇಕು. ಕಿರುವಾಯಿದೆಯ ಪೇಟೆ ಯಲ್ಲಿ ವ್ಯಾಪಾರದ ಬ್ಯಾಂಕುಗಳೂ ವಟ್ಟದ ದಲ್ಲಾಳರೂ ಪ್ರಬಲರು. ಇಲ್ಲಿನ ಹಣದ ಸಂಚಾರವನ್ನೂ ಮೊತ್ತವನ್ನೂ ವಟ್ಟ ಮತ್ತು ಬಡ್ಡಿಯ ದರಗಳನ್ನೂ ದೇಶದ ಸೆಂಟ್ರಲ್ ಬ್ಯಾಂಕು ತನ್ನ ಬ್ಯಾಂಕ್ ರೇಟಿನ ಮೂಲಕ ಆಳುವುದು.

ವ್ಯವಸಾಯ, ಕೈಗಾರಿಕೆ, ಆಸ್ತಿನಿರ್ಮಾಣ ಮುಂತಾದ ಕ್ಷೇತ್ರಗಳಿಗೆ ನಿಡುವಾಯಿದೆ ಹಣದ ನೆರವು ಬೇಕು. ಇಷ್ಟೋ ಅಂಗಡಿಗಳು, ಕೈಗಾರಿಕೆ ಬ್ಯಾಂಕುಗಳು, ಬಾಂಡು ಷೇರು ಸ್ಟಾಕುಗಳ ಅಚ್ಚುಕಟ್ಟು, ಸ್ಟಾಕ್-ಎಕ್ಸ್‌ಛೇಂಜುಗಳ ವ್ಯವಹಾರ, ಇತರ ಬಂಡವಾಳಸ್ಥರು — ಈ ಪ್ರಪಂಚದ ವಿಶೇಷ ಸಾಧನಗಳು. ಆ ಪೇಟೆಯಲ್ಲಿ ಚೆಕ್ಕು ಹುಂಡಿಗಳ ಮತ್ತು ವಟ್ಟದ ದರಗಳ ಚಲನೆ ಹೇಗೋ ಇಲ್ಲಿ ಷೇರು ಬಂಡವಾಳಗಳ ಮತ್ತು ಬಡ್ಡಿಯ ದರಗಳ ಚಲನೆ ಹಾಗೆ ಮುಖ್ಯ ಲಕ್ಷಣ. ಈ ಎರಡು ಪೇಟೆಗಳಿಗೂ ಹಣದ ಸೌಕರ್ಯಗಳನ್ನು ಒದಗಿಸಿ, ಧಾರಣೆಮಾನಿ, ಮಾರುಪೆಯ ದರ, ಬಡ್ಡಿಯ ದರ, ಉದ್ಯೋಗ ಇವುಗಳನ್ನು ಒಂದು ತಾಣದಲ್ಲಿ ನಡಸುತ್ತಾ ಸಂಪನ್ಮಂಡಲ ವನ್ನು ಕಾಯುವ ಮತ್ತು ಅಭಿವೃದ್ಧಿಗೆ ತಿದ್ದುವ ಸಂಸ್ಥೆ ಸೆಂಟ್ರಲ್ ಬ್ಯಾಂಕು.

ಎರಡು ಪೇಟೆಗಳಲ್ಲಿಯೂ ಸರಕಾರದವರ ಕೈವಾಡ ಬಹು ಪರಿಣಾಮ ಕಾರಿಯಾಗಬಲ್ಲದು. ಆದ್ದರಿಂದ ಅವರ ಹಣಕಾರ್ಯವನ್ನೆಲ್ಲ ಈಗ ಸೆಂಟ್ರಲ್ ಬ್ಯಾಂಕುಗಳೇ ಮಾಡುವುದು ವಾಡಿಕೆ. ಅವರ ಆಯ ವ್ಯಯದ ಮತ್ತು ಸಾಲ ತೆಗೆಯುವ, ತೀರಿಸುವ, ವೆಚ್ಚಮಾಡುವ ರೀತಿನೀತಿಗಳಿಂದ ದೇಶದ ಆರ್ಥಿಕ ಮಂಡಲದ ಮೇಲೆ ತೀವ್ರವಾದ ಪರಿಣಾಮಗಳುಂಟಾಗುವುವು. ಅವರ ಹಣಕಾರ್ಯಗಳಿಂದಲೂ ವ್ಯಾಪಾರನೀತಿ ತೆರಿಗೆಯ ನೀತಿಗಳಿಂದಲೂ ಹಣದ ಹವವೂ ಹದವೂ ಮಾರ್ಪಡಬಲ್ಲವು. ಅವುಗಳಿಂದ ಕೇಡು ತಟ್ಟದಂತೆ ಧನ ಮಂಡಲವನ್ನು ಕಾಯುವ ಜವಾಬ್ದಾರಿ ಸೆಂಟ್ರಲ್ ಬ್ಯಾಂಕುಗಳಿಗೆ ಸೇರಿದುದು. ಹಣದ ಅಲ್ಪ ಸಂಚಾರ ಅಥವಾ ಅತಿ ಸಂಚಾರದಿಂದ ಹಣದ ಪೇಟೆಯನ್ನು ಪಾರುಮಾಡಿ ಪೋಷಿಸಿ ಅದನ್ನು ಒಟ್ಟು ಸಮಾಜದ ಮಂಗಳಕ್ಕೆ ತಿರುಗಿಸುವ ಕಾರ್ಯ ಅವರದು.

ಈ ಎಲ್ಲ ಸಂಬಂಧಗಳಲ್ಲಿಯೂ ಯಾವ ಸಂಸ್ಥೆಗಳೂ ಕ್ರಮಗಳೂ ಏರ್ಪಡುವುವು? ಯಾವ ನಿಯಮ, ಶಾಸನ ಉಂಟಾಗುವುವು? ಕಾರ್ಯದ ಫಲಾಫಲ ಏನು? ಅವುಗಳ ಕಷ್ಟ ನಿಷ್ಠುರ, ಸುಖ ಸೌಕರ್ಯ ಏನು ಎಂಬುದನ್ನು ಸ್ಥೂಲವಾಗಿ ತಿಳಿಸಿ, ಇಂಡಿಯಾ ದೇಶದಲ್ಲಿ ಹಣಪದ್ಧತಿ ಹೇಗಿದೆ? ಇಲ್ಲಿನ ಹಣದ ಪೇಟೆಯ ವ್ಯವಸ್ಥೆಯೂ ಬಲಾಬಲಗಳೂ ಏನು ಎಂಬುದನ್ನು ಸೂಚಿಸಲು ಇಲ್ಲಿ ಪ್ರಯತ್ನ ನಡೆದಿದೆ.

# ಹಣ ಪ್ರಪಂಚ

## ಪ್ರಕರಣ ೧

### ಪೀಠಿಕಾ ಭಾಗ

**ಆಕಾಂಕ್ಷೆ.** — ಹಣವೆಂದರೇನು? ಅದರ ಉತ್ಪತ್ತಿ ಹೇಗೆ? ಆವಶ್ಯಕತೆ ಉಪಯೋಗಗಳೇನು? ಅಳತೆ ಹೇಗೆ? ಅದನ್ನು ಸಂಗ್ರಹಿಸುವ ಬಗೆ ಯಾವುದು? ಜನಜೀವನದಲ್ಲಿ ಹಣದ ಪ್ರಭಾವದಿಂದ ಯಾವ ಹೆಚ್ಚು ಕಡಮೆಗಳೂ ಮೇಲು ಬೀಳುಗಳೂ ಉಂಟಾಗುವುವು? ಹಣಸಂಗ್ರಹದಲ್ಲಿಯೂ ಹಂಚಿಕೆಯಲ್ಲಿಯೂ ಯಾವ ನಿಯಮಗಳನ್ನು ಅನುಸರಿಸುವುದು ಮೇಲು? ಅದರ ಮೂಲಕ ಕೈಗಾರಿಕೆ, ವ್ಯಾಪಾರ, ಸಂಪದಭಿವೃದ್ಧಿ ಮುಂತಾದುವು ಹೇಗೆ ನಡೆಯುವುವು? ಜನರೂ ಸಂಸ್ಥೆಗಳೂ ಸರಕಾರದವರೂ ಹಣಸಂಗ್ರಹ ಕಾರ್ಯದಲ್ಲಿ ಹೇಗೆ ಬೆರೆಯುತ್ತಾರೆ? ಅವರಲ್ಲಿ ಯಾವ ಸಂಬಂಧಗಳು ಉಂಟಾಗುತ್ತವೆ? ಯಾರ ಸ್ಥಾನ ಎಲ್ಲಿ? ಒಟ್ಟು ಸಮಾಜದ ಮಂಗಳಕ್ಕೂ ಈ ಎಲ್ಲರ ಕಾರ್ಯಗಳಿಗೂ ಕೆಳೆ ಇದೆಯೆ? ಹಣದ ಉತ್ಪತ್ತಿ ಹಂಚಿಕೆಗಳ ಪರಿಣಾಮಗಳಲ್ಲಿ ಒಳ್ಳೆಯವನ್ನು ಹೆಚ್ಚಿಸಿ, ಕೆಟ್ಟವನ್ನು ಕಡಮೆಮಾಡುವ ಉಪಾಯಗಳಾವುವು? ಹಣದ ಪೇಟೆಯ ಮತ್ತು ಸಂಚಾರದ ವ್ಯವಸ್ಥೆ ಹೇಗಿರಬೇಕು? ಇಂಡಿಯಾ ದೇಶದಲ್ಲಿ ಈಗ ಹಣಸಂಗ್ರಹಸ್ಥಿತಿ ಹೇಗಿದೆ? ಎಂಬ ಸಂಗತಿಗಳಲ್ಲಿ ಕೆಲವನ್ನು ಈ ಪುಸ್ತಕದಲ್ಲಿ ವರ್ಣಿಸಲಾಗುತ್ತದೆ.

**ಧನ-ಹಣ.** — ಮೂಲತಃ ಜನಜೀವನಕ್ಕೆ ಬೇಕಾದ ಎಲ್ಲ ಪದಾರ್ಥಗಳೂ ಶಕ್ತಿಗಳೂ ಅನುಕೂಲಗಳೂ ಸೇರಿ ಧನವಾಗುವುದು. ಆದರೂ, ಸಾಮಾನ್ಯವಾಗಿ ಯಾವ ಪದಾರ್ಥದ ಪ್ರಭಾವದಿಂದ ಇತರ ಎಲ್ಲ ಪದಾರ್ಥ

ಗಳನ್ನು ಪಡೆಯುವ ಅಧಿಕಾರವೂ ಸೌಲಭ್ಯವೂ ದೊರೆಯುವುವೋ; ಯಾವ ವಸ್ತುಗಳಿದ್ದರೆ ವ್ಯಕ್ತಿಯ ಮತ್ತು ಕುಟುಂಬಗಳ ಸುಖ, ಸೌಕರ್ಯ, ಶಕ್ತಿ, ಪುಷ್ಟಿ, ಪ್ರತಿಷ್ಠೆಗಳು ಉಂಟಾಗುವುವೋ ಆ ಎಲ್ಲ ವಸ್ತುಗಳ ಸಮುದಾಯಕ್ಕೆ **ಧನ** ಎನ್ನುವುದು ವಾಡಿಕೆ. ವಸ್ತುಗಳ ಬೆಲೆಯನ್ನು ಅಳೆದು ಎಲ್ಲವನ್ನೂ ಬೇಕು ಬೇಕಾದಂತೆ ಸಂಗ್ರಹಿಸಬಲ್ಲ ಧನದ ಪ್ರತಿನಿಧಿ—ಹಣ. ಒಟ್ಟು ಯಾರ ಧನಸಂಪತ್ತಿಯನ್ನಾಗಲಿ ಅದರಿಂದಲೇ ಅಳೆದು ಸೂಚಿಸುವರು. ಹಣವೆಂದರೆ ಯಾವುದಾದರೊಂದು ರಾಜ್ಯದಲ್ಲಿ ಅಲ್ಲಿನ ಅಧಿಕಾರಿಗಳು ತಮ್ಮ ಮುದ್ರೆಯನ್ನೊತ್ತಿ ಬಳಕೆಗೆ ತರುವ ಒಂದು ಬಗೆಯ ಪದಾರ್ಥವಿಶೇಷ. ಎಲ್ಲ ಲೆಕ್ಕಗಳೂ ಅದರ ಎಣಿಕೆಯಲ್ಲಿ ನಡೆಯುವುವು; ಕೊಳ್ಳುವುದು, ಕೊಡುವುದು, ವೆಚ್ಚಮಾಡುವುದು, ಕೂಡಿಡುವುದು, ಹಂಚುವುದು, ಎಲ್ಲವೂ ಹಣದ ಮೂಲಕವೇ. ಧನಸಾಮಗ್ರಿ ಸೇವೆ ಸೌಕರ್ಯಗಳನ್ನೆಲ್ಲ ಇದು ದೊರಕಿಸಬಲ್ಲ ಸಾಧನ. ಆದುದರಿಂದ ಹಣದ ಪ್ರಯೋಜನ, ಉತ್ಪತ್ತಿ, ಚಲನೆ, ಕಾರ್ಯ, ಹಂಚಿಕೆ, ಸಂಗ್ರಹ, ಒಳ ಹೊರಗಿನ ಬೆಲೆ—ಇವುಗಳನ್ನು ಕುರಿತು ಹೇಳಿದರೆ ಧನದ ವಿಷಯವನ್ನೇ ಒಂದು ಬಗೆಯಿಂದ ಹೇಳಿದಹಾಗಾಯಿತು. ಆದುದರಿಂದ ಮುಂದಿನ ಪ್ರಕರಣಗಳೆಲ್ಲ ಹಣವನ್ನೇ ಕುರಿತವು. ಈ ಸಂಬಂಧದಲ್ಲಿ ಎಲ್ಲ ದೇಶಗಳ ಆರ್ಥಿಕ ಉದ್ಯಮಗಳು; ಅವುಗಳ ಸ್ವರೂಪ; ಅವು ನಡೆಯುವ ರೀತಿ; ಅವಕ್ಕೆ ಬಂಡವಾಳ ಒದಗುವ ಬಗೆ—ಕ್ರಮ; ಮುಖ್ಯವಾಗಿ ಬಂಡವಾಳವೇ ಉತ್ಪತ್ತಿಯಾಗಿ ಕೆಲಸಕಾರ್ಯಗಳಿಗೆ ಒದಗುವ ರೀತಿ; ಒದಗಿಸುವ ಜನರು, ಸಂಸ್ಥೆಗಳು; ಅಲ್ಲಿನ ನಿಯಮನೀತಿಗಳು; ಅತಿಧನಿಕತನದಿಂದ ಸಮಾಜದಲ್ಲಿ ಉಂಟಾಗುವ ಹೆಚ್ಚುಕಡಮೆಗಳು; ದೇಶದ ಕೈಗಾರಿಕೆ, ವ್ಯಾಪಾರ, ವಿನಿಮಯ, ಧಾರಣೆವಾಸಿ ಮುಂತಾದ ಕಾರ್ಯರಂಗಗಳ ವಿಚಾರವನ್ನು ಮಾಡಬೇಕಾಗುವುದು. ವಿಶೇಷವಾಗಿ ಜನರಿಗೂ ಸಂಸ್ಥೆಗಳಿಗೂ ವ್ಯಾಪಾರ ಕೈಗಾರಿಕೆಗಳಿಗೂ ಸರಕಾರಗಳಿಗೂ ಹಣವೊದಗುವ ರೀತಿಯೇ ಈ ಪುಸ್ತಕದ ವಿಷಯ.

**ಹಿನ್ನೆಲೆ.** — ಪ್ರತಿ ದೇಶದಲ್ಲಿಯೂ ಒಂದು ಸರಕಾರವಿರುತ್ತದೆ. ಅದರ ರಕ್ಷಣೆಗೆ ಒಳಪಟ್ಟು ಅಲ್ಲಿನ ಜನರು ತಮ್ಮ ದಿನದಿನದ ಬದುಕನ್ನು

ನಡಸಿಕೊಂಡು ಸುಖವಾಗಿರುತ್ತಾರೆ. ಸರಕಾರದಿಂದ ಅವರ ಸುರಕ್ಷಣೆಯಾಗುವುದರಿಂದಲೂ ದೇಶದಲ್ಲಿ ಶಾಂತಿ ಸ್ಥಾಪಿತವಾಗುವುದರಿಂದಲೂ ಸರಕಾರದ ಕೆಲಸಗಳು ಸರಿಯಾಗಿ ನಡೆಯುವಂತೆ ಅದಕ್ಕೆ ಹಣಕಾಸುಗಳನ್ನೂ ಅನುಕೂಲಗಳನ್ನೂ ಒದಗಿಸಿ ತಾವು ಅದರ ಆಜ್ಞೆಗೆ ಒಳಪಟ್ಟು ನಡೆದುಕೊಳ್ಳುತ್ತಾರೆ. ಅದು ದಕ್ಷವಾಗಿ ಇರುವವರೆಗೂ ತಮಗೆ ತೋರುವಂತೆ ಕ್ಷೇಮಲಾಭಗಳನ್ನು ಸಾಧಿಸಿಕೊಳ್ಳಬಹುದೆಂದು ಅವರ ನಂಬಿಕೆ; ಯಾವ ಅಡಚಣೆಯೂ ಬಾರದಿರುವುದೆಂದು ಭರವಸೆ; ಇತರರಿಂದ ಅಡ್ಡಿ, ನಷ್ಟ, ಅನ್ಯಾಯ ಆದರೆ ಸರಕಾರ ಅವನ್ನು ಸರಿಪಡಿಸಿಕೊಡುವುದೆಂಬ ಧೈರ್ಯ. ಆದುದರಿಂದ ಜನರು ಅನುಕೂಲ ತೋರಿದಂತೆ ಸ್ವಂತ ಕೆಲಸಗಳನ್ನೂ ಪರರ ಕೆಲಸಗಳನ್ನೂ ಲಾಭದ ಕೆಲಸಗಳನ್ನೂ ಧರ್ಮದ ಕೆಲಸಗಳನ್ನೂ ನಿರಾತಂಕವಾಗಿ ಮಾಡುತ್ತಿರುತ್ತಾರೆ. ತಾವು ಎಲ್ಲಿಯವರಿಗೂ ಇತರರ ಗೊಡವೆಗೆ ಹೋಗದೆ, ತಾವು ಬಯಸುವ ಸ್ವತಂತ್ರವನ್ನು ಅವರಲ್ಲಿಯೂ ಗೌರವಿಸಿ ಕೆಲಸಮಾಡುವರೋ ಅಲ್ಲಿನವರಿಗೂ ಸರಕಾರವೂ ಅದರ ಕಾಯಿದೆಗಳೂ ಅವರನ್ನು ಕಾಯುವುವು. ಹೀಗಿರುವುದರಿಂದ, ಎಲ್ಲ ಬಗೆಯ ಜನರೂ ತಮ್ಮ ಬದುಕನ್ನು ಉತ್ತಮಗೊಳಿಸಿಕೊಳ್ಳಲು ಪ್ರಯತ್ನಿಸುವರು. ಸಂಪತ್ತನ್ನೂ ಸುಖಸೌಕರ್ಯಗಳನ್ನೂ ಹೆಚ್ಚಿಸಿಕೊಳ್ಳಲು ಆತುರರಾಗುವರು. ಮಕ್ಕಳು ಮರಿಗೆ, ಬಂಧುಮಿತ್ರರಿಗೆ, ತಮಗೇ ಕಷ್ಟಕಾಲಕ್ಕೆ, ಪ್ರಯೋಜನವಾಗುವಂತೆ ಸಂಪತ್ತನ್ನು ಕೂಡಿಟ್ಟುಕೊಳ್ಳುವರು. ಉದ್ದೇಶ ಯಾವುದೇ ಇರಲಿ ಸತತವಾಗಿ ಕೆಲಸಗಳಲ್ಲಿ ಉದ್ಯುಕ್ತರಾಗಿ ತಮಗೆ ಸಿಕ್ಕಬಹುದಾದ ಅತಿ ಹೆಚ್ಚಿನ ಸಂಪಾದನೆಯನ್ನು ಮಾಡಿಕೊಳ್ಳುತ್ತಿರುವ ಜನರ ನೋಟವೇ ಎಲ್ಲೆಲ್ಲಿಯೂ ಕಾಣಿಸುವುದು.

**ಉದ್ಯೋಗಗಳು.** — ದೇವರು ನಿರ್ಮಾಣಮಾಡಿರುವ ವಸ್ತುಸಾಮಗ್ರಿಗಳನ್ನು ರೂಢಿಸುವ ವ್ಯವಸಾಯ, ಮೀನು ಹಿಡಿಯುವುದು, ಬೇಟೆಯಾಡುವುದು, ಅರಣ್ಯದ ವಸ್ತುಸಂಗ್ರಹ, ಗಣಿಗಳಿಂದ ಲೋಹ ತೆಗೆಯುವುದು ಮೊದಲಾದ ಉದ್ಯೋಗಗಳಲ್ಲಿ ಕೆಲವರು; ಈ ರೀತಿ ರೂಢಿಸಿದ ಮೂಲ ಸಾಮಗ್ರಿಯನ್ನು ಉಪಯೋಗಿಸಿಕೊಂಡು ಅನೇಕ ಕಾರ್ಖಾನೆ

ಕೈಗಾರಿಕೆಗಳನ್ನು ಹೂಡಿ ವಸ್ತುಗಳಿಗೆ ರೂಪಾಂತರವನ್ನು ತಂದು ಪ್ರಯೋಜನವನ್ನು ಹೆಚ್ಚಿಸುತ್ತ, ದೊಡ್ಡದೊಡ್ಡ ಯಂತ್ರಗಳನ್ನೂ ಶಕ್ತಿಗಳನ್ನೂ ಹೂಡಿ ಒಂದು ತಯಾರಾಗುತ್ತಿದ್ದ ಕಡೆ ಸಾವಿರವನ್ನು ಮಾಡಲು ಪ್ರಯತ್ನಪಡುತ್ತಿರುವವರು ಕೆಲವರು; ತಯಾರಾದ ವಸ್ತುಗಳಿಗೆ ಗಿರಾಕಿ ಒದಗಿಸಲು ಹೆಚ್ಚು ಬೆಲೆ ತರುವಲ್ಲಿಗೆ ಅವನ್ನು ಸಾಗಿಸುವ ಉದ್ಯೋಗಗಳಲ್ಲಿ ಕೆಲವರು;— ಈ ಬಗೆಯ ವ್ಯಾಪಾರ ವ್ಯವಹಾರಗಳಿಗೆ ಬೇಕಾಗುವ ರಸ್ತೆ ಹಾಕುವುದು, ರೈಲು, ಗಾಡಿ, ಹಡಗು ಮುಂತಾದುವನ್ನು ಮಾಡುವುದು, ನಡಸುವುದು, ವರ್ತಕತನ—ಇವುಗಳಲ್ಲಿ ಕೆಲವರು; ಕಟ್ಟಡ, ಸೇತುವೆ, ಯಂತ್ರಶಾಲೆ ಇವುಗಳನ್ನು ಕಟ್ಟುವುದು; ಕಲೆ, ಶಿಲ್ಪ; ಜನರಿಗೆ ವಿನೋದವನ್ನು ಒದಗಿಸುವ ಕೆಲಸ; ಅವರಿಗೆ ಊಟ ಉಪಚಾರ, ಸೇವೆ ವಸತಿ ಆರೋಗ್ಯ—ಇವುಗಳನ್ನು ಕಲ್ಪಿಸುವುದರಲ್ಲಿ ಕೆಲವರು; ಸರಕಾರಿ ಸಾಹುಕಾರಿ ಉದ್ಯೋಗಗಳಲ್ಲ ಸೇರಿಕೊಂಡು ಕ್ಲುಪ್ತ ಕಾಲಗಳಿಗೆ ಸರಿಯಾಗಿ ಸಂಬಳಗಳನ್ನು ತೆಗೆದುಕೊಳ್ಳುವವರು ಕೆಲವರು; ಇಲ್ಲವಾದರೆ ತಂದೆ ತಾತಂದಿರು, ಬಂಧುಗಳು ಗಳಿಸಿಟ್ಟುಹೋದ ಹಣದಿಂದಲೂ ಆಸ್ತಿಯಿಂದಲೂ ಬಡ್ಡಿ, ಬಾಡಿಗೆ, ಗುತ್ತಿಗೆಗಳನ್ನು ಪಡೆದು ಜೀವಿಸಮಾಡಿಕೊಂಡಿರುವವರು ಕೆಲವರು;—ಈ ರೀತಿ ಬಗೆಬಗೆಯ ಉದ್ಯೋಗಗಳಲ್ಲಿ ಜನರು ತೊಡಗಿ ಹಣಸಂಪಾದನೆ ಮಾಡಿಕೊಳ್ಳುವರು.

ಇಂಥವರಲ್ಲಿ ಕೆಲವರು ಮಾತ್ರವೇ ಸ್ವತಂತ್ರರು; ಇತರರಿಗಾಗಿ ದುಡಿಯುವವರೇ ಹೆಚ್ಚು ಮಂದಿ. ಬದುಕಿಗೆ ಅತ್ಯಗತ್ಯವಾದ ಅನ್ನ ಬಟ್ಟೆಗಳನ್ನು ಒದಗಿಸುವ ವೃತ್ತಿಗಳು ಕೆಲವು; ಭೋಗಸಾಮಗ್ರಿಗಳನ್ನು ಉತ್ಪತ್ತಿಮಾಡುವವು ಕೆಲವು. ಕೆಲವಕ್ಕೆ ಕೇವಲ ಕಾಯಿಕ ಶ್ರಮ ಬೇಕು; ಕೆಲವಕ್ಕೆ ಬುದ್ಧಿಶಕ್ತಿ, ಅನುಭವ, ನಿಪುಣತೆ, ಸಾಹಸ, ಬೇಕು. ಮೇಲಂತಸ್ತಿನ ಕೆಲಸಗಳನ್ನು ಮಾಡುತ್ತ ಮೈ ಅಲ್ಲಾಡಿಸದೆ ಹೆಚ್ಚು ಸಂಪಾದನೆಯೂ ಅಧಿಕಾರವೂ ಇರುವ ಮೆದು-ಕೈ ಕೆಲಸಗಳು ಕೆಲವರಿಗೆ; ಎಷ್ಟು ದುಡಿದರೂ ಹೊಟ್ಟೆ ಬಟ್ಟೆಗೇ ಸಾಲದೆ ಇರುವ ಬಡತನ ಕೆಲವರಿಗೆ; ಯಜಮಾನರು ಕೆಲವರು; ಕೂಲಿ ಕೆಲಸ ಮಾಡುವವರು ಕೆಲವರು;— ಹೀಗೆ ರಚಿತವಾಗಿದೆ ವೃತ್ತಿಗಳಲ್ಲಿನ ಜನವರ್ಗ.

**ಸುತ್ತಲ ಪ್ರಪಂಚ.** — ಈ ಶತಮಾನದಲ್ಲಿ ಎಲ್ಲಿ ನೋಡಿದರೂ ನೂರಾರು ಸಾವಿರಾರು ಜನರು ಒಂದು ಕಡೆ ಸೇರಿ ಗುಂಪಿನಲ್ಲಿ ಕೆಲಸವನ್ನು ಮಾಡುತ್ತಿರುವರು. ಅದು ನಡೆಯುವವರೆಗೂ, ಕೆಲಸಮಾಡುವ ಶಕ್ತಿ ತಮಗೆ ಇರುವವರೆಗೂ ಅಲ್ಲಿನ ಅಧಿಕಾರಿಗಳು ಕೊಡುವ ಸಂಬಳದಿಂದ ಹೊಟ್ಟೆಹೊರೆದುಕೊಳ್ಳುತ್ತಾರೆ. ಅಂತಹ ಕಡೆಗಳಲ್ಲಿ ಅಥವಾ ಸಂಸ್ಥೆಗಳಲ್ಲಿ ಯಜಮಾನರು ಯಾವ ದೇಶದವರು, ಅಲ್ಲಿನ ಕಾರ್ಯ ಯಾರಿಗೆ ಉಪಯೋಗವಾಗುವುದು, ಅದಕ್ಕೆ ಗಿರಾಕಿಯೂ ಲಾಭವೂ ದೊರೆಯುವುದೆ ಇಲ್ಲವೆ, ಅಲ್ಲಿ ಕೆಲಸಮಾಡುವ ಇತರರು ಎಲ್ಲಿನವರು ಎಂಬ ಸಾಮಾನ್ಯ ಸಂಗತಿಗಳು ಕೂಡ ತಿಳಿಯದೆ ಇದ್ದರೂ, ಆ ಕೆಲಸವನ್ನು ಮಾಡಬಲ್ಲವರಿಗೆ ಅಲ್ಲಿ ಉದ್ಯೋಗ ದೊರೆಯುವುದು. ಕೆಲಸದಲ್ಲಿ ಲಾಭವಿರುವವರೆಗೂ—ಕೆಲವು ಕಡೆ ಲಾಭವಿಲ್ಲದಿದ್ದರೂ—ಅಧಿಕಾರಿಗಳು ಅದನ್ನು ನಡಸುವರು. ಕೆಲಸಮಾಡುವರೆಲ್ಲರಿಗೂ ಮೊದಲೇ ಗೊತ್ತಾಗುವ ಸಂಬಳ ಸಾಲಿಗೆ ಸಿಕ್ಕುವುವು.

ಸಂಪದುತ್ಪತ್ತಿಗೆ ಸೇರಿದ ಎಲ್ಲ ಕಾರ್ಯಗಳೂ ಈಗ ದೊಡ್ಡ ದೊಡ್ಡ ಗಿರಣಿಗಳಲ್ಲಿಯೂ ಕಾರ್ಯಾಲಯಗಳಲ್ಲಿಯೂ ಬ್ಯಾಂಕುಗಳಲ್ಲಿಯೂ ಕಚೇರಿಗಳಲ್ಲಿಯೂ ನಡೆಯುತ್ತಿರುವುವು. ಯಾರು ಯಾರಿಗೆ ಯಾವ ಕೆಲಸವನ್ನು ಮಾಡುವುದರಲ್ಲಿ ಹೆಚ್ಚು ಸೌಲಭ್ಯವಿದೆಯೊ, ಶಕ್ತಿಯೂ ಕುಶಲತೆಯೂ ಇವೆಯೊ ಅವರು ಆಯಾ ಕೆಲಸಗಳಲ್ಲಿ ತೊಡಗುವರು. ಸಣ್ಣ ಕೆಲಸಕ್ಕಿಂತ ದೊಡ್ಡ ಕೆಲಸದಲ್ಲಿ ಲಾಭ ಹೆಚ್ಚೆಂದು ಹಣವಿರುವವರು ದೊಡ್ಡ ಕೆಲಸಗಳನ್ನು ಹೂಡುವರು. ತಮ್ಮ ತಯಾರಿಕೆಯ ಪದಾರ್ಥಗಳನ್ನು ಎಲ್ಲರಗಿಂತಲೂ ಅಗ್ಗವಾಗಿ ಮೇಲಾಗಿ ತಯಾರಿಸಲು ಪ್ರಯತ್ನಿಸುವರು. ಅಗ್ಗಕ್ಕೆ ಕೊಳ್ಳುವುದು, ತಗ್ಗಗೆ ಮಾರುವುದು—ಇದೇ ಬಹುತರ ಆರ್ಥಿಕ ಪ್ರಪಂಚದ ಮುಖ್ಯ ಲಕ್ಷಣ. ತಾವು ತಯಾರಿಸಿದ್ದಕ್ಕೆಲ್ಲಾ ತಕ್ಷಣವೇ ಗಿರಾಕಿ ದೊರೆಯುವಂತೆ ಏರ್ಪಡಿಸುವರು. ಇತರರೂ ಅದೇ ಪದಾರ್ಥವನ್ನು ತಯಾರಿಸಿ ಅದೇ ಪೇಟೆಗಳಲ್ಲಿ ಮಾರುತ್ತಿದ್ದರೆ ಅವರೊಡನೆ ಪೈಪೋಟಿಮಾಡಿ ಗೆಲ್ಲಲು ಪ್ರಯತ್ನಿಸುವರು; ಇಲ್ಲವಾದರೆ ಅವರೊಡನೆ ಬೆಲೆ ಮಾರಾಟಗಳ ಒಪ್ಪಂದ ಮಾಡಿಕೊಂಡು ಪೇಟೆಯ ಗಿರಾಕಿಯನ್ನು

ಇಬ್ಬರೂ ಹಂಚಿಕೊಳ್ಳುವರು. ಗಿರಾಕಿಗಳು ಯಾವ ಸಮಯದಲ್ಲಿ ಎಂತಹ ಸಾಮಾನನ್ನು ಎಷ್ಟು ಪರಿಮಾಣದಲ್ಲಿ ಕೇಳಿದರೂ ಪೇಟೆಯ ಧಾರಣೆಗೆ ಮಾರಲು ಒಪ್ಪಿಕೊಳ್ಳುವರು. ಗಿರಾಕಿಗಳು ನೆರೆಯವರಾಗಲಿ ಹೊರಗಿನವರಾಗಲಿ ಸ್ವದೇಶದವರಾಗಲಿ ವಿದೇಶದವರಾಗಲಿ ದೂರವನ್ನು ಸಡ್ಡೆಮಾಡದೆ ಅವರಿಗೆ ತಮ್ಮ ಸಾಮಾನು ಒದಗುವ ವ್ಯವಸ್ಥೆ ಮಾಡುವರು.

ದೊಡ್ಡ ಪ್ರಮಾಣದಲ್ಲಿ ವಸ್ತುಗಳನ್ನು ತಯಾರಿಸಬೇಕಾದರೆ ಅದಕ್ಕೆ ಅನೇಕ ಅನುಕೂಲಗಳು ಆವಶ್ಯಕ. ಕೆಲಸಕ್ಕೆ ಬೇಕಾದಷ್ಟು ಮೂಲ ಸಾಮಗ್ರಿ; ಅದಕ್ಕೆ ರೂಪಾಂತರ ಕೊಡಬಲ್ಲ ಕೆಲಸಗಾರರು; ಪ್ರತಿಯೊಬ್ಬ ಕೆಲಸಗಾರನ ಕೆಲಸದಿಂದಲೂ ಒಂದಕ್ಕೆ ನೂರರಷ್ಟು ಉತ್ಪತ್ತಿ ಬರುವಂತೆಯೂ ಕೆಲಸ ನಯವಾಗಿ ಒಂದೇ ಸಮನಾಗಿ ಆಗುವಂತೆಯೂ ಯಂತ್ರ ಸಹಾಯ; ಸಾಮಗ್ರಿಯನ್ನು ಕೊಳ್ಳುವುದು, ಕೆಲಸಗಾರರ ಸಂಬಳ, ಯಂತ್ರಸ್ಥಾಪನೆ, ಮೇಲ್ವಿಚಾರಣೆಯ ಖರ್ಚು ಇವು ಸಮರ್ಪಕವಾಗಿ ನಡೆಯಲು ಬೇಕಾದಷ್ಟು ಹಣ ಮೊದಲಾದ ಉತ್ಪತ್ತಿಕರಣಗಳು ಯಾವ ಯಾವ ಪ್ರಮಾಣದಲ್ಲಿ ಸೇರಬೇಕೆಂದು ಗೊತ್ತುಮಾಡಿ, ವೆಚ್ಚ ಮಿತಿಮೀರದಂತೆಯೂ ವೆಚ್ಚದಿಂದ ದೊರೆಯಬಹುದಾದ ಪರಮಾವಧಿ ಫಲ ದೊರಕುವಂತೆಯೂ ಕಾರ್ಯಾಲಯದ ದಕ್ಷವ್ಯವಸ್ಥೆ; ಕಾರ್ಯರಚನಾಶಕ್ತಿ; ತಯಾರಾದ ವಸ್ತುಗಳಿಂದ ಹೆಚ್ಚು ಲಾಭ ಬರುವಂತೆ ಅವನ್ನು ಪೇಟೆಗಳಲ್ಲಿ ಮಾರುವ ಮತ್ತು ಮಾರಿಸುವ ಚಾತುರ್ಯ; ಪೇಟೆ ಗಿರಾಕಿಗಳ ತಿಳಿವಳಿಕೆ; ಅನುಭವ; ಒಟ್ಟಿನಲ್ಲಿ ಲಾಭ ಬರುವುದೆಂಬ ಉದ್ದೇಶದಿಂದಲೇ ಇಷ್ಟು ದೊಡ್ಡ ಕೆಲಸಗಳನ್ನು ನಡೆಸುತ್ತಿದ್ದರೂ ಯಾವ ಕಾರಣದಿಂದಲೇ ಆಗಲಿ ನಷ್ಟವಾದರೆ ಅದನ್ನು ಸಹಿಸಬಲ್ಲ ಯೋಗ್ಯತೆ, ಸಾಹಸ; —ಇವೆಲ್ಲದರ ಪುಷ್ಕಲ ಸಂಯೋಜನದಿಂದಲೇ ಈಗಿನ ಅದ್ಭುತವಾದ ಉತ್ಪತ್ತಿ ಕಾರ್ಯಗಳು ನಡೆಯುತ್ತಿರುವವು.

ಪ್ರತಿಯೊಂದು ದೊಡ್ಡ ಕಾರ್ಯಾಲಯದಲ್ಲಿಯೂ ಹೀಗೇ ಕಾರ್ಯ ನಡೆಯುತ್ತಿದೆ. ಇಂತಹ ಕೆಲಸವನ್ನು ಮಾಡುತ್ತಿರುವ ಕಾರ್ಯಾಲಯಗಳವರಿಗೆಲ್ಲ ಪೈಪೋಟಿಯಿದೆ: ಎಲ್ಲರೂ ಸಾಮಾನನ್ನು ತಯಾರಿಸುವರು; ಗಿರಾಕಿ ಹುಡುಕುವರು; ಮಾರುವರು; ಲಾಭಪಡೆಯುವರು. ಯಾರೋ

ಒಂದು ಆ ಸಾಮಾನನ್ನು ಕೊಂಡುಹೋದರೆ ಇವರ ಕೆಲಸ ಅಲ್ಲಿಗೆ ಮುಗಿಯಿತು. ಯಾರು ಕೊಳ್ಳುವವರು? ಏಕೆ? ಮುಂದೆ ಅದರಿಂದ ಯಾವ ಪ್ರಯೋಜನವನ್ನು ಪಡೆಯುವರು? ಎಂದು ಕೂಡ ಇವರು ವಿಚಾರಿಸುವುದಿಲ್ಲ. ಅಗತ್ಯವಿಲ್ಲ. ಗಿರಾಕಿಗೆ ಸಾಮಾನು ಮಾರಿಬಿಟ್ಟರೆ ಇವರ ಕೆಲಸ ಮುಗಿಯಿತು.

**ಈಗಿನ ಕಾರ್ಯವಿಧಾನ.** — ದೊಡ್ಡ ಕಾರ್ಯಾಲಯಗಳಲ್ಲಿಯೂ ಒಟ್ಟಿನ ಕೆಲಸ ಭಾಗ ಭಾಗವಾಗಿ ನಡೆಯುತ್ತದೆ. ನೂರಾರು ಜನ ಒಂದೇ ಬಗೆಯ ಕೆಲಸದಲ್ಲಿ ಅತಿ ಸ್ವಲ್ಪ ಭಾಗವನ್ನು ಬೆಳಗ್ಗಿನಿಂದ ಸಂಜೆಯ ವರೆಗೂ ಮಾಡುತ್ತಿರುತ್ತಾರೆ. ಹತ್ತಿಯ ದಾರವನ್ನು ತೆಗೆಯುವ ಕಾರ್ಖಾನೆಯಲ್ಲಿ ಹತ್ತಿ ಬಿಡಿಸುವ ಯಂತ್ರಗಳ ಬಳಿ ಕೆಲವರು; ಅದನ್ನು ಹಿಂಜುವ ಯಂತ್ರಗಳ ಬಳಿ ಕೆಲವರು; ಅದನ್ನು ತೆಳ್ಳಗೆ ಅಗಲವಾಗಿ ಪಟ್ಟಿಮಾಡುವ ಯಂತ್ರಗಳ ಬಳಿ ಕೆಲವರು; ಎಳೆ ತೆಗೆಯುವ ಯಂತ್ರದ ಕದಿರುಗಳ ಬಳಿಯೇ ನಿಂತು ಕೆಲಸಮಾಡುವವರು ಕೆಲವರು; ಹೀಗೇ. ಅವರು ನಿಂತಿರುವಲ್ಲಿಗೆ ಯಂತ್ರಗಳ ಮೂಲಕವಾಗಿ ಒಂದು ನಿಯತಸ್ಥಿತಿಯಲ್ಲಿ ಸಾಮಗ್ರಿ ಬರುತ್ತದೆ. ನಿಯತವಾದ ರೂಪವನ್ನು ಅದಕ್ಕೆ ಹೊಂದಿಸುವ ಕೆಲಸ ಮಾತ್ರ ಅವರದು. ಅಷ್ಟು ಮಾಡಿದರೆ ಅವರ ಕೆಲಸ ಮುಗಿಯಿತು. ಕಾರ್ಯಾಲಯದ ಇತರ ಶಾಖೆಗಳಲ್ಲಿ ಯಾರು ಯಾವ ಕೆಲಸವನ್ನು ಹೇಗೆ ಮಾಡುವರೆಂಬ ಪರಿವೆ ಅಥವಾ ಗಮನ ಇವರಿಗಿಲ್ಲ. ತಮ್ಮ ಭಾಗದ ಕೆಲಸವನ್ನು ತಾವು ಮಾಡಿಬಿಟ್ಟರಾಯಿತು. ಯಂತ್ರಗಳ ಮೂಲಕ ಕೆಲಸ ನಡೆಯುವುದರಿಂದ ಪ್ರತಿಯೊಂದು ಭಾಗದ ಕೆಲಸವೂ ಅತಿ ಸೂಕ್ಷ್ಮತರವಾಗಿ ವಿಭಾಗವಾಗುವುದು; ಹಲವು ವೇಳೆ ಅವುಗಳ ಬಳಿ ಕೆಲಸ ಮಾಡುವ ಜನರೂ ಒಂದೇ ಕಡೆ ನಿಂತು ಯಂತ್ರಗಳ ಹಾಗೆ ಒಂದೇ ಕೆಲಸ ಮಾಡುತ್ತಿರುತ್ತಾರೆ. ಸಮಯಕ್ಕೆ ಸರಿಯಾಗಿ ಒಂದು ಬಿಡಿಯನ್ನು ತಿರುಗಿಸುತ್ತಿದ್ದರೂ, ಒಂದು ಸಾಮಗ್ರಿಯನ್ನು ಎಳೆದೊ ತಿದ್ದಿಯೊ ಬಿಡಿಸಿಯೊ ಸೇರಿಸಿಯೊ ಅವರ ಕೆಲಸ ಮುಗಿಸುವುದು. ಆ ಕೆಲಸ ಅತಿ ಅಸಂಪೂರ್ಣವಾದುದೇನೊ ನಿಜ. ಆದರೆ ಕಾರ್ಯಾಲಯದ ದಾರ ತೆಗೆಯುವ ಒಟ್ಟು ಕೆಲಸದಲ್ಲಿ ಒಂದೊಂದು ಭಾಗದ ಕೆಲಸ ಒಂದು ಮಜಲು; ಪ್ರತಿಯೊಬ್ಬನದೂ ಆ ಮಜಲಿನಲ್ಲಿ

ಒಂದು ಅಂಶ. ಬಟ್ಟೆಯ ಕೆಲಸವನ್ನು ಹೀಗೆ ಅನೇಕರು ಅನೇಕ ಮಜಲುಗಳಲ್ಲಿ ಅನೇಕ ಶಾಖೆಗಳಲ್ಲಿ ಯಂತ್ರ ಸಹಾಯದಿಂದ ಮಾಡುವುದು ಈಗಿನ ಕಾರ್ಖಾನೆ ಕಾರ್ಯಾಲಯಗಳ ವಿಶೇಷ ಲಕ್ಷಣ. ಇದಕ್ಕೆ ಶ್ರಮ ಅಥವಾ ಕಾರ್ಯ ವಿಭಾಗ (Divison of Labour) ಎನ್ನುವರು. ಇನ್ನೊಂದು ದೃಷ್ಟಿಯಿಂದ ಇದೇ ಒಂದು ಬಗೆಯ ಸಹಕಾರ.

ಇಂತಹ ದಾರ ಮಾಡುವವರು ಒಂದು ದೇಶದಲ್ಲಿಯೇ ಅನೇಕ ಗಿರಣಿಗಳವರಿರುತ್ತಾರೆ. ಬೇರೆ ಬೇರೆ ದೇಶಗಳಲ್ಲಿಯೂ ಅನೇಕರಿರುತ್ತಾರೆ. ಒಂದೇ ಬಗೆಯ ದಾರವನ್ನು ತೆಗೆಯುವವರು ಗಿರಾಕಿಯೂ ಲಾಭವೂ ಹೆಚ್ಚಿದಂತೆಲ್ಲಾ ತಮ್ಮ ಕೆಲಸದ ಪ್ರಮಾಣವನ್ನು ಹೆಚ್ಚಿಸಿಕೊಳ್ಳುತ್ತಲೇ ಹೋಗುವರು.

**ಅಂತರ್ ರಾಷ್ಟ್ರೀಯ ರಚನೆ.**— ದಾರ ತೆಗೆಯುವ ಕೆಲಸದಲ್ಲಿ ಹತ್ತಿ ಹಿಂಜುವುದು ಹೇಗೆ ಒಂದು ಭಾಗವೋ, ಹಾಗೆ ಬಟ್ಟೆ ಬಟ್ಟೆ ಮಾಡುವ ಕೆಲಸವನ್ನು ತೆಗೆದುಕೊಂಡರೆ ದಾರದ ಎಳೆ ತೆಗೆಯುವುದೇ ಒಂದು ಭಾಗ. ಬಟ್ಟೆ ಮಾಡುವ ಬಟ್ಟೆ ಕೆಲಸದಲ್ಲಿ ಹತ್ತಿ ಬೆಳೆಯುವವರು; ಹತ್ತಿಯನ್ನು ಊರಿಂದ ಊರಿಗೆ ಸಾಗಿಸುವವರು; ಕೊಂಡು ಮಾರುವವರು; ಹಿಂಜುವವರು; ದಾರ ತೆಗೆಯುವವರು; ದಾರಕ್ಕೆ ಬಣ್ಣ ಹಾಕುವವರು; ಕೊಂಡ ದಾರದಿಂದ ಬಟ್ಟೆ ನೇಯುವವರು ಎಲ್ಲರೂ ಶ್ರಮಪಡಬೇಕು. ಇವರೆಲ್ಲರೂ ಒಂದೇ ದೇಶದವರಾಗಿರಬೇಕೆಂದಿಲ್ಲ. ಹತ್ತಿ ಬೆಳೆಯುವವರು ಸಾಮಾನ್ಯವಾಗಿ ಅಮೇರಿಕಾ, ಈಜಿಪ್ಟ್, ಇಂಡಿಯಾ ದೇಶಗಳವರು. ಆ ಹತ್ತಿಯಲ್ಲಿ ಬಹು ಭಾಗ ಇಂಗ್ಲೆಂಡ್, ಜಪಾನ್, ಇಟಲಿ, ಝೆಕೊಸ್ಲೋವಾಕಿಯಾ ಮುಂತಾದ ದೇಶಗಳಿಗೆ ರಫ್ತಾಗುವುದು. ಅಲ್ಲಿ ಬಟ್ಟೆಗಳನ್ನು ತಯಾರಿಸುವರು. ಆ ಬಟ್ಟೆಗಳು ಎಲ್ಲೆಲ್ಲಿಗೂ ರಫ್ತಾಗುವುವು. ಇವುಗಳನ್ನು ಒಂದು ಕಡೆಯಿಂದ ಇನ್ನೊಂದಕ್ಕೆ ಸಾಗಿಸಲು ರೈಲ್ವೆ ಕಂಪನಿಗಳವರೂ ಹಡಗಿನ ಕಂಪನಿಗಳವರೂ ಬಂದರುಗಳವರೂ ಕೆಲಸ ಮಾಡುವರು; ಸಮಯಕ್ಕೆ ತಕ್ಕಷ್ಟು ಹಣವನ್ನು ಒದಗಿಸಲು ಎಲ್ಲ ದೇಶಗಳಲ್ಲಿಯೂ ಬ್ಯಾಂಕಿನವರೂ ಸಾಹುಕಾರರೂ ಇರುವರು; ಅಗ್ಗವಾಗಿ ಕೊಂಡು ಲಾಭಕ್ಕೆ ಮಾರುವ ದಲ್ಲಾಳಿ ವರ್ತಕರ (ತರಗಿನಪೇಟೆಯ) ಗುಂಪು ಎಲ್ಲೆಲ್ಲಿಯೂ ತಾನೇ ತಾನು.

**ಪೈಪೋಟಿ.** — ಬಟ್ಟೆಗಳನ್ನು ಒದಗಿಸುವುದರಲ್ಲಿ ಇಂಗ್ಲೆಂಡ್ ಜಪಾನ್ ದೇಶಗಳವರಿಗೆ ಪೈಪೋಟಿ; ಯಂತ್ರಗಳು, ಉಕ್ಕು ಮತ್ತು ಕಬ್ಬಿಣದ ಸಾಮಗ್ರಿ ಮುಂತಾದುವನ್ನು ಒದಗಿಸುವುದರಲ್ಲಿ ಇಂಗ್ಲೆಂಡ್, ಜರ್ಮನಿ, ಅಮೇರಿಕಾದವರಿಗೆ ಸ್ಪರ್ಧೆ. ಇಂಗ್ಲೆಂಡಿಗೆ ಗೋಧಿಯನ್ನು ಒದಗಿಸುವುದರಲ್ಲಿ ರಷ್ಯಾ, ಆಸ್ಟ್ರೇಲಿಯಾ, ಕ್ಯಾನಡಾಗಳವರಿಗೆ ಸ್ಪರ್ಧೆ. ಹೀಗೆ ಜನ ಜನಾಂಗಗಳವರಿಗೆ ವ್ಯಾಪಾರದಲ್ಲಿ ದೊಡ್ಡ ಪೈಪೋಟಿ ನಡೆಯುತ್ತಿರುವುದು ಈಗಿನ ಕಾಲದ ಆರ್ಥಿಕ ಜೀವನದ ಪ್ರಧಾನ ಲಕ್ಷಣ. ಪೈಪೋಟಿಯಲ್ಲಿ ಗೆದ್ದು ಉಳಿಯುವವರೆಲ್ಲರೂ ಆರ್ಥಿಕ ಮಂಡಲದಲ್ಲಿ ಸೇರುವರು. ಎಲ್ಲರೂ ಎಲ್ಲೋ ಹೇಗೋ ಕೆಲಸಮಾಡುತ್ತಿದ್ದರೂ ಪ್ರತಿಯೊಬ್ಬರೂ ಅವರವರಿಗೆ ಹೆಚ್ಚು ಅನುಕೂಲಿಸುವ ಪದಾರ್ಥಗಳನ್ನು ತಯಾರಿಸಿ ಪ್ರಪಂಚದ ಮೂಲೆ ಮೂಲೆಯಲ್ಲಿರುವವರಿಗೆ ಬೇಕಾಗುವ ಆವಶ್ಯಕ ಮತ್ತು ಭೋಗಸಾಮಗ್ರಿಗಳನ್ನು ತಮಗೆ ತಿಳಿಯದೆಯೇ ಒದಗಿಸುವರು. ಸಂಪಾದನೆ ಇರುವ ಎಲ್ಲರ ಬಯಕೆಗಳೂ ಈಡೇರಬಲ್ಲವು. ಹೀಗೆ ಪ್ರತಿಯೊಂದು ಸಂಸ್ಥೆಗೂ ತಿಳಿಯದೆಯೇ ಒಟ್ಟು ಕೆಲಸದಲ್ಲಿ ಅಲ್ಲಿನವರು ಭಾಗಿಗಳಾಗುವರು; ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಅಂತರ್‌ರಾಷ್ಟ್ರೀಯ ಸಹಕಾರವಾಗುವುದು. ಜಗತ್ತಿನ ಜನರಿಗೆಲ್ಲಾ ತಾವು ಕುಳಿತಿರುವ ಕಡೆ ಬೇಕಾದ ಸೌಕರ್ಯಗಳು ದೊರೆಯುವುವು.

ಇದನ್ನೇ ಇನ್ನೊಂದು ದೃಷ್ಟಿಯಿಂದ ನೋಡಬಹುದು: ಈಗ ನಾವೆಲ್ಲರೂ ಮೈಸೂರು ದೇಶದಲ್ಲಿ ಒಬ್ಬೊಬ್ಬರು ಒಂದೊಂದು ಕಡೆ ಇದ್ದೇವೆ. ನಮಗೆ ಸೂಕ್ತ ತೋರಿದಂತೆ **ಜೀವನ** ಮಾಡುತ್ತಿದ್ದೇವೆ; ಬೇಕಾದ ಪದಾರ್ಥಗಳನ್ನು ಅಂಗಡಿಗಳಿಂದ ಕೊಂಡುತರುತ್ತೇವೆ. ಅತಿ ಸಾಮಾನ್ಯರೆನ್ನುವವರ ಮನೆಗಳಲ್ಲಿಯೂ ಪೇಟೆಯಿಂದ ತಂದ ದೇಶವಿದೇಶಗಳ ವಸ್ತುಗಳು ಹಲವು ಕಾಣುತ್ತವೆ. ದೀಪಗಳು ಜರ್ಮನಿ, ಆಸ್ಟ್ರಿಯ, ಇಂಗ್ಲೆಂಡ್, ಅಮೇರಿಕಾ, ಜಪಾನ್ ದೇಶದವು; ಬಟ್ಟೆಗಳು ಇಂಗ್ಲೆಂಡ್, ಹಾಲೆಂಡ್, ಜಪಾನಿನವು; ಚಾಕು, ಕತ್ತರಿ, ಸೂಜಿ, ಕೊಡೆ, ಸೋಪು, ವಾಸೆಲೈನ್, ಬೆಂಕಿಪೆಟ್ಟಿಗೆ, ಜೋಡು, ರಗ್ಗು, ಪುಸ್ತಕ ಎಲ್ಲ ಬಹುವಾಗಿ ಪರದೇಶದವು. ಇಂತಹ ಸಾಮಾನು ನಮ್ಮ

ದೇಶದಲ್ಲಿಯೇ ಎಷ್ಟು ಇರಬಹುದು? ಒಟ್ಟು ಇಂಡಿಯಾ ದೇಶದಲ್ಲಿ ಎಷ್ಟು ಇರಬಹುದು? ಪ್ರಪಂಚದಲ್ಲೆಲ್ಲಿ? ಎಂದರೆ ಅವನ್ನು ಮೊದಲು ತಯಾರಿಸುವವರು ಎಷ್ಟು ದೊಡ್ಡ ಪರಿಮಾಣದಲ್ಲಿ ಮಾಡುತ್ತಿರಬೇಕು? ವಸ್ತುಗಳನ್ನು ತಯಾರಿಸುವವರಿಗೆ, ತಮ್ಮ ಈ ವಸ್ತುಗಳು ನಮ್ಮ ಕೈ ಸೇರುವುವೆಂಬ ತಿಳಿವಿಲ್ಲ; ನಮಗೆ, ಇಂತಹವರು ಇಲ್ಲಿಯೇ, ಹೀಗೆಯೇ ಇವನ್ನು ತಯಾರುಮಾಡಿ ಇಂಥವರ ಮೂಲಕವೇ ಮಾರಿರುವರೆಂದು ತಿಳಿಯದು. ಇವನ್ನು ಮಾರುವ ಅಂಗಡಿಗಳವರಿಗೂ ನಮಗೂ ಅನೇಕ ವೇಳೆ ಪರಿಚಯವಿರುವುದಿಲ್ಲ. ಅಲ್ಲದೆ ಇಂಥ ವಸ್ತುಗಳಿಗೆ ಗಿರಾಕಿ ಸಿಕ್ಕೀತೆಂದು ಊಹಿಸಿ ಮಾತ್ರ ಉತ್ಪತ್ತಿಕಾರರು ತಯಾರಿಸುವರು; ಅಂಗಡಿಯವರು ತಮ್ಮ ಊರಿನವರಿಗೆ ಪ್ರಿಯವಾದಾವೆಂದು ಅವನ್ನು ಕೊಂಡು ಇಟ್ಟು ಮಾರುವರು. ಈ ಈ ಅಂಗಡಿಗಳಿಗೆ ಹೋದರೆ ಈ ಈ ಪದಾರ್ಥ ದೊರೆಯುವುದೆಂದು ತಿಳಿದು ನಾವು ಅಲ್ಲಿಗೆ ಹೋಗಿ ಅದನ್ನು ತಂದು ಅದರ ಸುಖವನ್ನು ಅನುಭವಿಸುವೆವು. ಹೀಗೆ ಒಬ್ಬರೊಬ್ಬರಿಗೆ ಪರಿಚಯ ಕೂಡ ಇಲ್ಲದೆಯೇ ಪ್ರತಿಯೊಬ್ಬರ ತೃಪ್ತಿಯೂ ಲಭಿಸುವಂತಾಯಿತು. ಈ ಕೆಲಸದಲ್ಲಿ ತೊಡಗಿರುವವರೆಲ್ಲರಿಗೂ ಲಾಭ ದೊರೆಯಿತು. ಅನೇಕ ದೇಶಗಳಲ್ಲಿ ಅನೇಕ ಕೈಗಾರಿಕೆ ಕುಶಲವಿದ್ಯೆಗಳು ನಡೆಯುತ್ತಲೇ ಇರುವಂತಾಯಿತು. ಕುಳಿತಿರುವ ಸ್ಥಳಕ್ಕೆ ಹತ್ತು ದಿಕ್ಕುಗಳಿಂದಲೂ ಪ್ರಪಂಚದ ಭೋಗಭಾಗ್ಯಗಳೆಲ್ಲ ದುಮುಕಿ ಬರುವಂತಾಯಿತು. ಹೀಗೆ ಈ ಕಾರ್ಯಚಕ್ರದಲ್ಲಿ ಒಂದು ಬಗೆಯ ಕಾರ್ಯಕಾರಣ ಸಂಬಂಧವಿದೆ; ಕಾರ್ಯವಿಭಾಗವಿದೆ; ಪರಸ್ಪರ ಅಧೀನತೆಯಿದೆ; ಸಹಕಾರವಿದೆ. ಎಲ್ಲರೂ ಸ್ವಂತ ಲಾಭಕ್ಕೇ ಕೆಲಸಮಾಡುತ್ತಿದ್ದರೂ ಎಲ್ಲರ ಆಸೆಗಳೂ ನೆರವೇರಲು ಅವಕಾಶವಾಗುತ್ತದೆ. ಆ ಮಟ್ಟಿಗೆ ಇತರರಿಗೆ ಉಪಕಾರ ಮಾಡಿದಂತಾಗುತ್ತದೆ. ವಸ್ತುಗಳಿರುವುದರಿಂದ ಭೋಗಾಭಿಲಾಷೆ, ಅಭಿಲಾಷೆಗಳು ಪೂರ್ತಿಯಾಗಬೇಕಾದುದರಿಂದ ವಸ್ತುಗಳ ಉತ್ಪತ್ತಿ;— ಹೀಗೆ ಉತ್ಪತ್ತಿಯಿಂದ ಆರಂಭವಾದ ಕಾರ್ಯ ಅದನ್ನು ಭೋಗಿಸುವ ಜನರ ಸೌಕರ್ಯಭೋಗಗಳಲ್ಲಿ ಕೊನೆಗೊಳ್ಳುವುದು. ಭೋಗಾಭಿಲಾಷೆಗಳನ್ನು ತೃಪ್ತಿಗೊಳಿಸುವ ಉದ್ದೇಶದಿಂದ ಪದಾರ್ಥಗಳು ಉತ್ಪತ್ತಿ

ಯಾಗುವುವು. ಇವಕ್ಕಾಗಿ ಎಷ್ಟು ಮಜಲುಗಳಲ್ಲಿ ಎಷ್ಟು ಜನರ, ಎಷ್ಟು ದೇಶಗಳವರ, ಉದ್ದೇಶಗಳ, ಯಂತ್ರಗಳ, ವರ್ತಕರ, ಬ್ಯಾಂಕುಗಳ, ಪ್ರಯತ್ನ ಆವಶ್ಯಕ — ಎಷ್ಟು ಜನರ ಜೀವನ ನಡೆಯುವುದು ಎಂಬುದನ್ನು ಊಹಿಸಬಹುದು.*

**ಹಣವೇ ಸಾಧನ.** — ಈಗ ಇಷ್ಟೆಲ್ಲ ಸುಲಭಸಾಧ್ಯವಾಗಿರುವುದು ಒಂದರ ಪ್ರಭಾವದಿಂದ, ಹಣದಿಂದ. ಕೈಯಲ್ಲಿ ಹಣವೊಂದಿದ್ದರೆ ಆರ್ಥಿಕ ಪ್ರಪಂಚದಲ್ಲಿ ಅಸಾಧ್ಯವಾದ ಕಾರ್ಯವೇ ಇಲ್ಲ. ಪೂರ್ತಿಯಾಗದ ಬಯಕೆಯೇ ಇಲ್ಲ. ನಾವು ಎಲ್ಲೇ ಕೆಲಸಮಾಡುತ್ತಿರಲಿ ಆ ಕೆಲಸದಿಂದ ತಕ್ಷಣದಲ್ಲಿ ನಮಗಾಗಲಿ ಯಜಮಾನರಿಗಾಗಲಿ ನೆರೆಯವರಿಗಾಗಲಿ ಸ್ವಂತಕ್ಕೆ ಬೇಕಾದ ಸಾಮಗ್ರಿ ದೊರೆಯುವಂತಿರಲಿ ದೊರೆಯದಿರಲಿ, ಕೆಲಸದ ಫಲವಾಗಿ ಹಣ ಬಂದರೆ ಆಯಿತು. ಹಣವನ್ನು ವೆಚ್ಚಮಾಡಿ ನಮಗೆ ಬೇಕಾದುದನ್ನು ಬೇಕಾದ ಪ್ರಮಾಣದಲ್ಲಿ ಕೊಂಡು ಭೋಗಿಸಲು ಅನುಕೂಲವುಂಟು. ಹೀಗೆ ಹಣ ಭೋಗಸಾಧನ. ಹಣವಿದ್ದವರಿಗೆ ವಸ್ತುಸೇವೆಗಳ ಮೇಲೆ ಅಧಿಕಾರ ಬರುವುದು. ಸಂಪಾದನೆಯೆಂದರೆ ವೆಚ್ಚಮಾಡುವ ಶಕ್ತಿ. ಇತರ ಪದಾರ್ಥಗಳು ಎಷ್ಟಿದ್ದರೂ ಕೈಯಲ್ಲಿ ಹಣವಿದ್ದಷ್ಟು ಬೆಲೆಯಿಲ್ಲ. ಹಣವೇ ಲೌಕಿಕದಲ್ಲಿ ಎಲ್ಲವನ್ನೂ ಅಳೆಯುವ ಅಳತೆ; ಎಲ್ಲ ಬೀಗಗಳ ಕೈ; ಎಲ್ಲ ಸಂತೋಷಗಳಿಗೂ ಮಾರ್ಗ—ಸಾಧನ. ಕೆಲಸಮಾಡುವುದು ಹಣಕ್ಕೆ; ವಸ್ತುಗಳನ್ನು ಕೊಳ್ಳುವುದು, ಮಾರುವುದು ಹಣಕ್ಕೆ; ಅಂಗಡಿ ಮುಂಗಟ್ಟುಗಳಲ್ಲಿ ಪದಾರ್ಥಕ್ಕೆ ಬೆಲೆ ಗೊತ್ತು ಮಾಡುವುದು ಹಣದ ಲೆಕ್ಕಕ್ಕೆ; ದೇಶದಿಂದ ದೇಶಕ್ಕೆ ಸಾಮಾನು ಸಾಗಬೇಕಾದರೆ ಹಣದ ಸಹಾಯ; ಸಾಲವನ್ನು ಕೊಡುವುದು, ತೀರುವುದು, ಆಸ್ತಿಮಾಡುವುದು, ಹಂಚುವುದು, ಕಾಗದಪತ್ರ ಬರೆದಿಡುವುದು, ಆಸ್ತಿಗೆ ಬೆಲೆಕಟ್ಟುವುದು, ಕೂಲಿ, ಸಂಬಳ, ಬಡ್ಡಿ, ಬಂಡವಾಳ, ಲಾಭ—ಎಲ್ಲದರ ಲೆಕ್ಕವೂ ಹಣದ ಮೂಲಕ; ಸರಕಾರಕ್ಕೆ ಕಂದಾಯ ತೆರುವುದು, ದಾನ ಧರ್ಮ ಮಾಡುವುದು, ಎಲ್ಲಕ್ಕೂ ಹಣವೇ ಸಾಧನ. ವಿನಿಮಯ

* ಹಾಗೆಯೇ ಈ ಬಗೆಯ ಕಾರ್ಯವಿಧಾನದ ಫಲವಾಗಿ ಎಲ್ಲಿಯಾದರೂ ಸ್ವಲ್ಪ ವಿಷಮತೆ ಉಂಟಾಗಿ ಕೆಡಕು ಸಂಭವಿಸಿದರೆ ಅದರ ಪರಿಣಾಮ ಹೇಗೆ ಸರ್ವತೋಮುಖವಾಗುವುದು ಎಂಬುದನ್ನೂ ಕಲ್ಪಿಸಿಕೊಳ್ಳಬಹುದು.

ವ್ಯಾಪಾರ ವ್ಯವಹಾರ ಯಾವುವೂ ಹಣವಿಲ್ಲದೆ ನಡೆಯುವು. ಯಾರ ಯಾವ ಹಂಗೂ ಇಲ್ಲದೆ ಹಣವನ್ನು 'ನಡಾಡಿ' ಎಲ್ಲರೂ ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಳ್ಳುವರು.

**ಸಂಪಾದನೆ — ಉಳಿಸಿ ಕೂಡಿಸುವ ಹಣ.** — ಸಂಪಾದನೆ ಕೆಲವರಿಗೆ ಹೆಚ್ಚಾಗಿ ಕೆಲವರಿಗೆ ಕಡಮೆಯಾಗಿ ಇರುವುದಲ್ಲವೆ? ಬರುವ ವರಮಾನ ದಿನದಿನದ ವೆಚ್ಚಕ್ಕೇ ಸಾಲದಾದರೆ ಅದರಲ್ಲಿ ಯಾವ ಭಾಗವನ್ನೂ ಕೂಡಿಡಲು ಸಾಧ್ಯವಿಲ್ಲ. ದೊಡ್ಡ ಸಂಪಾದನೆ ಇರುವವರಿಗೆ ಖರ್ಚು ಕಳೆದು ಉಳಿತಾಯವಾಗುವ ಅವಕಾಶ ಹೆಚ್ಚು. ಉಳಿದ ಹಣವನ್ನು ಅವರು ದಾನಧರ್ಮಗಳಿಗಾಗಿಯೊ ಹಬ್ಬ ಹುಣ್ಣಿಮೆಗಳಿಗಾಗಿಯೊ ವಿನೋದಕ್ಕೊ ವೆಚ್ಚಮಾಡಿ ಬರಿಗೈ ಮಾಡಿಕೊಳ್ಳಬಹುದು. (ಹಾಗೆ ಮಾಡಲು ಅವರಿಗೆ ಸಂಪೂರ್ಣ ಸ್ವತಂತ್ರವುಂಟು!) ಅಥವಾ, ಒಡವೆವಸ್ತುಗಳನ್ನು ಕೊಂಡಿಡಬಹುದು; ಪೆಟ್ಟಿಗೆಗಳಲ್ಲಿಯೊ ನೆಲದ ಕುಳಿಗಳಲ್ಲಿಯೊ ಹೂತಿಡಬಹುದು. ಇತರರಿಗೆ ಸಾಲ ಕೊಡಬಹುದು; ಬ್ಯಾಂಕುಗಳಲ್ಲಿ ಪುದುವಟ್ಟಾಗಿಡಬಹುದು; ಕಂಪನಿ ಕಾರ್ಖಾನೆಗಳ ಬಂಡವಾಳವಾಗುವಂತೆ ಷೇರು ರೂಪದಲ್ಲಿಯೊ ಬಾಂಡು ರೂಪದಲ್ಲಿಯೊ ಬಡ್ಡಿಗೆ ಹೂಡಬಹುದು. ಬಂದ ತಕ್ಷಣ ಭೋಗಕ್ಕೆ ವೆಚ್ಚಮಾಡಿದರೆ ತಕ್ಷಣದ ಸಂತೋಷ ಬರುತ್ತದೆ. ಹೂತಿಟ್ಟರೆ ಯಾರಿಗೆ ಎಂದಿಗೆ ಮುಂದಕ್ಕೆ ಪ್ರಯೋಜನವೊ ಹೇಳುವಹಾಗಿಲ್ಲ. ಆದರೆ ಇಂತಹ ವರ್ತನೆಯಿಂದ ಆರ್ಥಿಕ ಪ್ರಪಂಚಕ್ಕೆ ಉಪಕಾರವಿಲ್ಲ. ಏಕೆಂದರೆ, ಆ ಮಟ್ಟಿಗೆ ಸಂಪದಭಿವೃದ್ಧಿಗೆ ಅದು ಸೆರೆಯದಾಗುವುದು; ಒಡವೆಗಳ ರೂಪದಲ್ಲಿಯೂ ಪೆಟ್ಟಿಗೆಗಳಲ್ಲಿಯೂ ನಿಂತ ಹಣದಿಂದ ಹಣದ ಓಟ ತಡೆಯುವುದು; ಅಡಗುವುದು. ಹಾಗಲ್ಲದೆ ಹಣವನ್ನು ಬಡ್ಡಿಗೆ ಹಾಕಿದರೆ, ಬಡ್ಡಿ ಸೇರಿ ಹಣ ಹಿಂದಕ್ಕೆ ಬರುವುದು: ಜೊತೆಗೆ ಸಾಲ ತೆಗೆದುಕೊಂಡವರು ಹಣವನ್ನು ಯಾವುದಾದರೂ ಉತ್ಪತ್ತಿಕಾರ್ಯಕ್ಕೆ ಉಪಯೋಗಿಸಿದರೆ ಆ ಮಟ್ಟಿಗೆ ಉದ್ಯೋಗವೂ ದೇಶದ ಸಂಪತ್ತೂ ಹೆಚ್ಚುವುವು. ಬ್ಯಾಂಕು ಕಂಪನಿಗಳಲ್ಲಿಟ್ಟರೂ ಹೀಗೆಯೇ. ವೆಚ್ಚವಾಗದೆ ಉಳಿಯುವ ಹಣವೆಲ್ಲ ಉತ್ಪತ್ತಿ ಕಾರ್ಯಕ್ಕೆ ಮೂಲಧನವಾಗಬಲ್ಲುದು. ಆಗಬೇಕು. ಹಾಗೆ ಪ್ರಚಾರವಾದದ್ದು ಮಾತ್ರವೇ ಸಂಪದಭಿವೃದ್ಧಿಗೆ ಸಾಧನ; ಕಾರಣ; ಅರ್ಥಚಕ್ರವನ್ನು

ನಡೆಸುವ ಚಾಲಕಶಕ್ತಿ.* ಬಂಡವಾಳ, ಉದ್ಯೋಗ, ಉತ್ಪತ್ತಿ, ಸಂಪಾದನೆ, ವಸ್ತುಸಾಮಗ್ರಿಗಳ ಭೋಗ ಇವನ್ನು ಪರಮಾವಧಿಗೆ ಹೆಚ್ಚಿಸಿ ಲೋಕದ ಸೌಖ್ಯವನ್ನು ಬೆಳಸುವುದೇ ಅರ್ಥಸಾಧನೆಯ ಗುರಿ.

ಈ ಕಾರ್ಯಗಳಿಗೆ ಸಂಬಂಧಿಸುವ ವಿಶೇಷಾಂಶಗಳನ್ನು ಮುಂದಿನ ಪ್ರಕರಣಗಳಲ್ಲಿ ಸ್ವಲ್ಪಮಟ್ಟಿಗೆ ವಿವರಿಸಿದೆ.

---

* [illegible] ನಡೆಯದು [illegible] ವ್ಯವಹಾರಗಳನ್ನೆಲ್ಲ ಹಾಗೇ ನಡೆಸುತ್ತಿರುತ್ತಾಗಲೂ [illegible] ಎಂಬ ಸ್ಮೃತಿ [illegible] ಸಮಾಜಕ್ಕೆ ಬೇಕು, ಅನ್ಯಾಯ [illegible] ಕೊಂಡು ಲಕ್ಷಾಧಿ ಹೇರುವವರು ಹಣವೆಂಬುದನ್ನು [illegible] ಕೆಲವು ದಿನ ಕಾರ್ಯ ನಡೆಸಿ [illegible] ಹಣದ ಅಗತ್ಯವನ್ನು ಕಂಡು ಅದರ ಸಂಗ್ರಹವನ್ನು [illegible] ಬಹುಕಾಲ ಬಾಳಿ ತರುವ ಆಸ್ತಿಗಳು ಇರುವವರಿಗೂ (Durable Assets) ಹಣ ಇದ್ದೇ ತೀರಬೇಕು.

ಹಾಗೆಂದಮಾತ್ರಕ್ಕೆ ಎಲ್ಲ, ಒಂದು ಮಾತ್ರಕ್ಕೇ ಧರ್ಮ, ಸುಖ, ಶಾಂತಿ, ಮೋಕ್ಷ, ಪ್ರೇಮ, ಭಕ್ತಿ, ನ್ಯಾಯ, ಸೌಂದರ್ಯ ಎಲ್ಲವೂ ಅದರಿಂದ [illegible] ಅವುಗಳಲ್ಲಿ ಕೆಲವಕ್ಕೂ ಹಣಕ್ಕೂ ಈಗಿನ ಬದುಕಿನಲ್ಲಿ ಹೊಂದಿಕೆ ಇಲ್ಲ. ಆ ವಿಷಯವನ್ನು ಕುರಿತಾಗಲಿ ಆ ದೃಷ್ಟಿಯಿಂದಾಗಲಿ ಈ ಪುಸ್ತಕವನ್ನು ಬರೆದಿಲ್ಲ. ಲೌಕಿಕ ಜೀವನದ ವ್ಯವಹಾರದಲ್ಲಿನ ಸೌಕರ್ಯಗಳನ್ನು ದೊರಕಿಸಿಕೊಡುತ್ತಿರುವ ಸಾಧನ ಹಣ; ಆದುದರಿಂದ ವಿಷಯದ ವ್ಯಾಪ್ತಿಯನ್ನರಿತು ಇಲ್ಲಿನ ಸಂಗತಿಗಳನ್ನು ಪರೀಕ್ಷಿಸಬೇಕು.

# ಪ್ರಕರಣ ೨

## ಹಣದ ಉತ್ಪತ್ತಿ

**ಪದಾರ್ಥಗಳ ಬದಲಾಬದಲಿ– ಅನನುಕೂಲಗಳು– ಹಣದ ಆವಶ್ಯಕತೆ.** — ಹಣವನ್ನೇ ಉಪಯೋಗಿಸದೆ ಕೆಲವು ವ್ಯಾಪಾರಗಳು ಈಗಲೂ ಅಲ್ಲಲ್ಲಿ ನಡೆಯುವುದುಂಟು. ಹಿಂದೆ ಅಂತಹುವೇ ಬಹುವಾಗಿ ನಡೆಯುತ್ತಿದ್ದಿರಬೇಕು. ದೂರದ ಹಳ್ಳಿಗಳಲ್ಲಿ ಈಗಲೂ ಹಣದ ಚಲಾವಣೆ ಮಿತವಾಗಿಯೇ ಇದೆ. ಜನರು ತಮಗೆ ಬೇಕಾದ ಪದಾರ್ಥಗಳನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರೆ ಇತರರ ಕೈಗೆ ಕಾಯಬೇಕಾಗಿರುವುದಿಲ್ಲ. ತಯಾರು ಮಾಡದಿರುವ ಒಂದೆರಡು ವಸ್ತುಗಳನ್ನು ನೆರೆಹೊರೆಯವರಿಂದ ಅಥವಾ ಪಕ್ಕದ ಹಳ್ಳಿಗಳವರಿಂದ ಕೊಂಡು ತೃಪ್ತರಾಗುವುದು ಸುಲಭವಾಗಿತ್ತು. ಪಟ್ಟಣಗಳಲ್ಲಿಯೂ ಅನೇಕ ಸಣ್ಣ ಸಣ್ಣ ಪದಾರ್ಥಗಳನ್ನು ಪದಾರ್ಥದ ಬದಲಿಗೆ (Barter) ಬೆಲೆ ಕೊಳ್ಳುವ ವಾಡಿಕೆಯುಂಟು. ಕೂಲಿ ಕೆಲಸ ಮಾಡಿ ಕಾಳು ಬತ್ತ ತೆಗೆದುಕೊಳ್ಳುವುದು; ಅಕ್ಕಿ ರಾಗಿ ಕೊಟ್ಟು ತರಕಾರಿ ಸೌದೆ ತೆಗೆದುಕೊಳ್ಳುವುದು; ಬಟ್ಟೆ ಬರತಾರಿಗೆ ಬದಲಾಗಿ ಪಾತ್ರೆ ಪದಾರ್ಥ ಮಾರುವುದು ಮುಂತಾದವು ಈ ಬಗೆಯ ವ್ಯಾಪಾರಗಳು. ಆದರೆ ಈ ಬಗೆಯ ಪದಾರ್ಥಗಳ ಬದಲಾಬದಲಿಯಿಂದಲೇ ಜೀವನಕ್ಕೆ ಬೇಕಾಗುವ ಅಥವಾ ನಾವು ಬಯಸುವ ಎಲ್ಲ ಸಾಮಗ್ರಿಯನ್ನೂ ಸೇವೆ ಸೌಕರ್ಯಗಳನ್ನೂ ಒದಗಿಸಿಕೊಳ್ಳುವುದು ಅಸಾಧ್ಯ. ಈ ಕಾಲದಲ್ಲಿ ನಡೆಯುತ್ತಿರುವ ಅದ್ಭುತ ಪ್ರಮಾಣದ ಒಳದೇಶ ಹೊರದೇಶ ವ್ಯಾಪಾರವೂ ನಡೆಯದಾಗುವುದು. ತೊಡಕು, ಅನನುಕೂಲ ಹೆಚ್ಚು.

ಇಂತಹ ಸಣ್ಣ ವ್ಯಾಪಾರದಲ್ಲಿ ಕೂಡ ಎರಡು ವಸ್ತುಗಳನ್ನೂ ಇಬ್ಬರಾದರೂ ಒಂದು ಕಡೆ ಸೇರಬೇಕು; ಒಬ್ಬನಲ್ಲಿರುವ ಪದಾರ್ಥ ಮತ್ತೊಬ್ಬನಿಗೆ ಬೇಕಾಗಿರಬೇಕು. ಸಾಕಾದ ಪ್ರಮಾಣದಲ್ಲಿ ಪದಾರ್ಥ ದೊರೆಯುವಂತಿರಬೇಕು. ತನ್ನದನ್ನು ಅವನಿಗೆ ಕೊಟ್ಟು ಅವನದನ್ನು ತಾನು ತೆಗೆದುಕೊಳ್ಳಲು ಇಬ್ಬರಿಗೂ ಇಷ್ಟವಿರಬೇಕು. ಇಬ್ಬರ ಎಣಿಕೆ

ಯಲ್ಲಿಯೂ ತಮ್ಮ ವಸ್ತುಗಳ ಬೆಲೆ ಸುಮಾರು ಸಮವೆಂದು ತೋರಿ ಅವುಗಳನ್ನು ಕೊಟ್ಟು ತೆಗೆಯಲು ಇಬ್ಬರೂ ಒಪ್ಪಬೇಕು. ಆದರೆ ಇಂತಹ ಎಷ್ಟು ಜನರು ಒಟ್ಟಿಗೆ ಸೇರಿದರೆ ತಾನೆ ನಮಗೆ ದಿನವೂ ಬೇಕಾಗುತ್ತಿರುವ ವಿಧವಿಧವಾದ ಆಹಾರ, ಬಟ್ಟೆ, ವಿನೋದ, ಭೋಗಸಾಮಗ್ರಿ, ಸೇವೆ ಸೌಕರ್ಯ, ದೊರೆತಾವು? ಪ್ರತಿಯೊಂದಕ್ಕೂ ಎಷ್ಟು ಜನರೊಡನೆ ವ್ಯಾಪಾರಕ್ಕೆ ನಿಲ್ಲುವುದು ಸಾಧ್ಯ? ಎಲ್ಲರೂ ಒಂದೇ ಕಡೆ ದೊರೆತಾರೊ? ದೊರೆತರೂ ನಮ್ಮಲ್ಲಿರುವುದು ಅವರಿಗೆ ಬೇಡವಾಗಿದ್ದರೆ—ಬೆಲೆಗಳು ಹೊಂದದೆ ವಾದ ಹುಟ್ಟಿದರೆ—ತೀರ್ಮಾನ ಹೇಗೆ? ಮಾಡುವವರು ಯಾರು? ಬೆಲೆಯೂ ಗೊತ್ತಾಯಿತೆನ್ನೋಣ: ಒಂದರ ಇಷ್ಟು ಭಾಗಕ್ಕೆ ಇನ್ನೊಂದರ ಇಷ್ಟು ಸಮ ಎಂದು ಗೊತ್ತಾದರೂ ವಸ್ತುಗಳನ್ನು ವಿಭಾಗಮಾಡುವುದಕ್ಕೆ ಅವಕಾಶವಿಲ್ಲದಿದ್ದರೆ? ಅಕ್ಕಿ ಕೊಟ್ಟು ಅಂಗಿಯನ್ನು ಕೊಳ್ಳುವ ಇಚ್ಛೆ ಇರುವಾಗಲೂ ಅಂಗಿಗೆ ತಕ್ಕಷ್ಟು ಅಕ್ಕಿ ಅಕ್ಕಿಯವನಲ್ಲಿಲ್ಲದಿದ್ದರೆ ಅಂಗಿಯವನು ಅಂಗಿಯನ್ನು ಹರಿದು ಅದರ ಒಂದು ಭಾಗವನ್ನು ಕೊಡಲು ಶಕ್ಯವಾಗುವುದೆ? ಅಂಗಿಯವನಾದರೂ ಕೊಟ್ಟಾನು; ಅಕ್ಕಿಯವನಿಗೆ ಅದರ ಪ್ರಯೋಜನ ವೇನು? ಅಂಗಿಯವನಿಗೆ ಅಕ್ಕಿಯೊಂದೇ ಅಲ್ಲದೆ ಹಣ್ಣು, ಹಾಲು, ಸಕ್ಕರೆ, ಬತ್ತಿ, ತರಕಾರಿ ಎಲ್ಲವೂ ಸ್ವಲ್ಪ ಸ್ವಲ್ಪ ಬೇಕಾಗಿದ್ದರೆ? ಹೀಗೆ ಲೆಕ್ಕವಿಲ್ಲದಷ್ಟು ತೊಂದರೆಗಳು ಪರಂಪರೆಯಾಗಿ ಬರುವವು. ಈ ಅನನುಕೂಲಗಳನ್ನು ನಿವಾರಿಸುವುದು ಆವಶ್ಯಕವಾಗಿ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಜನರು ಒಂದು ಬಗೆಯ 'ಹಣ-ವಸ್ತು'ವನ್ನು ಗೊತ್ತುಮಾಡಿಕೊಂಡು ಆ ಮೂಲಕ ಬಂಧ ವ್ಯಾಪಾರಗಳನ್ನು ಮಾಡಲು ಆರಂಭಿಸಿದರು. ಬಹುಮಟ್ಟಿಗೆ ಸುತ್ತಮುತ್ತಲ ಎಲ್ಲರಿಗೂ ಸಾಮಾನ್ಯವಾಗಿ ಬೇಕಾಗುವ ಪದಾರ್ಥವನ್ನೇ ಈ ಹಣ-ವಸ್ತುವಾಗಿ ಮಾಡಿಕೊಳ್ಳುತ್ತಿದ್ದುದರಿಂದ ಅದರ ಮೂಲಕ ಇತರ ವಸ್ತುಗಳ ಬೆಲೆಯನ್ನು ಅಳೆದು ಲೆಕ್ಕವನ್ನು ಹರಿಸಿಕೊಳ್ಳುತ್ತಿದ್ದರು, ಸರಿಹೊಂದಿಸಿಕೊಳ್ಳುತ್ತಿದ್ದರು. ಬೇರೆ ಬೇರೆ ಪಂಗಡ, ಕಾಲ, ಪ್ರಾಂತ, ಕಸುಬು, ನಾಗರಿಕತೆ, ಆಸೆ ಇವುಗಳಿಗೆ ತಕ್ಕಹಾಗೆ ಈ ಹಣ-ವಸ್ತು ಬಳಕೆಗೆ ಬರುತ್ತಿತ್ತು. ಮೊದಮೊದಲು ಎತ್ತು, ಮೀನುಹಿಡಿಯುವ ಕೊಕ್ಕೆ, ಬಿಲ್ಲು, ಅಂಬು, ಕವಡೆ, ಮಣಿ,

ಚರ್ಮ, ಹೊಗೆಸೊಪ್ಪು, ಧಾನ್ಯ, ಬಟ್ಟೆ ಮುಂತಾದ ಪದಾರ್ಥಗಳು ಪ್ರಪಂಚದ ಬೇರೆಬೇರೆ ಕಡೆಗಳಲ್ಲಿ ಹಣವಾಗಿ ಉಪಯೋಗದಲ್ಲಿದ್ದುವು. ಅವನ್ನು ಕೊಟ್ಟರೆ ಆ ಸುತ್ತಮುತ್ತ ಇತರ ಎಲ್ಲ ಪದಾರ್ಥಗಳೂ ದೊರೆಯುತ್ತಿದ್ದುವು. ಸ್ವಲ್ಪ ಸ್ವಲ್ಪವಾಗಿ ಅವುಗಳ ಉಪಯೋಗದಲ್ಲಿ ಅನನುಕೂಲಗಳು ಕಂಡುಬಂದುವು. ಕೆಲವು ಹುಳುತುಹೋಗುವವು; ಕೆಲವು ಕೊಳೆಯುವವು; ಕೆಲವು ಮಾಸುವವು, ಹರಿಯುವವು, ಮುರಿಯುವವು; ಕೆಲವು ಅಳಿಯುವವು; ಕೆಲವಕ್ಕೆ ಬಣ್ಣ ಗುಣ ಗಾತ್ರ ತೂಕ ನಿಶ್ಚಯವಿಲ್ಲ; ಪ್ರಾಂತ ಪ್ರಾಂತವೂ ಹೆಚ್ಚು ಕಡಮೆಯಾಗುವವು. ಆದುದರಿಂದ ವ್ಯಾಪಾರದಲ್ಲಿ ಮನಸ್ತಾಪವೂ ಅಸಮಾಧಾನವೂ ಉಂಟಾಗಬೇಕು. ಕಡೆಗೆ ಎಲ್ಲ ದೇಶಗಳಲ್ಲಿಯೂ ಸುಮಾರು ಲೋಹಗಳನ್ನು ಬಳಸುತ್ತಬಂದರು. ಈಗ, ಬಹುತರವಾಗಿ ಎಲ್ಲರೂ, ಥಳಥಳ ಹೊಳೆಯುವ ಗಟ್ಟಿಯಾಗಿ ಬಣ್ಣ ನಿಲ್ಲುವ ಮನೋಹರವಾದ ಚಿನ್ನ ಬೆಳ್ಳಿಗಳಿಗೆ ಪ್ರಾಮುಖ್ಯತೆ ಕೊಟ್ಟಿದ್ದಾರೆ.

**ಚಿನ್ನ ಬೆಳ್ಳಿಗಳ ಉಪಯೋಗ.**—ಮಿಕ್ಕ ಹಣ-ವಸ್ತುಗಳಲ್ಲಿಲ್ಲದ ಅನೇಕ ಸುಗುಣಗಳು ಚಿನ್ನ ಬೆಳ್ಳಿಗಳಲ್ಲಿವೆ. ದುರ್ಗುಣಗಳಿಲ್ಲ. ಎಷ್ಟು ಕಾಲ ಒಂದೇ ಕಡೆ ಮುಚ್ಚಿಟ್ಟರೂ ಭೂಮಿಯಲ್ಲಿ ಹೂತಿಟ್ಟರೂ ಕೆಡುವುದಿಲ್ಲ. ಎಲ್ಲ ದೇಶಗಳವರೂ ಎಲ್ಲ ಕಾಲದಲ್ಲಿಯೂ, ಬಯಸಿ ಇವಕ್ಕೆ ಬೆಲೆ ಕೊಡುವರು. ತಮಗೆ ಬರಬೇಕಾದುದೆಲ್ಲಕ್ಕೂ ಪ್ರತಿಯಾಗಿ ಇವನ್ನೇ ತೆಗೆದುಕೊಳ್ಳಲು ಒಪ್ಪುವರು. ಬೆಳ್ಳಿ ಬಂಗಾರ ಕೈಯಲ್ಲಿದ್ದರೆ ಶಾಂತಿ ಕಾಲದಲ್ಲಿಯೂ ಯುದ್ಧಕಾಲದಲ್ಲಿಯೂ ಬೇಕಾದ ವಸ್ತುಗಳನ್ನು ಕೊಳ್ಳುವ ಶಕ್ತಿ ಬರುವುದೆಂದು ಜನರಿಗೆ ದೃಢವಾದ ನಂಬಿಕೆ. ಕಬ್ಬಿಣ ಕಲ್ಲಿದ್ದಲುಗಳಂತೆ ಇವು ಅತಿ ಪುಷ್ಕಲವಲ್ಲ; ಪ್ಲಾಟಿನಮ್, ರೇಡಿಯಮ್‌ಗಳಂತೆ ಅತಿ ಅಪರೂಪವಲ್ಲ. ಅಲ್ಪ ಗಾತ್ರದಲ್ಲಿ ಹೆಚ್ಚು ಬೆಲೆ ತರುವುವು. ಸುಲಭವಾಗಿ ಪರದೇಶಗಳಿಗೆ ಸಾಗಿಸಬಹುದು. ಯಾವ ದೇಶದಲ್ಲಿ ಸಿಕ್ಕಿದರೂ ಸುಮಾರು ಒಂದೇ ಬಣ್ಣ ಯೋಗ್ಯತೆ ಉಳ್ಳವಾಗಿರುವುವು. ಆದುದರಿಂದ ಸುಲಭವಾಗಿ ಗುರುತಿಸಿ ಬರೆಯಿಡಬಹುದು. ಕರಗಿಸಿ ಬೇಕಾದಂತೆ ಎಳೆದು ಬಡಿದು ಮುದ್ರೆ ಒತ್ತಿ ಯಾವ ಆಕಾರಕ್ಕಾದರೂ ತಿರುಗಿಸಬಹುದು. ಇಷ್ಟೇ ಅಲ್ಲ—ಜನರು ತಮಗೆ ಪ್ರತಿಷ್ಠೆ ತರುವ ಉತ್ತಮ ಬೆಲೆಯ ಪಾತ್ರೆ

ಪದಾರ್ಥ, ಒಡವೆಗಳನ್ನೆಲ್ಲವನ್ನೂ ಇವುಗಳಿಂದಲೇ ಮಾಡಿಸುವರು. ಆದುದರಿಂದ ಎಷ್ಟು ಪರಿಮಾಣದಲ್ಲಿ ದೊರೆತರೂ ಇವಕ್ಕೆ ಗಿರಾಕಿ ಇದ್ದೇ ಇರುವುದು. ಸರಕಾರದವರು ನಾಣ್ಯರೂಪದಲ್ಲಿ ಇವನ್ನು ಪ್ರಚಾರಕ್ಕೆ ತಾರದಿದ್ದರೂ ಚಿಂತೆಯಿಲ್ಲ, ಇವುಗಳ ಬೆಲೆ, ಗೌರವ, ಮೋಹಕತೆ ಮೊದಲಿನಂತೆಯೇ ಇರುವುವು. ಹೀಗೆ ಎಲ್ಲರ ಬಯಕೆಗೂ ಮೆಚ್ಚಿಕೆಗೂ ಅವಕಾಶ ಕೊಟ್ಟು ಚಿನ್ನ ಬೆಳ್ಳಿಗಳು ಲೋಕದಲ್ಲಿ ಹೆಚ್ಚಿಕೆ ಪಡೆದಿವೆ.

**ನಾಣ್ಯಗಳು — ಸರಕಾರದ ಅಂಕೆ.** — ಇವನ್ನು ಹಣವಾಗಿ ಉಪಯೋಗಿಸುವುದಕ್ಕೆ ಮೊದಲುಮಾಡಿದ ಕಾಲದಿಂದಲೂ ಇವುಗಳಿಂದ ಮಾಡಿದ ಹಣದ ಆಕಾರ ಅನೇಕವಾಗಿ ವ್ಯತ್ಯಾಸ ಹೊಂದಿದೆ. ಕೆಲವು ಕಾಲ ಲೋಹದ ಗಟ್ಟಿಗಳನ್ನೇ ಉಪಯೋಗಿಸುತ್ತಿದ್ದರು. ತಕ್ಕಡಿ, ಒರೆಗಲ್ಲು ಮೊದಲಾದ ಸಾಧನಗಳು ಆಗ ವ್ಯಾಪಾರಸ್ಥರ ಬಳಿಯಲ್ಲಿ ಇರಲೇಬೇಕಾಗಿತ್ತು. ಇಲ್ಲವಾದರೆ ಹಣದ ಯೋಗ್ಯತೆಯೂ ಬೆಲೆಯೂ ಸುಲಭವಾಗಿ ತಿಳಿಯುತ್ತಿರಲಿಲ್ಲ; ಬಳಕೆಗೆ ಅಡಚಣೆ ಬರುತ್ತಿತ್ತು. ಆದುದರಿಂದ ಕಾಲಕ್ರಮದಲ್ಲಿ ಗೊತ್ತಾದ ಬಣ್ಣ ತೂಕದ ಗಟ್ಟಿಗಳ ಮೇಲೆ ಹೆಸರಾದ ವರ್ತಕರದೊ ಸರಕಾರದವರದೊ ಮುದ್ರೆ ಒತ್ತಿ ಅವು ಚಲಾವಣೆಗೆ ಬರುವುದು ವಾಡಿಕೆಯಾಯಿತು. ಮುದ್ರೆಯ ಸುತ್ತಲೂ ಉಜ್ಜುವುದು, ಕೊನೆ ಕತ್ತರಿಸುವುದು, ಕಂದು ಸೇರಿಸುವುದು ಮುಂತಾಗಿ ಹಣ ಕೆಡಿಸುವುದನ್ನು ತಪ್ಪಿಸಬೇಕಾಗಿ ಬಂದಿತು. ಸಮಾಜದ ಎಲ್ಲರ ಹಿತವನ್ನೂ ಸಮವಾಗಿ ಸಾಧಿಸಬೇಕಾಗಿರುವ ಸರಕಾರಗಳು ಆಗ ಮುಂದೆ ಬಂದು ಹಣವನ್ನು ಪ್ರಚಾರಕ್ಕೆ ತರುವ ಸರ್ವಾಧಿಕಾರವನ್ನು ತಾವು ಕೈಕೊಂಡರು. ದುರಾಸೆಯಿಂದ ಸುಳ್ಳು ಹಣವನ್ನು ಮಾಡುವವರ ಮತ್ತು ಹಣದಲ್ಲಿ ಸಂಚಕೆ ಕೆಡಿಸುವವರ ಕೃತ್ರಿಮಗಳು ಸಾಗದಂತೆ ಬಗೆಬಗೆಯ ಏರ್ಪಾಡುಗಳನ್ನು ಅವರು ಮಾಡಬೇಕಾಗಿ ತಮ್ಮ ಟಂಕಸಾಲೆಗಳಲ್ಲಿ ಹಣದ ಆಕಾರ, ಮುದ್ರೆಗಳ ಬಗೆಗೆ ಅವರು ಹೆಚ್ಚು ಗಮನಕೊಟ್ಟರು. ಕೊನೆಗೆ ಸುಮಾರು ಎಲ್ಲೆಲ್ಲಿಯೂ ಈಗ ಬಳಕೆಯಲ್ಲಿರುವ ಆಕಾರವೂ ಅಚ್ಚೂ ಗೊತ್ತಾಗಿ ಎಲ್ಲ ದೇಶಗಳ ಹಣದ ಮೇಲೆಯೂ ಸಂಕ್ಷೇಪವಾಗಿ ಅದರ ಹೆಸರು, ಬೆಲೆ, ಅಚ್ಚಾದ ವರ್ಷ, ದೇಶದ ಹೆಗ್ಗುರುತು, ಅದನ್ನು ಕತ್ತರಿಸಿದರಾಗಲಿ ಉಜ್ಜಿ

ಲೋಹವನ್ನು ತೆಗೆದುಕೊಂಡರಾಗಲಿ ಸುಲಭವಾಗಿ ಗೊತ್ತಾಗುವಂತೆ ಒಂದು ಏರ್ಪಾಡು—ಈ ರೀತಿ ವ್ಯವಸ್ಥೆಯಾಯಿತು.

**ನಾಣ್ಯ ಪದ್ಧತಿ.**—ಯಾವ ದೇಶದಲ್ಲಾಗಲಿ ಹಣ ಯಾವ ರೂಪದಲ್ಲಿರುವುದೆಂಬುದನ್ನು ಅಲ್ಲಿನ ಹಣ ಪದ್ಧತಿಯೂ ಬಳಕೆಯೂ ಗೊತ್ತುಮಾಡುತ್ತವೆ. ಎಲ್ಲ ದೇಶಗಳಲ್ಲಿಯೂ ಅವರವರ ಅನುಕೂಲಕ್ಕೆ ತಕ್ಕಂತೆ ಹಣ ಸಂಚಾರವಾಗಬೇಕಾಗಿರುವುದರಿಂದ ಹಿಂದಿನಿಂದ ನಡೆದುಬಂದಿರುವ ಪದ್ಧತಿಗಳೇ ಕಾಲಕ್ಕೆ ತಕ್ಕಂತೆ ಹೊಂದಿಕೊಂಡು ಪ್ರಚಾರದಲ್ಲಿರುತ್ತವೆ. ಹಣದ ಪ್ರಚಾರಕ್ಕೆ ಸಂಬಂಧಿಸಿದ ಎಲ್ಲ ರೂಢಿ, ನಯ, ನಿಯಮಗಳನ್ನೂ ಆಯಾ ಸರಕಾರದವರೇ ಗೊತ್ತುಮಾಡುವರು. ಅವರು ಯಾವುದನ್ನು ಹಣವೆಂದು ಶಾಸನಮಾಡುವರೋ ಅದೇ ಹಣ (Legal Tender); ಯಾವ ತೆರಾಣೆಯನ್ನಾಗಲಿ ಇಂಥ ಹಣದ ಮೂಲಕವೇ ಮಾಡತಕ್ಕದ್ದು; ಹಾಗೆ ಮಾಡಿದರೇ ಸಾಲ ತೀರಿದಂತಾಯಿತು—ಎಂದು ಅವರು ವಿಧಿಸಿದರೆ ಆ ಆಜ್ಞೆಗೆ ಎಲ್ಲರೂ ಒಳಪಟ್ಟು ನಡೆಯಬೇಕು.

ದೇಶದ ಮುಖ್ಯ ನಾಣ್ಯ ಯಾವುದು? ಅದರ ಗಾತ್ರ—ಬೆಲೆ—ಏನು? ಅದು ಚಿನ್ನದ್ದೋ, ಬೆಳ್ಳಿಯದೆ, ಕಾಗದದ್ದೆ? ಪ್ರಧಾನ ನಾಣ್ಯ ಒಂದು ಲೋಹದ್ದೋ, ಎರಡು ಲೋಹಗಳದೆ? ಎರಡಾದರೆ ಅವುಗಳಲ್ಲಿ ಒಂದೊಂದಕ್ಕೆ ಬೆಲೆ ತೂಕಗಳಲ್ಲಿಯೂ ಅಳತೆಯಲ್ಲಿಯೂ ಸಂಬಂಧವೇನು? ಮುಂತಾದ ಅನೇಕ ಸಂಗತಿಗಳು ಹೀಗೇ ಎಂದು ನಾಣ್ಯಶಾಸನಗಳ ಮೂಲಕ ಏರ್ಪಡುತ್ತವೆ.

**ಪ್ರಮಿತಿಗಳು.**—ಹಣ ಪದ್ಧತಿಯಿಂದ ಹಣದ ಚಲಾವಣೆಯ ರೀತಿಯೂ ನೀತಿಯೂ ಹೆಚ್ಚು ಕಡಮೆ ಆಗಲು ಅವಕಾಶವಿದೆ; ಮತ್ತು ಪ್ರಚಾರಕ್ಕೆ ಬರುವ ಹಣದ ಮೊತ್ತ ನಿರ್ಧರವಾಗುವುದು. ಆದುದರಿಂದ ಅದು ಸಾಮಾನ್ಯವಾಗಿ ಎಷ್ಟು ಬಗೆಯಾಗಿರಬಲ್ಲದು? ಎಂಬುದನ್ನು ಸ್ಥೂಲವಾಗಿ ವಿವರಿಸಬಹುದು:—

(೧) ಯಾವುದಾದರೂ ಒಂದು ಲೋಹವನ್ನು—ಚಿನ್ನವನ್ನೊ ಬೆಳ್ಳಿಯನ್ನೊ—ಅಳತೆಯ ಪ್ರಮಾಣವಾಗಿ ಇಟ್ಟುಕೊಂಡು ಹಣವನ್ನು ಪ್ರಚಾರಕ್ಕೆ ತರುವುದು. ಇದನ್ನು ಏಕಲೋಹ ಪ್ರಮಿತಿ (Monometallism) ಎನ್ನುವರು.

(೨) ಎರಡನ್ನೂ ಸಮಾನ ಗೌರವದಿಂದ ಅಳತೆಯ ಲೋಹಗಳಾಗಿ ಬಳಸಬಹುದು. ಇದು ದ್ವಿಲೋಹ ಪ್ರಮಿತಿ (Bimetallism).

(೩) ಯಾವ ಲೋಹಕೋಶವನ್ನೂ ಬೆಂಗಾವಲಿಗಾಗಿಡದೆ ಕೇವಲ ಸರಕಾರಕ್ಕೆ ಇಚ್ಛೆ ಹೊಳೆದಂತೆ ಕಾಗದದ ಹಣವನ್ನು ಪ್ರಚಾರಕ್ಕೆ ತಂದು ವ್ಯಾಪಾರಕ್ಕೆ ಸಾಕಾದಷ್ಟನ್ನು ಒದಗಿಸಿ ಎಲ್ಲ ಬೆಲೆಗಳನ್ನೂ ಅಳೆಯಬಹುದು (The Inconvertible Paper Standard).

(೪) ಪದಾರ್ಥಗಳನ್ನು ಗೊತ್ತಾದ ಒಂದು ಕ್ರಮದಲ್ಲಿ ಪಟ್ಟಿಮಾಡಿ ಅವುಗಳ ಬೆಲೆಗಳು (ಧಾರಣೆಯಾಗಿ) ಕಾಲಕಾಲಕ್ಕೆ ಏರಿಳಿದು ಬದಲಾಗುತ್ತಿರುವ ಸೂಚನೆಗೆ ತಕ್ಕಂತೆ—ಒಂದು ಸೂಚಿಕೆಯನ್ನು (Index) ತಯಾರುಮಾಡಿ—ಬೆಲೆ ಏರುತ್ತಿರುವ ಅಥವಾ ಇಳಿಯುತ್ತಿರುವ ಸೂಚನೆಯನ್ನು ಅನುಸರಿಸಿ ಹೆಚ್ಚು ಹಣವನ್ನೂ ಕಡಮೆಯನ್ನೂ ಚಲಾವಣೆಗೆ ತರಬಹುದು (The Tabular or Price Index Standard).*

ಕೇವಲ ಒಂದೇ ಲೋಹದ ಪ್ರಮಿತಿಯಿಂದ ಹಣದ ಗೌರವಕ್ಕೆ ಒಳಗೂ ಹೊರಗೂ ಚ್ಯುತಿ ಬರುವುದು ಸುಲಭಸಿದ್ಧ.† ನಾಲ್ಕನೆಯದು ಹಣಶಾಸ್ತ್ರದೃಷ್ಟಿಯಿಂದ ಉತ್ಕೃಷ್ಟವಾಗಬಲ್ಲದು; ಆದರೆ ಈವರೆಗೆ ಎಲ್ಲಿಯೂ ಈ ಪದ್ಧತಿ ವಿಶೇಷವಾಗಿ ಪ್ರಚಾರಕ್ಕೆ ಬಂದಿಲ್ಲ. ಇವೆರಡನ್ನೂ ಪ್ರತ್ಯಕ್ಷಕ್ಕೆ ಬಿಡಬಹುದು. ಎರಡು ಲೋಹಗಳಿಂದಲೂ ಪ್ರಧಾನ ನಾಣ್ಯಗಳನ್ನು ಮಾಡುವ ಪ್ರಯತ್ನ ಹೋದ ಶತಮಾನದಲ್ಲಿ ನಡೆದು ಅನೇಕ ಕಷ್ಟನಷ್ಟಗಳುಂಟಾದುವು. ಮುಂದುವರಿದ ಎಲ್ಲ ಜನಾಂಗಗಳವರೂ ಸುಮಾರು (ಚಿನ್ನದ) ಏಕಲೋಹ ಪ್ರಮಿತಿಯನ್ನೇ ಹಿಡಿದರು. ಎಂದರೆ ಚಿನ್ನದ ಅದೃಷ್ಟಕ್ಕೇ ತಮ್ಮ ಹಣಪದ್ಧತಿಗಳನ್ನು ಗಂಟುಹಾಕಿದರು. ಅದರ ಬೆಲೆ ಹೆಚ್ಚು ಕಡಮೆ

* ಇನ್ನೂ ಅನೇಕ ಪ್ರಮಿತಿಗಳು ಸಾಧ್ಯ. ಅವನ್ನು ಇಲ್ಲಿ ವಿಚಾರಮಾಡಿಲ್ಲ.

† ಜನರಿಗೆ ಪೂರ್ತಿ ನಂಬಿಕೆಯಿದ್ದು ಸರಕಾರದವರು ವಿವೇಚಿತಬುದ್ಧಿಯೊಂದರಿಂದಲೇ ಈ ರೀತಿ ಹಣವನ್ನು ಪ್ರಚಾರಕ್ಕೆ ತರುವುದಾದರೆ ಇದು ಯಾವ ಪ್ರಮಿತಿಗೂ ಕೀಳಾಗಬೇಕಿಲ್ಲ. ೨೦ ವರ್ಷಗಳ ಕಾಲ ಸ್ವೀಡನಿನಲ್ಲಿ ಕ್ರೋನಾ ಎಂಬ ಹಣದ ಬೆಲೆ ಹಾಗೇ ನಿಂತಿದೆ.

ಳಿಯಿತೆಂದರೆ ಹಣದ ಬೆಲೆಯೂ ಹೆಚ್ಚು ಕಡಮೆ ಆಗುವುದು. ಎರಡು ಲೋಹಗಳಿಗೆ ಪ್ರಾಧಾನ್ಯವನ್ನು ಕೊಟ್ಟರೆ ಒಂದರ ಕುಂದನ್ನು ಇನ್ನೊಂದು ತಪ್ಪಿಸಬಹುದು ಎಂಬುದು ದ್ವಿಲೋಹ ಪ್ರಮಿತಿಯ ಕಡೆಯ ವಾದ. ಆದರೆ ಎಲ್ಲಾ ದೇಶಗಳವರೂ ಈ ಪದ್ಧತಿಯನ್ನು ನಡಸಿದ ಹೊರತು ಅದು ಸರಿಯಾಗಿ ಕಾರ್ಯಕಾರಿಯಾಗುವುದು ಅಸಾಧ್ಯ. ಸಾಮಾನ್ಯವಾಗಿ ದೊಡ್ಡ ರಾಷ್ಟ್ರಗಳವರೆಲ್ಲ ಆ ಮೂಲಕವೇ ಜನಾಂಗಕ್ಕೆ ಬಲ, ಪ್ರತಿಷ್ಠೆ ಎಂದುಕೊಂಡು ಚಿನ್ನದ ಪ್ರಮಿತಿಯನ್ನೇ ಆಚರಣೆಯಲ್ಲಿ ಇಟ್ಟುಕೊಂಡರು. ದ್ವಿಲೋಹ ಪ್ರಮಿತಿಗೆ ಮನ್ನಣೆ ಬಾರದಾಯಿತು.

**ಸ್ವರ್ಣ ಪ್ರಮಿತಿ.** — ಸ್ವರ್ಣ ಪ್ರಮಿತಿ (Gold Standard) ಎಂದರೆ ದೇಶದ ಹಣ ವ್ಯವಸ್ಥೆಯಲ್ಲಿ ಚಿನ್ನಕ್ಕೇ ಮೊದಲನೆಯ ಪದವಿ ಇರುವುದು; ಇತರ ಎಲ್ಲವನ್ನೂ ಚಿನ್ನದ ಲೆಕ್ಕದಿಂದಲೇ ಅಳೆಯತಕ್ಕದ್ದು ಎಂಬ ನಿಯಮವು ಏರ್ಪಡುವುದು. ಒಂದು ಗೊತ್ತಾದ ತೂಕದ ಚಿನ್ನದ ಮೂಲನಾಣ್ಯವನ್ನು (Unit) ಪ್ರಧಾನ ನಾಣ್ಯವೆಂದೂ ಅಥವಾ ಮೂಲ ನಾಣ್ಯಕ್ಕೆ ಒಂದು ಗೊತ್ತಾದ ತೂಕದ ಚಿನ್ನವನ್ನು ಕೊಡುವೆನೆಂದೂ ಮಾತು ಬಳಕೆಯಲ್ಲಿರಬಹುದಾದ ಇತರ ನಾಣ್ಯಗಳೆಲ್ಲ ಅದಕ್ಕೆ ಸಹಾಯ, ಅಧೀನ ಅಥವಾ ಚಿಲ್ಲರೆ ನಾಣ್ಯ ಎಂದು ಪ್ರಕಟಿಸುವುದು ಈ ಪದ್ಧತಿಯ ತಿರುಳು. ಚಿನ್ನವೇ ನಾಣ್ಯರೂಪದಲ್ಲಿ ಸಂಚಾರವಾಗದಾಗಲೂ ಕೂಡ ಚಿನ್ನದ ಪ್ರಮಿತಿಯನ್ನು ಸಾಧಿಸಬಹುದು. ಒಂದು ಬಗೆಯ ಸ್ವರ್ಣ ಪ್ರಮಿತಿಯ ದೇಶಗಳಲ್ಲಿ ಮುಖ್ಯ ನಾಣ್ಯವೇ ಚಿನ್ನದ್ದು.* ಇನ್ನು ಕೆಲವು ದೇಶಗಳಲ್ಲಿ ಬಳಕೆಗೆ ಚಿನ್ನದ ನಾಣ್ಯವಿರುವುದಿಲ್ಲ. ಮುಖ್ಯ ನಾಣ್ಯ ಯಾವುದೇ

---

* ಉದಾ.— ೧೯೧೪ಕ್ಕೆ ಮುಂಚಿನ ಇಂಗ್ಲೆಂಡ್. ಅಲ್ಲಿ ಪೌಂಡ್ (ಸ್ಟರ್ಲಿಂಗ್) ಎಂಬ ಚಿನ್ನದ ಹಣವನ್ನು ಸವರಿನ್ ಎಂಬ ನಾಣ್ಯರೂಪದಲ್ಲಿ ಬಳಸಬಹುದಾಗಿತ್ತು. ಹನ್ನೊಂದು ಭಾಗ ಚೊಕ್ಕ ಬಂಗಾರ ಒಂದು ಭಾಗ ಕಂದು ಇರುವ ಒಂದು ಔನ್ಸ್ (Standard) ಚಿನ್ನಕ್ಕೆ ಪೌಂ. ೩—೧೭—೧೦½ ಬೆಲೆ ಎಂದು ಸರಕಾರದವರು ಬಂದ ಗೊತ್ತುಮಾಡಿದ್ದರು. ಆ ಲೆಕ್ಕದಂತೆ ಯಾರೇ ಆಗಲಿ ಚಿನ್ನವನ್ನು ತೆಗೆದುಕೊಂಡು ಹೋಗಿ ಕೊಟ್ಟರೂ ಬ್ಯಾಂಕ್ ಆಫ್ ಇಂಗ್ಲೆಂಡ್ ಎಂಬ ಪ್ರಧಾನ ಬ್ಯಾಂಕಿನವರು ಸವರನ್ನುಗಳನ್ನು ಕೊಡಬೇಕೆಂದೂ ಸರಕಾರದ ನೋಟುಗಳಿಗೆ ಪ್ರತಿಯಾಗಿಯೂ ಬೇಕಾದವರಿಗೆ ಒಂದು ನೋಟಿಗೆ ಒಂದು ಸವರನ್ನಿನಂತೆ ನಾಣ್ಯವನ್ನು ಕೊಡತಕ್ಕದ್ದೆಂದೂ ನಿಯಮವಿದ್ದಿತು. ಆ ಮೂಲಿಕ ಚಿನ್ನದ ಬೆಲೆಯೂ ಸವರನ್ನಿನ ಬೆಲೆಯೂ ಒಂದೇ ಮಟ್ಟದಲ್ಲಿರಲು ಅವಕಾಶವಾಗುತ್ತಿತ್ತು. ಹೆಚ್ಚು ಹಣ ಬೇಕಾದವರು ಈ ರೀತಿ ಅದನ್ನು ಪ್ರಚಾರಕ್ಕೆ ತರಬಹುದಾಗಿತ್ತು. ಒಟ್ಟಿನಲ್ಲಿ ನಂಬಿಕೆಯ ಸ್ಥಾಪನೆಗೆ ಸಹಾಯವಾಗಿತ್ತು.

ಆಗಿರಲಿ ಅದಕ್ಕೆ ಬದಲಾಗಿ ಒಂದು ಗೊತ್ತಾದ ಲೆಕ್ಕದಂತೆ ಚಿನ್ನದ ಗಟ್ಟಿಯನ್ನು ಕೊಡಬೇಕೆಂಬ ನಿಯಮವಿರುತ್ತದೆ. ಇದಕ್ಕೆ The Gold Bullion Standard ಎಂದು ಹೆಸರು.* ಅಥವಾ, ಒಳಬಳಕೆಗೆ ಯಾವುದೊ ಒಂದು ಬಗೆಯ ಕೀಳು ನಾಣ್ಯವನ್ನೇ ಉಪಯೋಗಿಸುತ್ತಾ ಹೊರದೇಶಗಳವರಿಗೆ ಹಣ ತೆರಬೇಕಾದಾಗ ಮಾತ್ರ ಯಾವ ಚಿನ್ನದ ನಾಣ್ಯವನ್ನು ಪ್ರಧಾನ ನಾಣ್ಯವಾಗಿ ಏರ್ಪಡಿಸಿರುವರೊ ಅದನ್ನೊ—ಚಿನ್ನದ ಗಟ್ಟಿಯನ್ನೊ—ಇಷ್ಟಕ್ಕೆ ಇಷ್ಟು ಎಂದು ಒಂದು ಗೊತ್ತಾದ ಲೆಕ್ಕದಲ್ಲಿ ಒದಗಿಸುವ ಪದ್ಧತಿಯಿರಬಹುದು. ಅಲ್ಲಿ ಒಳಸಂಚಾರಕ್ಕಾಗಲಿ ಇತರ ಕೆಲಸಕ್ಕಾಗಲಿ ಸರಕಾರದಿಂದ ಚಿನ್ನ ಸಿಕ್ಕದು. ಹೊರಸಾಲಗಳನ್ನು ತೀರಿಸಲು ಮಾತ್ರ ಸಿಕ್ಕುವುದು. ಇಂತಹ ಪದ್ಧತಿಗೆ ಸ್ವರ್ಣವಿನಿಮಯ ಪದ್ಧತಿ (The Gold Exchange Standard) ಎಂದು ಹೆಸರು.† ಅಥವಾ, ಒಳಗಿನ ಹಣಕ್ಕೆ ಪ್ರತಿಯಾಗಿ ಸ್ವರ್ಣ ಪ್ರಮಿತಿಯನ್ನು ಕಾಪಾಡುತ್ತಿರುವ ಬೇರೆ ದೇಶದವರ ಹಣವನ್ನೇ, ಮಾರಿದರೆ ಚಿನ್ನವಾಗುವ ಆಧಾರ ಪತ್ರಗಳನ್ನೋ (Gold Securities) ಸಿಕ್ಕಿದರೂ ಸಾಕು. ಆಮಟ್ಟಿಗೆ ಚಿನ್ನ ಸಿಕ್ಕಿತೆಂದೇ ಲೆಕ್ಕ. ಕಡೆಗೆ ಶಾಸನದ ಮೂಲಕ ಕಡ್ಡಾಯವಾಗಿ ದೇಶದ ನೋಟಿಗೆ ಬದಲು ಚಿನ್ನವನ್ನು ಕೊಡಲೇಬೇಕೆಂಬ ನಿಯಮವಿಲ್ಲದಿದ್ದರೂ ರೂಢಿಯಲ್ಲಿ ನಾಣ್ಯಶಾಲೆಯವರೂ ವರ್ತಕರೂ ನಾಣ್ಯಗಳನ್ನೊ ಗಟ್ಟಿಯನ್ನೊ ದೊರಕಿಸಿದರೂ ಸಾಕು. ಆಗಲೂ ಸ್ವರ್ಣ ಪದ್ಧತಿಯಿದೆ ಎನ್ನಬಹುದು.‡

ಒಳ ಹೊರ ಹಣಕಾರ್ಯಗಳೆರಡಕ್ಕೂ ಚಿನ್ನವನ್ನು ಒದಗಿಸುವ ಅಥವಾ ರಫ್ತುಮಾಡುವ ಸಿದ್ಧತೆಯಿರುವ ಕಡೆ ಮಾತ್ರ ಶುದ್ಧವಾದ ಸ್ವರ್ಣ ಪ್ರಮಿತಿಯಿದೆಯೆನ್ನಬೇಕು.

---

* ಇದು ೧೯೨೫ರಿಂದ ಈಚೆಗೆ ೧೯೩೧ನೇ ಸಪ್ಟೆಂಬರ್‌ವರೆಗೂ ಇಂಗ್ಲೆಂಡು ದೇಶದಲ್ಲಿ ಪ್ರಚಾರದಲ್ಲಿತ್ತು.

† ೧೮೯೮ರಿಂದ ೧೯೨೭ರವರೆಗೂ ಇಂಡಿಯಾದಲ್ಲಿ ಬಳಕೆಯಲ್ಲಿತ್ತು. ಯುದ್ಧ ಮುಗಿದ ಮೇಲೆ ಅನೇಕ ಸಾಮ್ರಾಜ್ಯ[illegible] ರಾಷ್ಟ್ರಗಳವರು ಇದನ್ನೇ ಅನುಸರಿಸಿದ್ದಾರೆ.

‡ Macmillan Report.

**ಲೋಹನಿಧಿ - ಕೋಶ.** — ಸ್ವರ್ಣ ಪದ್ಧತಿಯನ್ನು ಆಚರಿಸುವವರೆಲ್ಲರೂ ತಾವು ಹೊತ್ತಿರುವ ಜವಾಬ್ದಾರಿಯನ್ನು ನಿರ್ವಹಿಸುವುದಕ್ಕಾಗಿ ತಕ್ಕಷ್ಟು ಚಿನ್ನವನ್ನು ಕೂಡಿಡುವ ಪ್ರಯತ್ನ ಮಾಡುವರು.* ಪ್ರಚಾರಕ್ಕೆ ತಂದಿರುವ ಸಾಧಾರಣ ಹಣಕ್ಕೆ ಬದಲಾಗಿ ಕೇಳಿದವರಿಗೆ ಕೇಳಿದಷ್ಟು ಚಿನ್ನ ಕೊಡಬೇಕಾದರೂ ಚಿನ್ನ ಬೇಕು; ಇತರ ದೇಶಗಳವರೊಡನೆ ನಡೆಯುವ ವ್ಯಾಪಾರದಲ್ಲಿ ಒಳಕ್ಕೆ ತರಿಸಿಕೊಂಡ ಹೆಚ್ಚು ಪದಾರ್ಥಗಳಿಗೆ ಬೆಲೆಯನ್ನು ತೆರಬೇಕಾದರೂ ಚಿನ್ನ ಬೇಕು; ಯುದ್ಧ ಮುಂತಾದ ಆಪತ್ಸಮಯಗಳಲ್ಲಿ ಸಾಮಗ್ರಿ ಒದಗಿಸಿಕೊಳ್ಳಲು ಎಲ್ಲರೂ ಒಪ್ಪುವ ಚಿನ್ನವನ್ನು ಸಂಗ್ರಹಿಸಿಟ್ಟಿರಬೇಕು. ಜನರನ್ನು ಒಪ್ಪಿಸಿ ಕಾಗದನಾಣ್ಯಗಳನ್ನೇ ಒಳದೇಶದಲ್ಲಿ ಬಳಸುವಂತೆ ಮಾಡಿದರೂ ಹೊರಗಿನವರಿಗೆ ಹಣ ತೆರಬೇಕಾದಾಗ ಇವರ ದೇಶದ ಕಾಗದ ಹಣವನ್ನು ಅವರೇಕೆ ತೆಗೆದುಕೊಂಡಾರು? ಎಲ್ಲರಿಗೂ ಮೆಚ್ಚಾದ ಚಿನ್ನದ ರೂಪದಲ್ಲಿಯೇ ಸಾಲ ತೀರಿಸಿರೆನ್ನುವರು ಅವರು.

ಪ್ರಧಾನ ನಾಣ್ಯ ಸಾಧಾರಣವಾಗಿ ಎಲ್ಲೆಲ್ಲಿಯೂ ಚಿನ್ನ ಅಥವಾ ಬೆಳ್ಳಿಯ ಲೆಕ್ಕದಲ್ಲಿರುತ್ತದೆ. ಅದು ಹೆಚ್ಚಾಗಿ ಬಳಕೆಯಲ್ಲಿರಲಿ ಇಲ್ಲದಿರಲಿ ದೇಶದ ಇತರ ನಾಣ್ಯಗಳಿಗೆ ಬದಲಾಗಿ ಅದನ್ನು ಸರಕಾರದವರು ಕೊಡುತ್ತಾರೆಂಬ ನಂಬಿಕೆ ಇರುವಂತೆ ಏರ್ಪಾಡಿರುತ್ತದೆ. ಇತರ ನಾಣ್ಯಗಳಿಗೆಲ್ಲ ಅದರ ಎಣಿಕೆಯಲ್ಲಿಯೇ—ಅಳತೆಯಿಂದಲೇ—ಬೆಲೆ. ಕೆಲವು ಅದರ ಅಂಶಗಳು (Fractions); ಕೆಲವು ಗುಣಿತಗಳು (Multiples) ಉದಾ.—ನಮ್ಮ ದೇಶದಲ್ಲಿ ಬಳಬಳಕೆಯ ಪ್ರಧಾನ ನಾಣ್ಯ ರೂಪಾಯಿ; ಅಂಶ ನಾಣ್ಯಗಳು—ಅರ್ಧರೂಪಾಯಿ, ಪಾವಲಿ, ದೊಡ್ಡಾಣೆ, ಒಂದಾಣೆ,

* ಸ್ವರ್ಣ ಪದ್ಧತಿಯನ್ನು ಪ್ರತಿಯೊಂದು ದೇಶದವರೂ ಧಾರಾಳವಾಗಿ ಸಾಧಾರಣ ಹಣಕ್ಕೆ ಬೇಕಾದಷ್ಟು ಚಿನ್ನ ಕಳುಹಿಸುತ್ತ ತೆಗೆದುಕೊಳ್ಳುತ್ತ ಇದ್ದರೆ ಯಾವ ತೊಂದರೆಯೂ ಇಲ್ಲ. ಹೀಗೆ ಮಾಡುತ್ತಿರುತ್ತಿದ್ದೊಂದೇ ಅಂತರ್ ರಾಷ್ಟ್ರೀಯ ವ್ಯವಹಾರದಲ್ಲಿ ಸ್ವರ್ಣ ಪ್ರಕೃತಿಯನ್ನು ಕಾಪಾಡಿಕೊಳ್ಳುವ ಉಪಾಯ. ಆದರೆ ಕೆಲವರು ಎಷ್ಟು ಚಿನ್ನವನ್ನು ಶೇಖರಿಸಿದರೆ ಅಷ್ಟು ಕ್ಷೇಮವೆಂದು ತಮಗೆ ಬರಬೇಕಾದುದನ್ನೆಲ್ಲ ಚಿನ್ನದಲ್ಲಿಯೇ ಬರಮಾಡಿಕೊಂಡು ತಮ್ಮ ದೇಶದಿಂದ ಹೊರಕ್ಕೆ ಚಿನ್ನ ಹೋಗದಂತೆ ಮಾಡಿಕೊಳ್ಳುವರು. ಇದರಿಂದ ಒಂದು ದಿನದಲ್ಲಿದ್ದಂತೆ ಇನ್ನೊಂದು ದಿನ ಅವರಿಗೂ ಅಂತರ್ ರಾಷ್ಟ್ರೀಯ ವ್ಯಾಪಾರದಲ್ಲಿ ಕಷ್ಟನಷ್ಟಗಳು ಸಂಭವಿಸುವುವು. ಪ್ರತಿಯೊಬ್ಬರೂ ಚಿನ್ನವನ್ನೇ ಸಂಗ್ರಹಿಸಲು ಸ್ಪರ್ಧೆ ಮಾಡಿದರೆ ರಫ್ತು ವ್ಯಾಪಾರಗಳೂ ಧಾರಣೆವಾಸಿಗಳೂ ಅವ್ಯವಸ್ಥವಾಗಿ ಖಂಡಿತವಾಗಿ ಕೇಡು ಸಂಭವಿಸುತ್ತದೆ: ಮುಂದಿನ ಪ್ರಕರಣವೊಂದರಲ್ಲಿ ಇದರ ಸತ್ಯವನ್ನು ತಿಳಿಸುವ ಪ್ರಯತ್ನಮಾಡಿದೆ

ಕಾಲಾಣೆ, ಕಾಸು. ಗುಣಿತಗಳೆಂದರೆ ೫ ರೂ., ೧೦ ರೂ., ೫೦ ರೂ., ಹೀಗೆ. ಗುಣಿತ ನಾಣ್ಯಗಳು ಸಾಮಾನ್ಯವಾಗಿ ಎಲ್ಲೆಲ್ಲಿಯೂ ಕಾಗದದ ನೋಟುಗಳು.

**ನಾಣ್ಯದ ಮಿತಗೌರವ ಅಮಿತಗೌರವ.**—ಪ್ರಧಾನ ನಾಣ್ಯವನ್ನು ಯಾರು ಎಷ್ಟು ಕೊಟ್ಟರೂ ತೆಗೆದುಕೊಂಡು ಸಾಲ ತೀರಿಸಿಕೊಳ್ಳಬೇಕೆಂಬ ಶಾಸನವಿರುವುದು. ಅದರ ಗೌರವಕ್ಕೂ ಬಳಕೆಗೂ ಮಿತಿಯಿಲ್ಲ (Unlimited Legal Tender). ಸಣ್ಣ ನಾಣ್ಯದ ಗೌರವಕ್ಕೆ ಮಿತಿ ಉಂಟು. ಯಾರೇ ಆಗಲಿ ಬಹು ಮೊತ್ತದಲ್ಲಿ ಚಿಲ್ಲರೆ ನಾಣ್ಯವನ್ನೇ ತೆಗೆದುಕೊಂಡುಹೋಗಿ ಸಾಹುಕಾರರಿಗೆ ಸಾಲ ತೀರಿಸಲು ಕೊಟ್ಟರೆ ಅವರು ತೆಗೆದುಕೊಳ್ಳುವುದಿಲ್ಲವೆಂದು ಮೊಂಡಾಟಮಾಡಬಹುದು; ಇಷ್ಟು ಮಿತಿಗೆ ಮೀರಿ ಸಣ್ಣ ನಾಣ್ಯವನ್ನು ಸ್ವೀಕರಿಸಬೇಕಾದ್ದಿಲ್ಲ ಎಂದು ಕಟ್ಟಲೆ ಇರುತ್ತದೆ. ಪ್ರಧಾನ ನಾಣ್ಯ ಅಳತೆಯ ನಾಣ್ಯ. ಅಂಶ ನಾಣ್ಯಗಳು ಚಿಲ್ಲರೆ ವ್ಯಾಪಾರಕ್ಕೆ ಸಹಾಯ; ಗುಣಿತ ನಾಣ್ಯಗಳು ದೊಡ್ಡ ತೆರಾಣೆ ಕಾರ್ಯಗಳಿಗೆ ಸಹಾಯ. ಇಂಡಿಯಾ ದೇಶದಲ್ಲಿ ರೂಪಾಯಿ ಪ್ರಧಾನ ನಾಣ್ಯವಾದರೆ ಇಂಗ್ಲೆಂಡಿನಲ್ಲಿ ಪೌಂಡು ಪ್ರಧಾನ ನಾಣ್ಯ; ಅಂಶ ನಾಣ್ಯಗಳು ಶಿಲಿಂಗಾ, ಪೆನ್ನಿ, ಫಾರ್ದಿಂಗುಗಳು. ಅಮೇರಿಕಾ ದೇಶದಲ್ಲಿ ಡಾಲರ್ ಪ್ರಧಾನ ನಾಣ್ಯ; ಸೆಂಟುಗಳು ಅಂಶ. ಜರ್ಮನಿಯಲ್ಲಿ ಮಾರ್ಕ್ ಎಂಬುದೂ, ಜಪಾನಿನಲ್ಲಿ ಯೆನ್ ಎಂಬುದೂ, ರಷ್ಯಾದಲ್ಲಿ ರೂಬಲ್ ಎಂಬುದೂ ಮುಖ್ಯ ನಾಣ್ಯಗಳು.

ಈ ಪ್ರಧಾನ ನಾಣ್ಯಗಳು ಕೂಡ ಲೋಹ ನಾಣ್ಯಗಳಾಗಿರಬಹುದು, ಅಥವಾ ಕಾಗದದ ನೋಟಿನ ರೂಪದಲ್ಲಿರಬಹುದು; ಎರಡು ಬಗೆಯೂ ಇರಬಹುದು. ದೇಶದ ನಾಣ್ಯದಲ್ಲಿ ಎಂದಿನವರೆಗೂ ಜನರಿಗೆ ನಂಬಿಕೆ ಇರುವುದೋ ಆವರೆಗೂ ಅವರವರ ಅನುಕೂಲದಂತೆ ಅವನ್ನು ಒಂದೇ ಪ್ರೀತಿಯಿಂದ ತೆಗೆದುಕೊಳ್ಳುವರು. ಆದರೆ ಒಂದೇ ಬೆಲೆಯ ಅಮಿತ ಗೌರವವುಳ್ಳ ಎರಡು ಬಗೆಯ ನಾಣ್ಯಗಳು—(೧) ಚಿನ್ನ–ಬೆಳ್ಳಿ ಅಥವಾ (೨) ಲೋಹ–ಕಾಗದ—ಬಳಕೆಯಲ್ಲಿದ್ದರೆ ಸಾಮಾನ್ಯವಾಗಿ ಬೆಳ್ಳಿಯ ನಾಣ್ಯ ಚಲಾವಣೆಯಲ್ಲಿ ಉಳಿದುಕೊಂಡು ಚಿನ್ನದ ನಾಣ್ಯ ಮಾಯವಾಗುವುದು.

ಅಥವಾ ಲೋಹದ ನಾಣ್ಯ ಜನರ ಬಳಿಯಲ್ಲಿಯೇ ನಿಂತು ನೋಟು ಸಂಚಾರಮಾಡುತ್ತಿರುವುದು. ಒಂದೇ ಬಗೆಯ ಹಣದ ಕೆಲಸವನ್ನು ಕೀಳು ನಾಣ್ಯವೂ* ಮಾಡುವುದು, ಉತ್ತಮ ನಾಣ್ಯವೂ ಮಾಡುವುದು. ಕಾಗದಕ್ಕೆ ನಾಣ್ಯಕ್ಕಿರುವಷ್ಟು ಲೋಹದ ಬೆಲೆ ಇಲ್ಲ. ಆದುದರಿಂದ ಹಣ ಕೂಡಿಡುವವರೂ ಲೋಹವನ್ನು ಕರಗಿಸುವವರೂ ಹೊರದೇಶಕ್ಕೆ ಹಣವನ್ನು ಕಳುಹಿಸುವವರೂ ಉತ್ತಮ ನಾಣ್ಯವನ್ನೇ ಉಪಯೋಗಿಸಿಕೊಳ್ಳುವರು.†

ಹಣವನ್ನು ಸರಕಾರದವರೇ ಸ್ವಂತವಾಗಿ ತಯಾರಿಸಬಹುದು. ಇಲ್ಲವಾದರೆ ಅವರು ನಿಯಮಿಸಿದ ಬೇರೊಬ್ಬರು ಅಚ್ಚುಮಾಡಬಹುದು. ಲೋಹ ನಾಣ್ಯಗಳನ್ನು ಸಾಮಾನ್ಯವಾಗಿ ಸರಕಾರದ ಹಣ ಶಾಖೆಗಳವರೇ ಕೋಶಾಧಿಕಾರಿಗಳ ಮೇಲ್ವಿಚಾರಣೆಯಲ್ಲಿ ಮಾಡುವರು. ಕಾಗದದ ನೋಟುಗಳನ್ನು ಈವರೆಗೂ ನಮ್ಮ ದೇಶದಲ್ಲಿದ್ದಂತೆ ಅವರೇ ತಯಾರಿಸಬಹುದು; ಅಥವಾ, ಇಂಗ್ಲಂಡಿನಲ್ಲಿನಂತೆ ಬ್ಯಾಂಕ್ ಆಫ್ ಇಂಗ್ಲಂಡ್ ಎಂಬ ಮುಖ್ಯ ಬ್ಯಾಂಕಿಗೆ ಕೊಟ್ಟಿರುವಂತೆ ಅಧಿಕಾರಕೊಟ್ಟು ಅವರಿಂದ ಪ್ರಚಾರಮಾಡಿಸಬಹುದು.

**ಮುಖ್ಯ ನಾಣ್ಯಗಳ ಯೋಗ್ಯತೆ.**—ಪ್ರಧಾನ ಲೋಹ ನಾಣ್ಯವು ಇಂಗ್ಲಂಡಿನ ಸವರನ್ನಿನಂತೆ ಇರಬಹುದು, ಅಥವಾ ಇಲ್ಲಿನ ರೂಪಾಯಂತೆ ಇರಬಹುದು. ಸವರನ್ನು ಚಿನ್ನದ ನಾಣ್ಯ; ರೂಪಾಯಿ ಬೆಳ್ಳಿಯದು. ಸವರನ್ನಿನಲ್ಲಿರುವ ಚಿನ್ನದ ಬೆಲೆಯೂ ಪೌಂಡಿನ ಬೆಲೆಯೂ ಸುಮಾರು ಸಮವಾಗಿರುವಂತೆ ನೋಡಿಕೊಳ್ಳುತ್ತಿದ್ದರು. ರೂಪಾಯಲ್ಲಿರುವ ಬೆಳ್ಳಿಗೆ ಹದಿನಾರು ಅಣೆ ಬೆಲೆ ಇಲ್ಲ. ಸವರನ್ನು ಆ ದೇಶದ ಪ್ರಧಾನ ಲೋಹ ನಾಣ್ಯವಾದರೂ ಅದನ್ನು ದಿನಚರಿಯ ವ್ಯವಹಾರದಲ್ಲಿ ಧಾರಾಳವಾಗಿ ಬಳಸಬಹುದಾದರೂ ಬಳಸುವುದು ಅಪರೂಪ. ಹೊರಗಿನವರಿಗೆ ಸವರನ್ನುಗಳನ್ನು ಕೊಟ್ಟು ಸಾಲ ತೀರಿಸುವೆವೆಂದರೆ ಅವರು ಆ ನಾಣ್ಯವನ್ನು ಸ್ವೀಕರಿಸುವರು. ಎಂದರೆ ಅದಕ್ಕೆ ಒಳದೇಶದಲ್ಲಿಯೂ ಹೊರಗೂ

* ಕೀಳು ನಾಣ್ಯವೆಂದರೆ ೧ ರಲ್ಲಿ ಬೆಳ್ಳಿ ೨ ರಲ್ಲಿ ನೋಟು.

† ದೇಶದಲ್ಲಿ ಚಲಾವಣೆಯಲ್ಲಿರುವ ಒಟ್ಟು ಹಣವೆಲ್ಲಾ ಸೇರಿ ಒಳವ್ಯಾಪಾರಕ್ಕೆ ಸಾಕಾಗುವಷ್ಟು ಮಾತ್ರ ಇದ್ದರೆ ಮಾತ್ರ ಹೀಗಾಗುವುದಿಲ್ಲ. ಎರಡು ಬಗೆಯ ಹಣವೂ ಸಂಚಾರದಲ್ಲಿಯೇ ಇರುವುದು.

ಬೆಲೆ ಇರುತ್ತದೆ. ರೂಪಾಯಿ ಇಂಡಿಯಾ ದೇಶದ ಒಳಸಂಚಾರಕ್ಕೆ ಮಾತ್ರ ಉಪಯೋಗವಾದುದು. ಅದಕ್ಕೆ ಹೊರಗೆ ಯಾವ ಬೆಲೆಯೂ ಇಲ್ಲ. ಅದಕ್ಕೆ ೧೬ ಆಣೆ ಬೆಲೆಯೆಂದು ಗೊತ್ತುಮಾಡಿ ಸರಕಾರದವರು ಅದರ ಬೆಲೆಯನ್ನು ಪ್ರಯತ್ನದಿಂದ ಕೃತಕವಾಗಿ ಹಿಡಿದು ನಿಲ್ಲಿಸಿರುತ್ತಾರೆ. ಒಂದು ಪೌಂಡಿಗೆ ಇಷ್ಟು ರೂಪಾಯಿ ಸಮ ಎಂದು ವಿನಿಮಯವನ್ನು (ಮಾರುಪೆ) ಗೊತ್ತುಮಾಡುತ್ತಾರೆ. ಸರಕಾರದವರು ರೂಪಾಯಿಗೆ ಬದಲು ಗೊತ್ತಾದ ಪ್ರಮಾಣದಲ್ಲಿ ಚಿನ್ನದ ಗಟ್ಟಿಯನ್ನೊ ನಾಣ್ಯವನ್ನೊ ಹೊರವ್ಯಾಪಾರಕ್ಕಾಗಿ ಕೊಡಲು ಸಿದ್ಧತೆ ನಡಿಸಿರುವುದರಿಂದ ರೂಪಾಯಿಯ ಬೆಲೆ ನಿಂತಿದೆ. ಮುಖ್ಯವಾಗಿ ಇಲ್ಲಿ ಹೇಳಬೇಕೆಂದಿರುವುದು ಇಷ್ಟೇ: ಪ್ರಧಾನ ಲೋಹ ನಾಣ್ಯಕ್ಕೆ ಸತ್ವತಃ (ಎಂದರೆ ಅದರಲ್ಲಿರುವ ಲೋಹದ ಬೆಲೆಯ ಲೆಕ್ಕದಲ್ಲಿ) ಅದು ಹೇಳಿಕೊಳ್ಳುವಷ್ಟು ಬೆಲೆ (Face Value) ಇರಬಹುದು;—ಇರದಿದ್ದರೆ ಸರಿ. ಅಥವಾ ಸರಕಾರದವರು ಯಾವುದೋ ಒಂದು ಬಗೆಯ ಕಡಮೆ ಬೆಲೆಯ ಲೋಹ ನಾಣ್ಯವನ್ನು (ಉದಾ.—ರೂಪಾಯಿ) ನಿರ್ಮಿಸಿ ಅದಕ್ಕೆ ಹೆಚ್ಚು ಬೆಲೆಯನ್ನು ಕಟ್ಟಿ ಬಳಕೆಗೆ ತರಬಹುದು. ಅಂತೂ ನೋಟುಗಳಿಗೆ ಬದಲಾಗಿಯೇ ಆಗಲಿ, ಚೆಕ್ಕುಗಳಿಗೆ ಬದಲಾಗಿಯೇ ಆಗಲಿ, ಯಾರಿಗೇ ಆಗಲಿ, ಯಾವಾಗ ಬೇಕೆಂದರೆ ಆಗ, ದೇಶದ ಪ್ರಧಾನ ಲೋಹ ನಾಣ್ಯ ದೊರಕುವಂತಿದ್ದರೆ ಮಾತ್ರ ದೇಶದ ಹಣದಲ್ಲಿ ಬಳಸುವವರಿಗೆ ನಂಬಿಕೆ ಇರುತ್ತದೆ. ಆ ನಂಬಿಕೆಯನ್ನು ಕಾಪಾಡುವುದು ಸರಕಾರದವರ ಕರ್ತವ್ಯವೂ ಜವಾಬ್ದಾರಿಯೂ ಆಗುವುದು.

**ನೋಟುಗಳು.**—ಕೇವಲ ಲೋಹ ನಾಣ್ಯವನ್ನೇ ಏತಕ್ಕೆ ಬಳಕೆಯಲ್ಲಿಟ್ಟುಕೊಳ್ಳಬಾರದು? ನೋಟಿನ ಚಲಾವಣೆ ಏತಕ್ಕೆ? ಎಂದು ಕೇಳಬಹುದು. ಚಿನ್ನ ಬೆಳ್ಳಿಯಿಂದಲೇ ದೇಶದ ವ್ಯಾಪಾರಕ್ಕೆ ಬೇಕಾಗುವ ನಾಣ್ಯವನ್ನೆಲ್ಲಾ ಪ್ರತಿಯೊಂದು ದೇಶದವರೂ ಮಾಡಿಕೊಳ್ಳಬೇಕೆಂದರೆ ಅಷ್ಟು ಲೋಹವನ್ನೆಲ್ಲಿಂದ ತರಬೇಕು? ಪ್ರಯೋಜನ ತಾನೇ ಏನು? ಚಲಾವಣೆಯಲ್ಲಿನ ಚಿನ್ನ ಬೆಳ್ಳಿ ವೃಥಾ ಸವೆಯುವುವು; ನಷ್ಟವಾಗುವುವು; ಅಲ್ಲದೆ ಹೆಚ್ಚು ಹಣವನ್ನು ತೆಗೆದುಕೊಳ್ಳಬೇಕಾಗಿರುವಾಗ ಕೇವಲ ಲೋಹದ

ನಾಣ್ಯಗಳನ್ನು ಹೊತ್ತುಕೊಂಡು ಹೋಗುವುದೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸುವುದೂ ಕಷ್ಟ; ವೆಚ್ಚ ಹೆಚ್ಚು; ಕಳ್ಳಕಾಕರ ಭಯ ಉಂಟು. ಅದೂ ಅಲ್ಲದೆ ನಾಣ್ಯದ ಕೆಲಸವೇನು? ತನ್ನ ಗೊತ್ತಾದ ಬೆಲೆಗೆ ತಕ್ಕಂತೆ ಪದಾರ್ಥಗಳನ್ನು ಕ್ರಯಕ್ಕೆ ಕೊಡಿಸುವುದು, ಜನಗಳಿಂದ ಕೆಲಸ ಮಾಡಿಸುವುದು. ಒಂದು ಚೂರು ಕಾಗದದಿಂದ ಈ ಕೆಲಸ ಸಮರ್ಪಕವಾಗಿ ಆಗುವುದಾದರೆ ಏಕೆ ಮಾಡಿಸಬಾರದು? ಆ ಕಾಗದದಲ್ಲಿ ಸಂಚಿಕೆ ಉಂಟುಮಾಡಿ, ಅದು ಕೇವಲ ಕಾಗದದ ಚೂರಲ್ಲ, ಇಷ್ಟು ರೂಪಾಯಿಗೆ ಸಮ ಅಥವಾ ಇಷ್ಟು ಪೌಂಡು ಬೆಲೆಯುಳ್ಳದು ಎಂದು ಸರಕಾರದವರು ಒಪ್ಪಿ ತಮ್ಮ ಕಂದಾಯ ತೆರಿಗೆ ತೆರವಣೆಗಳನ್ನೆಲ್ಲಾ ಆ ಕಾಗದದ ಚೂರುಗಳ ರೂಪದಲ್ಲಿಯೇ ತೆಗೆದುಕೊಂಡು ತಮ್ಮ ಸಾಲ ಬಂದಿತೆಂದರೆ ಆಯಿತು. ವರ್ತಕರೂ ಇತರರೂ ತಮ್ಮಲ್ಲಿರುವ ಪದಾರ್ಥವನ್ನು ನಮಗೆ ಕೊಟ್ಟರಾಯಿತು. ನೋಟಿಗೆ ವಸ್ತುತಃ ಬೆಲೆಯಿಲ್ಲದಿರಬಹುದಾದರೂ ಈ ಬಗೆಯ ಸಂಚಿಕೆಯಿಂದ ಬಳಕೆಯಿಂದ ಅದಕ್ಕೆ ಗೌರವ, ಬೆಲೆ ಬರುವುವು. ಆದುದರಿಂದಲೇ ಎಲ್ಲ ದೇಶಗಳಲ್ಲಿಯೂ ಇವು ಬಳಕೆಗೆ ಬಂದಿರುವುದು.

ನೋಟುಗಳೆಂದರೆ ಒಂದು ಬಗೆಯ ಕಾಗದದ ಹಾಳೆಗಳು. ನಾಣ್ಯಗಳ ಮೇಲೆ ರೇಖೆಗಳಿರುವಂತೆಯೇ ಇವುಗಳ ಮೇಲೂ ಅನೇಕ ಬಗೆಯ ಅಂಕಿ, ಚಿತ್ರ, ಬರಹ ಇರುವುವು. ನೋಟು ಎಷ್ಟರದು! ಅದರ ನಂಬರೇನು? ಯಾವ ತಾರೀಖಿನಲ್ಲಿ ಅಚ್ಚಾಗಿ ಪ್ರಚಾರವಾಯಿತು? ಮುಂತಾದ ಸಂಗತಿಗಳನ್ನು ಆ ನೋಟಿನ ಮೇಲೆ ಕಾಣಬಹುದು. ನೋಟನ್ನು ಪ್ರಚಾರಕ್ಕೆ ತಂದಿರುವ ಅಧಿಕಾರಿಗಳು ಅದರ ಮೇಲೆ ಸೂಚಿಸಿರುವಷ್ಟು ನಾಣ್ಯವನ್ನೂ ಬೆಲೆಯನ್ನೂ ಸರಕಾರದ ಖಜಾನೆಗಳಲ್ಲಿ ಎಲ್ಲಿ ಕೇಳಿದರಲ್ಲಿ, ಅದನ್ನುಳ್ಳವರಿಗೆ ದೊರಕಿಸುವ ಹೊಣೆ ಹೊತ್ತುಕೊಂಡಿರುವ ಬರಹವಿರುವುದು. ನೋಟಿನಲ್ಲಿ ದೊಡ್ಡ ಅಧಿಕಾರಿಯೊಬ್ಬನ ರುಜುವಿರುವುದು. ಇದು ಒಂದು ಬಗೆಯ ಸಾಲಪತ್ರವೇ ಆದರೂ ಎಲ್ಲಿಯವರೆಗೆ ಅಧಿಕಾರಿಗಳು ಅದರ ಆ ಬೆಲೆಯನ್ನು ಕಾಪಾಡುತ್ತಾರೋ ಅಲ್ಲಿಯವರೆಗೂ ಅದು ಯೋಗ್ಯವಾದ ಹಣವೇ ಆಗುವುದು. ಜನರ ನಂಬಿಕೆಯೇ ಹಣಕ್ಕೆ ಜೀವನಾಧಾರವೆಂದು ಹೇಳಿತು. ಅವರ ವಿಶ್ವಾಸಕ್ಕೆ ಬಾರದಿದ್ದರೆ ಸಾಮ್ರಾಜ್ಯಸೂತ್ರಗಳಿಗೂ

ಬೆಲೆಯಿಲ್ಲ. ನೋಟುಗಳ ಸಂಬಂಧದಲ್ಲಿ ಈ ತತ್ತ್ವ ಹೆಚ್ಚು ಸಿದ್ಧವಾಗುತ್ತದೆ. ಏಕೆಂದರೆ ಚಿನ್ನ ಬೆಳ್ಳಿ ನಾಣ್ಯವನ್ನು ಕರಗಿಸಿದರೆ ಸ್ವಲ್ಪವಾದರೂ ಲೋಹದ ಬೆಲೆಯಷ್ಟು ಹಣವು ದೊರಕುತ್ತದೆ. ನೋಟಿನ ಕಾಗದಕ್ಕೆ ವಿಶ್ವಾಸದ ಬೆಲೆಯಿಲ್ಲದಿದ್ದರೆ ಇನ್ನು ಯಾವುದಿದೆ?

ಈಗ ಜನರಿಗೆ ನಾಗರಿಕ ಜನಾಂಗಗಳಲ್ಲೆಲ್ಲಾ ನಾಣ್ಯದಲ್ಲೆಷ್ಟು ವಿಶ್ವಾಸವಿದೆಯೋ ಅಷ್ಟು ಈ ನೋಟುಗಳಲ್ಲಿಯೂ ಇದೆ. ಅವರು ಎಷ್ಟು ರೂಪಾಯಿ ಅಥವಾ ಪೌಂಡುಗಳ ಮೊತ್ತವಾದರೂ ಮಿತಿಯಿಲ್ಲದೆ ಅವನ್ನೇ ತೆಗೆದುಕೊಳ್ಳಲು ಸಿದ್ಧರಾಗಿರುವರು, ಬಹುವೇಳೆ ಅವನ್ನೇ ಬೇಕೆಂದು ಬಯಸುವರು. ನಾಣ್ಯದಲ್ಲಿಲ್ಲದ ಅನುಕೂಲ ನೋಟಿನಲ್ಲಿರುವುದೇ ಇದರ ಸರ್ವತ್ರ ಮಾನ್ಯತೆಗೆ ಕಾರಣ. ಸುಲಭವಾಗಿ ಎಲ್ಲಿಗಾದರೂ ತೊಂದರೆ ಇಲ್ಲದೆ ಜೇಬಿನಲ್ಲಿಟ್ಟು ತೆಗೆದುಕೊಂಡುಹೋಗಬಹುದು; ಭಾರವಿಲ್ಲ. ಜೇಬಿನಲ್ಲಿ ಹಣವಿದೆಯೆಂಬ ಸೂಚನೆಯೇ ಹೊರಗಿನವರಿಗೆ ತೋರದು. ಪ್ರತಿಯೊಂದು ನೋಟಿನ ಬೆಲೆಯೂ ದೇಶದ ಪ್ರಧಾನ ನಾಣ್ಯದ ೫, ೧೦, ೧೦೦, ೧,೦೦೦ ದಷ್ಟು ಇರುತ್ತದೆಯೇ ಹೊರತು ಅದಕ್ಕಿಂತ ಕಡಮೆಯಾಗುವುದಿಲ್ಲ. ಆದುದರಿಂದ ಒಂದು ನೋಟಿನ ಮೂಲಕ ನೂರಾರು ನಾಣ್ಯಗಳನ್ನು ಹೊತ್ತುಕೊಂಡು ಹೋಗಬೇಕಾದ ತೊಂದರೆ ತಪ್ಪಿ ಕೆಲಸವೂ ವ್ಯಾಪಾರವೂ ಸುಲಭವಾಗುವುವು. ಅಲ್ಲದೆ ಪ್ರತಿಯೊಂದು ನೋಟಿಗೂ ನಂಬರಿರುವುದರಿಂದ, ಅದು ಕಳವಾದರೆ ಕಳೆದುಹೋದರೆ ಕೆಲವು ವೇಳೆ ಪತ್ತೆಮಾಡಬಹುದು. ಅತಿ ಹಳೆಯದಾಗಿ ಜೀರ್ಣವಾಗುತ್ತಿರುವ ಅಥವಾ ಕೆಟ್ಟುಹೋದ ನೋಟನ್ನು ಅಧಿಕಾರಿಗಳಿಗೆ ಕಳುಹಿಸಿದರೆ ಅವರು ಪ್ರತಿಯಾಗಿ ಹೊಸದನ್ನು ಕಳುಹಿಸುವರು. ನೋಟುಗಳ ಬಳಕೆಯಿಂದ ಲೋಹದ ವೆಚ್ಚವೂ ನಷ್ಟವೂ ಕಡಮೆಯಾಗಿ ಲೋಹವನ್ನು ಬೇರೆ ಪ್ರಯೋಜನಗಳಿಗೆ ಬಳಸಿಕೊಳ್ಳಲು ಅನುವಾಗುವುದು. ಮುಖ್ಯವಾಗಿ ಜನರಿಗೆ ಹಣ ರೂಪದಲ್ಲಿ ಬೇಕಾದುದು ಹಣದ ಕೆಲಸವನ್ನು ಮಾಡುವ ಒಂದು ವಸ್ತು. ಅದು ಕಾಗದವಾಗಲಿ ಬಳಪದ ತುಂಡಾಗಲಿ ಚರ್ಮದ ಚೂರಾಗಲಿ ಲೋಹದ ತುಕಡಿಯಾಗಲಿ ಯಾವುದಾದರೆ ತಾನೆ ಏನು? ಜನರಿಗೆ ಬೇಕಾದ್ದು ವಸ್ತುಸಾಮಗ್ರಿ, ಸೇವೆಸೌಕರ್ಯ. ಹಣವನ್ನು

ಕೊಟ್ಟಾಗ ಆ ಸಾಮಾನು ಸೌಕರ್ಯ ದೊರೆತರೆ ಆಯಿತು. ಯಾವ ಹಣಕ್ಕೇ ಆಗಲಿ ಪ್ರತಿಯಾಗಿ ಸಾಮಾನು ದೊರೆಯುವುದಿಲ್ಲವೆಂಬ ಭಾವನೆ ಬಂದಕೂಡಲೆ, ಹಣವನ್ನು ಅತ್ಯುತ್ತಮ ಪದಾರ್ಥದಿಂದ ಮಾಡಿದ್ದರೂ ಜನರು ಅದನ್ನು ಮುಟ್ಟರು. ಸರಕಾರದಲ್ಲಿ ಜನರಿಗೆ ನಂಬಿಕೆ ಇರುವತನಕ ಅವರು ಮುದ್ರಿಸುವ ಹಣಕ್ಕೆ ಬೆಲೆಯುಂಟು. ದೇಶದಲ್ಲಿ ಶಾಂತಿ ಸುರಕ್ಷಣೆ, ಸುವ್ಯವಸ್ಥೆ ಕಡಮೆಯಾಗಿ ರಾಜಕೀಯ ವಿಪ್ಲವದಿಂದಾಗಲಿ ಬೇರೆ ಯಾವ ಕಾರಣದಿಂದಾಗಲಿ ಸರಕಾರದ ಸ್ಥೈರ್ಯಕ್ಕೆ ಕುಂದು ಬರುವಂತಾದರೆ—ಸರಕಾರದವರು ಅಚ್ಚಿನ ಕಾರ್ಖಾನೆ ಕೈಯಲ್ಲಿದೆಯೆಂದು ಅತಿಯಾಗಿ ಹಣವನ್ನು ತಯಾರಿಸಿ ಅದರ ಬೆಲೆಗೆ ಕುಂದು ತರುವಂತಾದರೆ—ಮಾತ್ರ ಕೇಡು. ಆ ಹೊರತು ನಂಬಿಕೆ ಕೆಡುವುದಿಲ್ಲ.

**ನೋಟಿನ ಬೆಂಬಲವಾಗಿ ಲೋಹನಿಧಿ.**—ಈ ವಿಶ್ವಾಸ ಉಳಿಯುವಂತೆ ನೋಟಿಗೆ ಬೆಂಬಲವಾಗಿ ಒಂದು ಬಗೆಯ ಲೋಹಕೋಶವನ್ನು ಇಟ್ಟೇ ಇರುತ್ತಾರೆ. ಅಲ್ಲಿ ಸಾಧಾರಣವಾಗಿ ದೇಶದ ಪ್ರಧಾನ ನಾಣ್ಯವಿಟ್ಟಿರುವುದು, ಲೋಹದ ಗಟ್ಟಿ ಇಟ್ಟಿರುವುದು. ಯಾವಾಗ ಮಾಡಿದರೂ ತಕ್ಷಣ ಅಷ್ಟು ಲೋಹವನ್ನೂ ನಾಣ್ಯವನ್ನೂ ಬೆಲೆಯನ್ನೂ ಕೊಂಡು ತರುವ ಲೇವಾದೇವಿ ಪತ್ರಗಳೂ ಇರುವುವು. ಸಾಮಾನ್ಯವಾಗಿ ಯಾವ ಸಮಯದಲ್ಲಿಯೇ ಆಗಲಿ ಬಹಳ ಜನ ಬಂದು ಕೇಳಿದರೆ ನಾಣ್ಯವಿಲ್ಲವೆಂದು ಹೇಳದೆ ಕೋಶದಲ್ಲಿರುವುದನ್ನು ಕೊಟ್ಟು, ಹೊಸದಾಗಿ ಅಚ್ಚು ಮಾಡಿಕೊಡಲು ಬೇಕಾಗುವಷ್ಟು ಅಂದಾಜಿಗೆ ತಕ್ಕಂತೆ ಹಣವನ್ನು ಒದಗಿಸಲು ನಾಣ್ಯ ಮತ್ತು ಲೋಹಕೋಶವನ್ನು ಸ್ಥಾಪಿಸುವರು. ಲೇವಾದೇವಿ ಪತ್ರಗಳು ಬಿಟ್ಟಿ ದುಡಿಯುವುವು.

ಲೋಹಕೋಶದಲ್ಲಿ ಲೋಹವೆಷ್ಟಿರಬೇಕು? ಎಂಬುದಕ್ಕೆ ಬೇರೆಬೇರೆ ದೇಶಗಳಲ್ಲಿ ಬೇರೆಬೇರೆ ನಿಯಮಗಳೂ ಸಂಪ್ರದಾಯಗಳೂ ಇವೆ. ಅವುಗಳಲ್ಲಿ ಮುಖ್ಯವಾದ ಇಂಗ್ಲಿಷ್ ಪದ್ಧತಿಯನ್ನೂ ಅಮೇರಿಕನ್ ಪದ್ಧತಿಯನ್ನೂ ೯ನೆಯ ಪ್ರಕರಣದಲ್ಲಿ ವಿವರಿಸಿದೆ.

ವಿಪರೀತ ಪ್ರಸಂಗ ಒದಗಿದಾಗ ಸರಕಾರದವರು ಯಾವ ನಿರ್ಬಂಧವೂ ಇಲ್ಲದೆ, ಯಾವ ಲೋಹಕೋಶವನ್ನೂ ಸ್ಥಾಪಿಸದೆ, ನೋಟನ್ನು ಲೋಹ

ನಾಣ್ಯಕ್ಕೆ ಪೂರಿಸಲು ಯಾವ ಪರ್ಯಾಪ್ತವನ್ನೂ ಮಾಡದೆ ತಮಗೆ ಬೇಕಾದಷ್ಟು ನೋಟುಗಳನ್ನು ತಯಾರಿಸಿ ಪ್ರಚಾರಕ್ಕೆ ತರುವುದುಂಟು. ಹೊರ ಆಕಾರದಲ್ಲಿ ಎರಡು ಬಗೆಯ ನೋಟೂ ಒಂದೇ ಆಗಿದ್ದರೂ ಸತ್ವದಲ್ಲಿ ಅವಕ್ಕೆ ವ್ಯತ್ಯಾಸವುಂಟು. ಸರಕಾರದವರು ನಿರಂಕುಶರಾಗಿ, ಪ್ರಜೆಗಳ ಪ್ರಯೋಜನವನ್ನು ನೋಡದೆ, ತಮ್ಮ ದುಂದುಗಾರಿಕೆಗೊ ಸಾಲದ ಭಾರವನ್ನು ಕಡಮೆಮಾಡಿಕೊಳ್ಳುವುದಕ್ಕಾಗಿಯೋ, ಅಥವಾ ಯುದ್ಧಗಳಲ್ಲಿ ಸಾಮಗ್ರಿಗಳನ್ನು ಬೇಗನೆ ಪಡೆಯಲೆಂದೊ ಈ ಬಗೆಯ ನೋಟುಗಳನ್ನು ಅಚ್ಚುಹಾಕುವರು. ಈ ಸಂಬಂಧವಾಗಿ ೧೧ನೆಯ ಪ್ರಕರಣದಲ್ಲಿ ಹೆಚ್ಚು ಸಂಗತಿಗಳನ್ನು ತಿಳಿಯಬಹುದು.

ಮೇಲೆ ಹೇಳಿದ ಸಂಗತಿಗಳೆಲ್ಲ ಸರಕಾರದವರೊ ಸರಕಾರದ ಪರವಾಗಿ ಅಧಿಕಾರವಹಿಸುವ ಬ್ಯಾಂಕಿನವರೊ ತಯಾರುಮಾಡುವ ಹಣದ ವಿಚಾರಕ್ಕೆ ಮಾತ್ರ ಸಲ್ಲುವುವು. ಕೆಲವು ದೇಶಗಳಲ್ಲಿ ಖಾಸಗಿ ಬ್ಯಾಂಕುಗಳು ನೋಟನ್ನು ಪ್ರಚಾರಕ್ಕೆ ತರುವುದುಂಟು. ಇದರ ಬೆಂಗಾವಲಾಗಿ ತಕ್ಕಷ್ಟು ಲೋಹಕೋಶವನ್ನು (Reserve) ಇಷ್ಟೇ ಇಡಬೇಕೆಂದೂ ಇಂತಿಂತಹ ಬ್ಯಾಂಕಿನವರು ಇಷ್ಟಿಷ್ಟೇ ಹೀಗೆ ಹೀಗೇ ನೋಟನ್ನು ಚಲಾವಣೆಗೆ ತರಬೇಕೆಂದೂ ಆಯಾ ಸರಕಾರಗಳವರು ಕಟ್ಟಾಜ್ಞೆ ಮಾಡಿರುತ್ತಾರೆ. ಅಪ್ರಾಮಾಣಿಕರಾದ ಬ್ಯಾಂಕುಗಳವರು ತಮ್ಮ ಲಾಭಕ್ಕಾಗಿ ಅರಿಯದ ಜನರಿಗೆ ಕಷ್ಟನಷ್ಟ ಉಂಟುಮಾಡುವ ಸಂಭವವಿದೆಯಾದ್ದರಿಂದ ಈ ಸಂಬಂಧದಲ್ಲಿ ನಿಯಮಗಳು ಕಠಿಣವಾಗಿರುತ್ತವೆ.

ಮುಖ್ಯವಾಗಿ ನಾಣ್ಯಗಳೂ ನೋಟುಗಳೂ ಬೇಕಾದವರಿಗೆ ಒಂದನ್ನು ಕೊಟ್ಟರೆ ಇನ್ನೊಂದು ಸರ್ವದಾ ದೊರೆಯುತ್ತಿರಬೇಕು. ವ್ಯಾಪಾರ ವಿನಿಮಯಗಳಿಗೆ ಬೇಕಾಗುವ ಎಲ್ಲ ಹಣವೂ ಕಾಲಕ್ಕೆ ತಕ್ಕಂತೆ ಧಾರಾಳವಾಗಿ ಹೆಚ್ಚುಕಡಮೆಯಾಗುತ್ತ ಹೊಂದಿಕೊಳ್ಳುತ್ತಿರಬೇಕು. ಒಳಗೂ ಹೊರಗೂ ಅದರ ಬೆಲೆ ಹದವಾಗಿರಬೇಕು. ಈ ಹಣ ಬಹುಕಾಲದವರೆಗೆ ನಿಲ್ಲುವಂತೆಯೂ ಸಮಧಾತುವಾಗಿರುವಂತೆಯೂ ವರ್ತಿಸಬೇಕು—ಎಂಬುದೇ ಎಲ್ಲ ನಾಣ್ಯ ಪದ್ಧತಿಗಳ ಗುರಿ.

**ನಾಣ್ಯ ನೋಟು – ತಾರತಮ್ಯ.** — ಒಂದು ದೃಷ್ಟಿಯಿಂದ ನೋಡಿದರೆ ಲೋಹನಾಣ್ಯಕ್ಕೆ ಮೊದಲ ಪದವಿ; ಸರಕಾರದ ನೋಟಿಗೆ ಎರಡನೆಯದು; ಬ್ಯಾಂಕ್ ನೋಟು ಮೂರನೆಯ ಸ್ಥಾನವನ್ನು ಪಡೆಯುವುದು. ಕೇಳಿದವರಿಗೆ ಕೇಳಿದಾಗ ಸರಕಾರಿ ಹಣವನ್ನು ಕೊಟ್ಟರಲ್ಲದೆ ಬ್ಯಾಂಕ್ ನೋಟಿಗೆ ಬೆಲೆಯಿಲ್ಲ; ಗೌರವವಿಲ್ಲ. ಸರಕಾರದ ನೋಟಿಗೆ ಬದಲಾಗಿ ಪ್ರಧಾನ ಲೋಹನಾಣ್ಯ ಬೇಕಾದಂತೆ ಸಿಕ್ಕುವುದೆಂಬ ನಂಬಿಕೆಯಿಲ್ಲದಿದ್ದರೆ ಸರಕಾರದ ನೋಟಿಗೆ ಗೌರವವಿಲ್ಲ; ಬೆಲೆಯಿಲ್ಲ. ಒಟ್ಟಿನಲ್ಲಿ ಈ ಎಲ್ಲ ಬಗೆಯ ಹಣಕ್ಕೂ ಜನಸಾಮಾನ್ಯದ ವಿಶ್ವಾಸವೇ ಮೂಲಾಧಾರ. ಅದೊಂದಿಲ್ಲದಿದ್ದರೆ ಇತರ ಯಾವ ಗುಣವಿದ್ದರೂ ಇಲ್ಲದಹಾಗೆಯೇ.

ಸರಕಾರದ ನೋಟು ಸರಕಾರದವರು ಜನರಿಗೆ ಬರೆದುಕೊಟ್ಟ ಸಾಲಪತ್ರದಂತೆ ಇರುವುದು ಎಂದು ಹೇಳಿದರೆ ಬ್ಯಾಂಕ್ ನೋಟು ಬ್ಯಾಂಕಿನವರು ಬರೆದುಕೊಟ್ಟ ಸಾಲಪತ್ರವಾಯಿತು. ಆಯಾ ಅಧಿಕಾರಿಗಳಲ್ಲಿ ನಂಬಿಕೆಯುಳ್ಳವರೆಲ್ಲ ಅದನ್ನು ಬಳಸುವರು. ನೋಟಿನಲ್ಲಿ ಏನು ಬರೆದಿದೆ? ಅದನ್ನು ತೆಗೆದುಕೊಳ್ಳುವುದರ ಜವಾಬ್ದಾರಿಯೇನು ಎಂದು ಕೂಡ ವಿಚಾರಿಸುವುದಿಲ್ಲ.

**ಚೆಕ್ಕುಗಳು.** — ನೋಟನ್ನು ಚಲಾವಣೆಗೆ ತರುವ ಅಧಿಕಾರ ಎಲ್ಲ ಬ್ಯಾಂಕುಗಳಿಗೂ ಇರುವದಿಲ್ಲ. ದೊಡ್ಡ ಬ್ಯಾಂಕುಗಳಿಗೆ ಕೆಲವು ದೇಶಗಳಲ್ಲಿ ಇರುವಾಗಲೂ ಆ ಸಂಬಂಧದಲ್ಲಿ ಅವು ಬಹು ನಿಷ್ಠುರವಾದ ನಿಯಮಗಳಿಗೆ ಒಳಪಡಬೇಕಾಗುವುದು. ಈ ನಿಯಮಗಳಿಂದ ಅಡಚಣೆ ಬಹಳವೆಂದೂ ಲಾಭವಿಲ್ಲವೆಂದೂ ಬ್ಯಾಂಕಿನವರು ಇನ್ನೊಂದು ಬಗೆಯ ವ್ಯವಹಾರವನ್ನು ನಡಸುವರು. ಬ್ಯಾಂಕಿನ ಕೆಲಸ ಹೆಚ್ಚಾಗಿ ನಡೆಯುತ್ತಾ ಅದರ ರೀತಿ ನೀತಿಗಳ ಪರಿಚಯವಿರುವ ಪ್ರದೇಶಗಳಲ್ಲಿ ಜನರು ಹಣದ ಕೆಲಸವನ್ನು ಚೆಕ್ಕುಗಳೆಂಬ ಕಾಗದಪತ್ರಗಳಿಂದ ಮಾಡಿಸುವರು. ನಾಣ್ಯ ನೋಟುಗಳ ಓಡಾಟಕ್ಕಿಂತ ಚೆಕ್ಕಿನ ಓಡಾಟವೇ ಮುಂಬರಿದ ದೇಶಗಳಲ್ಲಿ ಹೆಚ್ಚು.

**ನೋಟು – ಚೆಕ್ಕು.** — ನೋಟಿನಂತೆಯೇ ಚೆಕ್ಕೂ ಕಾಗದದ ಹಾಳೆ. ಆದರೆ ನೋಟು ಸರಕಾರದ ಅಧಿಕಾರಿಗಳೊ ಅವರ ಪ್ರತಿನಿಧಿ ಬ್ಯಾಂಕಿ

ನವರೂ ಮುದ್ರೆಯೊತ್ತಿ ನಮಗೆ ರುಜುಮಾಡಿಕೊಟ್ಟಿರುವ ಸಾಲದ ಪತ್ರ. ಚೆಕ್ಕು ಹಾಗಲ್ಲ. ಅದು ಬ್ಯಾಂಕಿಗೆ ಯಾರಾದರೊಬ್ಬರು ಕಳುಹಿಸುವ ಆಜ್ಞಾಪತ್ರ. ಅದರಲ್ಲಿ ಕಾಣಿಸಿರುವಷ್ಟು ಹಣವನ್ನು ಅಲ್ಲಿ ಬರೆದಿರುವ ಹೆಸರಿನವರಿಗೆ, ಅಥವಾ ಅವರಿಂದ ಅಧಿಕಾರ ಪಡೆದವರಿಗೆ ಕೊಡುವುದು ಎಂದು ಅಪ್ಪಣೆ ಬರೆದಿರುತ್ತದೆ. ಆ ಅಪ್ಪಣೆಯನ್ನು ತೆಗೆದುಕೊಂಡು ಹೋದ ತಕ್ಷಣ ಅದಕ್ಕೆ ಪ್ರತಿಯಾಗಿ ನೋಟನ್ನೊ, ಸರಕಾರದ ಹಣವನ್ನೊ ಕೊಡುವರು; ಅಥವಾ ಅವರ ಲೆಕ್ಕ ಆ ಬ್ಯಾಂಕಿನಲ್ಲಿದ್ದರೆ ಅವರ ಲೆಕ್ಕಕ್ಕೆ ಹೊಸದಾಗಿ ಇಷ್ಟು ಹಣವನ್ನು ಜಮಾ ಕಟ್ಟಿಕೊಳ್ಳುವರು. ಚೆಕ್ಕು ಬರೆದವನ ಹೆಸರಿನಲ್ಲಿದ್ದ ಹಣ ಅಷ್ಟಕ್ಕೆ ಕೊರೆಯಾಗಿ ಚೆಕ್ಕು ತೆಗೆದುಕೊಂಡು ಹೋದವನ ಲೆಕ್ಕಕ್ಕೆ ಆ ಮೊಬಲಗು ಸೇರಿ ಬೆಳೆಯುವುದು. ಹಣವನ್ನೇ ಕೊಟ್ಟಿದ್ದರೆ ಹೇಗೆ ಸಾಲ ತೀರುತ್ತಿತ್ತೋ ಚೆಕ್ಕನ್ನು ಕೊಟ್ಟರೂ ಹಾಗೆಯೇ ತೀರುತ್ತದೆ. ಒಂದು ಕುರುಡು ಕಾಸು ಕೂಡ ಯಾರ ಕೈಯಿಂದಲೂ ಸಾಗದೆ ಕೇವಲ ಬ್ಯಾಂಕಿನ ಲೆಕ್ಕಗಳ ಮಾರ್ಪಾಡಿನ ಮೂಲಕವೇ ಈ ಲೇಣೆ ದೇಣೆಗಳು ಸಮರ್ಪಕವಾಗಿ ನಡೆಯುತ್ತವೆ.

ಅದೇ ಬ್ಯಾಂಕಿನಲ್ಲಿ ಲೆಕ್ಕವಿಟ್ಟಿರುವವರೂ ಅದರಲ್ಲಿ ನಂಬಿಕೆ ಇರುವವರೂ ಎಲ್ಲರೂ ಚೆಕ್ಕನ್ನು ತೆಗೆದುಕೊಳ್ಳುವರು. ಅದರ ಪ್ರಚಾರ ಹೆಚ್ಚಾದಂತೆಲ್ಲ ನಾಣ್ಯ ನೋಟುಗಳಂತೆಯೇ ಅದಕ್ಕೂ ಬೆಲೆ, ಗೌರವ ಬರುವುವು. ಚೆಕ್ಕು ಸರಕಾರದ ಹಣವಲ್ಲವಾದುದರಿಂದ ಯಾರೇ ಆಗಲಿ ಕಡ್ಡಾಯವಾಗಿ ಅದನ್ನು ತೆಗೆದುಕೊಳ್ಳಬೇಕೆಂಬ ನಿರ್ಬಂಧವಿಲ್ಲ. ನೋಟಿಗೂ ಚೆಕ್ಕಿಗೂ ಇನ್ನೂ ಕೆಲವು ವ್ಯತ್ಯಾಸಗಳುಂಟು. ನೋಟನ್ನು ಖಂಡ ಮೊತ್ತಗಳಿಗೇ ಮಾಡಿರುವರು ;—ರೂ. ೫, ೧೦, ೧೦೦ ಹೀಗೆ. ಚಿಲ್ಲರೆ ನೋಟುಗಳಿರುವುದಿಲ್ಲ. ಅದು ಯಾರ ಕೈಯಲ್ಲಿದ್ದರೂ ಅಷ್ಟು ಹಣ ಎಲ್ಲಿಂದರಲ್ಲಿ ಅವರದು. ಸಣ್ಣ ನೋಟು ಕಳೆದುಹೋದರೆ ಸಿಕ್ಕುವುದು ಸುಲಭವಲ್ಲ. ಚೆಕ್ಕನ್ನು ಎಷ್ಟು ಮೊಬಲಗಿಗಾದರೂ ಬರೆಯಬಹುದು, ಎಷ್ಟು ರೂ., ಆ., ಪೈಗಳಿಗಾದರೂ ಬರೆಯಬಹುದು. ಚೆಕ್ಕು ಕಳವಾದರೆ ಅಥವಾ ಕಳೆದುಹೋದರೆ ಬ್ಯಾಂಕಿನವರಿಗೆ ತಿಳಿಸಿ ಅದನ್ನು ರದ್ದುಮಾಡಬೇಕೆಂದು ಹೇಳಿ ಬೇರೆ ಚೆಕ್ಕನ್ನು ಬರೆದು ಕಳುಹಿಸಬಹುದು. ಆದರೆ

ಬ್ಯಾಂಕಿನ ಮೇಲೆ ಚೆಕ್ಕಿನ ಮೂಲಕ ಅಪ್ಪಣೆಕೊಡಲು ಅಧಿಕಾರವಿರುವವರು ಮಾತ್ರ ಈ ಕೆಲಸವನ್ನು ಮಾಡಬಹುದು. ಎಂದರೆ ಬ್ಯಾಂಕಿನಲ್ಲಿ ಅವರ ಹಣವಿರಬೇಕು. ಇಲ್ಲವಾದರೆ ಚೆಕ್ಕು ತೆಗೆದುಕೊಂಡು ಹೋಗಿ ಕೊಡುವವರಿಗೆ ಮೂರು ಕಾಸಿನ ಪ್ರಯೋಜನವೂ ದೊರೆಯುವುದಿಲ್ಲ. ಕೆಲವು ಕಡೆ ಚೆಕ್ಕು ಕೊಟ್ಟು ಹಣ ತೆಗೆದುಕೊಳ್ಳುವಾಗ ರಸೀತಿ ಸ್ಟಾಂಪನ್ನು ಹಚ್ಚಿಯೇ ಹಣ ಪಡೆಯಬೇಕು. ನೋಟಿನ ಸಂಬಂಧದಲ್ಲಿ ಈ ಹೆಚ್ಚುವಾಗಲಿ ಕಷ್ಟವಾಗಲಿ ಇಲ್ಲ.

**ಚೆಕ್ಕುಗಳಲ್ಲಿ ಬಗೆಗಳು.**—ಚೆಕ್ಕುಗಳಲ್ಲಿ ಅನೇಕ ವಿಧವುಂಟು. **'ಬೇರರ್'** ಚೆಕ್ಕು ಎಂಬುದು ಕೇವಲ ನೋಟಿನಂತೆಯೇ ಕೆಲಸ ಮಾಡುತ್ತದೆ. ಯಾರ ಕೈಯಲ್ಲಿ ಆ ಚೆಕ್ಕಿದೆಯೋ ಅದನ್ನು ಅವರು ಬ್ಯಾಂಕಿಗೆ ತೆಗೆದುಕೊಂಡು ಹೋಗಿ ಕೊಟ್ಟರೆ ಅವರಿಗೆ ಅದರಲ್ಲಿ ಕಾಣಿಸಿರುವಷ್ಟು ಹಣ ದೊರೆಯುತ್ತದೆ. ಚೆಕ್ಕು ಕಳುಹಿಸಿದವರ ಹಣ ಬ್ಯಾಂಕಿನಲ್ಲಿದ್ದರೆ ಸಾಕು. ಅಲ್ಲಿರುವ ರುಜು ನಿಜವಾದ ಕುಳದ ರುಜುವಿನಂತಿದ್ದರೆ ಸಾಕು. ಆದರೆ ಆ ಸೌಲಭ್ಯಕ್ಕೆ ತಕ್ಕಂತೆ ನಷ್ಟಸಂಭವವೂ ಉಂಟು. ಕಳ್ಳರೂ ದರೋಡೆಯವರೂ ಇಂತಹ ಚೆಕ್ಕಿಂದ ಬಹು ಸುಲಭವಾಗಿ ಪ್ರಯೋಜನ ಪಡೆಯಬಹುದು.

ಚೆಕ್ಕಿನ ಮೇಲೆ 'ಸ್ವಂತಕ್ಕೆ', ಇಂಥವರಿಗೆ ಎಂದು ಯಾರಾದರೊಬ್ಬರ ಹೆಸರಿಗೆ, ಅಥವಾ, ಅಂಥವರ ಅಪ್ಪಣೆ ಪಡೆದವರಿಗೆ ಎಂದು ಬರೆಯುವುದುಂಟು. ಸ್ವಂತಕ್ಕೆ ಎಂದು ಬರೆದಿದ್ದರೆ ಬರೆದವರೇ ಬ್ಯಾಂಕಿಗೆ ಹೋಗಿ ಹಣ ತರಬೇಕು. ಇಂಥವರಿಗೆ ಎಂದರೆ ಅವರಿಗೆ ಮಾತ್ರ ಹಣ ಪಡೆಯುವ ಅಧಿಕಾರ ಉಂಟು. ಅವರಿಗೂ ಅವರ ಅಪ್ಪಣೆ ಪಡೆದವರಿಗೂ ಕೊಡುವುದೆಂದು ಬರೆದಿದ್ದರೆ, ನನಗೆ ಹಣ ಸಂದಿದೆ ಇಂಥವರಿನ್ನೊಬ್ಬರಿಗೆ ಕೊಡುವುದು ಎಂದು ಚೆಕ್ಕಿನ ಹಿಂದುಗಡೆ, ಅವರು ಬರೆದು ತಮ್ಮ ರುಜುಮಾಡಬಹುದು; ಹಾಗೆ ಮಾಡುವುದಕ್ಕೆ 'ಎನ್‌ಡಾರ್ಸ್' ಷರಾ ಮಾಡುವುದು, ಸಹಿಕೆ ಹಾಕಿಕೊಡುವುದು ಎಂದರ್ಥ; ಅವರು ತಮಗೆ ಬೇಕಾದವರಿಗೆ ಹೀಗೆ ಚೆಕ್ಕನ್ನು ಎನ್‌ಡಾರ್ಸ್ ಮಾಡಿಕೊಡಬಹುದು. ಹೀಗೆ ಕೈಯಿಂದ ಕೈಗೆ ಚೆಕ್ಕುಗಳು ಹೋಗಿ ಪರಸ್ಪರ ಸಾಲಗಳನ್ನು

ತೀರಿಸಬಲ್ಲುವು. **ಕ್ರಾಸ್ಡ್ ಚೆಕ್** ಎಂಬ ಬೇರೊಂದು ಬಗೆಯ ಚೆಕ್ಕಿರುವುದು. ಇಂಥವರ ಹೆಸರಿಗೆ ಎಂದು ಬರೆದು ಚೆಕ್ಕಿನ ಮೇಲೆ ಎರಡು ಗೆರೆ ಎಳೆದಿರುತ್ತಾರೆ. ಕೆಲವು ವೇಳೆ ಒಂದು ಬ್ಯಾಂಕಿನ ಹೆಸರನ್ನೂ ಬರೆಯುವುದುಂಟು. ಅಂತಹ ಚೆಕ್ಕಿನ ಹಣವನ್ನು ಬ್ಯಾಂಕುಗಳ ಮೂಲಕವೇ ಮುರಿಸಿಕೊಳ್ಳಬೇಕು. ಆ ಬ್ಯಾಂಕುಗಳಲ್ಲಿ ಲೆಕ್ಕವಿಟ್ಟಿರುವವರಿಂದಲೇ ಆ ಕೆಲಸವಾಗಬೇಕು. ಬೇರರ್ ಚೆಕ್ಕುಗಳ ಹೊರತು ಇತರ ಬಗೆಯ ಚೆಕ್ಕುಗಳ ಸಂಚಾರಕ್ಕೆ ಈ ಸಣ್ಣ ತಡೆಗಳಿರುತ್ತವೆ. ಆದರೂ ಬ್ಯಾಂಕುಗಳ ಪ್ರಾಬಲ್ಯವೂ ಬಳಕೆಯೂ ಇರುವ ಪ್ರದೇಶಗಳಲ್ಲಿ ಯಾವ ತೊಂದರೆಯೂ ಇಲ್ಲದೆ ಪ್ರತಿಯೊಂದು ಬ್ಯಾಂಕಿನವರೂ ತಮ್ಮ ಕುಳಕ್ಕೆ ಚೆಕ್ಕುಗಳ ಮೂಲಕ ಬರಬೇಕಾದ ಹಣವನ್ನೆಲ್ಲ ತರಿಸಿಕೊಡುವ ಏರ್ಪಾಡು ಮಾಡುತ್ತಾರೆ. ಒಂದು ಬ್ಯಾಂಕಿನ ಮೇಲೆ ಕಳುಹಿಸಿದ ಚೆಕ್ಕನ್ನು ಇನ್ನೊಂದು ಬ್ಯಾಂಕಿನವರು ಸ್ವೀಕರಿಸುತ್ತಾರೆ.

**ಚೆಕ್ಕು - ಡಿಪಾಸಿಟ್ಟುಗಳು.** — ನೋಟು ತಕ್ಷಣದ ಕೈಹಣ. ಚೆಕ್ಕುಗಳಿಂದ ಹಣ ಪಡೆಯಬೇಕಾದರೆ ಸ್ವಲ್ಪ ಕಾಲ ಹೆಚ್ಚಾಗುವುದು. ಅದೂ ಅಲ್ಲದೆ ಯಾರು ಮೊದಲು ಚೆಕ್ಕನ್ನು ಬರೆಯುವರೋ ಅವರದಾಗಿ ಬ್ಯಾಂಕಿನಲ್ಲಿ ಹಣವಿದ್ದ ಹೊರತು ಚೆಕ್ಕಿಗೆ ಬೆಲೆಯಿಲ್ಲವೆಂದು ಮೇಲೆ ಹೇಳಿದೆ. ಈಗ ಬ್ಯಾಂಕಿನಲ್ಲಿ ಇವರ ಹಣ ಹೇಗೆ ಇರುವುದೆಂದು ನೋಡೋಣ. ಬ್ಯಾಂಕುಗಳಲ್ಲಿ ನಂಬಿಕೆಯಿರುವ ಅನೇಕರು ತಮ್ಮಲ್ಲಿರುವ ಹೆಚ್ಚು ಹಣವನ್ನು ಅಥವಾ ತಿಂಗಳ ಆದಾಯವನ್ನು ಬ್ಯಾಂಕಿನಲ್ಲಿಡುತ್ತಾರೆ. ಇಟ್ಟುದಕ್ಕೆ ಪ್ರತಿಯಾಗಿ ಬ್ಯಾಂಕಿನವರು ಇವರಿಗೆ ಚೆಕ್ ಬುಕ್ ಎಂಬ ಒಂದು ಪುಸ್ತಕವನ್ನು ಕೊಟ್ಟು ಇವರ ಹಣದ ಇಷ್ಟು ಮೊಬಲಗಿಗೆ ಬ್ಯಾಂಕಿನವರು ಹೊಣೆಗಾರರೆಂಬ ಹೊಣೆ ಸೂಚಿಕೆಯನ್ನು ಸೂಚಿಸಿಕೊಡುತ್ತಾರೆ. ಎಂದರೆ ಆ ಮಟ್ಟಿಗೆ ಬ್ಯಾಂಕಿನವರು ಈ ಡಿಪಾಸಿಟರ್ಸ್ (ಠೇವಣಿದಾರರು) ಎಂಬ ಕುಳಗಳಿಗೆ ಸಾಲಗಾರರೆಂದು ಅರ್ಥವಾಯಿತು.

ಡಿಪಾಸಿಟ್ (ಪುದುಪಟ್ಟು ಅಥವಾ ಠೇವಣಿ) ಲೆಕ್ಕ ಎರಡು ಬಗೆಯಾಗಿ ಇರಬಲ್ಲುದು: ಒಂದು ನಿಡುವಾಯಿದೆ (ಗಟ್ಟಿ) ಡಿಪಾಸಿಟ್ಟು; ಇನ್ನೊಂದು ಕಿರುವಾಯಿದೆ (ಚಾಲ್ತಿ) ಡಿಪಾಸಿಟ್ಟು. ಚಾಲ್ತಿ ಡಿಪಾಸಿಟ್‌ದಾರರಿಗೆಲ್ಲ

ಕೊಡುವಂತೆಯೇ ಇವರ ಕೈಗೂ ಬ್ಯಾಂಕಿನ ಚೆಕ್ ಬುಕ್ಕು ಬರುವುದು. ಇವರಿಗೆ ಬೇಕಾದಾಗ ಚೆಕ್ ಬರೆದು ಕಳುಹಿಸಿ ಆಗ ಅಷ್ಟು ಈಗ ಇಷ್ಟು ಹಣ ಮುಗಿಯುವವರೆಗೂ ಹಣವನ್ನು ತೆಗೆದುಕೊಳ್ಳುತ್ತಿರಬಹುದು. ವ್ಯಾಪಾರಗಾರರಿಗಂತೂ ಈ ಬಗೆಯ ಏರ್ಪಾಡು ಬಹಳ ಸಹಾಯಕಾರಿ ಯಾಗುತ್ತದೆ. ಇಂತಹ ಸಂದರ್ಭದಲ್ಲಿ ಬ್ಯಾಂಕಿನವರಿಗೆ ಲಾಭ ಹೆಚ್ಚು ಕೈಯಿಂದ ಒಟ್ಟಿಗೆ ನಾಣ್ಯ ರೂಪದಲ್ಲಿ ಸಾಲವನ್ನು ತೆರದೆಯೇ ಇತರರಿಗೆ ಸಾಲಕೊಟ್ಟು, ತಮ್ಮ ಚೆಕ್ಕುಗಳ ಓಡಾಟದ ಮೂಲಕವೇ ಹಣದ ಕೆಲಸ ವನ್ನು ಮಾಡಿಸಬಹುದು. ತಮ್ಮ ಕುಳಗಳಲ್ಲಿಯೇ ಒಬ್ಬರು ಬರೆದ ಚೆಕ್ಕು ಇನ್ನೊಬ್ಬರಿಗೆ ಸಲ್ಲುವಹಾಗಿದ್ದರಂತೂ ಮತ್ತೂ ಅನುಕೂಲ. ಇವರ ಲೆಕ್ಕದಿಂದ ಆ ಮೊಬಲಗನ್ನು ಕಳೆದು, ಅವರ ಲೆಕ್ಕಕ್ಕೆ ಇದನ್ನು ಸೇರಿಸಿ ಬಿಟ್ಟರೆ ಕೈಯಿಂದ ಕೈಗೆ ಹಣ ಸಂಚಾರಮಾಡದೆಯೇ ಪರಸ್ಪರ ಸಾಲ ತೀರಿದಂತಾಗುವುದು. ಇನ್ನು ಒಂದು ವಿಧದಲ್ಲಿ ಡಿಪಾಸಿಟ್ಟು ನಿರ್ಮಾಣ ಮಾಡಬಹುದು: ಯಾವುದಾದರೂ ಚರಸ್ಥಿರಸ್ವತ್ತನ್ನು ತಾವು ಕ್ರಯಕ್ಕೆ ಕೊಂಡು ಅದಕ್ಕೆ ಬದಲಾಗಿ ತಮ್ಮಲ್ಲಿ ಆ ಸ್ವತ್ತಿನ ಯಜಮಾನರಿಗೆ ಆ ಮೊತ್ತಕ್ಕೆ ಸಮನಾದ ಡಿಪಾಸಿಟ್ ಲೆಕ್ಕದ ಅನುಕೂಲ ಮಾಡಿಕೊಡಬಹುದು. ಇಲ್ಲಿಯೂ ಹಣದ ಸಂಚಾರವಾಗದೆಯೇ ಬ್ಯಾಂಕಿನ ಚೆಕ್ಕುಗಳ ಮೂಲಕ ಸ್ವತ್ತುದಾರರೂ ಬ್ಯಾಂಕಿನವರೂ ಸಾಲವನ್ನು ತೀರಿಸಿಕೊಳ್ಳುವ ಅನುಕೂಲವುಂಟು.

ಬ್ಯಾಂಕು ಬ್ಯಾಂಕುಗಳ ಪರಸ್ಪರ ಸಾಲವನ್ನು ಲೆಕ್ಕಗಳನ್ನು ತಾಳೆ ಹಾಕಿ ತೀರಿಸುವ ಇನ್ನೊಂದು ಏರ್ಪಾಡೂ ಇದೆ. ಒಂದು ಬ್ಯಾಂಕಿನಿಂದ ಇನ್ನೊಂದಕ್ಕೆ ಸರಕಾರದ ಹಣ ಸಾಗದೆಯೇ ಕ್ಲಿಯರಿಂಗ್ ಹೌಸ್ (ಸಾಲ ಹರಿಸುವ ಮನೆ) ಎಂಬ ಸಂಸ್ಥೆಯ ಮೂಲಕ ಪರಸ್ಪರ ಸಾಲಗಳು ತೀರುವ ಆ ಏರ್ಪಾಡಿನ ವಿಚಾರವನ್ನು ಮುಂದಿನ ಒಂದು ಪ್ರಕರಣದಲ್ಲಿ ತಿಳಿಸಲಾಗುವುದು. ಮುಖ್ಯವಾಗಿ ವಸ್ತುಸಾಮಗ್ರಿಗಳನ್ನು ಕೊಳ್ಳುವುದು; ಕೆಲಸಮಾಡಿದವರಿಗೆ ಪ್ರತಿಫಲ ಕೊಡುವುದು; ಸಾಲ ತೀರಿಸುವುದು; ಸಾಲ ಕೊಡುವುದು ಮುಂತಾದ ಹಣದ ಕೆಲಸಗಳನ್ನೆಲ್ಲಾ ಸರಕಾರಿ ಹಣದ ಬಹು ಸ್ವಲ್ಪ ಉಪಯೋಗದಿಂದಲೇ ಈಗ ಚೆಕ್ಕುಗಳು ಮಾಡುತ್ತಿರುವವು.

ಒಟ್ಟಿಗೆ ದೇಶದ ವ್ಯಾಪಾರ ವ್ಯವಹಾರಗಳಿಗೆ ಹೆಚ್ಚು ಹಣ ಒದಗಿಸಿದಂತೆ ಆಗುವುದು.

**ಚಾಲ್ತಿ ಹಣ.**—ಹೀಗೆ ದೇಶದಲ್ಲಿ ಮುಖ್ಯವಾಗಿ ನಾಣ್ಯ, ನೋಟು, ಡಿಪಾಸಿಟ್ಟಿನ ಆಧಾರದ ಮೇಲೆ ಓಡಾಡುವ ಚೆಕ್ಕು ಇವು ಮೂರೂ ಹಣದ ಕೆಲಸವನ್ನು ಮಾಡುವ ಸಾಧನಗಳು. ಈ ಮೂರೂ ಒಟ್ಟಿಗೆ ಸೇರಿದರೆ ದೇಶದಲ್ಲಿ ಓಡಾಡುವ **ಚಾಲ್ತಿ ಹಣ** (Current Money) ಆಗುವುದು.

ಯಾವುದಾದರೂ ಒಂದು ದೇಶದಲ್ಲಿ ಒಂದು ಸಮಯದಲ್ಲಿ ಎಷ್ಟು ಹಣ ಬಳಕೆಯಲ್ಲಿರುವುದು ಎಂಬುದನ್ನು ನಿಷ್ಕೃಷ್ಟವಾಗಿ ಹೇಳುವುದು ಕಷ್ಟವಾದರೂ ಸುಮಾರು ಇಷ್ಟು ಎಂದು ಗುಣಿಸಬಹುದು. ದೇಶದಲ್ಲಿ ಹಣದ ಕೆಲಸ ಎಷ್ಟಿದೆ ಎಂಬುದನ್ನು ಮೊದಲು ಗುಣಿಸಿಕೊಳ್ಳುವರು. ಆಮೇಲೆ ಸರಕಾರದವರೂ ಬ್ಯಾಂಕಿನವರೂ ಚಲಾವಣೆಗೆ ತಂದಿರುವ ನಾಣ್ಯ ನೋಟುಗಳ ಲೆಕ್ಕ ಮಾಡಿ, ತಮ್ಮ ಖಜಾನೆಗಳಲ್ಲಿಯೊ, ಲೋಹದ ಕೋಶಗಳಲ್ಲಿಯೊ, ಕೈಪೆಟ್ಟಿಗೆಗಳಲ್ಲಿಯೊ ಉಳಿದಿರುವುದನ್ನೂ ಈವರೆಗೆ ರದ್ದುಮಾಡಿರುವುದನ್ನೂ ಲೆಕ್ಕಮಾಡುವರು. ಉಳಿದುದು ಜನರ ಕೈಯಲ್ಲಿರುವುದೆಂದು ಗೊತ್ತಾಗುವುದು. ಆ ಹಣದ ಜೊತೆಗೆ ಬ್ಯಾಂಕುಗಳವರು ಹೊಸದಾಗಿ ನಿರ್ಮಾಣಮಾಡಿದ ಡಿಪಾಸಿಟು ಮೊಬಲಗೂ, ವಿಶೇಷವಾಗಿ ಅವರ ಚಾಲ್ತಿ ಡಿಪಾಸಿಟ್ಟುಮಾಡಿರುವ ಒಟ್ಟು ನಿವ್ವಳ ಕೆಲಸದ ಮೊತ್ತವೂ ಸೇರುವುವು. ದೇಶದ ಜನರು ಯಾವುದೊಂದು ಕಾಲದಲ್ಲಿಯೇ ಆಗಲಿ ಇಷ್ಟೇ ಹಣವನ್ನು ಇಟ್ಟುಕೊಳ್ಳುವರು ಎಂಬುದು ಜನ ಜೀವನ, ವ್ಯಾಪಾರ ವ್ಯವಹಾರ ಪದ್ಧತಿ, ಆರ್ಥಿಕ ನಾಗರಿಕತೆ, ಬ್ಯಾಂಕುಗಳ ಬಳಕೆ, ಪರಸ್ಪರ ನಂಬಿಕೆ ಮುಂತಾದುವುಗಳಿಂದ ಗೊತ್ತಾಗುವುದು. ಹೊಸ ಬಗೆಯ ನಾಗರಿಕತೆಯಲ್ಲಿ ಅಷ್ಟು ಮುಂದುವರಿದಿಲ್ಲದ, ಬಹು ವಿಸ್ತಾರವಾದ, ಬ್ಯಾಂಕುಗಳ ಪ್ರಾಬಲ್ಯ ಕಡಮೆಯಾಗಿರುವ ಇಂಡಿಯಾ ದೇಶದಂತಹ ದೇಶಗಳಲ್ಲಿ ಚೆಕ್ಕಿನ ಓಡಾಟಕ್ಕಿಂತಲೂ ನಾಣ್ಯದ ಸಂಚಾರವೇ ಬಹಳ. ಬಹುತರವಾಗಿ ನೋಟಿನ ಸಂಚಾರಕ್ಕಿಂತಲೂ ನಾಣ್ಯದ ಸಂಚಾರ ಹೆಚ್ಚು.

ಕೊಡುವಂತೆಯೇ ಇವರ ಕೈಗೂ ಬ್ಯಾಂಕಿನ ಚೆಕ್ ಬುಕ್ಕು ಬರುವುದು. ಇವರಿಗೆ ಬೇಕಾದಾಗ ಚೆಕ್ ಬರೆದು ಕಳುಹಿಸಿ ಆಗ ಅಷ್ಟು ಈಗ ಇಷ್ಟು ಹಣ ಪಡೆಯುವವರಿಗೂ ಹಣವನ್ನು ತೆಗೆದುಕೊಳ್ಳುತ್ತಿರಬಹುದು. ವ್ಯಾಪಾರಗಾರರಿಗಂತೂ ಈ ಬಗೆಯ ಏರ್ಪಾಡು ಬಹಳ ಸಹಾಯಕಾರಿಯಾಗುತ್ತದೆ. ಇಂತಹ ಸಂದರ್ಭದಲ್ಲಿ ಬ್ಯಾಂಕಿನವರಿಗೆ ಲಾಭ ಹೆಚ್ಚು. ಕೈಯಿಂದ ಒಟ್ಟಿಗೆ ನಾಣ್ಯ ರೂಪದಲ್ಲಿ ಸಾಲವನ್ನು ತೆರದೆಯೇ ಇತರರಿಗೆ ಸಾಲಕೊಟ್ಟು, ತಮ್ಮ ಚೆಕ್ಕುಗಳ ಓಡಾಟದ ಮೂಲಕವೇ ಹಣದ ಕೆಲಸವನ್ನು ನಡೆಸಬಹುದು. ತಮ್ಮ ಕುಳಗಳಲ್ಲಿಯೇ ಒಬ್ಬರು ಬರೆದ ಚೆಕ್ಕು ಇನ್ನೊಬ್ಬರಿಗೆ ಸಲ್ಲುವಹಾಗಿದ್ದರಂತೂ ಮತ್ತೂ ಅನುಕೂಲ. ಇವರ ಲೆಕ್ಕದಿಂದ ಆ ಮೊಬಲಗನ್ನು ಕಳೆದು, ಅವರ ಲೆಕ್ಕಕ್ಕೆ ಇದನ್ನು ಸೇರಿಸಿಬಿಟ್ಟರೆ ಕೈಯಿಂದ ಕೈಗೆ ಹಣ ಸಂಚಾರವಾಗದೆಯೇ ಪರಸ್ಪರ ಸಾಲ ತೀರಿದಂತಾಗುವುದು. ಇನ್ನು ಒಂದು ವಿಧದಲ್ಲಿ ಡಿಪಾಸಿಟ್ಟು ನಿರ್ಮಾಣ ಮಾಡಬಹುದು: ಯಾವುದಾದರೂ ಚರಸ್ಥಿರಸ್ವತ್ತನ್ನು ತಾನೇ ಕ್ರಯಕ್ಕೆ ಕೊಂಡು ಅದಕ್ಕೆ ಬದಲಾಗಿ ತನ್ನಲ್ಲಿ ಆ ಸ್ವತ್ತಿನ ಯಜಮಾನರಿಗೆ ಆ ಮೊತ್ತಕ್ಕೆ ಸಮನಾದ ಡಿಪಾಸಿಟ್ ಲೆಕ್ಕದ ಅನುಕೂಲ ಮಾಡಿಕೊಡಬಹುದು. ಇಲ್ಲಿಯೂ ಹಣದ ಸಂಚಾರವಾಗದೆಯೇ ಬ್ಯಾಂಕಿನ ಚೆಕ್ಕುಗಳ ಮೂಲಕ ಸ್ವತ್ತಿನದಾರರೂ ಬ್ಯಾಂಕಿನವರೂ ಸಾಲವನ್ನು ತೀರಿಸಿಕೊಳ್ಳುವ ಅನುಕೂಲವುಂಟು.

ಬ್ಯಾಂಕು ಬ್ಯಾಂಕುಗಳ ಪರಸ್ಪರ ಸಾಲವನ್ನು ಲೆಕ್ಕಗಳನ್ನು ತಾಳೆ ಹಾಕಿ ತೀರಿಸುವ ಇನ್ನೊಂದು ಏರ್ಪಾಡೂ ಇದೆ. ಒಂದು ಬ್ಯಾಂಕಿನಿಂದ ಇನ್ನೊಂದಕ್ಕೆ ಸರಕಾರದ ಹಣ ಸಾಗದೆಯೇ ಕ್ಲಿಯರಿಂಗ್ ಹೌಸ್ (ಸಾಲ ಹರಿಸುವ ಮನೆ) ಎಂಬ ಸಂಸ್ಥೆಯ ಮೂಲಕ ಪರಸ್ಪರ ಸಾಲಗಳು ತೀರುವ ಆ ಏರ್ಪಾಡಿನ ವಿಚಾರವನ್ನು ಮುಂದಿನ ಒಂದು ಪ್ರಕರಣದಲ್ಲಿ ತಿಳಿಸಲಾಗುವುದು. ಮುಖ್ಯವಾಗಿ ವಸ್ತುಸಾಮಗ್ರಿಗಳನ್ನು ಕೊಳ್ಳುವುದು; ಕೆಲಸಮಾಡಿದವರಿಗೆ ಪ್ರತಿಫಲ ಕೊಡುವುದು; ಸಾಲ ತೀರಿಸುವುದು; ಸಾಲ ಕೊಡುವುದು ಮುಂತಾದ ಹಣದ ಕೆಲಸಗಳನ್ನೆಲ್ಲಾ ಸರಕಾರಿ ಹಣದ ಬಹು ಸ್ವಲ್ಪ ಉಪಯೋಗದಿಂದಲೇ ಈಗ ಚೆಕ್ಕುಗಳು ಮಾಡುತ್ತಿರುವುವು.

ಆ ಮಟ್ಟಿಗೆ ದೇಶದ ವ್ಯಾಪಾರ ವ್ಯವಹಾರಗಳಿಗೆ ಹೆಚ್ಚು ಹಣ ಒದಗಿಸಿದಂತೆ ಆಗುವುದು.

**ಚಾಲ್ತಿ ಹಣ.**— ಹೀಗೆ ದೇಶದಲ್ಲಿ ಮುಖ್ಯವಾಗಿ ನಾಣ್ಯ, ನೋಟು, ಡಿಪಾಸಿಟ್ಟಿನ ಆಧಾರದ ಮೇಲೆ ಓಡಾಡುವ ಚೆಕ್ಕು ಇವು ಮೂರೂ ಹಣದ ಕೆಲಸವನ್ನು ಮಾಡುವ ಸಾಧನಗಳು. ಈ ಮೂರೂ ಒಟ್ಟಿಗೆ ಸೇರಿದರೆ ದೇಶದಲ್ಲಿ ಓಡಾಡುವ **ಚಾಲ್ತಿ ಹಣ** (Current Money) ಆಗುವುದು.

ಯಾವುದಾದರೂ ಒಂದು ದೇಶದಲ್ಲಿ ಒಂದು ಸಮಯದಲ್ಲಿ ಎಷ್ಟು ಹಣ ಬಳಕೆಯಲ್ಲಿರುವುದು ಎಂಬುದನ್ನು ನಿಷ್ಕೃಷ್ಟವಾಗಿ ಹೇಳುವುದು ಕಷ್ಟವಾದರೂ ಸುಮಾರು ಇಷ್ಟು ಎಂದು ಗುಣಿಸಬಹುದು. ದೇಶದಲ್ಲಿ ಹಣದ ಕೆಲಸ ಎಷ್ಟಿದೆ ಎಂಬುದನ್ನು ಮೊದಲು ಗುಣಿಸಿಕೊಳ್ಳುವರು. ಆಮೇಲೆ ಸರಕಾರದವರೂ ಬ್ಯಾಂಕಿನವರೂ ಚಲಾವಣೆಗೆ ತಂದಿರುವ ನಾಣ್ಯ ನೋಟುಗಳ ಲೆಕ್ಕ ಮಾಡಿ, ತಮ್ಮ ಖಜಾನೆಗಳಲ್ಲಿಯೋ, ಲೋಹ ಕೋಶಗಳಲ್ಲಿಯೋ, ಪೆಟ್ಟಿಗೆಗಳಲ್ಲಿಯೋ ಉಳಿದಿರುವುದನ್ನೂ ಈವರೆಗೆ ರದ್ದುಮಾಡಿರುವುದನ್ನೂ ಲೆಕ್ಕಮಾಡುವರು. ಉಳಿದುದು ಜನರ ಕೈಯಲ್ಲಿರುವುದೆಂದು ಗೊತ್ತಾಗುವುದು. ಆ ಹಣದ ಜೊತೆಗೆ ಬ್ಯಾಂಕುಗಳವರು ಹೊಸದಾಗಿ ನಿರ್ಮಾಣಮಾಡಿದ ಡಿಪಾಸಿಟು ಮೊಬಲಗೂ, ವಿಶೇಷವಾಗಿ ಅವರ ಚಾಲ್ತಿ ಡಿಪಾಸಿಟ್ಟು ಮಾಡಿರುವ ಒಟ್ಟು ನಿವ್ವಳ ಕೆಲಸದ ಮೊತ್ತವೂ ಸೇರುವುವು. ದೇಶದ ಜನರು ಯಾವೊಂದು ಕಾಲದಲ್ಲಿಯೇ ಆಗಲಿ ಇಷ್ಟೇ ಹಣವನ್ನು ಇಟ್ಟುಕೊಳ್ಳುವರು ಎಂಬುದು ಜನ ಜೀವನ, ವ್ಯಾಪಾರ ವ್ಯವಹಾರ ಪದ್ಧತಿ, ಆರ್ಥಿಕ ನಾಗರಿಕತೆ, ಬ್ಯಾಂಕುಗಳ ಬಳಕೆ, ಪರಸ್ಪರ ನಂಬಿಕೆ ಮುಂತಾದುವುಗಳಿಂದ ಗೊತ್ತಾಗುವುದು. ಹೊಸ ಬಗೆಯ ನಾಗರಿಕತೆಯಲ್ಲಿ ಅಷ್ಟು ಮುಂದುವರಿಯದ, ಬಹು ವಿಸ್ತಾರವಾದ, ಬ್ಯಾಂಕುಗಳ ಪ್ರಾಬಲ್ಯ ಕಡಿಮೆಯಾಗಿರುವ ಇಂಡಿಯಾ ದೇಶದಂತಹ ದೇಶಗಳಲ್ಲಿ ಚೆಕ್ಕಿನ ಓಡಾಟಕ್ಕಿಂತಲೂ ನಾಣ್ಯದ ಸಂಚಾರವೇ ಬಹಳ. ಬಹುತರವಾಗಿ ನೋಟಿನ ಸಂಚಾರಕ್ಕಿಂತಲೂ ನಾಣ್ಯದ ಸಂಚಾರ ಹೆಚ್ಚು. ಈಗ ಈಗ ನೋಟುಗಳ ಬಳಕೆ ಎಲ್ಲಾ ಕಡೆಯೂ ಕಂಡುಬರುವುದೆನ್ನ

ಬಹುದು. ಸಾಧಾರಣ ಜನರು ಅತಿ ಕಡಮೆ ಬೆಲೆಯ ನೋಟುಗಳನ್ನು ಉಪಯೋಗಿಸಲು ಕೂಡ ಬಡತನದಿಂದ ಅಶಕ್ತರಾಗಿರುವರು. ಆದುದರಿಂದ ನಾಣ್ಯದ ಪ್ರಾಬಲ್ಯವೇ ಇಲ್ಲಿ ಬಹಳ. ಇಂಗ್ಲಂಡ್, ಅಮೇರಿಕಾ ಮುಂತಾದ ದೇಶಗಳಲ್ಲಿ ಬ್ಯಾಂಕುಗಳ ಪ್ರಭಾವ ಹೆಚ್ಚು. ಸಾಮಾನ್ಯವಾಗಿ ಎಲ್ಲರೂ ಒಂದಲ್ಲ ಒಂದು ಬಗೆಯ ಬ್ಯಾಂಕಿನಲ್ಲಿ ಲೆಕ್ಕವಿಟ್ಟಿರುವುದರಿಂದ ಅಲ್ಲಿ ಚೆಕ್ಕಿನ ಓಡಾಟವೇ ಹೆಚ್ಚು. ಲೋಹದ ನಾಣ್ಯಕ್ಕಿಂತಲೂ ನೋಟಿನ ಮತ್ತು ಚೆಕ್ಕಿನ ಕೆಲಸ ಜಾಸ್ತಿ. ಸಣ್ಣ ವ್ಯಾಪಾರ ತೆರಾಣೆಗಳಿಗೆ ಮಾತ್ರ ಚಿಲ್ಲರೆ ನಾಣ್ಯ ಉಪಯುಕ್ತವಾಗುತ್ತದೆ. ಕೇವಲ ದೇಶದ ಪ್ರಧಾನ ಲೋಹನಾಣ್ಯಕ್ಕೆ ವಿಶೇಷ ಚಲಾವಣೆ ಇರುವುದಿಲ್ಲ.

ದೇಶದಲ್ಲಿ ಹಣದ ಕೆಲಸ ಒಟ್ಟು ಎಷ್ಟು ಆಗಬೇಕಾಗಿರುವುದೋ ಹಣದ ಬೆಲೆ ಎಷ್ಟು ಹೆಚ್ಚಿದೆಯೋ ಕುಗ್ಗಿದೆಯೋ ಬ್ಯಾಂಕುಗಳವರೂ ಸರಕಾರದವರೂ ಜನಗಳಿಗೆ ಹಣ ಸಹಾಯವನ್ನು ಯಾವ ರೀತಿ ಯಾವ ವೇಗದಲ್ಲಿ ಒದಗಿಸುವರೋ ದೇಶದ ಉದ್ಯೋಗ, ವ್ಯಾಪಾರ ಯಾವ ಬಗೆಯವೋ ಜನದ ಆರ್ಥಿಕ ಅಭ್ಯಾಸಗಳು ಯಾವ ರೀತಿ ಇರುವುವೋ ಇವೆಲ್ಲಕ್ಕೂ ತಕ್ಕಂತೆ ದೇಶದಲ್ಲಿ ಹಣ ಸಂಚಾರವಾಗುವುದು.

ಹಣ ಮಾಡಬೇಕಾಗಿರುವ ಕೆಲಸವೆಷ್ಟು? ಹಣಕ್ಕೆ ಬೆಲೆಯೆಂದರೇನು? ಅದು ಏರುವುದು ಇಳಿಯುವುದು ಎಂದರೇನು? ಬ್ಯಾಂಕಿನವರೂ ಸರಕಾರದವರೂ ಹಣದ ಸಹಾಯವನ್ನು ಹೇಗೆ—ಏಕೆ—ಹೆಚ್ಚಿಸುವರು, ಕುಗ್ಗಿಸುವರು? ದೇಶದ ಉದ್ಯೋಗವ್ಯಾಪಾರಗಳಿಗೂ ಅದರಲ್ಲಿ ಸಂಚಾರ ಮಾಡಬೇಕಾದ ಹಣದ ಮೊತ್ತಕ್ಕೂ ಸಂಬಂಧವೇನು? ಜನರ ಆರ್ಥಿಕ ಅಭ್ಯಾಸಗಳಿಂದಲೂ ಇತರ ವಿಶೇಷ ಸನ್ನಿವೇಶಗಳಿಂದಲೂ ದೇಶದಲ್ಲಿ ಓಡಿಯಾಡುವ ಹಣದ ಮೊತ್ತ ಹೇಗೆ ನಿರ್ಧಾರವಾಗುವುದು? ಎಂಬುದನ್ನು ಮುಂದಿನ ಪ್ರಕರಣಗಳಲ್ಲಿ ತಿಳಿಸಲು ಪ್ರಯತ್ನ ಪಡುತ್ತದೆ.

## ಪ್ರಕರಣ ೩

### ಹಣದ ಬೆಲೆ— ಅದರ ಏರಿಳಿತಗಳ ಪರಿಣಾಮ

ಇತರ ವಸ್ತುಗಳ ಬೆಲೆಯನ್ನು ಅಳೆಯಲು ಯಾವುದಾದರೂ ಸಾಧಾರಣವಾದ ಉತ್ತಮ ಅಳತೆ ಇರಬೇಕೆಂದೇ **ಹಣ**ವನ್ನು ಬಳಕೆಗೆ ತಂದದ್ದು. ಅದರ ಬೆಲೆಯೇ ವ್ಯತ್ಯಾಸವಾದರೆ ಗತಿಯೇನು? ಗಜಗೋಲನ್ನು ಹತ್ತಿರವಿಟ್ಟುಕೊಂಡು ಬಟ್ಟೆಯನ್ನು ಸರಿಯಾಗಿ ಅಳೆಯಬಹುದೆಂದು ಇರುವಾಗ ಆ ಗಜಗೋಲು ನಮಗೆ ಗೊತ್ತಾಗದಂತೆ ಕೆಲವು ಸಲ ೪೦ ಅಂಗುಲಕ್ಕೆ ಹೆಚ್ಚಿದರೆ—ಅಥವಾ ಮೂವತ್ತು ಅಂಗುಲಕ್ಕೆ ಕುಗ್ಗಿದರೆ—ಅಳತೆ ಸರಿಹೋದೀತೆ? ಯಾವುದು ಸ್ಥಿಮಿತವಾಗಿ ಒಂದೇ ಸಮನಾಗಿರಬೇಕೋ ಅದೇ ಹೆಚ್ಚುಕಡಮೆಯಾದರೆ ಸರ್ವತ್ರ ನಷ್ಟವಾಗುವುದು.

ಹಣಕ್ಕೆ ಸರಕಾರದವರು ಗೊತ್ತುಮಾಡಿರುವ ಬೆಲೆ (Nominal Value) ಹೆಸರಿಗೆ ಮಾತ್ರ ಎಲ್ಲಾ ಕಾಲಗಳಲ್ಲಿಯೂ ಒಂದೇ ಆಗಿರಬಹುದು. ಎಂದರೆ, ಒಂದು ರೂಪಾಯಿಗೆ ಯಾವಾಗಲೂ ಹದಿನಾರೇ ಆಣೆ, ಪೌಂಡಿಗೆ ಇಪ್ಪತ್ತೇ ಷಿಲಿಂಗು ಹೆಸರಿಗೆ ಸಮ. ಆದರೆ ಅದರ ನಿಜವಾದ ಬೆಲೆ (Real Value) ವ್ಯತ್ಯಾಸವಾಗುತ್ತಿರುವುದು: ಹಿಂದೆ ಒಂದು ಪೌಂಡನ್ನು ಕೊಟ್ಟರೆ ಬರುತ್ತಿದ್ದ ಪದಾರ್ಥಕ್ಕೆ ಈಗ ಎರಡು ಕೊಡಬೇಕಾಗಿದ್ದರೆ ಹಣದ ಬೆಲೆ ಕಡಮೆಯಾಯಿತು. ಅಥವಾ ಈಗ ಅರ್ಧ ಪೌಂಡಿಗೇ ಅವೆಲ್ಲವೂ ಬರುವಹಾಗಿದ್ದರೆ ಹಣದ ಬೆಲೆ ಒಂದಕ್ಕೆ ಎರಡರಷ್ಟು ಹೆಚ್ಚಿದೆ ಎನ್ನಬಹುದು. ಮುಖ್ಯವಾಗಿ ಎಲ್ಲರೂ ಹಣವನ್ನು ಬಯಸುವುದು ಏತಕ್ಕೆ? ಕೊಳ್ಳಾಟ ಮಾರಾಟಗಳಿಗೆ ಸಾಧನವೊಂದು ಇರಲಿ ಎಂದು; ಎಲ್ಲ ವಸ್ತುಗಳ ಬೆಲೆಯನ್ನೂ ಅಳೆಯುವ ಸಾಧಾರಣ ಅಳತೆಯೊಂದು ಇರಬೇಕೆಂದು; ಎಲ್ಲ ಕಾಲಗಳಲ್ಲಿಯೂ ಒಂದೇ ವಿಧವಾದ ಬೆಲೆಯನ್ನು ಕೊಂಡು ತರುವ ಒಂದು ಸಾಮಗ್ರಿಯನ್ನು ಬಳಸಿ ಅದರ ಮೂಲಕವಾಗಿ ಎಲ್ಲ ಒಪ್ಪಂದಗಳನ್ನೂ ಲೆಕ್ಕಪತ್ರಗಳನ್ನೂ ಏರ್ಪಡಿಸಿಕೊಳ್ಳಲು ಸಹಾಯ ಪಡೆಯಬೇಕು ಎಂದು. ಹಣವನ್ನು ಹೂತಿಡುವ ಅಸಾಮಾಜಿಕರ ವಿಚಾರ

ಹೋಗಲಿ. ಉಳಿದವರೆಲ್ಲ ಮೇಲೆ ಹೇಳಿದ ಪ್ರಯೋಜನಗಳನ್ನು ಪಡೆದು ಕೊಳ್ಳಬೇಕೆಂದೇ ಹಣವನ್ನು ಬಯಸುವುದು. ಹಣವನ್ನು ತಿನ್ನಲಾಗದು; ಉಡಲಾಗದು; ಅದರಮೇಲೆ ಕುಳಿತು ಸಂಚಾರ ಮಾಡಲಾಗದು. ಆಹಾರ ಸಾಮಗ್ರಿ, ಬಟ್ಟೆಬರೆ, ರೈಲು ಹಡಗುಗಳ ಸಂಚಾರ ಇವುಗಳನ್ನೆಲ್ಲಾ ಹಣ ಒದಗಿಸುತ್ತದೆ. ಆದುದರಿಂದ ಅದು ಪದಾರ್ಥಗಳಿಗೂ ಜೀವನ ಸೌಕರ್ಯಗಳಿಗೂ ಪ್ರತಿನಿಧಿ ಮಾತ್ರವಾಯಿತು. ವಸ್ತು ಸೌಕರ್ಯಗಳಿಗೆ ಪ್ರತಿಯಾಗಿ ಅದನ್ನೇ ಬಳಸಲಾಗುವುದಿಲ್ಲ. ಈ ಸಂಗತಿಯನ್ನು ಎಷ್ಟು ನೆನಪಿನಲ್ಲಿಟ್ಟುಕೊಂಡರೂ ಸಾಲದು.

ಈಗಿನ ಕಾಲದಲ್ಲಿ ಅನೇಕರು ನಿಡುಗಾಲದ ಒಪ್ಪಂದಗಳ ಮೇಲೆ ಸಾಲ ತೆಗೆದುಕೊಳ್ಳುವರು; ಸಾಲವನ್ನು ಕೊಡುವರು; ಕೆಲಸ ಮಾಡುವರು. ಕೆಲಸದ ಮಾತು ನಡೆಯುವಾಗ ಹಣಕ್ಕೆ ಒಂದು ಬೆಲೆಯಿದ್ದು ಆಮೇಲೆ ವ್ಯತ್ಯಾಸವಾದರೆ, ಯಜಮಾನನಿಗೂ, ಕೆಲಸಮಾಡುವವನಿಗೂ ನಷ್ಟ: ಬೆಲೆ ಹೆಚ್ಚಿದರೆ ಯಜಮಾನನಿಗೆ ನಷ್ಟ; ಇಳಿದರೆ ಕೆಲಸ ಮಾಡುವವರಿಗೆ ನಷ್ಟ. ಕೆಲಸಮಾಡುವವರು ಮೊದಲಿಗಿಂತಲೂ ಹೆಚ್ಚು ಹೊತ್ತು ಕೆಲಸ ಮಾಡಿ ಹೆಚ್ಚು ಹಣವನ್ನು ಸಂಪಾದಿಸಿದ ಹೊರತು ಹಿಂದಿನಂತೆ ತಮಗೆ ಬೇಕಾದುದನ್ನೆಲ್ಲ ಕೊಳ್ಳಲಾಗುವುದಿಲ್ಲ. ಸಾಲಕೊಟ್ಟಿರುವವರಿಗೆ ಸಾಲ ಹಿಂತಿರುಗಿ ಬರುವುದೋ ಇಲ್ಲವೋ ಎಂಬ ಭಯ ಇದ್ದೇ ಇದ್ದರೂ ಆದಷ್ಟುಮಟ್ಟಿಗೆ ತಮಗೆ ಆಗುವ ನಷ್ಟದ ಸಂಭವವನ್ನು ಕಡಮೆಮಾಡಿ ಕೊಳ್ಳುವ ಅವಕಾಶವಿರುತ್ತದೆ. ಕೊಟ್ಟಿರುವ ಸಾಲಕ್ಕೆ ಆಧಾರವಾಗಿ ಕುಳದ ಜಾಮೀನನ್ನೂ, ಸ್ವತ್ತನ್ನೂ ಸಾಹುಕಾರರು ಬರೆಯಿಸಿಕೊಳ್ಳುವರು. ಸಾಲ ಹಿಂತಿರುಗುವುದು ಸುಲಭವಾಗುವಂತೆ ಸರಕಾರದವರು ವ್ಯವಸ್ಥೆ ಮಾಡಿರುವರು. ಆದರೆ ಸರಕಾರದವರಾಗಲಿ ಜನರಾಗಲಿ ಹಣದ ಬೆಲೆಯ ಏರಿಳಿತಗಳಿಂದ ಉಂಟಾಗುವ ಕಷ್ಟನಷ್ಟಗಳ ಕಡೆ ಹೆಚ್ಚು ಗಮನ ಹರಿಸುವುದಿಲ್ಲ. ಈಗ ಹಣದ ನಿಜವಾದ ಬೆಲೆ ಎಷ್ಟಿದೆ, ಸಾಲ ಹಿಂದಕ್ಕೆ ಬರುವಾಗ ಎಷ್ಟು ಆದೀತು ಎಂಬುದನ್ನು ಯೋಚಿಸುವುದೂ ಕಡಮೆ. ಹಿಂತಿರುಗಿ ಬರುವ ಮೊತ್ತ ಹೆಸರಿಗೆ, ಮೊತ್ತಕ್ಕೆ ಮೊತ್ತ ಸಮನಾಗಿದ್ದರೂ, ಪದಾರ್ಥಗಳನ್ನೂ ಸೇವೆ ಸೌಕರ್ಯಗಳನ್ನೂ ಕೊಳ್ಳುವ ಲೆಕ್ಕದಲ್ಲಿ

ಹೆಚ್ಚು ಕಡಮೆಯಾಗಬಹುದು. ಹಿಂದೆ ರೂಪಾಯಿಗೆ ೧೨ ಸೇರು ಅಕ್ಕಿ ಬರುತ್ತಿದ್ದು ಈಗ ಎಂಟೇ ಸೇರು ಬಂದರೆ ರೂಪಾಯಿನ ಬೆಲೆ ರೂ. ೦–೫–೪ ಯಷ್ಟು ಇಳಿದಂತೆಯೇ ಲೆಕ್ಕ. ಬಡ್ಡಿಯ ದರಗಳೂ ಹಾಗೆಯೆ: ಶೇಕಡ ೬ ಎಂದು ಹೆಸರಿಗೆ ಇದ್ದರೆ ವಸ್ತು ಸೌಕರ್ಯಗಳ ಅಳತೆಯ ಲೆಕ್ಕದಲ್ಲಿ ೪ಕ್ಕೆ ಇಳಿಯಬಹುದು; ೮ಕ್ಕೆ ಏರಬಹುದು. ಇಳಿದರೆ ಸಾಹುಕಾರನಿಗೆ ನಷ್ಟ; ಏರಿದರೆ ಸಾಲಗಾರನಿಗೆ ಕಷ್ಟ.

**ನಿಡುಗಾಲದ ಒಪ್ಪಂದ.**— ಈ ಕಾಲದಲ್ಲಿ ನಿಡುಗಾಲದ ಒಪ್ಪಂದಗಳೇ ಬಹಳ. ಸಂಬಳ ತಿಂಗಳಿಗೆ ಒಂದು ಸಲ ಬರುವುದು; ಕೆಲವರಿಗೆ ಮೂರು ತಿಂಗಳಿಗೊಂದಾವರ್ತಿ ಬರುವುದು ವಾಡಿಕೆ. ಬ್ಯಾಂಕುಗಳಲ್ಲಿ ಬಡ್ಡಿಯ ಹಣವನ್ನು ಆರು ತಿಂಗಳಿಗೊಮ್ಮೆ ಸಲ್ಲಿಸುವರು. ಲಾಭದ ಹಂಚಿಕೆಯಾಗುವುದು ವರ್ಷಕ್ಕೆ ಒಂದು ಬಾರಿ. ಇವಾದರೂ ಕಿರುಗಾಲಗಳೆನ್ನಬೇಕು. ಕಟ್ಟಡಗಳನ್ನು ಕಟ್ಟಿ ಯಂತ್ರಗಳನ್ನು ಸ್ಥಾಪಿಸಿ ಕೆಲಸವನ್ನು ಪೂರ್ತಿಮಾಡಲು ೨–೩ ವರ್ಷಗಳ ವಾಯಿದೆ ಇರಬಹುದು. ಭೋಗ್ಯ ಆಧಾರ ಪತ್ರಗಳಲ್ಲಿ ಅನೇಕ ವರ್ಷಗಳ ಗಡುವನ್ನು ಸೂಚಿಸುವರು. ಸರಕಾರದ ಸಾಲ ಪತ್ರಗಳಲ್ಲಿ ೧೦–೨೦ ವರ್ಷಗಳು ಕಳೆದಮೇಲೆಯೊ ಇನ್ನಾವಾಗಲೊ ಹಣವನ್ನು ಹಿಂದಕ್ಕೆ ಕೊಡುವುದು ಎಂಬ ಸಂಕೇತವಿರುವುದು. ವಿಮೆ ಕಂಪನಿಗಳವರು ೨೦–೩೦ ವರ್ಷಗಳ ಅವಧಿಯಲ್ಲಿ ಅಥವಾ ಜೀವಾವಧಿ ಕ್ರಮದಲ್ಲಿ ಕೆಲಸಮಾಡುವರು. ನೆಲದ ಗುತ್ತಿಗೆಯನ್ನು ೧೦೦ ವರ್ಷಗಳಿಗೆ ಬರೆಯಿಸಿಕೊಳ್ಳುವುದುಂಟು. ಹೀಗೇ ಎಷ್ಟೋ ಬಗೆಯ ಒಪ್ಪಂದಗಳು ದಿನಾ ನಡೆಯುತ್ತಿರುವುದರಿಂದ ಹಣದ ಬೆಲೆ ಕಾಲದಿಂದ ಕಾಲಕ್ಕೆ ಸುಮಾರು ಸಮನಾಗಿರಬೇಕಾದುದು ಅಗತ್ಯ.

**ಹಣದ ಬೆಲೆಯ ಅಳತೆ.**— ಇತರ ಪದಾರ್ಥಗಳ ಬೆಲೆಯನ್ನು ಹಣ ಅಳೆಯುವಂತೆ ಇತರ ಪದಾರ್ಥಗಳು ಹಣದ ಬೆಲೆಯನ್ನು ನಿರ್ಧರಿಸುವುವು ಎಂದು ಮೇಲೆ ಸೂಚಿಸಿತು. ಹಣ ಗೊತ್ತಾದ ಒಂದು ವಸ್ತುವಾದ್ದರಿಂದ ಇತರ ವಸ್ತುಗಳನ್ನು ಅಳೆಯುವುದೂ, ಆ ಮೂಲಕ ಅವಕ್ಕೆ ಬೆಲೆ ಕಟ್ಟುವುದೂ ಸುಲಭ. ಹಣದ ಬೆಲೆಯನ್ನು ಅಳೆಯಬೇಕಾದರೆ ಅದರ ಮೂಲಕ ಕೊಂಡು ಮಾರುವ ಎಲ್ಲ ವಸ್ತುಗಳ ಬೆಲೆಯನ್ನೂ ಎಣಿಸ

ಬೇಕಾಗುವುದು. ಇದು ಕಷ್ಟ; ಈವರೆಗೂ ಅಸಾಧ್ಯವಾಗಿಯೇ ಕಂಡು ಬಂದಿದೆ. ಕೆಲವು ಪದಾರ್ಥಗಳ ಬೆಲೆ ಏರಿರುತ್ತದೆ; ಕೆಲವು ಬೆಲೆ ಇಳಿದಿರುತ್ತವೆ. ಕೆಲವು ಪದಾರ್ಥಗಳನ್ನು ಒಂದು ಮಟ್ಟದ ಜನ ಮಾತ್ರ ಉಪಯೋಗಿಸುವರು; ಕೆಲವನ್ನು ಎಲ್ಲರೂ ಉಪಯೋಗಿಸುವರು. ಕೆಲವು ಪದಾರ್ಥಗಳ ಬಳಕೆ ಹೆಚ್ಚು ಪರಿಮಾಣದಲ್ಲಿ ಆಗುವುದು; ಕೆಲವು ಕಡಮೆ. ಪ್ರಾಣಧಾರಣೆಗೆ ಅತ್ಯಗತ್ಯವಾದ ಪದಾರ್ಥಗಳು, ಪುಷ್ಟಿ ಸೌಕರ್ಯಗಳನ್ನು ಕಲ್ಪಿಸತಕ್ಕಂತಹವು, ಕೇವಲ ಭೋಗಸಾಮಗ್ರಿಗಳು ಎಂದೇ ಎಲ್ಲ ಪದಾರ್ಥಗಳನ್ನೂ ನಾವು ವಿಂಗಡಿಸಿದರೂ ಜನರ ಬದುಕಿನ ರೀತಿ, ಮನೆಯ ರೂಢಿ ಮುಂತಾದುವಕ್ಕೆ ತಕ್ಕಂತೆ, ಒಬ್ಬರಿಗೆ ಆವಶ್ಯಕವಾಗಿ ಕಂಡುಬಂದ ವಸ್ತು ಇನ್ನೊಬ್ಬರಿಗೆ ಭೋಗವಸ್ತುವಾಗಿ ಕಾಣಬಹುದು. ಕಡೆಗೆ ಆಹಾರ ಪದಾರ್ಥಗಳಲ್ಲಿಯೇ ಅಕ್ಕಿಯಷ್ಟು ಬೇಳೆಯನ್ನೂ ತುಪ್ಪವನ್ನೂ ಉಪ್ಪನ್ನೂ ಕೊಳ್ಳುವುದಿಲ್ಲ. ಬಟ್ಟೆಯಷ್ಟು ಕುರ್ಚಿ ಮೇಜುಗಳನ್ನೂ ಪಟಗಳನ್ನೂ ಕೊಳ್ಳುವುದಿಲ್ಲ. ಜನರಲ್ಲಿ ಅಂತಸ್ತುಗಳು ಬೇರೆ ಇವೆ: ಆಸ್ತಿವಂತರು, ದುಡ್ಡಿಲ್ಲದ ಬಡವರು, ನಡು ತರಗತಿಯವರು, ಸುಖ ಸೌಕರ್ಯಕ್ಕೆ ಹೆಚ್ಚಾಗಿ ವೆಚ್ಚಮಾಡುವವರು, ಮಾಡದಂಥವರು— ಎಂದು ಇವರಲ್ಲಿಯೂ ಎಷ್ಟೋ ಮಟ್ಟಗಳಿರುತ್ತವೆ. ಇವರೆಲ್ಲರೂ ಬಳಸುವ ಎಲ್ಲ ವಸ್ತುಗಳನ್ನೂ ಅವುಗಳ ಬೆಲೆಯನ್ನೂ ಅವುಗಳ ಸ್ಥಾನಕ್ಕೆ ತಕ್ಕಂತೆ ಅಳೆದ ಹೊರತು ಹಣದ ಬೆಲೆಯನ್ನು ಸರಿಯಾಗಿ ಅಳೆದ ಹಾಗಾಗುವುದಿಲ್ಲ. ಈ ಎಲ್ಲ ಬೆಲೆಗಳನ್ನೂ ಕೂಡಿಸಿ ಹೆಚ್ಚು ಕಡಮೆಗಳನ್ನು ಗುರುತುಹಾಕಿಕೊಂಡು ಸ್ಥೂಲವಾಗಿ ಹಣದ ಬೆಲೆ ಸರಾಸರಿ ಇಷ್ಟು ಎಂದು ಗೊತ್ತುಮಾಡಬೇಕಾಗುತ್ತದೆ. ಎಲ್ಲ ಅಂತಸ್ತಿನ ಜನರ ಜೀವನಕ್ಕೆ ಬೇಕಾಗುವ ಪದಾರ್ಥಗಳ ಸ್ಥಾನವನ್ನು ನಿರ್ಧರಿಸಿ ಒಂದು ಕ್ರಮಕ್ಕೆ ತಂದು ಕೊಂಡು, ಒಟ್ಟು ಸಮಾಜದಲ್ಲಿ ಅವರು ಎಷ್ಟು ಭಾಗವೋ ಆ ಲೆಕ್ಕವನ್ನೂ ಗಮನದಲ್ಲಿಟ್ಟುಕೊಂಡು ಇದನ್ನು ಗುಣಿಸಬೇಕಾಗುತ್ತದೆ; ಪದಾರ್ಥಗಳ ಜೊತೆಗೆ ಜೀವನ ಸೌಕರ್ಯಕ್ಕೆ ನೆರವಾಗುವ ಸೇವೆ ಸಹಾಯಗಳ ಬೆಲೆಯನ್ನೂ ಕೂಡಿಸಬೇಕಾಗುತ್ತದೆ. ಈ ಪ್ರಕರಣದ ಕೊನೆಯಲ್ಲಿ ಅಳತೆದ ಒಂದು ವಿಧಾನವನ್ನು ವರ್ಣಿಸಿದೆ.

ಇದು ಹಣದ ಸಾಧಾರಣ ಬೆಲೆಯು (General Purchasing Power) ಮಾತಾಯಿತು. ವಸ್ತುಗಳನ್ನು ತಯಾರುಮಾಡುವವರಿಗೇ ಹಣದ ಬೆಲೆ ಒಂದು ರೀತಿ ಕಾಣುತ್ತದೆ; ವ್ಯಾಪಾರಗಾರರಿಗೆ ಒಂದು ಬಗೆಯಾಗಿ ಕಾಣುತ್ತದೆ; ಸರಕಾರದವರಿಗೂ ಕೊಂಡು ತಿನ್ನುವವರಿಗೂ ಒಂದೊಂದು ಬಗೆಯಾಗಿ ತೋರುತ್ತದೆ. ಉತ್ಪತ್ತಿಯ ದೃಷ್ಟಿಯಿಂದಲೊ, ವ್ಯಾಪಾರದ ದೃಷ್ಟಿಯಿಂದಲೊ, ಬದುಕಿನ ವೆಚ್ಚದ ದೃಷ್ಟಿಯಿಂದಲೊ ಹಣದ ಬೆಲೆಯನ್ನು ಗೊತ್ತುಮಾಡುವುದುಂಟು. ಇಂಥವರಲ್ಲಿ ಒಬ್ಬರಿಗೆ ಅನುಕೂಲವಾದ ಬೆಲೆ ಮತ್ತೊಬ್ಬರಿಗೆ ಪ್ರತಿಕೂಲವಾಗುವುದುಂಟು. ಪ್ರತಿಯೊಬ್ಬರೂ ತಮ್ಮ ಅನುಕೂಲವನ್ನೇ ನೋಡಿಕೊಳ್ಳುವರಾದುದರಿಂದ, ಹಣದ ಬೆಲೆ ಹೆಚ್ಚಿದರೆ ಒಂದು ಪಂಗಡದವರು ಗೊಣಗಿ ಗೋಳಿಡುವರು; ಬೆಲೆ ಇಳಿದರೆ ಇನ್ನೊಂದು ವರ್ಗದವರು ಕೂಗಿ ಶಪಿಸುವರು; ಬೆಲೆಯ ಏರಿಳಿತಗಳಿಂದ ನಷ್ಟ ಸಂಭವಿಸುವುದೇ ಈ ಗೊಣಗಾಟಕ್ಕೆ ಕಾರಣ.

**ಬೆಲೆಯ ಏರಿಳಿತದ ಫಲ.**— ಹಣದ ಬೆಲೆಯಲ್ಲಿ ವ್ಯತ್ಯಾಸವಾದರೆ ಯಾರು ಯಾರಿಗೆ ಹೇಗೆ ಲಾಭ ನಷ್ಟಗಳೆಂಬುದನ್ನು ಇನ್ನು ಸ್ವಲ್ಪ ವಿಸ್ತಾರವಾಗಿ ಸೂಚಿಸಬಹುದು: ಈ ವ್ಯತ್ಯಾಸ ಸಮಾಜದಲ್ಲಿ ಎಲ್ಲರಿಗೂ ಒಂದೇ ಸಮನಾಗಿ ಆಗುವುದಿಲ್ಲ. ಯಾರೊಬ್ಬರಿಗೇ ಆಗಲಿ ಅವರ ಜೀವನ ವ್ಯಾಪಾರ ರಂಗಗಳಲ್ಲೆಲ್ಲ ಒಂದೇ ರೀತಿ ಹೆಚ್ಚು ಕಡಮೆಯಾಗುವುದಿಲ್ಲ. ಅವರ ಆಯ ವ್ಯಯ ವ್ಯತ್ಯಾಸವಾಗುವಾಗಲೂ ಒಂದೇ ಪ್ರಮಾಣದಲ್ಲಿ ವ್ಯತ್ಯಾಸವಾಗುವುದಿಲ್ಲ. ಧಾರಣೆವಾಸಿ ವ್ಯತ್ಯಾಸವಾದರೆ ಕೂಲಿ, ಸಂಬಳ, ಬಡ್ಡಿಯ ದರ, ವ್ಯಾಪಾರ, ಲಾಭ ಮುಂತಾದುವುಗಳಿಂದ ಬದುಕುವ ಬೇರೆ ಬೇರೆ ಬಗೆಯ ಜನರಿಗೆ ಬೇರೆ ಬೇರೆ ಅನುಕೂಲ ಪ್ರತಿಕೂಲ ಉಂಟಾಗುತ್ತವೆ. ಈ ವ್ಯತ್ಯಾಸ ಬಹಳವಾದರೆ, ಒಂದೇ ದೇಶದಲ್ಲಿ ಒಂದು ವರ್ಗದವರಲ್ಲಿರುತ್ತಿದ್ದ ಹಣ ಇನ್ನೊಬ್ಬರ ಕೈಗೆ ಹೋಗುತ್ತದೆ: ಒಂದು ಕಡೆ ಸುಭಿಕ್ಷ, ಇನ್ನೊಂದು ಕಡೆ ಕಷ್ಟ ಉಂಟಾಗುತ್ತವೆ. ಜನರ ಎಣಿಕೆಯೂ ನೆಚ್ಚಿಕೆಯೂ ಮುರಿದು ಬಿದ್ದು ಕೆಲಸದ ಸ್ಥಿತಿಗತಿ ಕೆಡುತ್ತವೆ. ಅನೇಕರಿಗೆ ಆಶಾಭಂಗವಾಗುತ್ತದೆ. ಇದರಿಂದ ಕೈಗಾರಿಕೆ ವ್ಯಾಪಾರಗಳಲ್ಲಿ ತೊಡಗಿದ್ದ ಅನೇಕರಿಗೆ ಉತ್ಸಾಹ ಕಡಮೆಯಾಗಿ ಸಂಪದಭಿವೃದ್ಧಿ ಕಾರ್ಯಗಳು ಅವ್ಯವಸ್ಥವಾಗುತ್ತವೆ.

ಜನರನ್ನು ಸ್ಥೂಲವಾಗಿ ಮೂರು ವಿಧವಾಗಿ ವಿಂಗಡಿಸಬಹುದು: ಒಂದು ಬಗೆಯವರು ಸ್ವಂತವಾಗಿ ಸಂಪದಭಿವೃದ್ಧಿ ಕಾರ್ಯಗಳಿಗೆ ಕೈಹಾಕುವುದಿಲ್ಲ: ತಮ್ಮಲ್ಲಿರುವ ಹಣವನ್ನೂ, ಜಮೀನನ್ನೂ, ಆಸ್ತಿಪಾಸ್ತಿಯನ್ನೂ ಇತರರ ಉಪಯೋಗಕ್ಕಾಗಿ ಬರೆದುಕೊಟ್ಟು ತಾವು ನಿಯತವಾದ ವರ್ಷಾಶನ ಬರುವಂತೆ ಏರ್ಪಾಡುಮಾಡಿಕೊಳ್ಳುವರು; ಅಥವಾ ಯಾವುದಾದರೂ ಸಂಘಸಂಸ್ಥೆಗಳ ಆಸ್ತಿಪತ್ರಗಳನ್ನೂ, ಸಾಲದ ಪತ್ರಗಳನ್ನೂ (Debenture) ಕೊಂಡುಕೊಂಡು ಮೂರು ತಿಂಗಳಿಗೊಂದಾವರ್ತಿ ಅಥವಾ ವರ್ಷಕ್ಕೆ ಒಂದಾವರ್ತಿ ಗೊತ್ತಾದ ಒಂದು ಪ್ರಮಾಣದಲ್ಲಿ ಹೇಗಾದರೂ ಆದಾಯ ಬರುವಂತೆ ವಸತಿ ಕಲ್ಪಿಸಿಕೊಂಡಿರುವರು. ಎಲ್ಲಿಯೇ ಇರಲಿ ಹೇಗೆಯೇ ಇರಲಿ ಗೊತ್ತಾದ ಕಾಲಕ್ಕೆ, ತಾವು ಹಾಕಿರುವ ಸಾಲದ ಮೇಲೆ ಬಡ್ಡಿಯ ಹಣವೂ, ಡಿವಿಡೆಂಡುಗಳೂ (ಲಾಭ ಭಾಗ), ಇತರ ವಿಧವಾಗಿ ಸಂದಾಯವಾಗಬೇಕಾದ ಹಣಗಳೂ ಈ ಬಂಡವಾಳಸ್ಥರ ಕೈಸೇರುವುವು. ಇನ್ನೊಂದು ಬಗೆಯ ಜನರು ತಮ್ಮ ಹಣವನ್ನೇ ಹೂಡಿಯೊ, ಇತರರಿಂದ ಎರವಲಾಗಿ ತೆಗೆದುಕೊಂಡು ಬಂದೊ, ಹಣ ಒದಗಿಸಿಕೊಂಡು ವ್ಯಾಪಾರ ಕಾರ್ಯಗಳಲ್ಲಿಯೂ ಉದ್ಯೋಗ ಕೈಗಾರಿಕೆಗಳಲ್ಲಿಯೂ ತೊಡಗಿ ಕಾರ್ಖಾನೆ ಮುಂತಾದುವನ್ನು ನಡಸುವರು. ಇವರದೇ ಕಾರ್ಯ ಸಾಹಸ; ಇವರ ಕಾರ್ಯ ದಕ್ಷತೆಯ ಫಲವಾಗಿಯೇ ದೇಶದಲ್ಲಿ ಉದ್ಯೋಗ; ಸಂಪತ್ತು; ಸುಭಿಕ್ಷ; ಲಾಭ. ಮೂರನೆಯ ಬಗೆಯವರೆಂದರೆ ಕೆಲಸಗಾರರು; ಗೊತ್ತಾದ ಕೂಲಿ ಸಂಬಳಗಳಿಗೆ ಪ್ರತಿದಿನವೂ—ಒಪ್ಪಂದದಂತೆ—ದುಡಿಯುವವರು. ಏನೂ ಕುಶಲತೆಯಿಲ್ಲದ ಸಾಮಾನ್ಯ ಜೆಂಗೂಲಿ ಕಾಮಗಾರನಿಂದ ಹಿಡಿದು ಕುಶಲತೆಯನ್ನು ಪ್ರಯೋಗಿಸಿ ತಿಂಗಳಿಗೆ ಸಾವಿರಾರು ರೂಪಾಯಿ ಸಂಬಳ ತೆಗೆದುಕೊಳ್ಳುವವರವರೆಗೂ ಈ ವರ್ಗ ಹರಡಿದೆ. ಈ ಮೂರು ವರ್ಗಗಳೂ ಎಂದೆಂದಿಗೂ ಬೇರೆ ಎಂದಲ್ಲ. ಕೆಲವರು ಮೂರು ಬಗೆಯ ಕೆಲಸಗಳನ್ನೂ ಮಾಡುವರು; ಕೆಲವರು ಎರಡು ಬಗೆಯವನ್ನು ಮಾಡುವರು; ಸಂಪಾದಿಸುವವರು ಎಲ್ಲ ಬಗೆಯಲ್ಲಿಯೂ ಸಂಪಾದಿಸುವರು. ಆದರೆ ಅವರು ಮಾಡುತ್ತಿರುವ ಈ ಕೆಲಸಗಳ ಸ್ವರೂಪ ಮಾತ್ರ ಬೇರೆಬೇರೆ. ಕೆಲಸದ ಪ್ರಯೋಜನ ಈ ಒಬ್ಬೊಬ್ಬರಿಗೂ

ಒಂದೊಂದು ಬಗೆಯಾಗಿಯೂ ಒಬ್ಬರಿಗೇ ಹಲವು ಬಗೆಯಾಗಿಯೂ ಇರುತ್ತದೆ. ಇವರಿಗೆ ಅನುಕೂಲವಾದುದು ಅವರಿಗೆ ಇಲ್ಲವಾಗಿರಬಹುದು; ಇವರಿಬ್ಬರಿಗೂ ಅನುಕೂಲವಾದುದು ಮೂರನೆಯವರಿಗೆ ಪ್ರತಿಕೂಲ ವಾಗಿರುವ ಸಂಭವವುಂಟು.

**ಬಂಡವಾಳಸ್ಥರು — ಬೆಲೆ ಏರಿದಾಗ.** — ಮೊದಲನೆಯ ಬಗೆಯವರೆಲ್ಲ ಬಂಡವಾಳಸ್ಥರು: ದೇಶದ ಭೂಮಿಕಾಣಿ, ಉದ್ಯೋಗ, ಕಾರ್ಯಾಲಯ ಎಲ್ಲವೂ ಅವರು ಒದಗಿಸುವ ಬಂಡವಾಳದಿಂದ ನಡೆಯುವುವು. ಹಲವು ವೇಳೆ ಅವೆಲ್ಲ ಇವರಿಗೆ ಈಡಾಗಿರುವುವು. ಸರಕಾರಗಳವರೇ ಇಂತಹವರಿಗೆ ಸಾಲಗಾರರಾಗಿರುವುದುಂಟು. ದೊಡ್ಡ ದೊಡ್ಡ ಕಂಪನಿಗಳು ಇವರ ಕೃಪೆಗೆ ಕಾದು ಬದ್ಧರಾಗಿರುವ ಸ್ಥಿತಿಯಲ್ಲಿರುವುದುಂಟು. ಯಾವುದಾದರೂ ಕಾರಣದಿಂದ (ಉದಾ.—ಸರಕಾರದವರು ಹೆಚ್ಚು ನಾಣ್ಯವನ್ನು ಅಚ್ಚುಹಾಕುವುದು, ಅಥವಾ, ಬೆಳೆ ಕೆಟ್ಟು ಪೇಟೆಯಲ್ಲಿ ಸಾಮಾನು ಕಡಮೆಯಾಗುವುದು) ಧಾರಣೆವಾಸಿ ಏರಿ ಹಣದ ಬೆಲೆ ಇಳಿದರೆ, ಸಾಲವನ್ನು ತೆಗೆದುಕೊಂಡಿರು ವವರಿಗೆ ಲಾಭ ಬರುವುದು. ಸಾಲಗಾರರಿಗೆ ಸುಲಭವಾಗಿ ಋಣ ಮುಕ್ತಿ ಯಾಗಲು ಅವಕಾಶವಾಗುವುದು. ಹಿಂದೆ ಶ್ರೀಮಂತರಾಗಿ ಕುಳಿತು ತಿನ್ನುತ್ತಿದ್ದ ಬಂಡವಾಳಸ್ಥರೂ ಅವರ ಮಕ್ಕಳೂ ತಮ್ಮ ಹಣದ ಪ್ರಯೋಜನ ವನ್ನು ಮೊದಲಿನಷ್ಟು ಪಡೆಯದಂತೆ ಆಗುವುದು. ಯಾವುದು ಉಳಿಯಲಿ ಯಾವುದು ಅಳಿಯಲಿ ನಮ್ಮ ಬಡ್ಡಿ, ನಮ್ಮ ವರಮಾನ ನಮ್ಮ ಕೈಗೆ ಬರುವುದು ಎಂದು ಅವರು ಯಾವುದನ್ನು ನಂಬಿಕೊಂಡಿದ್ದರೋ ಆ ಎಲ್ಲ ಹಣವೂ ಕೈಗೆ ಬಂದರೂ ಅದರ ಪ್ರಯೋಜನವೂ ಬೆಲೆಯೂ ಹಿಂದಿಗಿಂತ ಕಡಮೆಯಾಗಿರುವುದರಿಂದ ಬರುವ ವರಮಾನ ಸಾಕಾಗದೆ ಅವರು ಬಂಡವಾಳವನ್ನೇ ಮುರಿದು ತಿನ್ನಬೇಕಾಗುತ್ತದೆ. ಇಂಥವರಿಗೆ ಅನ್ಯಾಯ ವಾದರೆ ಆಗಲಿ ಎಂಬ ವಾದವನ್ನು ಇಲ್ಲಿ ವಿಮರ್ಶಿಸುವುದಿಲ್ಲ.

**ಉತ್ಪತ್ತಿ ಸಾಹಸಿಗಳು.** — ಉತ್ಪತ್ತಿ ಕಾರ್ಯಗಳಲ್ಲಿ ತೊಡಗಿರುವವರಿಗೆ ಧಾರಣೆವಾಸಿಗಳ ಏರಾಟದಿಂದ ಆದಾಯ ಹೆಚ್ಚಾಗುತ್ತದೆ. ತಯಾರಿಸಿದ ಪದಾರ್ಥಗಳಿಗೆ ಮೊದಲಿಗಿಂತಲೂ ಹೆಚ್ಚು ಕ್ರಯ ದೊರಕುತ್ತದೆ. ಅವರ ಉತ್ಪತ್ತಿ ಕಾರ್ಯ ವಿಸ್ತಾರವಾಗಲು ಉತ್ತೇಜನ ದೊರೆಯುತ್ತದೆ. ಅವರು

ತೆಗೆದುಕೊಂಡಿರಬಹುದಾದ ಸಾಲಕ್ಕೆ ಹಿಂದಿನ ದರದಂತೆಯೇ ಹಣದ ಮೂಲಕ ಬಡ್ಡಿ ತೆರಬೇಕಾಗಿರುವುದರಿಂದಲೂ, ಹಣದ ಲೆಕ್ಕದಲ್ಲಿ ಕೂಲಿ ಸಂಬಳ ತೆರಬೇಕಾಗಿರುವುದರಿಂದಲೂ ವಸ್ತುಗಳ ಲೆಕ್ಕದಲ್ಲಿ ಅವರ ತೆರಾಣಿ ಕಡಮೆಯಾಗುವುದು. ಹೀಗೂ ಲಾಭ. ಈ ಇಬ್ಬಗೆಯ ಲಾಭ ಹೆಚ್ಚು ಕಾಲ ನಡೆದರೆ ಇಂತಹ ಜನರು ಸಾಹುಕಾರರಿಂದ ತಂದಿರುವ ಬಂಡವಾಳವನ್ನೆಲ್ಲಾ ಅವರಿಗೆ ಹಿಂತಿರುಗಿ ಕೊಟ್ಟು ಕೆಲಸಗಳನ್ನು ಕೇವಲ ಸ್ವಂತವಾಗಿಯೇ ಮಾಡಿಕೊಳ್ಳುವ ಅವಕಾಶ ಉಂಟಾಗುವುದು. ಅವರ ಕೆಲಸದ ಲಾಭ ದಿನೇ ದಿನೇ ಹೆಚ್ಚುತ್ತಿರುವುದನ್ನು ನೋಡಿ ಆ ಕಂಪನಿಗಳ ಷೇರುಗಳಿಗೆ ಹೆಚ್ಚು ಬೆಲೆ ಕೊಡಲು ಜನರು ಸಿದ್ಧರಾಗುವರು. ಸಂಪಾದನೆಯ ರುಚಿ ನಾಲಗೆಗೆ ಇಳಿದು ಜನರು ಎಲ್ಲೆಲ್ಲಿಯೂ ತಮ್ಮ ಅದೃಷ್ಟ ಪರೀಕ್ಷೆ ಮಾಡಿಕೊಳ್ಳೋಣವೆಂದು ಹೊಸ ಸಾಹಸಗಳಿಗೂ ಉದ್ಯಮಗಳಿಗೂ ಕೈಹಾಕುವರು. ಧಾರಣೆ ಹೀಗೇ ಇದ್ದೀತು ಇನ್ನೂ ಏರೀತು ಎಂಬ ಭರವಸೆ ಊರುವ ಸಂಭವ ಹೆಚ್ಚು. ಆದುದರಿಂದ ಅನೇಕರು ನಾನು ತಾನೆಂದು ಮೇಲೆ ಬಿದ್ದು ಬಂದು ಉತ್ಪತ್ತಿಸಂಘಗಳ ಷೇರುಗಳನ್ನೂ ಸ್ಟಾಕುಗಳನ್ನೂ ಕೊಂಡುಕೊಳ್ಳುವರು. ಸಾಲ ತೆಗೆದುಕೊಳ್ಳುವವರ ಆಸೆಯೂ ಚಪಲವೂ ಹೆಚ್ಚುವುವು. ಹಣಕ್ಕೆ ಎಷ್ಟು ಹೆಚ್ಚು ಬಡ್ಡಿ ಕೇಳಿದರೂ ತೆತ್ತು ಸಾಲವನ್ನು ತೆಗೆದುಕೊಳ್ಳುವರು. ಸಾಮಾನ್ಯವಾಗಿ ಬಡ್ಡಿಯ ದರ ಎಷ್ಟೇ ಹೆಚ್ಚಿದರೂ ಧಾರಣೆವಾಸಿ ಏರುವಷ್ಟು ಹೆಚ್ಚಾಗಿ ಏರುವುದಿಲ್ಲವಾದುದರಿಂದ ಹೆಚ್ಚು ಬಡ್ಡಿ ಅತಿ ಪ್ರತಿಕೂಲವಾಗುವುದಿಲ್ಲವೆಂದು ಅವರ ನಂಬಿಕೆ. ಶೇಕಡ ೧೦ರಂತೆ ಬಡ್ಡಿ ತೆರಬೇಕಾಗಿದ್ದ ಕಡೆ ಈಗ ೧೫ ಕೊಟ್ಟಾರು, ಧಾರಣೆವಾಸಿ ೧೦೦ ಇದ್ದದ್ದು ೨೦೦ಕ್ಕೆ ಏರಿದ್ದರೆ ಅವರು ನಿಜವಾಗಿ ಹಿಂದಿಗಿಂತಲೂ (ಪದಾರ್ಥಗಳ ಬೆಲೆಯ ಲೆಕ್ಕದಲ್ಲಿ) ಶೇಕಡ ೧೦ಕ್ಕಿಂತಲೂ ಕಡಮೆಯನ್ನೇ (೭ನ್ನೇ) ಕೊಟ್ಟಹಾಗಾಗುವುದೆಂದು ಗುಣಾಕಾರ ಹಾಕುವರು. ಇನ್ನೂ ಸೂಕ್ಷ್ಮವಾಗಿ ಇದನ್ನು ನೋಡಿದರೆ ಎರವಲಾಗಿ ತೆಗೆದುಕೊಂಡಿರುವ ಬಂಡವಾಳದ ಭಾರ ಕಡಮೆಯಾಗುವುದು; ಈ ಸಮಯದಲ್ಲಿ ಬಂಡವಾಳವನ್ನು ಹಿಂತಿರುಗಿ ಕೊಟ್ಟರೆ ಸಾಹುಕಾರರಿಗೆ ಬಹಳ ಕಡಮೆಯ ನಿಜವಾದ ಮೌಲ್ಯವನ್ನು ಸಲ್ಲಿಸಿದ

ಹಾಗಾಗುತ್ತದೆ. ಒಪ್ಪಂದದಲ್ಲಿರುವಷ್ಟು ಹಣ ಸಾಹುಕಾರರ ಕೈಗೆ ಹೆಸರಿಗೆ ಹಿಂತಿರುಗಿ ಬಂದರೂ ಹಣದ ಬೆಲೆಯ ದೃಷ್ಟಿಯಿಂದ ನೋಡಿದಲ್ಲಿ, ಸಾಹುಕಾರರಿಗೆ ತಾವು ಕೊಟ್ಟಿದ್ದ ಅಸಲು ಕೂಡ ಹಿಂತಿರುಗುವುದಿಲ್ಲ.

**ಇಳಿಯುವಾಗ ; — ಸಮಾಜ — ಉತ್ಪತ್ತಿ ಕಾರ್ಯ.** — ಹಣದ ಬೆಲೆ ಇಳಿದು ವ್ಯಾಪಾರಸ್ಥನ ಲಾಭ ದಿನೇ ದಿನೇ ಹೆಚ್ಚಿದರೆ ಒಂದು ಅನಿಷ್ಟವುಂಟು. ಧಾರಣೆಯಾಗಿ ಏರುವುದನ್ನು ಸಹಿಸಿ ಕಷ್ಟಪಡುವುದರ ಜೊತೆಗೆ ವಸ್ತುಗಳನ್ನು ಕೊಂಡು ತಿನ್ನಬೇಕಾಗಿರುವ ಜನರಿಗೆ ಇವರ ಲಾಭದ ಮೇಲೆ ಕಣ್ಣುಬಿದ್ದು ಇವರ ವಿಷಯದಲ್ಲಿ ಕ್ರೋಧವೂ ಅಸೂಯೆಯೂ ಉಂಟಾಗುವುವು. ತಮ್ಮ ಕಷ್ಟದಿಂದ ಅವರು ಲಾಭ ಪಡೆಯುತ್ತಿದ್ದಾರೆಂದು ಆಕ್ರೋಶ ಬರುವುದು. ಬಂದಷ್ಟು ಜಾಗ್ರತೆಯಾಗಿ ಹೆಚ್ಚು ಲಾಭ ಬರಲೆಂದು ಅವರೂ ಏರಿದ ಧಾರಣೆಗಳ ಅವಕಾಶವನ್ನು ಉಪಯೋಗಿಸಿ ಕೊಳ್ಳುವರು. ಸಾಧ್ಯವಾದರೆ ಬರುವುದನ್ನೆಲ್ಲಾ ಒಂದೇ ಸಲ ಬಾಚಿ ಕೊಂಡು ಬೇಗನೆ ಕೆಲಸದಿಂದ ನಿವೃತ್ತರಾಗಲು ಪ್ರಯತ್ನಿಸುವರು. ಅವರನ್ನು ಹೀರಬೇಕೆಂಬ ಬುದ್ಧಿ ಜನರಿಗೂ ಸರಕಾರಕ್ಕೂ ಉಂಟಾಗುವುದು. ಹಣದ ಬೆಲೆ ಹೆಚ್ಚಿ ಧಾರಣೆ ಇಳಿಯುತ್ತಿರುವಾಗ ಬಡ್ಡಿಯ ದರ ಶೇಕಡ ಒಂದರಂತಿದ್ದರೂ ಅದರ ಭಾರ ಹೆಚ್ಚಾಗುವುದು. ಆ ಒಂದಕ್ಕೇ ಹೆಚ್ಚು ವಸ್ತುಗಳನ್ನು ಕೊಡಬೇಕಾಗುವುದರಿಂದ ದೊಡ್ಡ ಹೊರೆಯಾಗುವುದು. ಲಾಭ ಕಡಿಮೆಯಾಗುವುದರಿಂದ ಸಾಲ ತೆಗೆಯಲು ಉತ್ತೇಜನ ಬರದು. ಎಷ್ಟೇ ಕಾರ್ಯಕುಶಲರಾಗಿರಲಿ, ಎಷ್ಟೇ ಒಪ್ಪವಾಗಿ ಅಗ್ಗವಾಗಿ ಪದಾರ್ಥಗಳನ್ನು ತಯಾರಿಸಲಿ, ಪದಾರ್ಥಕ್ಕೆ ಪೇಟೆಯಲ್ಲಿ ಒಳ್ಳೆಯ ಬೆಲೆ ಬಾರದ್ದರಿಂದ ಹಣದ ವರಮಾನ ಸ್ವಲ್ಪವಾಗುವುದು. ಅವರು ತೆರಬೇಕಾದ್ದೆಲ್ಲವನ್ನೂ (ಉದಾ.—ಬಂಡವಾಳ, ಡಿಬೆಂಚರ್ ಮುಂತಾದ ಸಾಲಗಳಿಗೆ ಬಡ್ಡಿ, ಒಪ್ಪಂದದ ಮೇರೆಗೆ ಕೆಲಸ ಮಾಡುವ ಸಿಬ್ಬಂದಿಯ ಸಂಬಳ ಸಾರಿಗೆ) ಹಿಂದಿನಂತೆಯೇ ಹಣದ ಲೆಕ್ಕದಲ್ಲಿ ತೆರಬೇಕಾಗಿರುವುದರಿಂದ ಕಷ್ಟ ಹೆಚ್ಚು. ಹೀಗಾಗಿ ಅನೇಕ ಉದ್ಯೋಗ ಕೈಗಾರಿಕೆಗಳು ನಿಲ್ಲುವುವು; ಬಹಳ ಕಾಲದಿಂದ ಕೆಲಸ ಮಾಡುವ ಕಾರ್ಯಾಲಯಗಳಲ್ಲಿಯೂ ಕೆಲಸ ಮುಟ್ಟಸವಾಗುವುದು. ಅನೇಕರಿಗೆ ಉದ್ಯೋಗದಿಂದ ನಿವೃತ್ತಿಯಾಗುವುದು.

**ಕೂಲಿ ಸಂಬಳ — ಧಾರಣೆವಾಸಿ.** — ಧಾರಣೆ ಏರಿ ತಗ್ಗಿದಂತೆ ಕೂಲಿ ಮತ್ತು ನೌಕರಿಯವರ ಸಂಬಳ ವ್ಯತ್ಯಾಸವಾಗುವುವು. ಪದಾರ್ಥದ ಪೇಟೆ ಧಾರಣೆ ಏರಿದರೆ ಸಂಬಳದ ಬೆಲೆ ಕಡಮೆಯಾಗುವುದು. ಮೊದಲು ಕೊಳ್ಳುತ್ತಿದ್ದಷ್ಟು ಪದಾರ್ಥಗಳನ್ನು ಕೊಳ್ಳಲಾಗುವುದಿಲ್ಲ; ಜೀವನದ ವೆಚ್ಚ ಹೆಚ್ಚಿ ಸೌಕರ್ಯ ಕಡಮೆಯಾಗುವುದು. ಕಾಮಗಾರರು ಸಂಘಗಳನ್ನು ಸ್ಥಾಪಿಸಿ ಮುಷ್ಕರದ ಮೂಲಕ ಯಜಮಾನರನ್ನು ಬಲಾತ್ಕರಿಸಬಲ್ಲ ಕಡೆ ಸಂಬಳ ಹೆಚ್ಚುವ ಸಂಭವವಿದೆ. ಆದರೂ ಧಾರಣೆ ಏರುವಷ್ಟು ವೇಗದಲ್ಲೂ ಪ್ರಮಾಣದಲ್ಲೂ ಕೂಲಿ ಸಂಬಳ ಏರಲಾರವು. ಒಂದು ಕೈಯಲ್ಲಿ ಹೆಚ್ಚು ಹಣವನ್ನು ತೆಗೆದುಕೊಂಡರೂ ಸಂಬಳ ಕಣ್ಣಿಗೆ ದೊಡ್ಡದಾಗಿ ಕಾಣುವುದೇ ಹೊರತು ಸ್ಥಿತಿ ನಿಜವಾಗಿ ಉತ್ತಮವಾಗದು. ಹೆಚ್ಚು ಹಣ ಕೈಗೆ ಬರುತ್ತಿದೆಯೆಂಬ ಸಂತೋಷದಲ್ಲಿ ಜನರಿಗೆ ದೇಶದ ನಿಜವಾದ ಬಂಡವಾಳ (ವಸ್ತುಸಂಪತ್ತಿನ ಲೆಕ್ಕದಲ್ಲಿ) ಹೆಚ್ಚುತ್ತಿದೆಯೆ, ಕಡಮೆಯಾಗುತ್ತಿದೆಯೆ? ಎಂಬ ತಿಳಿವಳಿಕೆ ಅಳಿಸಿಹೋಗುವ ಸಂಭವವುಂಟು. ಸತ್ವತಃ ಬಂಡವಾಳ ಕರಗುತ್ತಲೇ ಇರಬಹುದು. ಹಣ ಮುಖ್ಯವಲ್ಲ, ಪದಾರ್ಥಗಳು ಮುಖ್ಯ ಎಂಬ ಅರಿವು ಕಣ್ಣಿಗೆ ಮರೆಯಾಗುವುದು.

**ಗೊತ್ತಾದ ವರಮಾನಗಳವರು.** — ಧಾರಣೆ ಇಳಿದಾಗ ಹಣದ ಬೆಲೆ ಏರಿ ಕೆಲಸಗಾರರಿಗೆ ಹಿಂದಿನ ಸಂಬಳಕ್ಕೇ ಹೆಚ್ಚು ಪದಾರ್ಥ ಬರುವುದು. ಜೀವನ ಸುಲಭವಾಗಿ ಸೌಕರ್ಯ ಹೆಚ್ಚುವುದು. ಸಂಬಳವೇ ಹೆಚ್ಚಿದ್ದರೆ ಎಷ್ಟು ಅನುಕೂಲವಾಗುತ್ತಿತ್ತೋ ಅದು ಈ ಕಡಮೆ ಸಂಬಳಕ್ಕೇ ಆಗುವುದು. ಆದರೆ ಉದ್ಯೋಗ ಕೈಗಾರಿಕೆಗಳಿಗೆ ಲಾಭವಿಲ್ಲದೆ, ಕೆಲಸ ಮಂದವಾಗಿ ಅನೇಕರಿಗೆ ಉದ್ಯೋಗದಿಂದ ನಿವೃತ್ತಿಯಾಗುವುದರಿಂದ ಒಟ್ಟು ಕಾಮಗಾರ ವರ್ಗಕ್ಕೆ ಹೆಚ್ಚು ನಷ್ಟ. ಒಪ್ಪಂದದ ಮೇರೆಗೆ ವರಮಾನಗಳೆಲ್ಲಾ ಗೊತ್ತಾದ ಒಂದೇ ಮೊತ್ತದಲ್ಲಿ ಬರುತ್ತಿದ್ದರೆ, ಧಾರಣೆ ಇಳಿದಿರುವಾಗ ಪೇಟೆಯಲ್ಲಿ ಆ ಹಣಕ್ಕೆ ಹಿಂದಿಗಿಂತಲೂ ಹೆಚ್ಚು ಪದಾರ್ಥಗಳು ಬರುವುವಲ್ಲವೆ? ಎಂದರೆ ಉತ್ಪತ್ತಿಯಾಗುತ್ತಿರುವ ಸಂಪತ್ತಿನಲ್ಲಿ ಮೊದಲಿಗಿಂತಲೂ ಹೆಚ್ಚು ಭಾಗ ಇಂತಹವರಿಗೆ ದೊರಕುವುದು. ಆ ಮಟ್ಟಿಗೆ ಇತರರ ಪಾಲಿಗೆ ಹೋಗುವ ಭಾಗ ಕಡಮೆಯಾಗುವುದು. ಸರಕಾರಗಳವರು ಹಲವು ದೇಶಗಳಲ್ಲಿ

ಕೆಲಸವಿಲ್ಲದವರಿಗೆ ಹಣ ಸಹಾಯ ಮಾಡುತ್ತಿರುವರು; ಕೆಲಸದಿಂದ ನಿವೃತ್ತರಾಗಿ ಅನೇಕರು ವಿಶ್ರಾಂತಿ ವೇತನಗಳನ್ನು ಪಡೆಯುತ್ತಿರುವರು; ಕೆಲಸ ಮಾಡದ ಇಂತಹವರಿಗೆಲ್ಲ ಮೊದಲಿಗಿಂತಲೂ ಹೆಚ್ಚು ಸೌಕರ್ಯ ದೊರೆತಂತಾಗುವುದು. ಇವರಿಗೆ ದೊರೆಯುವ ಸಂಪತ್ತಿನ ಭಾಗ ಹೆಚ್ಚಿತೆಂದರೆ ಉತ್ಪತ್ತಿ ಕಾರ್ಯದಲ್ಲಿ ತೊಡಗಿ ಲಾಭವನ್ನು ನೆಚ್ಚಿಕೊಂಡಿರುವ ಸಾಹಸಿಗಳಿಗೆ (Enterprisers) ದೊರಕುವ ಭಾಗ ಕಡಮೆಯಾಗುವುದು ಸಹಜವೇ ತಾನೆ? ವಿದೇಶಿ ಸಾಲಗಳನ್ನು ತೆರಬೇಕಾಗಿರುವ ದೇಶಗಳಲ್ಲಿ ಸಾಲ ಹೊರಬೇಕಾಗಿರುವವರ ಕುತ್ತಿಗೆಯ ಮೇಲೆ ಮೊದಲಿಗಿಂತಲೂ ಹೆಚ್ಚಿನ ಭಾರ ಹೊರುವುದು.

ಉತ್ಪತ್ತಿ ಕಾರ್ಯಗಳಲ್ಲಿ ತೊಡಗುವವರು ಅವಕ್ಕೆ ಬೇಕಾಗುವ ಹಣದ ಖರ್ಚನ್ನು ಇಳಿಸಿಕೊಳ್ಳಲು ಪ್ರಯತ್ನಪಡುವರು. ಆಗ ಅನೇಕ ಕೆಲಸಗಾರರಿಗೆ ನಿರುದ್ಯೋಗ ಪ್ರಾಪ್ತವಾಗುವುದು. ಒಂದು ವೇಳೆ ಎಂದಿನಂತೆಯೇ ಕೆಲಸವನ್ನು ನಡಸಿಕೊಂಡು ಹೋಗುತ್ತಿರುವಾಗಲೂ ತಮ್ಮ ಜೊತೆಯಲ್ಲಿ ಸ್ಪರ್ಧಿಸುವ ಇತರರೊಂದಿಗೆ ಅವರು ಸರಿಸಲ್ಲಲು ಸಾಧ್ಯವಾಗುವಂತೆ ಅವರಿಗಿಂತ ಹೆಚ್ಚಿನ ಕಾರ್ಯದಕ್ಷತೆಯನ್ನು ತೋರಿಸಲು ಅವಕಾಶವಿಲ್ಲದಾಗುವುದು. ಯಾವ ಯಾವ ಭಾಗದಲ್ಲಿ ವೆಚ್ಚ ಕಡಮೆ ಮಾಡಿಕೊಳ್ಳಬಹುದೊ ನೋಡಿ ಆ ಭಾಗದಲ್ಲೆಲ್ಲ ಅವರು ಕೆಲಸವನ್ನು ಕಡಮೆ ಮಾಡಿಕೊಳ್ಳುವರು. ಮೊದಲಿನಷ್ಟು ಮೂಲಸಾಮಗ್ರಿ ಕೊಳ್ಳರು; ಕೂಲಿ ಸಂಬಳ ಕೊರೆಯುವರು; ಒಂದೆರಡು ಶಾಖೆಗಳಲ್ಲಿ ಕೆಲಸ ನಿಲ್ಲಿಸುವರು; ಕೆಲಸ ಮಾಡುವವರ ಸಂಖ್ಯೆಯನ್ನು ಕತ್ತರಿಸಿ ಉಳಿದವರು ಕಡಮೆ ಸಂಬಳಕ್ಕೆ ಹೆಚ್ಚು ಕೆಲಸವನ್ನು ಮಾಡುವಂತೆ ಒತ್ತಾಯಮಾಡುವರು. ಹೊರಗಡೆ ಈ ಕೆಲಸದ ಉಪಶಾಖೆಗಳನ್ನು ನಡೆಬೇಕು, ಕಾರ್ಯರಂಗವನ್ನು ವಿಸ್ತಾರಮಾಡಿಕೊಳ್ಳಬೇಕು, ಹೆಚ್ಚು ಕೆಲಸಗಾರರನ್ನು ನಿಯಮಿಸಿಕೊಳ್ಳಬೇಕು ಎಂದು ಇದ್ದ ಆಕಾಂಕ್ಷೆ ಮುರಿದುಬೀಳುವುದು. ಕೂಲಿ ಸಂಬಳಗಳನ್ನು ಇಳಿಸಿದರೆ ಖಂಡಿತವಾಗಿಯೂ ಕೆಲಸಗಾರರ ವಿರೋಧವನ್ನು ಕಟ್ಟಿಕೊಳ್ಳಬೇಕಾಗುವುದು; ಇಲ್ಲವಾದರೆ ಕೆಲವು ಕಾಲ ಅಂಗಡಿ ಮುಚ್ಚಬೇಕಾಗುವುದು.

ಉತ್ಪತ್ತಿಯ ವೆಚ್ಚ ಹೆಚ್ಚಿ ಕೈಗೆ ಬರುವ ಹಣದ ಮೊತ್ತ ಕಡಮೆ ಯಾದರೆ ಲಾಭ ಕೊರೆಯಾಗುವುದಲ್ಲವೆ? ಆದುದರಿಂದ ಉತ್ಪತ್ತಿ ಕಾರ್ಯಕ್ಕೆ ಬಂಡವಾಳವನ್ನು ಯಾರು ಒದಗಿಸುತ್ತಿದ್ದರೊ ಅವರಿಗೆ ಲಾಭದ ಸಂಭವ ಕಡಮೆಯೆಂದು ತೋರಿ ಅವರು ಉತ್ಪತ್ತಿಗೆ ಬಂಡವಾಳವೊದಗಿಸುವ ಸಂಬಂಧದಲ್ಲಿ ಹಿಂದೇಟು ಹಾಕುವರು. ಕಂಪನಿಗಳ ಸಾಧಾರಣ ಷೇರುಗಳ ಮೇಲೆ ಬರುವ ಲಾಭದ ದರ ಕಡಮೆಯಾಗುವುದರಿಂದ ಷೇರಿನ ಬೆಲೆ ಇಳಿಯು ವುದು. ಸಾಲ ತೆಗೆದುಕೊಂಡಾದರೂ ಕಾರ್ಯದಲ್ಲಿ ಸಾಹಸ ಮಾಡುವುದು ಸರಿಯೆಂದು ತಿಳಿದಿದ್ದವರಿಗೂ ಈಗ ಕಷ್ಟನಷ್ಟಗಳು ಒದಗುವುದರಿಂದ ಅವರ ಧೈರ್ಯ ಕುಗ್ಗಿ, ಕೈಕಟ್ಟಿ, ದೇಶದ ಸಂಪದಭಿವೃದ್ಧಿ ಕುಂಟುವುದು. ಹಣವಿರುವವರು ಅದನ್ನು ಕೈಗಾರಿಕೆಗಳಲ್ಲಿ ಹೂಡದೆ ಕಿರುವಾಯಿದೆ ಡಿಪಾಸಿಟ್ಟುಗಳ ರೂಪದಲ್ಲಿ ಕೈಗಾವಲಾಗಿ ಇಟ್ಟುಕೊಂಡಿರುವರು.

**ಸರಕಾರದ ವರಮಾನ.**—ಸರಕಾರದ ವರಮಾನ ಎಲ್ಲ ಶಾಖೆ ಗಳಲ್ಲಿಯೂ ಕಡಮೆಯಾಗುವುದು; ಅವರ ವೆಚ್ಚ ಮೊದಲಿಗಿಂತಲೂ ಹೆಚ್ಚುವುದು. ದೇಶದಲ್ಲೆಲ್ಲಾ ವ್ಯಾಪಾರ ಉದ್ಯೋಗಗಳು ಇಳಿಮುಖ ವಾಗಿರುವಾಗ ವರಮಾನದ ತೆರಿಗೆ, ಸ್ಟ್ಯಾಂಪಿನ ಹುಟ್ಟುವಳಿ, ವಿದೇಶಿ ಸುಂಕ, ಅಬ್ಕಾರಿ ಬಾಬಿನಿಂದ ಬರುವ ಆದಾಯ ಎಲ್ಲವೂ ಕಡಮೆಯಾಗು ವುವು. ಆದರೆ ಸರಕಾರದವರು ತೆರಬೇಕಾದ ಹಣದಲ್ಲಿ ಬಹು ಭಾಗ ಸಾಲದ ಬಡ್ಡಿ, ಸಿಬ್ಬಂದಿಯ ಸಂಬಳ, ಸೈನ್ಯದ ವೆಚ್ಚ ಮುಂತಾದ ಗೊತ್ತಾದ ಲೆಕ್ಕಗಳಲ್ಲಿ ಇರುವುದರಿಂದ ಸಂಬಳಗಳನ್ನು ಕತ್ತರಿಸದೆ ಖರ್ಚು ಕಡಮೆ ಮಾಡಿಕೊಳ್ಳದೆ ಇದ್ದರೆ ಅವರು ಹೆಚ್ಚು ಋಣವನ್ನು ಒದಗಿಸಿಕೊಳ್ಳಬೇಕಾಗು ವುದು. ಇರುವ ತೆರಿಗೆಗಳ ದರವನ್ನು ಹೆಚ್ಚಿಸಿಯೊ ಹೊಸ ತೆರಿಗೆಗಳನ್ನು ಹಾಕಿಯೊ ಹೊಸ ಸಾಲಗಳನ್ನೆತ್ತಿಯೊ ಒದಗಿಸಬೇಕಾಗುವುದು.

ಆರ್ಥಿಕ ಪರಿಣಾಮಕ್ಕಿಂತಲೂ ಸಾಮಾಜಿಕ ಪರಿಣಾಮವೇ ಹೆಚ್ಚು ಹಾನಿಕರ. ಸಾಲಗಾರರು, ಸಾಹುಕಾರರು, ರೈತರು, ತೆರಿಗೆ ವಸೂಲು ಮಾಡುವವರು, ಉತ್ಪತ್ತಿಕಾರರು, ಕಾಮಗಾರರು ಮುಂತಾದ ಜನವರ್ಗದ ಪರಸ್ಪರ ಸಂಬಂಧದಲ್ಲಿ ಬಿಳಬೇಗೆ ಹೆಚ್ಚುವುದು. ಅತೃಪ್ತಿಯಿಂದ ಅನ್ಯಾಯ ಕಲ್ಪನೆ ಉಂಟಾಗಿ ಅನೇಕ ಕೇಡುಗಳು ಪ್ರಾಪ್ತವಾಗುವುವು.

ಒಟ್ಟಿನಲ್ಲಿ ಇಷ್ಟು ಹೇಳಬಹುದು: ಹಣದ ಬೆಲೆ ಕಡಮೆಯಾದರೆ ಬಂಡವಾಳವನ್ನು ಎರವಲಾಗಿ ಕೊಟ್ಟು ಗೊತ್ತಾದ ಹಣದ ಪ್ರಯೋಜನವನ್ನು ಪಡೆಯುತ್ತಿರುವವರಿಗೆ ನಷ್ಟ. ಸಾಲ ತೆಗೆದುಕೊಂಡೊ, ಸ್ವಂತ ಹಣವನ್ನು ಹೂಡಿಯೊ ಕಾರ್ಖಾನೆ ಕೈಗಾರಿಕೆಗಳಲ್ಲಿ ಸಾಹಸ ತೋರಿಸಿ ಪದಾರ್ಥಗಳನ್ನು ತಯಾರುಮಾಡುವವರಿಗೆ ಪ್ರಯೋಜನ ಹೆಚ್ಚು; ಈಗಿನ ಪ್ರಪಂಚದಲ್ಲಿ (ಇಂಗ್ಲಂಡ್ ಮುಂತಾದ ದೇಶಗಳಲ್ಲಿ ಎಂದರೆ ಎಲ್ಲಿ ಕಾಮಗಾರ ಸಂಘಗಳ ಪ್ರಬಲವ್ಯವಸ್ಥೆ ಇದೆಯೊ, ಅಲ್ಲಿ) ಸ್ಥೂಲವಾಗಿ ಕೆಲಸಗಾರರಿಗೂ ಪ್ರಯೋಜನವೇ. ಹೆಚ್ಚು ಕೇಡು ಯಾರಿಗೆಂದರೆ: ಹಣದ ಬೆಲೆ ಒಂದೇ ಸಮನಾಗಿರುವುದೆಂದು ನಂಬಿ ಅದನ್ನು ಕೂಡಿಟ್ಟು ಇತರ ಕೈಗಾರಿಕೆಗಳವರಿಗೆ ಸಾಲ ಕೊಟ್ಟಿರುವವರಿಗೆ. ದೇಶದಲ್ಲಿ ಬಂಡವಾಳವನ್ನು ಕೂಡಿಸುತ್ತಿರುವವರಿಗೆ ನಿರುತ್ಸಾಹವುಂಟಾಗಿ ಬಂಡವಾಳದ ಬೆಳವಣಿಗೆಗೆ ಅಡ್ಡಿಯುಂಟಾಗುವುದು.

**ಹಣದ ವ್ಯವಸ್ಥೆ.**—ಧಾರಣೆವಾಸಿ ಏರುವುದಕ್ಕೂ ತಗ್ಗುವುದಕ್ಕೂ ಅನೇಕ ಕಾರಣಗಳುಂಟು. ವಸ್ತುಗಳೂ, ಕೆಲಸವೂ ಎಷ್ಟು, ಹೇಗೆ, ಒದಗುವುವು? ಅವಕ್ಕೆ ಗಿರಾಕಿ ಎಷ್ಟಿದೆ? ಹೇಗಿದೆ? ಎಂಬುವು ಮುಖ್ಯ ಕಾರಣಗಳು. ಅವುಗಳು ಹೀಗೆಯೇ ಇರಬೇಕು ಎಂದು ಗೊತ್ತು ಮಾಡುವುದು ಯಾರಿಗೂ ಸಾಧ್ಯವಿಲ್ಲ. ಯಾರೊಬ್ಬರ—ಕಡೆಗೆ ಯಾವ ಒಂದು ದೇಶದವರ—ಪ್ರಯತ್ನಕ್ಕೂ ಅವು ಒಳಪಡುವುದಿಲ್ಲ. ಆದರೆ ಎಲ್ಲ ಸರಬರಾಯಿಯೂ (Supply) ಎಲ್ಲ ಗಿರಾಕಿಯೂ ಹಣದ ಎಣಿಕೆಯಲ್ಲಿ ನಡೆಯುವುದರಿಂದ ಹಣ ವ್ಯವಸ್ಥೆಯನ್ನು ಸರಿಯಾಗಿ ಮಾಡಿದರೆ ಧಾರಣೆವಾಸಿಯ ಅತಿಯಾದ ಏರಿಳಿತಗಳಿಂದುಂಟಾಗುವ ಅನಿಷ್ಟಗಳನ್ನು ಕಡಮೆ ಮಾಡಬಹುದು; ಸಮಾಜದಲ್ಲಿನ ಎಲ್ಲ ವರ್ಗಗಳವರಿಗೂ ಕ್ಷೇಮವೂ ಸುಭಿಕ್ಷವೂ ಹಂಚಿಕೆಯಾಗಿ ಸಂಪದಭಿವೃದ್ಧಿಗೆ ಸಾಧಕವಾದ ಎಲ್ಲ ಕರಣಗಳೂ ಆ ಕಾರ್ಯಕ್ಕೆ ಉತ್ತೇಜನಗೊಂಡು ನೆರೆಯುವಂತೆ ಸ್ಥಿತಿಗತಿಗಳನ್ನು ಒಂದು ಹಿಡಿತಕ್ಕೆ ತರಬಹುದು. ಎಂದರೆ ಹಣದ ಕಡೆಯಿಂದ ಅದರ ಬೆಲೆ ಹೆಚ್ಚದಂತೆ ಕುಗ್ಗದಂತೆ ವ್ಯವಸ್ಥೆಮಾಡಬಹುದೆಂದು ಹೇಳಿದ ಹಾಗಾಯಿತು.

**ಹಣದ ಪರಿಮಾಣ — ಬೆಲೆ.** — ಇತರ ಪದಾರ್ಥಗಳ ಬೆಲೆಯಂತೆಯೇ ಹಣದ ಬೆಲೆಯೂ ಗೊತ್ತಾಗುವುದು: ದೇಶದಲ್ಲಿನ ಹಣದ ಮೊತ್ತ ಕಡಿಮೆಯಾದಹಾಗೆಲ್ಲ ಅದರ ಬೆಲೆ ಹೆಚ್ಚುವುದು. ಹಣವನ್ನು ಹೆಚ್ಚಿಸುವುದು ಕಡಿಮೆ ಮಾಡುವುದು ಸರಕಾರದವರ ಮತ್ತು ಬ್ಯಾಂಕುಗಳವರ ಕೈಯಲ್ಲಿದೆ. ತಕ್ಷಣದ ಲಾಭವನ್ನು ಮಾತ್ರ ಎಣಿಸಿ ಟಂಕಸಾಲೆಯವರು ನಾಣ್ಯಗಳನ್ನು ಮುದ್ರಿಸುತ್ತಾ ಹೋದರೆ, ಅಚ್ಚು ಮಾಡುವವರು ನೋಟುಗಳನ್ನು ಅಚ್ಚು ಹಾಕಿಹಾಕಿ ಪ್ರಚಾರಕ್ಕೆ ತಂದರೆ, ಬ್ಯಾಂಕುಗಳವರು ತಮಗೆ ಬೇಕುಬೇಕಾದಂತೆ ಸುಲಭವಾಗಿ ಚಾಲ್ತಿ ಸಾಲಗಳನ್ನು ಕೊಡುತ್ತ ಹೋದರೆ, ಓವರ್ ಡ್ರಾಫ್ಟ್ ಅವಕಾಶವನ್ನು ಹೆಚ್ಚು ಹೆಚ್ಚು ಕಲ್ಪಿಸುತ್ತಿದ್ದರೆ ಸಾಮಾನ್ಯವಾಗಿ ಹಣದ ಬೆಲೆ ಇಳಿಯುತ್ತದೆ. ಇದಕ್ಕೆ ಪ್ರತಿಯಾಗಿ, ಸರಕಾರದವರೂ ನೋಟು ಚಾಲಕರೂ ಪ್ರಚಾರದಲ್ಲಿರುವ ಹಣವನ್ನು ಹಿಂದಕ್ಕೆ ತೆಗೆದುಕೊಂಡರೆ, ಬ್ಯಾಂಕುಗಳವರು ಚಾಲ್ತಿ ಸಾಲಗಳನ್ನು ಕೊಡುವ ಕೈ ಬಿಗಿಹಿಡಿದರೆ ಧಾರಣೆವಾಸಿ ಇಳಿದು ಹಣದ ಬೆಲೆ ಹೆಚ್ಚುವುದು. ಜನರ ಅಭ್ಯಾಸಗಳಲ್ಲಿ ಯಾವ ವ್ಯತ್ಯಾಸವೂ ಉಂಟಾಗದೆ, ವಸ್ತುಗಳ ತಯಾರಿಕೆಯೂ ವ್ಯಾಪಾರದ ಪ್ರಮಾಣವೂ ಒಂದೇ ಮಟ್ಟದಲ್ಲಿದ್ದು, ದೇಶದ ಜನಸಂಖ್ಯೆಯೂ ಹೆಚ್ಚದೆ, ಹಣದ ಮೊತ್ತ ಮಾತ್ರ ಹೆಚ್ಚಾದರೆ, ಅದರ ಬೆಲೆ ಬೀಳದೆ ಏನಾದೀತು? ಕೇವಲ ಹಣದ ಮೊತ್ತ ಹೆಚ್ಚಿದರೆ ಮಾರಾಟಕ್ಕೆ ಇರುವ ಮತ್ತು ಬರುವ ವಸ್ತು ಹೆಚ್ಚಿದಂತಾಯಿತೆ? ಇರುವ ವಸ್ತುಗಳೆಲ್ಲ ಹಿಂದೆ ೧ ಲಕ್ಷ ರೂಪಾಯಿಗೇ ಬರುತ್ತಿದ್ದರೆ, ಈಗ ೨ ಲಕ್ಷಕ್ಕೆ ಹಣದ ಮೊತ್ತ ಏರಿದರೂ ಅದಕ್ಕೆ ಪ್ರತಿಯಾಗಿ ಹಿಂದಿನಷ್ಟು ಸಾಮಾನು ತಾನೇ ಬಂದಾವು? ಹಣದ ಮೊತ್ತ ಹೆಚ್ಚಾದೀತೇ ಹೊರತು ಅದರ ನಿಜವಾದ ಬೆಲೆ ಹೆಚ್ಚಾಗುವುದಿಲ್ಲ. ವಸ್ತುಗಳ ಲೆಕ್ಕದಲ್ಲಿ ಹಿಂದೆ ಒಂದು ಲಕ್ಷ ರೂಪಾಯಿಗಿದ್ದ ಬೆಲೆಯೇ ಈ ೨ ಲಕ್ಷ ರೂಪಾಯಿಗೂ ಇರುವುದು ಎಂದು ಹೇಳಿದಹಾಗಾಯಿತು. ಹಣ ಬೆಳ್ಳಿಯದಾಗಲಿ, ಚಿನ್ನದ್ದಾಗಲಿ, ಕಾಗದದ್ದಾಗಲಿ ಲೆಕ್ಕವಿಲ್ಲ. ಚಿನ್ನದ್ದಾಗಿ ಹೆಚ್ಚು ಬೆಲೆ ತರುವುದಿಲ್ಲ; ಕಾಗದದ್ದಾಗಿ ಕಡಮೆ ತರುವುದಿಲ್ಲ.

ಬೇಕೋ ಅಷ್ಟು ಹಣವನ್ನು ಸರಕಾರದವರೂ ಬ್ಯಾಂಕುಗಳವರೂ ಒದಗಿಸುತ್ತಿದ್ದರೆ ಸರಿ. ಮುಖ್ಯವಾಗಿ ಜನರೆಲ್ಲರೂ ನೆಚ್ಚಿ ಬಳಸುವ ಹಣದ ಮೊತ್ತವನ್ನೂ, ಅದು ಸಂಚರಿಸುವ ವೇಗವನ್ನೂ ತಿಳಿದು ಹಣದ ಸಂಚಾರಕ್ಕೆ ಸಂಬಂಧಿಸಿದ ಎಲ್ಲವನ್ನೂ ಸರಿಯಾಗಿ ವ್ಯವಸ್ಥೆ ಮಾಡುತ್ತಿರುವುದು ಆವಶ್ಯಕ.

**ಹಣಕ್ಕೆ ಹೊರದೇಶದಲ್ಲಿ ಬೆಲೆ — ಮಾರುವೆಯ (Exchange) ದರ. —** ಮೇಲೆ ಹೇಳಿದುದೆಲ್ಲವೂ ಯಾವುದಾದರೊಂದು ದೇಶದ ಹಣಕ್ಕೆ ಇರುವ ಒಳದೇಶದ ಬೆಲೆಯ ವಿಚಾರವಾಯಿತು. ಅದಕ್ಕೆ ಹೊರದೇಶಗಳಲ್ಲಿಯೂ ಒಂದು ಬೆಲೆಯುಂಟು. ನಮ್ಮ ರೂಪಾಯಿಗೆ ಅಮೇರಿಕಾದಲ್ಲಿ ಬಳಕೆಯಿಲ್ಲ. ಜರ್ಮನಿಯವರ ಹಣಕ್ಕೆ—ಅದು ಚಿನ್ನದ್ದಾಗಲಿ ಬೆಳ್ಳಿಯದಾಗಲಿ—ನಮ್ಮ ದೇಶದಲ್ಲಿ ಸಂಚಾರವಿಲ್ಲ. ಒಂದು ವೇಳೆ ಎಲ್ಲ ದೇಶಗಳವರ ನಾಣ್ಯಗಳೂ ಚಿನ್ನದುವಾದರೆ ಅವುಗಳಲ್ಲಿನ ಚಿನ್ನದ ಬೆಲೆಯನ್ನು ಸರ್ವಸಾಮಾನ್ಯವಾಗಿ ಎಲ್ಲೆಲ್ಲಿಯೂ ನಡೆಯಬಹುದಾಗುವುದು. ಒಂದು ದೇಶದ್ದು ಚಿಕ್ಕದಾಗಿದ್ದು ಇನ್ನೊಂದು ದೊಡ್ಡದಾಗಿದ್ದರೂ ಒಂದಕ್ಕೆ ಪ್ರತಿಯಾಗಿ ಇನ್ನೊಂದನ್ನು ಇಷ್ಟು ಕೊಡುವುದು ಎಂದು ಸುಲಭವಾಗಿ ನಿಶ್ಚಯಿಸಿಕೊಳ್ಳಬಹುದು. ಆದರೆ ಈ ಸೌಲಭ್ಯ ದಿನಚರಿಯ ಜೀವನದಲ್ಲಿಯೂ ವ್ಯಾಪಾರಗಳಲ್ಲಿಯೂ ದೊರೆಯುವುದಿಲ್ಲ. ಕೆಲವು ದೇಶಗಳಲ್ಲಿ ಸ್ವರ್ಣಪ್ರಮಿತಿ ಇರುತ್ತದೆ; ಕೆಲವು ಕಡೆ ಬೆಳ್ಳಿಯ ಪ್ರಮಿತಿಯೂ, ಇನ್ನು ಕೆಲವು ಕಡೆ ಕೇವಲ ನೋಟುಗಳ ಲೆಕ್ಕವೂ ಇರುತ್ತವೆ. ಇಂತಹ ದೇಶಗಳಿಗೆ ಪರಸ್ಪರ ವ್ಯಾಪಾರ ನಡೆಯುತ್ತಿದ್ದರೆ ಈ ದೇಶಗಳ ಹಣಕ್ಕೆ ಪರಸ್ಪರ ಸಂಬಂಧ ಹೇಗೆ ಏರ್ಪಡುವುದು ಎಂಬುದು ಪ್ರಕೃತ ವಿಷಯ. ನಮ್ಮ ದೇಶಕ್ಕೂ ಇತರ ದೇಶಗಳಿಗೂ ವ್ಯಾಪಾರ ನಡೆಯುತ್ತಿರುವಾಗ ಎಷ್ಟು ರೂಪಾಯಿಗೆ ಎಷ್ಟು ಪೌಂಡು, ಎಷ್ಟು ಫ್ರಾಂಕು (ಫ್ರಾನ್ಸ್), ಯೆನ್ನು (ಜಪಾನ್), ತಯೆಲು (ಚೀನಾ), ಡಾಲರು (ಅಮೇರಿಕಾ), ಮಾರ್ಕ್ (ಜರ್ಮನಿ), ರೂಬಲ್ಲು (ರಷ್ಯಾ), ಲೈರು (ಇಟಲಿ), ಕ್ರೋನೆನ್ನು (ಸ್ವೀಡನ್), ಪಸೆಟಾ (ಸ್ಪೈನ್) ಎಂದು ಗೊತ್ತುಮಾಡಿಕೊಳ್ಳಬೇಕು. ಎಷ್ಟು ದೇಶಗಳವರೊಡನೆ ನಮಗೆ ವ್ಯಾಪಾರ ನಡೆಯುತ್ತಿದೆಯೊ ಅಷ್ಟು ಬಗೆಯ ಮಾರುವೆಯ ದರ

(Exchange Rate) ಇರುತ್ತದೆ. ಈ ಮಾರುವೆಯ ದರ ಅನೇಕ ಕಾರಣ ಗಳಿಂದ ದಿನದಿಂದ ದಿನಕ್ಕೆ ಏರುತ್ತಿರುತ್ತದೆ, ಇಳಿಯುತ್ತಿರುತ್ತದೆ. ಏರಲಿ ಇಳಿಯಲಿ ಯಾವುದಾದರೊಂದು ದಿನ, ವಾರ, ಅಥವಾ ತಿಂಗಳ ಸರಾಸರಿ ದರ ಇಷ್ಟು ಎಂದು ಸುಲಭವಾಗಿ ಲೆಕ್ಕಮಾಡಬಹುದು. ಪ್ರತಿದಿನವೂ ದರ ಬೇರೆಬೇರೆಯಾಗುತ್ತಿದ್ದರೂ ಆಯಾ ದಿನ ನಮ್ಮ ರೂಪಾಯಿಗೆ ಪೌಂಡಿನ ಲೆಕ್ಕದಲ್ಲಿಯೊ, ಫ್ರಾಂಕಿನ ಲೆಕ್ಕದಲ್ಲಿಯೊ, ಯೆನ್ನಿನ ಲೆಕ್ಕದಲ್ಲಿಯೊ ಇಷ್ಟೇ ಬೆಲೆ ಎಂದು ಗೊತ್ತಾಗುತ್ತದೆ. ಈ ದರ, ಹೆಚ್ಚು ಕಡಮೆ ಯಾಗುವುದರಿಂದ ದೇಶದ ವ್ಯಾಪಾರದಮೇಲೂ, ಒಳಗಿರುವ ವರ್ತಕ ಮಂಡಲಿಯ ಮೇಲೂ, ಕೈಗಾರಿಕೆಯ ಮೇಲೂ, ಉದ್ಯೋಗದ ಮೇಲೂ, ವಸ್ತುಗಳನ್ನು ಕೊಂಡು ತಿನ್ನುವವರ ಮೇಲೂ ಬಗೆಬಗೆಯ ಪರಿಣಾಮ ಉಂಟಾಗುವುದರಿಂದ ಇದೂ ಒಂದು ಹಿಡಿತದಲ್ಲಿ, ಒಂದು ಸ್ತಿಮಿತದಲ್ಲಿ ನಿಲ್ಲುವುದು ಆವಶ್ಯಕ. ಹಾಗೆ ಹಿಡಿತದಲ್ಲಿ ನಿಲ್ಲುವಂತೆ ಮಾಡಬೇಕಾದುದು ಹಣ ಪ್ರಚಾರಕರಾದ, ವ್ಯಾಪಾರಗತಿ ನಿರ್ಧಾರಕರಾದ ಸರಕಾರದವರ ಮತ್ತು ಬ್ಯಾಂಕುಗಳವರ ಕರ್ತವ್ಯ.

**ಮಾರುವೆಯ ದರ ಹೇಗೆ ನಿರ್ಣಯವಾಗುವುದು ?**— ಬೇರೆ ಬೇರೆ ನಾಣ್ಯ ಪದ್ಧತಿಗಳಿರುವ ರಾಷ್ಟ್ರಗಳವರಿಗೆ ವ್ಯಾಪಾರ ನಡೆಯುತ್ತಿರುವಾಗ ಮಾರುವೆಯ ದರ ಹೇಗೆ ನಿರ್ಧರವಾಗುವುದು ಎಂಬುದನ್ನು ತಿಳಿಯ ಬೇಕಾದರೆ ಪರಸ್ಪರವಾಗಿ ವ್ಯಾಪಾರವೂ ಒಟ್ಟಿನ ಋಣ ಸಂಚಾರವೂ ಯಾವ ರೀತಿ ಇವೆ? ಆಮದು ರಫ್ತುಗಳ ಪ್ರಮಾಣವೆಷ್ಟು? ಎಂಬುವನ್ನು ತಿಳಿದು ಕೊಳ್ಳಬೇಕು. ಇತರರಿಂದ ನಾವು ಒಟ್ಟಿನಲ್ಲಿ ಹೆಚ್ಚಾಗಿ ತರಿಸಿಕೊಳ್ಳು ತ್ತಿದ್ದೇವೆಯೆ? ಅಥವಾ ಅವರಿಗೆ ನಾವೇ ಹೆಚ್ಚಾಗಿ ಕಳುಹಿಸಿಕೊಡು ತ್ತಿದ್ದೇವೆಯೆ? ಎಂಬುದು ಮುಖ್ಯ ವಿಚಾರ. ಅವರಿಂದ ನಾವು ಹೆಚ್ಚಾಗಿ ಕೊಂಡಿದ್ದರೆ ಆ ಹೆಚ್ಚು ಪರಿಮಾಣದ ವಸ್ತು ಸೇವೆಗಳಿಗೆ ಕೈಯಿಂದ ಬೆಲೆ ತೆತ್ತು ಸಾಲವನ್ನು ಹರಿಸಬೇಕಾಗುತ್ತದೆ. ಅವರಿಗೆ ನಮ್ಮ ಹಣ ಬೇಕಿಲ್ಲ. ಅವರ ದೇಶದ ಹಣದಲ್ಲಿ ಸಾಲ ತೀರಿಸಬೇಕಾಗುವುದು; ಆದುದರಿಂದ ಆ ಮಟ್ಟಿಗೆ ಅವರ ಹಣಕ್ಕೆ ಗಿರಾಕಿ ಹೆಚ್ಚಿ ಅದರ ಬೆಲೆ ಏರಿ ನಮ್ಮ ಹಣದ ಬೆಲೆ ಇಳಿಯುವುದು. ಮಾರುವೆ ಸ್ಥೂಲವಾಗಿ—ಅವರಿಗೆ ಅನುಕೂಲ

ವಾಗುವುದು; ನಮಗೆ ಪ್ರತಿಕೂಲವಾಗುವುದು. ಬೇರೆಯವರು ನಮಗೆ ಹೆಚ್ಚು ಹಣ ತೆರಬೇಕಾಗಿರುವಾಗ ನಮ್ಮ ಹಣಕ್ಕೆ ಗಿರಾಕಿಯೂ ಬೆಲೆಯೂ ಹೆಚ್ಚಿ ದರ ನಮಗೆ ಅನುಕೂಲವಾಗುವುದು. ಎಂದರೆ ನಮ್ಮ ಹಣಕ್ಕೆ ಅವರ ಹಣ ಮೊದಲಿಗಿಂತಲೂ ಹೆಚ್ಚಾಗಿ ಸಿಕ್ಕುವುದು; ನಮ್ಮ ಹಣಕ್ಕೆ ಅವರ ದೇಶದ ಪದಾರ್ಥಗಳು ಮೊದಲಿಗಿಂತಲೂ ಹೆಚ್ಚಾಗಿ ದೊರಕುವುವು ಎಂದು ಹೇಳಬಹುದು.

**ನಿಡುಗಾಲದ ಅಥವಾ ಸರಾಸರಿ ದರ.—** ಎರಡನೆಯದಾಗಿ ಒಳದೇಶದಲ್ಲಿನ ಪೇಟೆ ಧಾರಣೆ ಹೇಗಿದೆ ಎಂಬುದೂ ದರವನ್ನು ವ್ಯತ್ಯಾಸಮಾಡಬಹುದು. ಸಾಮಾನ್ಯರು, ನಾವು, ಹೇಗೆ ಅಗ್ಗದಲ್ಲಿ ಕೊಂಡು ತುಟ್ಟಿಗೆ ಮಾರಲು ಪ್ರಯತ್ನಿಸುವೆವೋ ಹಾಗೆಯೇ ವ್ಯಾಪಾರಸ್ಥರೂ ಎಲ್ಲಿ ಅಗ್ಗವಾದ ಬೆಲೆಗೆ ಸಾಮಾನು ಸಿಕ್ಕುವುದೋ ಅಲ್ಲಿ ಅದನ್ನು ಕೊಳ್ಳುವರು; ಎಲ್ಲಿ ಪೇಟೆ ಧಾರಣೆ ಏರಿ ಹೆಚ್ಚು ಲಾಭ ಬರುವುದೋ ಅಲ್ಲಿ ತಮ್ಮ ಸಾಮಾನನ್ನು ಮಾರುವರು. ಈ ದೇಶದಲ್ಲಿ ಧಾರಣೆ ಏರಿದ್ದರೆ ಇಲ್ಲಿ ಹೆಚ್ಚು ಲಾಭ ದೊರೆಯುವುದೆಂದು ಹೊರಗಿನವರು ತಮ್ಮ ಸಾಮಾನನ್ನು ಇಲ್ಲಿಗೆ ಕಳುಹಿಸುವರು; ಎಂದರೆ ಆಮದು ಹೆಚ್ಚುವುದು. ಧಾರಣೆ ಇಳಿದಿದ್ದರೆ ಇಲ್ಲಿನವರು ಹೊರಗಡೆಗೆ ಸಾಮಾನನ್ನು ಕಳುಹಿಸಿ ಸಂಪಾದನೆಮಾಡಿಕೊಳ್ಳಲು ಪ್ರಯತ್ನಿಸುವರು; ಎಂದರೆ ರಫ್ತು ಹೆಚ್ಚಾಗುವುದು.* ಹೀಗೆ ಧಾರಣೆವಾಸಿಯ ಏರಿಳಿತಗಳಿಂದ ಆಮದು ರಫ್ತುಗಳು ಏರುತ್ತ ಕುಗ್ಗುತ್ತ ಇರುವಾಗ ಒಟ್ಟಿನಲ್ಲಿ ಒಂದು ನಿಡುದೃಷ್ಟಿಯಿಂದ ನೋಡಿದರೆ ಒಂದು ದೇಶದ ಮಾರುವೆಯ ಸರಾಸರಿ ದರ ವ್ಯಾಪಾರಕ್ಕೂ ಧಾರಣೆಗಳಿಗೂ ಹೊಂದಿಕೊಳ್ಳುತ್ತದೆಯೆಂದು ಹೇಳಬಹುದು. ಆದುದರಿಂದ ಮೊದಲು ಒಳದೇಶದಲ್ಲಿ ಹಣದ ಬೆಲೆ ಸಾಧ್ಯವಾದಷ್ಟು ಸಮವಾಗಿರುವಂತೆ ಮಾಡಿಕೊಂಡರೆ ಹೊರದೇಶ ವ್ಯಾಪಾರ

---

* ಸ್ಥೂಲವಾಗಿ ಹೀಗೆ ನಡೆಯುವುದೆನ್ನಬಹುದು. ಹೀಗೆ ನಡೆಯಲು ಅವಕಾಶವುಂಟಾಗುವುದೆಂದು ಹೇಳುವುದು ಮಾತ್ರ ಸರಿಯಾದುದು. ಎಷ್ಟು ಹೆಚ್ಚುವುದು, ಯಾವ ಸಂದರ್ಭದಲ್ಲಿ ಎನ್ನುವುದು ರಾಷ್ಟ್ರ ರಾಷ್ಟ್ರಗಳವರಿಗೆ ಇರುವ ವ್ಯಾಪಾರ ಮೈತ್ರಿ, ಸಹಕಾರ, ಋತು ಫಲ, ಸಾಲ ಸಂಬಂಧ, ಬೇರೆ ಬೇರೆ ಕಡೆ ಇರುವ ಬಡ್ಡಿಯ ದರಗಳು, ಸಟ್ಟದ ವ್ಯಾಪಾರ, ಸರಕಾರಗಳ ಕೈವಾಡ, ದೇಶದ ವ್ಯಾಪಾರ ಶಾಸನಗಳ ಲಕ್ಷಣ, ಪ್ರಭಾವ ಮುಂತಾದ ಸಂಗತಿಗಳಿಂದ ನಿರ್ಧಾರವಾಗುವವು. ಪರಿಸ್ಥಿತಿ ಬೇರೆಯಾಗದಿದ್ದರೆ — ಇತರ ಯಾವ ಅಡ್ಡಿತಡೆಗಳೂ ಇಲ್ಲದಿದ್ದರೆ — ಎಂಬುದನ್ನು ಎಲ್ಲೆಲ್ಲಿಯೂ ಅಧ್ಯಾಹಾರ ಮಾಡಿಕೊಂಡು ಈ ಪುಸ್ತಕವನ್ನು ಓದಬೇಕು.

ದಲ್ಲಿಯೂ ಅದಕ್ಕೆ ನ್ಯಾಯವಾದ ಬೆಲೆ ಬರುವಂತೆ ಮಾಡಿಕೊಳ್ಳುವುದು ಸಾಧ್ಯವಾದೀತು. ಈ ಪ್ರಯೋಜನವನ್ನು ಸಾಧಿಸುವುದು ಧನಾಧಿಕಾರಿಯ ಕಾರ್ಯ.

**ದಿನ ದಿನದ ಅಥವಾ ಕಿರುಗಾಲದ ದರ — ಒಂದು ಅಧಿಕಾರದಲ್ಲಿ ಮಾರುವೆಯ ವ್ಯವಸ್ಥೆ.** — ನಿಡುಗಾಲದ ದೃಷ್ಟಿಯಿಂದ ಈ ಹೊಂದಿಕೆ ಒರುವುದೆಂದು ಹೇಳಿದರೆ ದಿನ ದಿನದ, ವಾರ ವಾರದ ದರ ಒಂದೇ ಸಮನಾಗಿರುತ್ತದೆಯೆಂದು ಹೇಳಿದಹಾಗಾಗಲಿಲ್ಲ. ಹಿಂದೆ ಒಂದು ಕಡೆ ಹೇಳಿರುವಂತೆ ಆಯಾ ದಿನದ ವ್ಯಾಪಾರದ ಸ್ಥಿತಿ ಆಯಾ ದಿನದ ದರವನ್ನು ನಿರ್ಧರಿಸುವುದು. ನಮ್ಮಂತಹ ವ್ಯವಸಾಯದ ರಾಷ್ಟ್ರಗಳಲ್ಲಿ ವರ್ಷದ ಬೇರೆಬೇರೆ ತಿಂಗಳಲ್ಲಿ ಬೇರೆಬೇರೆ ವ್ಯಾಪಾರಸ್ಥಿತಿಯುಂಟಾಗುವುದು. ಮತ್ತು ದೇಶದ ಋಣಸ್ಥಿತಿ, ಪೇಟೆಯ ಬಡ್ಡಿಯ ದರ, ಇತರ ರಾಜಕೀಯ ವ್ಯವಹಾರಗಳು, ಸರಕಾರದ ಆಯವ್ಯಯ ವ್ಯವಸ್ಥೆ, ರಾಜಕೀಯ ಸ್ವಾತಂತ್ರ್ಯ ಪಾರತಂತ್ರ್ಯ, ಋತುಫಲ ಮತ್ತು ಸುಗ್ಗಿಗಳ ಅನಿಶ್ಚಯ, ಮಾರುವೆಯ ಪತ್ರಗಳನ್ನು ಲಾಭಕೋರ ಬುದ್ಧಿಯಿಂದಲೇ ಕೊಂಡು ಮಾರುವ ದಲ್ಲಾಳರ ಕೈವಾಡ ಮುಂತಾದ ಕಾರಣಗಳೂ ಎಲ್ಲ ದೇಶಗಳಲ್ಲಿಯೂ ದರವನ್ನು ಹೆಚ್ಚು ಕಡಮೆಮಾಡುವುವು. ಅವುಗಳ ಉಗ್ರತೆಯಿಂದ ಕೇಡು ಬಾರದಂತೆ ದೇಶದ ಹಣದ ವ್ಯವಸ್ಥಾಪಕರು ಧೈರ್ಯದಿಂದ, ನಿಷ್ಪಕ್ಷಪಾತದಿಂದ, ಸಮಯದರ್ಶಿತೆಯಿಂದ, ದೇಶದ ಪ್ರಯೋಜನ ದೃಷ್ಟಿಯಿಂದ ವ್ಯಾಪಾರದ ಬೆನ್ನ ಹಿಂದೆ ನಿಲ್ಲಬೇಕು. ದೇಶದ ಲೇಣೆದೇಣೆ ಯಾವುವಾದರೂ ತಿಂಗಳಲ್ಲಿ ಒತ್ತು ಬಾರದಂತೆಯೂ, ವರ್ಷವೂ ಒಂದು ಹದದಲ್ಲಿ ಸಮಧಾತುವಾಗಿ ಹರಡಿ, ಒಂದು ಘಟ್ಟಕ್ಕೆ ನಿಲ್ಲುವಂತೆಯೂ ಏರ್ಪಡಿಸುವುದರ ಜೊತೆಗೆ ಹಣ ಮಂಡಲವನ್ನು ತಮ್ಮ ಕೈವಶಮಾಡಿಕೊಂಡು, ಬೇಕಾದರೆ ತಮ್ಮ ಎಲ್ಲ ಸಂಪತ್ತನ್ನೂ ಉಪಯೋಗಿಸಲು ಸಿದ್ಧರಾಗಿದ್ದರೆ, ಈ ವ್ಯತ್ಯಾಸಗಳನ್ನು ತಡೆಯುವುದು ಸಾಧ್ಯ. ಅಂತಹ ಸಿದ್ಧತೆ ಇದೆ ಎಂಬ ಸಂಗತಿಯೇ ಮಾರುವೆಯನ್ನು ಒಂದು ಸ್ಥೈರ್ಯಕ್ಕೆ ತರುತ್ತದೆ. ಆದರೆ ಆ ಸಿದ್ಧತೆಗೆ ಹಣ ಪ್ರಚಾರಕಾರ್ಯವೂ ವ್ಯಾಪಾರಕ್ಕೆ ಹಣ ಸಾಲವೊದಗಿಸುವ ಕಾರ್ಯವೂ ಒಂದೇ ಅಧಿಕಾರದಲ್ಲಿರುವುದು ಆವಶ್ಯಕ.

**ಸಹಜವಾದ ದರ.**—ಹೀಗೆ ವ್ಯಾಪಾರದ ಲೇಣೆದೇಣೆಗಳಿಗೆ ತಕ್ಕಂತೆ ಸಾಮಾನ್ಯವಾಗಿ ಏರಿ ಇಳಿಯುತ್ತಿರುವ ದರ ಒಂದು ಗೊತ್ತಾದ ಮಿತಿತಕ್ಕೆ ನಿಂತ ಹೊರತು ಎಲ್ಲರಿಗೂ ಸಮವಾಗಿ ಪ್ರಯೋಜನಕಾರಿಯಲ್ಲ; ಉದ್ಯೋಗ ವ್ಯಾಪಾರ ಕೈಗಾರಿಕೆಗಳು ಒಂದು ಹದಕ್ಕೆ ನಿಲ್ಲುವುದಿಲ್ಲ. ಸಹಜವಾದ ದರವೆಂದರೆ ದಿನದಿನವೂ ವ್ಯತ್ಯಾಸವಾಗುತ್ತಲೇ ಇರುವ ದರ. ಅದನ್ನು ಒಂದು ಗೊತ್ತಿಗೆ ತರಬೇಕಾದುದು ಅವಶ್ಯಕವಾದುದರಿಂದಲೇ ಎಲ್ಲ ದೇಶಗಳಲ್ಲಿಯೂ ಪ್ರಧಾನ ಬ್ಯಾಂಕೋ, ಸರಕಾರದವರೊ ಒಂದು ನೆಲೆಯಲ್ಲಿ ಅದನ್ನು ನಿಲ್ಲಿಸುವ ಪ್ರಯತ್ನಮಾಡಿ ಮಾರುವೆಯ ಪ್ರಯೋಜನ ಸರ್ವತ್ರ ಹಂಚುವಂತೆ ಏರ್ಪಡಿಸಬೇಕಾಗುವುದು. ದೇಶಕ್ಕೆ ಅನುಕೂಲವಾದ ದರ ಯಾವುದೆಂಬುದನ್ನು ಕಾಲಕಾಲದ ಪರಿಸ್ಥಿತಿಗಳನ್ನು ಪರೀಕ್ಷಿಸಿ ಬದಲಾಯಿಸಿಕೊಳ್ಳುತ್ತಿರಬೇಕಾದೀತು: ಆ ದರ ಯಾವುದು ಎಂಬಂಶದಲ್ಲಿ ಅಭಿಪ್ರಾಯ ವ್ಯತ್ಯಾಸವುಂಟಾಗುವುದು ಸಹಜವೇ. ತಿಂಗಳು ತಿಂಗಳ ಸರಾಸರಿ ಲೆಕ್ಕಮಾಡಿ ವರ್ಷದ ಕಡೆಯಲ್ಲಿ ತೋರಿಬರುವ, ಕಳೆದ ವರ್ಷದ (ಅಥವಾ ೫–೧೦ ವರ್ಷಗಳ) ಸರಾಸರಿ ದರ ಇಂಥದು ಎಂದು ಲೆಕ್ಕಮಾಡಿಕೊಂಡು; ಆ ವರ್ಷ ಸಾಧಾರಣ ವರ್ಷವಹುದೇ ಅಲ್ಲವೆ? ಅದರ ವ್ಯಾಪಾರಾದಿಗಳಲ್ಲಿ ವಿಶೇಷ ವ್ಯತ್ಯಾಸಗಳಿದ್ದುವೆ? ಎಂಬುದನ್ನು ಲೆಕ್ಕಮಾಡಿ; ಮುಂದಿನ ವರ್ಷವೂ ಬಹುಶಃ ಇವೇ ಸ್ಥಿತಿಗತಿ ನಡೆದಾವು ಎಂಬ ನಿರೀಕ್ಷೆಯಿದ್ದರೆ ಮಾತ್ರ ಹಿಂದಿನ ವರ್ಷದ ಸರಾಸರಿ ದರವನ್ನು ಸಾಧಿಸುವ ಪ್ರಯತ್ನಮಾಡುವುದು ಜಾಣತನವಾಗುವುದು. ಹೇಗೇ ಆಗಲಿ ಸಹಜವಾದ ದರವೆಂದು ಮಾರುವೆಯ ದರವನ್ನು ಅದರ ದಾರಿಗೇ ಬಿಟ್ಟರೆ*—'ಕಿಂ ಬ್ರೂಮೋ ವೈಕೃತಂ ತಸ್ಯ?'—ಅದರ ವಕ್ರತೆ ಚೇಷ್ಟೆಗಳಿಗೆ ಕೊನೆಯೇ ಇಲ್ಲವಾಗುವುದು ಖಂಡಿತ. ಆದುದರಿಂದ ಎಲ್ಲ ದೇಶಗಳ ಮಾರುವೆಯ ವ್ಯವಸ್ಥೆಯೂ ಈಗ ಪೂರ್ತಿ ಕೃತಕ. ಸ್ಥಿತಿಗತಿ ಹೇಗೇ ವ್ಯತ್ಯಾಸವಾಗುತ್ತಿರಲಿ ಕೇವಲ ಒಂದೇ

* ಕಡೆಗೆ ವ್ಯಾಪಾರಕ್ಕೇ ಹೊಂದಿಕೊಳ್ಳಬೇಕು, ನಿಜ. ಆದರೆ ಒಂದು ದೇಶದಲ್ಲಿ ಒಂದು ತಿಂಗಳಲ್ಲಿ ಹತ್ತು ಜನ ಹುಟ್ಟಿ ಹತ್ತು ಜನ ಸತ್ತರೆ ಒಟ್ಟು ಜನಸಂಖ್ಯೆಯು ಹದ ಉಳಿದರೂ ಆಯಾ ಕುಟುಂಬಗಳಲ್ಲುಂಟಾದ ಸಾವು ಹುಟ್ಟಿನ ನೋವು ಸಂತೋಷ ಮುಂತಾದುವು ಸಮಾಜದ ಸುಖದುಃಖಗಳನ್ನು ಮಾರ್ಪಡಿಸುವುದಿಲ್ಲವೆ? ಇಲ್ಲಿಯೂ ಹಾಗೇ.

ಗೊತ್ತಾದ ದರವನ್ನು ಸಾಧಿಸಬೇಕೆಂದು ಹೊರಟರೆ ಪ್ರಯಾಣಕ್ಕೆ ಬದಲು ಗಾಡಿಯ ರಕ್ಷಣೆ ಮಾಡಿದ ಹಾಗಾಗುತ್ತದೆ; ಅವಿವೇಕವಾದೀತೆಂದೂ, ಲಾಭವಂತೂ ಸುತರಾಂ ಇಲ್ಲವಾಗಬಹುದೆಂದೂ ಈವರೆಗೆ ಸ್ಪಷ್ಟವಾಗಿರಬಹುದು.

**ಏರಿಳಿತಗಳ ಫಲ.**—ದರ ವ್ಯತ್ಯಾಸವಾಗುತ್ತಿದ್ದರೆ ಜನವರ್ಗದಲ್ಲಿ ಬಗೆಬಗೆಯವರಿಗೆ ಬಗೆಬಗೆಯ ಲಾಭ ನಷ್ಟ ಉಂಟಾಗುವುವು.

**ದರ ಏರಿದಾಗ.**—ದರ ಏರಿ ನಮ್ಮ ಹಣದ ಬೆಲೆ ಹೆಚ್ಚಿದರೆ ಇತರರ ಹಣ ನಮಗೆ ಹೆಚ್ಚಾಗಿ ಸಿಕ್ಕುವುದು. ಇಲ್ಲಿ ಸರಕನ್ನು ಆಮದು ಮಾಡುವವರಿಗೆ* ಲಾಭ. ದರ ಇಳಿದು ಇತರರ ಹಣಕ್ಕೆ ನಮ್ಮ ಹಣವನ್ನು ಹೆಚ್ಚಾಗಿ ಕೊಡಬೇಕಾದರೆ ರಫ್ತು ವರ್ತಕರಿಗೆ ಲಾಭ. ಸರಕಾರಗಳವರು ಹೊರಗಿನವರಿಗೆ ಅವರ ಲೆಕ್ಕದಲ್ಲಿ ಹಣವನ್ನು ಸಲ್ಲಿಸಬೇಕಾಗಿದ್ದಾಗ ಏರುವ ದರವೇ ಅವರಿಗೆ ಸಹಾಯ. ದರ ಇಳಿದರೆ ಸ್ವದೇಶದ ಹೆಚ್ಚು ಹಣವನ್ನು ಹೊರಗಿನವರಿಗೆ ತೆರಬೇಕಾಗುವುದು. (ಉದಾ.—ರೂಪಾಯಿಗೆ ೧೬ ಪೆನ್ನಿಗಳ ದರ ಇರುವಾಗ ಪೌಂಡಿಗೆ ೧೫ ರೂಪಾಯಿಯಂತೆ ತೆರಬೇಕು; ೧೮ ಆದರೆ ತೆರಬೇಕಾದುದು ರೂ. ೧೩–೫–೪; ೨೦ ಪೆನ್ನಿಯಾದರೆ ಹತ್ತೇ ರೂಪಾಯಿ!) ಎಂದರೆ ಏರುವ ದರ (ನಮ್ಮಂತಹ ದೇಶಗಳಲ್ಲಿ ಸರಕಾರಕ್ಕೂ) ಆಮದು ವರ್ತಕರಿಗೂ, ಜೀವನದ ನೆಚ್ಚನ್ನೆಣಿಸುವ ಜನಸಾಮಾನ್ಯಕ್ಕೂ ಅನುಕೂಲವೆಂದು ಹೇಳಿದ ಹಾಗಾಯಿತು.

**—ಇಳಿದಾಗ.**—ದರ ಇಳಿದಾಗ ತದ್ವಿಪರೀತ: ರಫ್ತು ವರ್ತಕರಿಗೆ ಸುಗ್ಗಿ. ಆ ಮಟ್ಟಿಗೆ ರಫ್ತು ವ್ಯಾಪಾರಕ್ಕೆ ಸಂಬಂಧಿಸುವ ಎಲ್ಲ ಕೈಗಾರಿಕೆಗೂ ಉತ್ತೇಜನ ದೊರೆಯುವುದು. ನಮ್ಮ ದೇಶದಂತಹ ದೇಶಗಳಲ್ಲಿ ಆಹಾರ ಪದಾರ್ಥಗಳನ್ನೂ ಕೈಗಾರಿಕೆಯ ಮೂಲ ಸಾಮಗ್ರಿಯನ್ನೂ ರಫ್ತು ಮಾಡುವವರಾದ್ದರಿಂದ ಉತ್ಪತ್ತಿಕಾರರಾದ ರೈತಾಪಿ ಜನರಿಗೆ ಮೊದಲಿಗಿಂತ

* ಇದರಿಂದ ಒಂದು ಅನನುಕೂಲವುಂಟು. ಇಂಗ್ಲೆಂಡಿನ ಸಾಮಾನುಗಳಿಗೂ ಒಳದೇಶದಲ್ಲಿ ತಯಾರಾಗುವ ಅದೇ ಬಗೆಯ ಸಾಮಾನಿಗೂ ಪೈಪೋಟಿಯಿದ್ದರೆ ಆ ಮಟ್ಟಿಗೆ ಇಂಗ್ಲೆಂಡಿನವರ ಆ ವ್ಯಾಪಾರಕ್ಕೂ ಕೈಗಾರಿಕೆಗೂ ಸಹಾಯವಾಗುವುದು; ನಮ್ಮ ಆ ಕೈಗಾರಿಕೆ ವ್ಯಾಪಾರಗಳಿಗೆ ಪ್ರತಿಕೂಲವಾಗುವುದು. ಆದರೆ ಪದಾರ್ಥಗಳ ಬೆಲೆ ಕಡಮೆಯಾಗಿ ಅವನ್ನು ಕೊಂಡು ತಿನ್ನುವ ಜನಸಾಮಾನ್ಯಕ್ಕೆ ಪ್ರಯೋಜನವುಂಟಾಗುವುದು.

ಹೆಚ್ಚು ಕಾಸು ಕೈಗೆ ಬರುವುದು.* ಹಣವುಳ್ಳ ಕೈಗಾರಿಕೆ ಯಜಮಾನರಿಗೆ ಲಾಭ ಪುಷ್ಕಲ. ಸಭೆಗಳಲ್ಲಿಯೂ ಹುದ್ದೆಗಳಲ್ಲಿಯೂ ಶಾಸನ ಮಂಡಲಿಗಳಲ್ಲಿಯೂ ಇವರು ಪ್ರಬಲರಾಗಿ ಸ್ವದೇಶದ ಲಾಭವೆಂದು ಸಾರಿ ಸ್ವಂತ ಲಾಭವನ್ನು ಸಾಧಿಸಬಲ್ಲರು. ಕಡಮೆಯ ದರವೇ ದೇಶಕ್ಕೆ ಹಿತಕರವೆಂದು ಸ್ಥಾಪಿಸಬಲ್ಲರು. ಪದಾರ್ಥಗಳನ್ನು ಕೊಂಡು ತಿನ್ನುವವರಿಗೆ ಕಷ್ಟ. ಸರಕಾರದ ಕೈಹಣ ಸಾಲದಾಗಿ ಅವರು ಸಾಲಕ್ಕೂ ಹೋಗಬೇಕಾಗಬಹುದು.

ದರದ ಈ ಬಗೆಯ ವ್ಯತ್ಯಾಸಗಳಿಂದ ಉಂಟಾಗುವ ಕಷ್ಟನಷ್ಟ ಕಡಮೆಯಾಗುವಂತೆಯೂ, ಅದು ಹೊರವ್ಯಾಪಾರಕ್ಕೆ ಹತ್ತಿರದಲ್ಲಿ ಹೊಂದಿಕೊಂಡು ಹೋಗುವಂತೆಯೂ, ಒಳಕೈಗಾರಿಕೆಗೆ ನಷ್ಟ ತಟ್ಟದಂತೆಯೂ, ಮಾರುವೆಯ ಪ್ರಯೋಜನ ಎಲ್ಲರಿಗೂ ಸಮಮಾನದಿ ದೊರೆಯುವಂತೆಯೂ ಮಾಡಬೇಕಾದುದು ಹಣದ ಮತ್ತು ಸಾಲದ ವ್ಯವಸ್ಥೆ ಮಾಡುವ ಅಧಿಕಾರಿಗಳ ಕರ್ತವ್ಯ. ಸ್ಥಿತಿಜ್ಞತೆಯಿಂದಲೂ ದಕ್ಷತೆಯಿಂದಲೂ ಒಳಗಿನ ಧಾರಣೆವಾಸಿ ಹೊರಧಾರಣೆವಾಸಿಗೆ ಹೊಂದಿಕೊಳ್ಳುವಂತೆ, ಎರಡಕ್ಕೂ ವಿರೋಧವಾಗದಂತೆ ಅವರು ಹಣವ್ಯವಸ್ಥೆ ಮಾಡಬೇಕು.

**ಹಣ ಮಂಡಲದಲ್ಲಿ ವ್ಯವಸ್ಥೆ.**— ಈ ಬಗೆಯ ಕೆಲಸಕ್ಕೆ ಹಣಮಂಡಲದಲ್ಲಿ ಸ್ವಾತಂತ್ರ್ಯವಿರಬೇಕು; ಯಾವ ರಾಜಕೀಯ ಅನುಕೂಲಕ್ಕೂ ಬಾಗದೆ, ದೇಶದ ಒಟ್ಟು ಅನುಕೂಲಕ್ಕೆ ತಕ್ಕಂತೆ ಮಾರುವೆಯ ಪದ್ಧತಿಯನ್ನು ವ್ಯಾಪಾರ ಕೈಗಾರಿಕೆಗಳ ಸಾಲವ್ಯವಸ್ಥೆಯನ್ನು ಒಮ್ಮೊಗವಾಗಿ ನಡಸಿ ದೇಶದ ಸಂಪತ್ಸ್ಥಿತಿಯನ್ನು ಉತ್ತಮಗೊಳಿಸುವ ಸ್ವಾಧೀನತೆ ಇರಬೇಕು. ಹಣ ಪ್ರಚಾರಕಾರ್ಯವೂ, ಸಾಲದ ಪೇಟೆಯನ್ನು ಆಳುವ ಅಧಿಕಾರವೂ ಒಂದು ಸಂಸ್ಥೆಯ ಕೈಯಲ್ಲಿರಬೇಕು; ಅವು ಎರಡೂ ಬೇರೆ ಬೇರೆ ಅಧಿಕಾರಿಗಳ ಕೈಯಲ್ಲಿದ್ದರೆ ಒಂದೇ ಮುಖದಲ್ಲಿ ಕೆಲಸ ನಡೆಯಬೇಕು. ಆದ್ದರಿಂದ ಈಗ ಸುಮಾರು ಈ ಬಗೆಯ ಕೆಲಸಗಳನ್ನು ಮುಂದುವರಿದ ರಾಷ್ಟ್ರಗಳಲ್ಲಿ ಆಯಾ ದೇಶದ ಪ್ರಧಾನ ಬ್ಯಾಂಕೇ ಮಾಡುವುದು

* ಪೂರ್ತಿ ಅಷ್ಟೂ ಬಾರದು. ನಡುವೆ ತರಗಿನವರು ತಿನ್ನುವರು. ಈ ನಡುವೆ ತಾವು ಕೊಳ್ಳಬೇಕಾದ ಪದಾರ್ಥಗಳ ಬೆಲೆ ಏರಿರುವುದರಿಂದ ಬಂದ ಲಾಭವನ್ನು ಅದು ನುಂಗೀತು. ಆಮದು ಪದಾರ್ಥಗಳನ್ನು ಉಪಯೋಗಿಸುವವರಿಗಂತೂ ನಷ್ಟ ಖಂಡಿತ.

ಸರ್ವೋತ್ತಮ ಎಂದು ಮನಗಂಡಿದ್ದಾರೆ. ಸಾಮ್ಯವನ್ನು ಪ್ರಚಾರಕ್ಕೆ ತರುವ ಸರಕಾರದವರು ಎಷ್ಟೇ ಬುದ್ಧಿವಂತರಾದರೂ ಎಷ್ಟೇ ದೂರದರ್ಶನದಿಂದ ಕೆಲಸಮಾಡಿದರೂ ಅವರಿಗೆ ವ್ಯಾಪಾರದ ಉಬ್ಬರವಿಳಿತಗಳೂ, ಅದರ ಆಳವೂ, ಸಂಚಾರಗತಿಯೂ, ಒಳಜಾಡೂ ಸೂಕ್ಷ್ಮವಾಗಿ ತಿಳಿಯುವುದು ಕಷ್ಟ. ರಾಜಕೀಯ ದೃಷ್ಟಿಯಿಂದ ಪಕ್ಷಪಾತವುಂಟಾಗಬಹುದು; ಹಣದ ಪೇಟೆಯನ್ನು ಪ್ರಪಂಚವನ್ನು ಸರಿಯಾಗಿ ಆಳಲು ಅನೇಕ ಕಾರಣಗಳಿಂದ ಸಾಧ್ಯವಾಗದೆ ಹೋಗಬಹುದು. ಆದುದರಿಂದ ಅದರ ಕೆಲಸವೂ, ದೇಶದ ಒಳ-ಹೊರ ವ್ಯಾಪಾರ ಕೈಗಾರಿಕೆಗಳಿಗೆ ನೆರವಾಗುವ ಎಲ್ಲ ಕಾರ್ಯಗಳನ್ನೂ ನಡಸುವ ವರ್ತಕ ಮಂಡಲಿಯ ಕೆಲಸವೂ, ಧನಚಕ್ರವನ್ನೆಲ್ಲಾ ಒಂದೇ ಅಧಿಕಾರದಿಂದ ಆಳುವ ಒಂದು ಕೇಂದ್ರ (Central) ಬ್ಯಾಂಕಿನವರ ಕೈಯಲ್ಲಿರಬೇಕಾಗುವುದು.

ಮುಂದಿನ ಪ್ರಕರಣಗಳಲ್ಲಿ, ಹಣದ ಪೇಟೆ ಹೇಗೆ ಕೆಲಸಮಾಡುತ್ತದೆ? ಅದರ ರಚನೆ ಹೇಗಿದೆ? ಅಲ್ಲಿ ಪರಸ್ಪರ ಸಂಬಂಧಗಳು ಹೇಗೆ ಉಂಟಾಗಿವೆ? ಉಂಟಾಗುತ್ತವೆ? ಒಳದೇಶ ಹೊರದೇಶ ವ್ಯಾಪಾರಗಳಿಗೆ ಹಣ ಒದಗುವ ವಿಧಾನವಾವುದು? ಇದಕ್ಕೆಲ್ಲಾ ಸಂಬಂಧಿಸಿದ ಸಂಸ್ಥೆಗಳು ಯಾವುವು? ಕಾರ್ಯಸಾಧನಗಳೂ ಶಾಸನಗಳೂ ಯಾವುವು? ಇವನ್ನೆಲ್ಲಾ ಒಂದು ಹದ್ದಿನಲ್ಲಿಡಬೇಕಾದರೆ ಕೆಲಸ ಯಾವ ರೀತಿ ನಡೆಯಬೇಕು ಮುಂತಾದ ವಿಚಾರಗಳನ್ನು ಮಾಡಲಾಗುವುದು.

## ಹಣದ ಬೆಲೆ ಅಥವಾ ಧಾರಣೆವಾಸಿಯ ಅಳತೆ

ಹಣದ ಬೆಲೆಯಲ್ಲಿ ವ್ಯತ್ಯಾಸವಾಗುತ್ತಿರುವುದನ್ನು ಅಳೆಯುವುದಕ್ಕೆ ಎಲ್ಲಾ ದೇಶಗಳಲ್ಲಿಯೂ ಒಂದು ಬಗೆಯ ಲೆಕ್ಕಮಾಡುವುದುಂಟು. ಒಬ್ಬೊಬ್ಬರು ಒಂದೊಂದು ಕೆಲಸಕ್ಕೂ ಉದ್ದೇಶಕ್ಕೂ ಅನುಕೂಲಿಸುವಂತೆ ಈ ಲೆಕ್ಕವನ್ನು ಮಾಡಿದರೂ ಸಾಮಾನ್ಯವಾಗಿ ಎಲ್ಲರ ಲೆಕ್ಕದ ರೀತಿಯೂ ಒಂದು ಕ್ರಮವನ್ನು ಅನುಸರಿಸುವುದು. ತಮಗೆ ಯಾವ ಪದಾರ್ಥಗಳ ಬೆಲೆ ಬೇಕಾದರೆ ಆ ಪದಾರ್ಥಗಳ ಪಟ್ಟಿಯೊಂದನ್ನು ಮಾಡಿಕೊಂಡು ಯಾವುದಾದರೂ ಒಂದು ಗೊತ್ತಾದ ಅಳತೆಗೆ (ಅಕ್ಕಿ ಪಲ್ಲಾಕ್ಕೆ ಇಷ್ಟು, ಸಕ್ಕರೆ

ಮಣಕ್ಕೆ ಇಷ್ಟು, ಬಟ್ಟೆ ೨೦ ಗಜಗಳಿಗೆ ಇಷ್ಟು, ಇತ್ಯಾದಿ) ಪೇಟೆಯಲ್ಲಿ ಎಷ್ಟು ಕರೀದಿ ಎಂಬುದನ್ನು ಗುರುತುಮಾಡಿಕೊಳ್ಳುವರು. ಯಾವುದಾದರೂ ಒಂದು ವರ್ಷದಲ್ಲಿ ಈ ಪದಾರ್ಥಗಳ ಕರೀದಿ ಸರಾಸರಿ ಎಷ್ಟಿದೆ ಎಂದೂ, ಯಾವ ೪-೫ ವರ್ಷಗಳ ಸಾಧಾರಣ ಸರಾಸರಿ ಕರೀದಿ ಎಷ್ಟು ಎಂದೂ ಲೆಕ್ಕಮಾಡಿ ಅದನ್ನು ಹದಿಯಾಗಿ (Base) ಇಟ್ಟುಕೊಳ್ಳುವರು. ಮುಂದಿನ ವರ್ಷಗಳ ಸರಾಸರಿಯನ್ನು ಅದರ ಶೇಕಡ ಇಷ್ಟು ಎಂದು ಲೆಕ್ಕಹಾಕುವರು. ಉದಾಹರಣೆ.—೧೯೦೦ನೆಯ ಸಂವತ್ಸರದ ಸರಾಸರಿ ಎಷ್ಟೇ ಇರಲಿ ಅದಕ್ಕೆ ೧೦೦ ಎಂದು ಬೆಲೆಯನ್ನು ನಿರ್ಧರಿಸಿ ಅಲ್ಲಿಂದ ಈಚೆಗೆ ಆ ಪದಾರ್ಥಗಳ ಬೆಲೆ ಎಷ್ಟು ಹೆಚ್ಚಿದೆ ಎಷ್ಟು ಇಳಿದಿದೆ ಎಂಬುದನ್ನು ಅರಿಯುವರು. ೧೯೧೦ರಲ್ಲಿ ಅದು ೧೧೦, ೧೯೨೦ರಲ್ಲಿ ೨೫೦, ೧೯೩೦ರಲ್ಲಿ ೯೬ ಇದ್ದರೆ, ಮೊದಲನೆಯ ಎರಡು ಸಂದರ್ಭಗಳಲ್ಲಿ ಒಂದು ಕಡೆ ಶೇಕಡ ೧೦ ಇನ್ನೊಂದು ಕಡೆ ೧೫೦ ಹೆಚ್ಚಿತೆಂದೂ ೧೯೩೦ರಲ್ಲಿ ಶೇಕಡ ೪ ಇಳಿಯಿತೆಂದೂ ಲೆಕ್ಕವಾಗುವುದು. ಎಂದರೆ ೧೯೦೦ರಲ್ಲಿದ್ದುದಕ್ಕಿಂತ ೧೯೧೦ರಲ್ಲಿಯೂ ೧೯೨೦ರಲ್ಲಿಯೂ ಹಣದ ಬೆಲೆ ಆ ಮಟ್ಟಿಗೆ ಇಳಿಯಿತೆಂದೂ ಧಾರಣೆಯಾಗಿ ಏರಿತ್ತೆಂದೂ ಗೊತ್ತಾಯಿತು. ೧೯೩೦ರಲ್ಲಿ ೧೯೦೦ಕ್ಕಿಂತ ಶೇಕಡ ೪, ೧೯೨೦ಕ್ಕಿಂತ ೧೫೪ ಧಾರಣೆ ಇಳಿಯಿತೆಂದೂ ಹಣದ ಬೆಲೆ ಏರಿತೆಂದೂ ಗೊತ್ತಾಯಿತು. ಈ ಲೆಕ್ಕದ ಸಂಖ್ಯೆಗಳನ್ನು ಇಂಗ್ಲೀಷಿನಲ್ಲಿ (Index Numbers) ಸೂಚೀ ಸಂಖ್ಯೆಗಳು ಎಂದು ಕರೆಯುವರು. ಇವನ್ನು ಯಾವ ಬಗೆಯ ಅಳತೆಕ್ಕಾದರೂ ಉಪಯೋಗಿಸಬಹುದಾದುದರಿಂದ ಎಷ್ಟೋ ಬಗೆಯ ಸೂಚೀ ಸಂಖ್ಯೆಗಳಿರುವುದು ವಾಡಿಕೆ.

**ಉದ್ದೇಶ — ಕಾರ್ಯ.** — ವಿಶೇಷವಾಗಿ ಈ ಲೆಕ್ಕದ ಅವಶ್ಯಕತೆ ಇರುವುದು ನಾಲ್ಕು ಕೆಲಸಗಳಿಗಾಗಿ ಎಂದು ಒಬ್ಬ ವಿದ್ವಾಂಸರು* ಹೇಳಿದ್ದಾರೆ:—

(೧) ಬಹುಕಾಲ ಕಳೆದಮೇಲೆ ತೆರಬೇಕಾಗಿರುವ ಸಾಲಗಳನ್ನೂ ಬಾಡಿಗೆ ಗುತ್ತಿಗೆಗಳನ್ನೂ ಸರಿಯಾಗಿ ನ್ಯಾಯವಾಗಿ ತೀರಿಸಲು ಸಾಧನವಾಗುವಂತೆ;

* Jevons.

(೨) ವ್ಯಕ್ತಿಗಳಿಗಾಗಲಿ, ಜನಾಂಗಗಳಿಗಾಗಲಿ, ಬೇರೆ ಬೇರೆ ಕಡೆ ಹಣದ ವರಮಾನ ಹೇಗೆ ಕೈಗೆ ಬರುತ್ತಿದೆ, ಹೇಗೆ ಹೆಚ್ಚು ಕಡಮೆಯಾಗುತ್ತಿದೆ ಎಂಬುದನ್ನು ಅಳೆಯುವುದಕ್ಕೆ ;

(೩) ಹಣಕ್ಕೆ ಹಿಂದೆ ಎಷ್ಟು ಬೆಲೆ ಇತ್ತು; ಈಗ ಎಷ್ಟಿದೆ ಎಂಬ ತಾರತಮ್ಯಗಳನ್ನು ಕಂಡುಹಿಡಿಯಲು ಚರಿತ್ರಕಾರರಿಗೆ ಸಹಾಯವಾಗುವಂತೆ (ಮತ್ತು ಬೇರೆ ಬೇರೆ ದೇಶಗಳಲ್ಲಿ ಒಂದೇ ಕಾಲದಲ್ಲಿ ಹೇಗೆ ವ್ಯತ್ಯಾಸಗಳು ಕಂಡುಬರುತ್ತಿವೆ ಎಂಬ ತಾರತಮ್ಯವನ್ನು ಸೂಚಿಸುವುದಕ್ಕೆ) ;

(೪) ಧಾರಣೆಯ ಏರಿಳಿತಗಳಿಂದ ಕೈಗಾರಿಕೆಗೆ ಯಾವ ಕೇಡು ಮೇಲು ಉಂಟಾಗಿವೆಯೆಂದು ತಿಳಿದು ಅಳೆಯುವುದಕ್ಕೆ.

**ಎಚ್ಚರಿಕೆ.**— ಈ ಸಂಖ್ಯೆಗಳು ಸಮರ್ಪಕವಾದ ಫಲ ಕೊಡಬೇಕಾದರೆ ಕೆಲವು ಅಂಶಗಳನ್ನು ಎಚ್ಚರಿಕೆಯಿಂದ ಆರಿಸಿಕೊಳ್ಳಬೇಕು: ಉದ್ದೇಶವಾವುದು? ಪಟ್ಟಿಗಳಲ್ಲಿ ಸೇರಿಸತಕ್ಕ ಪದಾರ್ಥಗಳು ಯಾವುವು? ಅವುಗಳ ಕರೀದಿಗಳನ್ನು ಹೇಗೆ ಕಂಡುಹಿಡಿಯುವುದು? ಮೂಲ ಸಂಖ್ಯೆಯನ್ನು ನಿರ್ಧರಿಸುವ ಕಾಲ ಯಾವುದು? ಮೊದಲು ಹೇಗೆ ಪದಾರ್ಥಗಳ ಬೆಲೆಯನ್ನು ಕಂಡುಹಿಡಿದಿದೆ? ಆಮೇಲೆ ಹೇಗೆ ಕಂಡುಹಿಡಿಯುತ್ತಿದೆ? ಅವುಗಳಿರಡರ ತೂಕವನ್ನು (Weightage) ಹೇಗೆ ಗೊತ್ತುಮಾಡಬೇಕು ಎಂಬುವು ಮೊದಲು ಇತ್ಯರ್ಥವಾಗಬೇಕು.

**ವಿವರ.**— ಆರಿಸುವ ಪದಾರ್ಥಗಳು ಎಷ್ಟು? ಅವುಗಳಿಗೆಲ್ಲ ಒಂದೇ ತೂಕವೆ, ಮರ್ಯಾದೆಯೆ ಎಂಬುದನ್ನು ಗೊತ್ತುಮಾಡುವುದು ಆವಶ್ಯಕ. ಇಲ್ಲವಾದರೆ ಯಾವುದಕ್ಕೆ ಎಷ್ಟು ಹೆಚ್ಚು ತೂಕ ಕೊಡಬೇಕು ಎಂಬುದನ್ನು ನಿರ್ಧರಿಸಬೇಕು. ಅಕ್ಕಿಗಿರುವ ಸ್ಥಾನ ತುಪ್ಪಕ್ಕಿಲ್ಲ; ಅದಕ್ಕಿರುವುದು ಉಪ್ಪಿಗೂ ವಾಸೆಲೈನಿಗೂ ಇಲ್ಲ. ಅವುಗಳ ಕರೀದಿಯನ್ನು ಹೇಗೆ ಕಂಡುಹಿಡಿಯುವುದೆಂಬ ವಿಷಯದಲ್ಲಿ ಅನೇಕರು ಅನೇಕ ವಿಧದಲ್ಲಿ ಲೆಕ್ಕ ಮಾಡುವರು. ಕೆಲವರು ತಿಂಗಳಲ್ಲಿ ಯಾವುದೊ ಕೆಲವು ದಿನಗಳನ್ನು ಗೊತ್ತುಮಾಡಿ ಆ ದಿನಗಳಲ್ಲಿದ್ದ ಕರೀದಿಗಳ ಆಧಾರದಮೇಲೆ ವರ್ಷದ ಸರಾಸರಿಯನ್ನು ಗೊತ್ತುಮಾಡುವರು. ಇನ್ನು ಕೆಲವರು ವಾರವಾರದ

ಸರಾಸರಿಯನ್ನು ಲೆಕ್ಕಹಾಕಿ ವರ್ಷದ ಸರಾಸರಿಯನ್ನು ಗುಣಿಸುವರು. ಈ ಬೆಲೆಗಳೆಲ್ಲ ಸಗಟಿನ ಲೆಕ್ಕಗಳನ್ನೇ ಆಧಾರವಾಗಿಟ್ಟುಕೊಂಡಿವೆಯೊ ಇಲ್ಲವೊ ಎಂಬ ಸಂಗತಿಯೂ ಮುಖ್ಯವಾದುದು. ಅಂತೂ ಯಾವದಾದರೊಂದು ಕ್ರಮವಿರಬೇಕು. ಮೂಲ ಸಂಖ್ಯೆಯನ್ನು ಗೊತ್ತುಮಾಡಿರುವ ವರ್ಷವೂ ಕಾಲವೂ ಸಾಧಾರಣ ವರ್ಷವೆ ಅಥವಾ ವ್ಯಾಪಾರ ಕೈಗಾರಿಕೆಗಳಲ್ಲಿಯೂ ಸಾಮಾಜಿಕ ರಾಜಕೀಯ ಸಂಬಂಧಗಳಲ್ಲಿಯೂ ವಿಶೇಷ ಕಾಲವೆ? ಅತಿ ಸುಭಿಕ್ಷ ಅಥವಾ ಅತಿ ದುರ್ಭಿಕ್ಷದ ಕಾಲವೆ? ಎಂಬುದನ್ನು ಅಗತ್ಯವಾಗಿ ನೋಡಿಕೊಳ್ಳಬೇಕು. ಇಲ್ಲವಾದರೆ ದೃಷ್ಟಿಯೇ ವ್ಯತ್ಯಾಸವಾಗುತ್ತದೆ.* ಅದೂ ಅಲ್ಲದೆ ಕಾಲ ಕಾಲಕ್ಕೆ ಜನರ ಅಭ್ಯಾಸಗಳೂ ಆವಶ್ಯಕತೆಗಳೂ ಹೆಚ್ಚು ಕಡಮೆಯಾಗುವುವು. ಆದುದರಿಂದ ಹಿಂದೆ ಸೇರಿಸುತ್ತಿದ್ದ ಕೆಲವು ಪದಾರ್ಥಗಳನ್ನು ಮುಂದಿನ ಕಾಲಗಳಲ್ಲಿ ತೆಗೆದುಹಾಕಬಹುದು; ಹೊಸವನ್ನು ಸೇರಿಸಬಹುದು. ಇಂಥ ಸಂದರ್ಭಗಳಲ್ಲಿ ಹೇಗೆ ಸೇರಿಸುವುದು? ಮೊದಲಿನ ತೂಕಗಳನ್ನು ಇವಕ್ಕೆ ಹೇಗೆ ಹೊಂದಿಸಿಕೊಳ್ಳುವುದು— ಮುಂತಾದ ವಿಷಯಗಳ ಕಡೆ ಗಮನಕೊಡಬೇಕು.

**ಸಗಟು ಧಾರಣೆ.**— ಹಣದ ಬೆಲೆಯನ್ನು ಅಳೆಯುವಾಗ ಎಲ್ಲ ದೇಶಗಳಲ್ಲಿಯೂ ಸಾಮಾನ್ಯವಾಗಿ ದೇಶಿ ವಿದೇಶಿ ವ್ಯಾಪಾರಗಳಿಗೆ ಒದಗುವ ವ್ಯಾಪಾರದ ಸಗಟು ಬೆಲೆಯನ್ನು (Wholesale Prices) ಸಂಗ್ರಹಿಸಿ ಈ ಸೂಚೀ ಸಂಖ್ಯೆಗಳನ್ನು ನಿರ್ಮಿಸುವರು. ಮೂಲ ಅಥವಾ ಹದಿಯ ವರ್ಷಗಳಲ್ಲಿ ವ್ಯತ್ಯಾಸ ಕಂಡುಬಂದರೂ ಒಂದೊಂದಕ್ಕಿರುವ ತಾರತಮ್ಯ ಸುಲಭವಾಗಿ ಗೊತ್ತಾಗುವುದು. ಗೋಧಿ, ಹತ್ತಿ, ಉಕ್ಕು, ಪೆಟ್ರೋಲ್,

* ಉದಾ.—(ನಿಜವಾದ ಲೆಕ್ಕಗಳಲ್ಲ, ಉದಾಹರಣೆಗಾಗಿ ಹಾಕಿದ ಅಂಕಗಳು):—

| | | | |
|---|---|---|---|
| ೧೮೯೦ | ೧೫೦ | ೧೯೧೮ | ೧೩೦ |
| ೧೯೦೦ | ೧೦೦ | ೧೯೨೦ | ೨೦೦ |
| ೧೯೦೫ | ೧೦೮ | ೧೯೨೫ | ೨೩೦ |
| ೧೯೧೦ | ೧೨೦ | ೧೯೩೦ | ೮೦ |
| ೧೯೧೪ | ೯೮ | | |

ಪಟ್ಟಿಯಲ್ಲಿ ಹೀಗೆ ಲೆಕ್ಕವಿದ್ದು ೧೯೦೦ನ್ನು ಮೂಲವಾಗಿ ತೆಗೆದುಕೊಂಡರೆ ಅಳತೆ ಒಂದು ವಿಧವಾಗಿ ಆಗುವುದು. ೧೯೨೦ನ್ನು ತೆಗೆದುಕೊಂಡರೆ ಇನ್ನೊಂದು ಬಗೆಯಲ್ಲಿ ಆಗುವುದು. ೧೮೯೦ರಿಂದ ಆರಂಭಮಾಡಿದರೆ ಬರುವ ದೃಷ್ಟಿಯೇ ಬೇರೆ.

ಉಣ್ಣೆ, ಸಾಗುವಾನಿ ಮುಂತಾದ ಬಹು ಮುಖ್ಯ ಪದಾರ್ಥಗಳು ಎಲ್ಲ ದೇಶಗಳವರಿಗೂ ಬೇಕಾಗುವುದರಿಂದ ಅವನ್ನೇ ಪ್ರತಿನಿಧಿ ಪದಾರ್ಥಗಳಾಗಿ ಆರಿಸಿಕೊಳ್ಳುವುದು ರೂಢಿ. ಅವುಗಳ ಕರೀದಿಗಳಲ್ಲಿ ಆದ ವ್ಯತ್ಯಾಸಗಳು ಸುಲಭವಾಗಿ ಕಾಣುವುವು. ಆದುದರಿಂದ ರಾಷ್ಟ್ರರಾಷ್ಟ್ರಗಳವರು ಅವನ್ನು ಒಂದು ದೃಷ್ಟಿಯಿಂದ ನೆಚ್ಚುವರು. ಆ ವ್ಯತ್ಯಾಸಗಳಿಂದ ಹಣದ ಬೆಲೆ ಏರಿದೆಯೆ ಇಳಿದಿದೆಯೆ ಗೊತ್ತುಮಾಡುವರು.

**ಬದುಕಿನ ವೆಚ್ಚದ ಅಳತೆ — ಚಿಲ್ಲರೆ ಧಾರಣೆಗಳು.** — ಬದುಕಿನ ವೆಚ್ಚವನ್ನು ಅಳೆಯುವ ಸಂಖ್ಯೆಗಳೆಲ್ಲ ಚಿಲ್ಲರೆ ಕರೀದಿಗಳಿಗೆ ಸಂಬಂಧಪಟ್ಟವು. ಆ ವೆಚ್ಚವನ್ನು ಅಳೆಯುವಾಗ ಅನೇಕ ಇತರ ಬಾಬುಗಳು ಲೆಕ್ಕಕ್ಕೆ ಸೇರುವುವು. ಆಹಾರಪದಾರ್ಥಗಳು, ಬಟ್ಟೆಬರೆ, ವಾಸದ ಮನೆಯ ಬಾಡಿಗೆ, ಬೆಳಕು, ಸೌದೆ, ಪಾತ್ರೆ ಪದಾರ್ಥಗಳು, ಮರದ ಸಾಮಾನು, ಆರೋಗ್ಯ, ವಿದ್ಯಾಭ್ಯಾಸ, ವಿನೋದ, ಜೀವನ ಸೌಕರ್ಯದ ವೆಚ್ಚ ಮುಂತಾದ ಬಾಬುಗಳು ಇಲ್ಲಿ ಸೇರುವುವು.

# ಪ್ರಕರಣ ೪

## ಬ್ಯಾಂಕುಗಳ ಪ್ರಪಂಚ; ಒಳ ವ್ಯಾಪಾರ

**ಜನರ ಹಣ-ಬ್ಯಾಂಕುಗಳು.**— ಆರ್ಥಿಕ ನಾಗರಿಕತೆಯಲ್ಲಿ ಹಿಂದುಳಿದಿರುವ ಜನಾಂಗಗಳಲ್ಲಿ ನೋಟಿಗಿಂತ ನಾಣ್ಯದ ಸಂಚಾರ ಹೆಚ್ಚು ಎಂದು ಹೇಳಿತು. ನೋಟಿನಲ್ಲಿ ವಿಶ್ವಾಸ ಹುಟ್ಟಿ ಚಿನ್ನ ಬೆಳ್ಳಿ ನಾಣ್ಯಗಳಿಗೆ ಬದಲು ಅದನ್ನೆ ಕೊಡುತ್ತ ತೆಗೆದುಕೊಳ್ಳುತ್ತ ಬಳಸುವುದು, ಪ್ರಗತಿಯಲ್ಲಿ ಒಂದು ಹೆಜ್ಜೆ ಮುಂದೆ ಹೋದಂತೆ ಎನ್ನಬಹುದು. ಈಗಿನ ದೊಡ್ಡ ವ್ಯಾಪಾರ ರಾಷ್ಟ್ರಗಳು ಇನ್ನೂ ಒಂದು ಹೆಜ್ಜೆ ಮುಂಬರಿದಿರುವುವು. ಅಲ್ಲಿ ನೋಟಿನ ಕೆಲಸವೂ ಕಡಮೆ. ಸಣ್ಣ ಪುಟ್ಟ ತೆರಾಗೆಗಳಿಗೂ ವೆಚ್ಚಕ್ಕೂ ಅಲ್ಪಸ್ವಲ್ಪ ನಗದನ್ನು ಜನರು ಇಟ್ಟುಕೊಳ್ಳುವರೇ ಹೊರತು ಬಾಕಿ ಹಣಕಾರ್ಯವನ್ನೆಲ್ಲಾ ಬ್ಯಾಂಕುಗಳ ಮೂಲಕ ಮಾಡುವರು: ಪ್ರತಿಯೊಬ್ಬರೂ ಯಾವುದಾದರೊಂದು ಬ್ಯಾಂಕಿನಲ್ಲಿ ತಮ್ಮ ಹಣವನ್ನು ಗಂಟಾಗಿರಿಸಿ ಕೈಯಲ್ಲಿ ಒಂದು ಚೆಕ್ ಬುಕ್ಕನ್ನು ಇಟ್ಟುಕೊಳ್ಳುತ್ತಾರೆ. ಯಾರಿಗಾದರೂ ಏತಕ್ಕಾದರೂ ಹಣ ತೆರಬೇಕಾಗಿ ಬಂದರೆ, ಆ ಮೊತ್ತಕ್ಕೆ ಒಂದು ಚೆಕ್ಕನ್ನು ಬರೆದುಕೊಡುತ್ತಾರೆ. ಬಹು ವೇಳೆ ಇವರಿಗೆ ಬರುವ ಆದಾಯವನ್ನೆಲ್ಲಾ ಇವರ ಬ್ಯಾಂಕಿನವರೇ ವಸೂಲು ಮಾಡುತ್ತಾರೆ. ತಿಂಗಳು ತಿಂಗಳಿಗೂ ಇವರು ತೆರಬೇಕಾದ ನಿಯತವಾದ ಎಲ್ಲ ತೆರಾಗೆಗಳನ್ನೂ ಇವರ ಅಪ್ಪಣೆ ಪಡೆದು ಬ್ಯಾಂಕಿನವರೇ ಮಾಡುತ್ತಾರೆ: ಹೀಗೆ ಮಾಡತಕ್ಕದ್ದೆಂದು ಬ್ಯಾಂಕಿನವರಿಗೆ ಒಂದು ಕಾಗದ ಬರೆದರಾಯಿತು. ಇವರ ಕಡೆಯಿಂದ ಆಗಾಗ್ಗೆ ಗೊತ್ತಾಗಿ ಹಣ ಬರುವುದೆಂದು ಬ್ಯಾಂಕಿನವರಿಗೆ ಎಲ್ಲಿಯವರೆಗೂ ನಂಬಿಕೆಯಿರುವುದೊ ಅಲ್ಲಿಯವರೆಗೂ ಬ್ಯಾಂಕು ಕುಳದ ಪರವಾಗಿ ಹಣವನ್ನು ಕೊಡುತ್ತ ತೆಗೆದುಕೊಳ್ಳುತ್ತ ಇರುವುದು. ಇತ್ತ ಬ್ಯಾಂಕಿನಲ್ಲಿ ಹಣವಿಟ್ಟವರಿಗೆ ದಿನದಿನವೂ ಅದನ್ನು ಕಾಪಾಡುವ ಚಿಂತೆ ತಪ್ಪಿತು. ತೆರತಕ್ಕದ್ದನ್ನು ಸುಲಭವಾಗಿ ತೆರುವ ಸಹಾಯ ದೊರಕಿತು. ಬರಬೇಕಾದುದನ್ನು ತಾವೇ ಆ ಸ್ಥಳಕ್ಕೆ ಹೋಗಿ ತೆಗೆದುಕೊಂಡು

ಬರಬೇಕಾದ ಕಷ್ಟ ತಪ್ಪಿತು. ಹೆಚ್ಚು ಹಣವನ್ನು ಬ್ಯಾಂಕಿನಲ್ಲಿಟ್ಟವರಿಗೆ ಬ್ಯಾಂಕು ಸ್ವಲ್ಪ ಬಡ್ಡಿಯನ್ನು ಬೇರೆ ಕೊಡಬಹುದು. ಹೀಗೆ ಎಲ್ಲ ವಿಧದಲ್ಲಿಯೂ ಬ್ಯಾಂಕಿನ ಮೂಲಕ ಹಣಕಾಸಿನ ವ್ಯವಸ್ಥೆಮಾಡುವುದೂ ಮಾಡಿಸುವುದೂ ಅನುಕೂಲವೆಂದು ತಿಳಿದುಬಂದಿರುವುದರಿಂದ ದೇಶದಲ್ಲಿ ನಡುಮಟ್ಟದ ಮತ್ತು ಅವರಿಗೆ ಮೇಲ್ಪಟ್ಟ ಜನವರ್ಗದವರೆಲ್ಲರೂ ತಮ್ಮ ಆದಾಯ ವೆಚ್ಚವನ್ನು ಬ್ಯಾಂಕುಗಳ ಮೂಲಕವೇ ಮಾಡುವರು. ಅವರ ನಗದು ಗಂಟೆಲ್ಲಾ ಬ್ಯಾಂಕಿನ ಕೈಯಲ್ಲಿರುತ್ತದೆ; ಹಣದ ಕೆಲಸ ವನ್ನೆಲ್ಲಾ ಚೆಕ್ಕುಗಳೇ ಮಾಡುತ್ತವೆ. ಹೀಗೆ ನಾಣ್ಯಕ್ಕಿಂತ ನೋಟು, ನೋಟಿಗಿಂತ ಚೆಕ್ಕು ಇವುಗಳ ಓಡಾಟ ಹೆಚ್ಚಿದರೆ ಸರಕಾರದ ನಾಣ್ಯ ನಿರ್ಮಾಣ ಕಾರ್ಯಕ್ಕೆ ವ್ಯಾಪಾರ ಪ್ರಪಂಚದಲ್ಲಿ ಪ್ರಭಾವ ಕಡಮೆಯಾಗಿ ಅದು ಹಿಂದೆ ಬೀಳುವುದು. ಒಟ್ಟಿನಲ್ಲಿ ಹಣದ ಕೆಲಸ ಬಹುವಾಗಿ ಹೆಚ್ಚಿದರೂ ನಾಣ್ಯದ ಕೆಲಸವೂ ಅಗತ್ಯವೂ ಕಡಮೆಯಾಗುವುವು.

**ಪ್ರಧಾನ ಬ್ಯಾಂಕಿಗೆ ನೋಟು ನಿರ್ಮಾಣದ ಕೆಲಸ.**—ಬ್ಯಾಂಕುಗಳ ಕಾರ್ಯ ಜನಜೀವನದ ಸುಮಾರು ಎಲ್ಲ ರಂಗಗಳಿಗೂ ಹರಡಿರುತ್ತದೆ. ಇದನ್ನು ತಿಳಿದ ಸರಕಾರದವರು ಸಾಧಾರಣವಾಗಿ ತಮ್ಮ ದೇಶದ ಪ್ರಧಾನ ಬ್ಯಾಂಕಿನವರಿಗೇ ನೋಟಿನ ನಿರ್ಮಾಣ ಮತ್ತು ಸಂಚಾಲನೆಯ ಸರ್ವಾಧಿ ಕಾರವನ್ನೂ ಭಾರವನ್ನೂ ಒಪ್ಪಿಸಿ ತಮ್ಮ ಆದಾಯ ವೆಚ್ಚವನ್ನು ಕೂಡ ಆ ಬ್ಯಾಂಕಿನ ಮೂಲಕ ಮಾಡಿಕೊಳ್ಳುವರು. ಹಲವು ಬ್ಯಾಂಕುಗಳಿಗೆ ನೋಟಿನ ನಿರ್ಮಾಣದ ಅಧಿಕಾರವನ್ನು ಕೊಟ್ಟರೆ ದೇಶದ ಜನರಿಗೆ ಅನ್ಯಾಯವೂ ಮೋಸವೂ ನಷ್ಟವೂ ಆದಾವೆಂದು ಶಂಕಿಸಿ ಈ ರೀತಿ ಏರ್ಪಡಿ ಸುವರು. ಶಾಸನಗಳನ್ನು ಮಾಡಿ, ಹಣವ್ಯವಸ್ಥೆಯಿಂದ ದೇಶಕ್ಕೆ ತೃಪ್ತಿಯೂ, ಸುಭಿಕ್ಷವೂ, ಸರ್ವತೋಮುಖವಾದ ಪ್ರಯೋಜನವೂ ಉಂಟಾಗುವಂತೆ ವ್ಯವಸ್ಥೆಮಾಡಿ ಹಣನಿರ್ಮಾಣದ ಕಾರ್ಯದಲ್ಲಿ ತಾವು ತಟಸ್ಥರಾಗುವರು. ಹೀಗೆ ಪ್ರಧಾನ ಬ್ಯಾಂಕು ಒಂದು ಕಡೆ ಸರಕಾರಕ್ಕೂ (ಆ ಮೂಲಕ ಜನಸಾಮಾನ್ಯಕ್ಕೂ) ಇನ್ನೊಂದು ಕಡೆ ದೇಶದ ವ್ಯಾಪಾರ ಕೈಗಾರಿಕೆಯವರಿಗೂ ಬ್ಯಾಂಕುಗಳವರಿಗೂ ನಡುವೆ ನಿಂತು ಯಾವ ರೀತಿ ಹಣದ ವ್ಯವಸ್ಥೆ ಆಗಬೇಕೊ ಆ ರೀತಿ ಮಾಡುವುದು. ದಿನದಿನದ ಬಳಕೆಗೂ,

ಒಳಹೊರ ವ್ಯಾಪಾರಗಳಿಗೂ, ಕೈಗಾರಿಕೆ ಉದ್ಯಮಗಳ ಚಾಲನೆಗೂ ಎಲ್ಲ ಕೈಸಾಲ ಲೇವಾದೇವಿಗೂ ಬೇಕಾಗುವಷ್ಟು ಮೊತ್ತದಲ್ಲಿ ಹಣ ಒದಗುವಂತೆ ಏರ್ಪಡಿಸುವುದು ಇವರ ಉದ್ಯೋಗ.

**ಬ್ಯಾಂಕೆಂದರೇನು?**— ಬ್ಯಾಂಕುಗಳ ಕೈಯಲ್ಲಿ ಜನರ ಸುಮಾರು ಎಲ್ಲ ನಗದೂ ಇರುವುದು ವಾಡಿಕೆಯಾದ್ದರಿಂದ ಆ ನಗದಿನ ಪ್ರಭಾವವನ್ನು ಎಷ್ಟು ಸಾಧ್ಯವಾದರೆ ಅಷ್ಟು ಹೆಚ್ಚಿಸಿಕೊಳ್ಳುವುದು ಬ್ಯಾಂಕಿಗೆ ಅಗತ್ಯವಾಗುವುದು; ಲಾಭಕರವಾಗುವುದು. ಬ್ಯಾಂಕುಗಳು ಹಣದ ಅಂಗಡಿಗಳು. ಇತರ ಅಂಗಡಿಗಳಲ್ಲಿ ಕಾಳು, ಕಡ್ಡಿ, ಬಟ್ಟೆ, ಹಣ್ಣು, ಪುಸ್ತಕ ಮುಂತಾದುವನ್ನು ಹೇಗೆ ಕೊಂಡು ಮಾರುವರೊ ಹಾಗೆ ಬ್ಯಾಂಕುಗಳವರು ಹಣದ ವ್ಯಾಪಾರ ವನ್ನು ಮಾಡುವರು. ಹಣವನ್ನು ಕೂಡಿಟ್ಟುಕೊಂಡಿರುವ ಜನರಿಂದ ಹಣವನ್ನು ಸಂಚಯನಮಾಡಿ, ಹಣದ ಸಹಾಯವನ್ನು ಬಯಸಿ ಅದನ್ನು ಉಪಯೋಗಿಸುವ ಉದ್ಯೋಗಿಗಳಿಗೆ ಅದನ್ನು ಎರವಲಾಗಿ ಕೊಟ್ಟು, ಇಬ್ಬರ ಪ್ರಯೋಜನವನ್ನೂ ಸಾಧಿಸಿ, ದೇಶದ ಉತ್ಪತ್ತಿ ಕಾರ್ಯಗಳಿಗೆ ಸಹಾಯಮಾಡಿ, ಇಂತಹ ಅನುಕೂಲವನ್ನು ಕಲ್ಪಿಸಿಕೊಟ್ಟುದಕ್ಕಾಗಿ ತಮ್ಮ ಶ್ರಮಕ್ಕೆ ಪ್ರತಿಫಲವನ್ನೂ ಲಾಭವನ್ನೂ ಸಂಪಾದಿಸುವ ದಲ್ಲಾಳಿ ಅಂಗಡಿ ಗಳು ಎಂದೂ ಬ್ಯಾಂಕುಗಳನ್ನು ಕರೆಯಬಹುದು. ಇತರರ ಹಣವನ್ನು ಸಾಲ ತೆಗೆದುಕೊಳ್ಳುವುದು; ತಮಗೂ ಸಾಹುಕಾರ ಸಾಲಗಾರರಿಗೂ ಈ ಕಾರ್ಯದಿಂದ ಪರಮಾವಧಿ ಪ್ರಯೋಜನ ಬರುವಂತೆ ಮಾಡಿ ಕೊಳ್ಳುವುದು —ಇದು ಎಲ್ಲ ವ್ಯಾಪಾರ ಲೇವಾದೇವಿ ಬ್ಯಾಂಕುಗಳ ಮುಖ್ಯ ಲಕ್ಷಣ; ಕೆಲಸ.

**ಬಗೆ ಬಗೆಯ ಬ್ಯಾಂಕುಗಳು.** — ಈಗಿನ ಪ್ರತಿಯೊಂದು ಕೂಡು ಬಂಡ ವಾಳದ ಬ್ಯಾಂಕಿಗೂ ತನ್ನ ಷೇರಿನ ಹಣವಿರುತ್ತದೆ; ಕುಳಗಳು ತನ್ನಲ್ಲಿಟ್ಟ ಡಿಪಾಸಿಟ್ ಹಣವಿರುತ್ತದೆ. ಇವೆರಡೂ ಸೇರಿ ಬ್ಯಾಂಕಿನ ಕೆಲಸಕ್ಕೆ ತಳಹದಿಯಾಗುತ್ತವೆ. ಡಿಪಾಸಿಟ್‌ದಾರರೆಲ್ಲರೂ ಒಂದೇ ದಿನ ಬ್ಯಾಂಕಿಗೆ ಬಂದು ತಮ್ಮ ಹಣವನ್ನು ಹಿಂದಕ್ಕೆ ಕೇಳುವ ಸಂಭವವಿಲ್ಲ. ಕುಳಗಳ ಸಾಮಾನ್ಯ ನಡವಳಿಕೆಯಿಂದಲೂ, ದಿನದಿನದ ವ್ಯಾಪಾರದ ಅಂದಾಜಿನಿಂದಲೂ ಇಷ್ಟು ಮಂದಿ ಸುಮಾರು ಇಷ್ಟು ಹಣವನ್ನು ತೆಗೆದಾರೆಂದು ಬ್ಯಾಂಕಿಗೆ

ಊಹೆ ಇರುವುದು. ಆದುದರಿಂದ ನಾಣ್ಯ ನೋಟುಗಳ ರೂಪದಲ್ಲಿ ಆ ಅಂದಾಜಿನ ಮೊತ್ತಕ್ಕೆ ಮೀರದಂತೆ ಅವರು ಸರ್ವದಾ ನಗದನ್ನು ಇಟ್ಟುಕೊಂಡಿರುವರು. ಕೆಲವು ಕಡೆ ಇಷ್ಟು ಪ್ರಮಾಣದ ನಗದನ್ನು ಇಟ್ಟಿರಲೇಬೇಕೆಂದು ಸರಕಾರದ ಶಾಸನವಿರುವುದೂ ಉಂಟು. ಬರುವುದನ್ನು ಬರಮಾಡಿಕೊಂಡು ಕೊಡುವವರಿಗೆ ಕೊಟ್ಟು ಅಂತೂ ಅಷ್ಟಾದರೂ ಪ್ರತಿದಿನವೂ ತಮ್ಮ ಕೈಯಲ್ಲಿ ನಗದು ಹಣ ನಿಲ್ಲುವಂತೆ, ತಾವು ಕೊಡುವ ಸಾಲಗಳ ವಾಯಿದೆ ಹೊಂದಿಸಿಕೊಳ್ಳುವರು. ಹಣ ಹಿಂದಕ್ಕೆ ಕೇಳಿದವರಿಗೆ ಕೊಡುವುದಿಲ್ಲವೆಂದು ಎಂದಿಗೂ ಹೇಳರು. ಉಳಿದ ಹಣವನ್ನೆಲ್ಲ ತಮಗೆ ಸರಿತೋರಿದಂತೆ ವರ್ತಕರ ಮೇಲೆ ಸಾಲ ಹಾಕುತ್ತಾರೆ. ಅಥವಾ ಲೇವಾದೇವಿ ಪತ್ರ, ವ್ಯಾಪಾರದ ಹುಂಡಿ, ಸರಕಾರದ ಸಾಲಪತ್ರ, ಅಥವಾ ಕೈಗಾರಿಕೆಯ ಗಟ್ಟಿ ಬಂಡವಾಳ ಪತ್ರ ಮುಂತಾದ ಆಸ್ತಿಯನ್ನು ಕೊಂಡಿಟ್ಟುಕೊಳ್ಳುತ್ತಾರೆ. ಮುಖ್ಯವಾಗಿ ಯಾವುದಕ್ಕೆ ಎಲ್ಲ ಸಮಯದಲ್ಲಿಯೂ ಗಿರಾಕಿ ಇದ್ದೇ ಇರುವುದೊ, ಪೇಟೆಯಲ್ಲಿ ಯಾವುದನ್ನು ಮಾರಿದ ತಕ್ಷಣ ನಗದು ಕೈಗೆ ಬರುವುದೋ, ಅಂಥ ನಗದಿಗೆ ಸಮಾನವಾದ ಹಣ ಪತ್ರಗಳನ್ನು ಕೊಂಡಿಟ್ಟುಕೊಳ್ಳುತ್ತಾರೆ. ವ್ಯಾಪಾರದ ಬ್ಯಾಂಕುಗಳೆಲ್ಲ ಸ್ವದೇಶಿ ಪರದೇಶಿ ವ್ಯಾಪಾರಗಳೆರಡಕ್ಕೂ ಕೈಹಾಕಬಲ್ಲುವು. ಇವರ ಕಲಾಪ ೯೦ ದಿನಗಳ ಗಡುವಿಗೆ ಮೀರದ ಸಾಲಗಳನ್ನು ಒದಗಿಸುವುದರಲ್ಲಿ ನಡೆಯುತ್ತದೆ. ವರ್ತಕ ಮಂಡಲಿಯಲ್ಲಿ ಇನ್ನೊಂದು ವರ್ಗ ದಿನದಿನಕ್ಕೆ ವಾರವಾರಕ್ಕೆ ವಾಯಿದೆ ಹೊತ್ತು ಬ್ಯಾಂಕುಗಳಿಂದ ಹಣವನ್ನು ಕಡವಾಗಿ ತೆಗೆದುಕೊಂಡು ದಲ್ಲಾಳಿ ಕೆಲಸ ಮಾಡುವರದು. ಲೇವಾದೇವಿ ಕೆಲಸಗಳ ಜೊತೆಗೆ ನಿಡುಸಾಲ ಕೊಟ್ಟು ಹೊಸ ಕೈಗಾರಿಕೆಗಳಿಗೆ ಬಂಡವಾಳವೊದಗಿಸುವ ಕಾರ್ಯವನ್ನು ಮಾಡುವ ಬ್ಯಾಂಕುಗಳು ಬೇರೆ ಉಂಟು. ಮತ್ತೊಂದು ಸಂಸ್ಥೆ ಚರಸ್ಥಿರ ಸ್ವತ್ತುಗಳನ್ನು ಕೊಳ್ಳುವುದು, ಮಾರುವುದು, ಅವುಗಳ ಒಡೆತನವನ್ನು ಕೈ ಕೈ ಬದಲಾಯಿಸುವುದು, ಅವಕ್ಕೆ ಸಂಬಂಧಪಟ್ಟ ಒಡೆತನ ಸಾಲ ಪತ್ರಗಳನ್ನು ವರ್ಗಾಯಿಸುವುದು ಮುಂತಾದ ಕೆಲಸ ಮಾಡುವುದು. ಈ ಎಲ್ಲ ಮಂಡಲಗಳನ್ನೂ ನೇರವಾಗಿಯೊ ಪರೋಕ್ಷವಾಗಿಯೊ ಒಳಗುಮಾಡಿ

ಕೊಂಡು, ಎಲ್ಲಕ್ಕೂ ಮೇಲ್ಪಟ್ಟು, ದೇಶದ ಹಣ ಮಂಡಲದ ಅಧಿದೇವತೆಯಂತೆ, ಸರಕಾರಿಯಾಗಿಯೊ ಸಾಹುಕಾರಿಯಾಗಿಯೊ ಒಂದು ಸೆಂಟ್ರಲ್ ಬ್ಯಾಂಕಿರುತ್ತದೆ. ಇದು ತನ್ನ ಶಕ್ತಿ ಸಂಪತ್ತನ್ನೆಲ್ಲ ಪ್ರಯೋಗಿಸಿ ದೇಶದ ಆರ್ಥಿಕ ಚಕ್ರವನ್ನು ಸ್ತಿಮಿತದಲ್ಲಿ ನಡಸುತ್ತದೆ. ಇಂಗ್ಲಂಡ್ ಅಮೇರಿಕಾ ಜರ್ಮನಿಗಳಲ್ಲಿ ಬ್ಯಾಂಕಿಂಗ್ ಪದ್ಧತಿ ಬಹಳ ದಕ್ಷತೆಯಿಂದ ನಡೆಯುವುದು. ಆದರೂ ಅವುಗಳಲ್ಲಿ ಹಲವು ವ್ಯತ್ಯಾಸಗಳಿವೆ. ಬಹಳ ಕಾಲದಿಂದಲೂ ಈಗಲೂ ಇಂಗ್ಲಂಡು ಇಂಡಿಯಾಕ್ಕೇ ಹೆಚ್ಚು ಹಣ ಸಂಬಂಧವಿದೆ; ಇಂಗ್ಲಂಡಿನ ಹಣದ ಪೇಟೆ ಸುವ್ಯವಸ್ಥವಾಗಿರುವಂತೆ ಬೇರೆ ಪೇಟೆಗಳಿಲ್ಲ; ಅಲ್ಲಿನ ವಿಚಕ್ಷಣೆ ಬಹು ಸೂಕ್ಷ್ಮವಾದುದು. ಈಗಲೂ ಪ್ರಪಂಚದ ಲೇವಾದೇವಿ ಮಂಡಲಕ್ಕೆ ಇಂಗ್ಲಂಡು ಕೇಂದ್ರಸ್ಥಾನವಾಗಿದೆ. ಆದ್ದರಿಂದ ಅಲ್ಲಿನ ಪದ್ಧತಿಯನ್ನು ಸಂಕ್ಷೇಪವಾಗಿ ಇಲ್ಲಿ ವರ್ಣಿಸಿದೆ.

## ಇಂಗ್ಲಿಷ್ ಕೂಡು ಬಂಡವಾಳದ ಬ್ಯಾಂಕುಗಳು

ಈಗ ಸುಮಾರು ಎಲ್ಲ ದೊಡ್ಡ ಆರ್ಥಿಕ ಸಂಘಗಳ ಬಂಡವಾಳವೂ ಷೇರುಗಳ ರೂಪದಲ್ಲಿ ಒದಗುತ್ತದೆ. ಬ್ಯಾಂಕುಗಳ ಮೂಲಧನವೂ ಹೀಗೆಯೇ ಸಾವಿರಾರು ಜನ ಷೇರುದಾರರಿಂದ ಸಂಗ್ರಹವಾಗುವುದು. ಇಂಗ್ಲಿಷ್ ವ್ಯಾಪಾರದ ಬ್ಯಾಂಕುಗಳಲ್ಲಿ ಮುಖ್ಯವಾದುವು ಐದು: ದಿ ಲಾಯಿಡ್ಸ್ ಬ್ಯಾಂಕ್, ದಿ ಬಾರ್ಕ್ಲೇಸ್ ಬ್ಯಾಂಕ್, ದಿ ವೆಸ್ಟ್ ಮಿನಿಸ್ಟರ್ ಬ್ಯಾಂಕ್, ದಿ ಲಂಡನ್ ಅಂಡ್ ಕೌಂಟಿ ಬ್ಯಾಂಕ್, ದಿ ಮಿಡ್ಲೆಂಡ್ ಬ್ಯಾಂಕ್. ಅವುಗಳ ಬಂಡವಾಳ, ಡಿಪಾಸಿಟ್ ಕೆಲಸ, ವ್ಯಾಪಾರ, ಲೇವಾದೇವಿ ಇವುಗಳ ಮೊತ್ತ ಅದ್ಭುತವಾದುದು. ಅವು ಮನಸ್ಸು ಮಾಡಿದರೆ—ಅದಕ್ಕೆ ಸರಕಾರದ ಬೆಂಬಲ ಬಾರದಿದ್ದರೆ—ಬ್ಯಾಂಕ್ ಅಫ್ ಇಂಗ್ಲಂಡಿನ ಕೆಲಸಗಳಿಗೂ ಅಡ್ಡಿ ತಂದು, ಅದನ್ನು ಒಂದೇ ದಿನದಲ್ಲಿ ಒಡೆದುಬಿಡಬಹುದು. ಅಷ್ಟು ಹೆಚ್ಚು ಪರಿಮಾಣದಲ್ಲಲ್ಲದಿದ್ದರೂ ಅದೇ ಬಗೆಯ ಕೆಲಸವನ್ನು ಮಾಡುವ ಇನ್ನೂ ಅನೇಕ ಬ್ಯಾಂಕುಗಳಿರುವುವು.

**ಕೆಲಸ — ಪ್ರಭಾವ.** — ಸಾಮಾನ್ಯ ಜನರ ಸಂಬಂಧವೆಲ್ಲ ಇಂತಹ ಬ್ಯಾಂಕುಗಳೊಡನೆಯೇ ಇರುವುದು. ಇವೇ ಡಿಪಾಸಿಟ್ ಬ್ಯಾಂಕುಗಳೂ

ಹೌದು. ಎಲ್ಲ ಬಗೆಯ ಡಿಪಾಸಿಟ್ಟನ್ನೂ ತೆಗೆದುಕೊಂಡು ಎಲ್ಲ ಬಗೆಯ ಕಿರುವಾಯಿದೆ ಸಾಲಗಳನ್ನೂ ಕೊಡುತ್ತವೆ; ಇವುಗಳಲ್ಲಿ ದೇಶ ವಿದೇಶಗಳ 'ಸ್ಟಾಕು,' 'ಷೇರು'ಗಳ ಕೆಲಸವನ್ನು ಮಾಡುವ ಇಲಾಖೆಗಳಿರುತ್ತವೆ; ಯಾರಿಗೆ ಬಂಡವಾಳ ಬೇಕಾಗಿದೆ? ಸಾಲವನ್ನು ಬೇಡುತ್ತಿರುವವನ, ಸಂಸ್ಥೆಯ ಅಥವಾ ದೇಶದ ಅವಸ್ಥೆ ಹೇಗಿದೆ? ಎಲ್ಲಿ ಹೇಗೆ ಹೂಡಿದರೆ ಬಂಡವಾಳಕ್ಕೆ ಹೆಚ್ಚು ಬಡ್ಡಿಯೂ ಲಾಭವೂ ಬರುವುವು? ಮುಂತಾದ ಸಂಗತಿಗಳನ್ನು ಕುಳಗಳಿಗೆ ತಿಳಿಸುವ ಏರ್ಪಾಡಿರುತ್ತದೆ. ಹಣವನ್ನು ಎರವಲಾಗಿ ಕೊಟ್ಟು, ಬಾಂಡು, ಕೂಪನ್ನು, ಡಿವಿಡೆಂಡ್ ಚೀಟಿ, ಬಡ್ಡಿಯ ಚೀಟಿ ಮುಂತಾದ ಹಕ್ಕು ಪತ್ರಗಳನ್ನು ಇಟ್ಟುಕೊಂಡಿರುವವರಿಗೆ ಬರಬೇಕಾದ ಹಣವನ್ನೆಲ್ಲಾ ಇವರೇ ತರಿಸಿಕೊಡುವರು; ಜನರು ಕೊಂಡು ಕೊಂಡಿರುವ ಸೆಕ್ಯೂರಿಟಿಗಳನ್ನೂ ಬೆಲೆಯುಳ್ಳ ಇತರ ವಸ್ತು ಪತ್ರಗಳನ್ನೂ ಭದ್ರವಾಗಿಟ್ಟುಕೊಳ್ಳುವರು; ಸಣ್ಣ ಮೊತ್ತಗಳಲ್ಲಿ ಹಣವನ್ನು ಕೂಡಿಡುವ ಸಣ್ಣ ವರಮಾನವುಳ್ಳವರ ಹಣವನ್ನು ಕೂಡಿಸಿ ಅವರಿಗೆ ಆಸ್ತಿಮಾಡಿಕೊಡುವರು; ಕುಳಗಳು ಕಾಲ ಕಾಲಕ್ಕೆ ತೆರಬೇಕಾದ ವಿಮೆ, ಕಂತು, ಚಂದಾ, ಮಕ್ಕಳು ಮರಿ ವಿದ್ಯಾಭ್ಯಾಸಕ್ಕೆ ತೆರುವ ವೇತನ, ಪ್ರವಾಸದಲ್ಲಿ ಅವರ ಊಟ ಉಪಚಾರ ಖರ್ಚು, ದೇಶಾಟನೆಗೆ ಬೇಕಾದ ಕೈಹಣ ಮುಂತಾದುವನ್ನೆಲ್ಲಾ ಸುಲಭವಾಗಿ ತೆರಲು ಅನುಕೂಲವೊದಗಿಸುವರು. ಇವರ ನಂಬಿಕೆಯ ಹಣಪತ್ರವನ್ನು (Letter of Credit) ಎಲ್ಲಿ ತೋರಿಸಿದರೂ ವ್ಯಾಪಾರ ಪ್ರಪಂಚದಲ್ಲಿ ಹಣವೂ ಬೇಕಾದ ಅನುಕೂಲವೂ ದೊರೆಯುವುವು. ಯಾವ ದೇಶದ ಯಾವ ಬ್ಯಾಂಕಿನವರೂ ಆ ಪತ್ರವನ್ನು ಮನ್ನಿಸುವರು. ಬ್ಯಾಂಕಿನವರೇ ಮರಣಶಾಸನ, ಆಸ್ತಿ ವಿಭಾಗ, ಅಪ್ರಾಪ್ತವಯಸ್ಕರ ಹೆಸರಿನಲ್ಲಿಡುವ ಠೇವಣಿ (Trust) ಮುಂತಾದುವಕ್ಕೆ ಸಂಬಂಧಿಸಿದ ಹಣವನ್ನೆಲ್ಲಾ ಕಾಪಾಡಿಡುವರು; ವೃದ್ಧಿ ಮಾಡುವರು. ವಟ್ಟ ಕೊಟ್ಟರೆ ಸುಮಾರು ಎಲ್ಲ ದೇಶದ ಹುಂಡಿಗಳನ್ನೂ ಕೊಳ್ಳಲು ಸಿದ್ಧರಾಗಿರುವರು. ವರಮಾನದ ತೆರಿಗೆ, ಇತರ ತೆರಾಣೆ ಮುಂತಾದುವನ್ನು ಗುಣಿಸಿ ಸರಕಾರಕ್ಕೆ ಪಾವತಿ ಮಾಡುವರು. ಸಾಧಾರಣ ವ್ಯಾಪಾರ, ಉದ್ಯೋಗ, ಕೈಗಾರಿಕೆ ಮುಂತಾದುವಕ್ಕೆ ಸಂಬಂಧಿಸಿದ ಎಲ್ಲ ಸಂದಾಯಗಳನ್ನು ಮಾಡುವುದ

ರಿಂದಲೂ ಎಲ್ಲಿಗೆ ಬೇಕಾದರೆ ಅಲ್ಲಿಗೆ ಹಣವನ್ನೂ ಲೇವಾದೇವಿ ಪತ್ರಗಳನ್ನೂ ಹುಂಡಿಗಳನ್ನೂ ಸುಲಭವಾಗಿ ಸಾಗಿಸುವುದರಿಂದಲೂ ಜನರಿಗೆ ಬ್ಯಾಂಕು ಗಳಲ್ಲಿ ನಂಬಿಕೆ ಊರಿ, ಎಲ್ಲ ಆರ್ಥಿಕ ಕಾರ್ಯಕಲಾಪಗಳ ಹಿಂದೆಯೂ ಬ್ಯಾಂಕುಗಳು ನಿಲ್ಲುವಂತೆ ಆಗಿರುವುದು.

**ಡಿಪಾಸಿಟ್ಟು ನಿರ್ಮಾಣ ವಿಧಾನ.**— ಈ ಮುಂಚೆಯೇ ಹೇಳಿರುವಂತೆ ಡಿಪಾಸಿಟ್ಟು ಎರಡು ಬಗೆ: ಜನರು ಬ್ಯಾಂಕಿನಲ್ಲಿಡುವ ಗಂಟು ಹಣವೊಂದು; ಬ್ಯಾಂಕಿನವರೇ ತಯಾರಿಸುವ ಡಿಪಾಸಿಟ್ಟು ಹಣವೊಂದು. ಜನರಿಟ್ಟ ಗಂಟು ಫಿಕ್ಸೆಡ್ ಡಿಪಾಸಿಟ್ಟಾಗಿಯೊ ಚಾಲ್ತಿ (ಕರೆಂಟ್) ಡಿಪಾಸಿಟ್ಟಾಗಿಯೊ ಇರಬಹುದು. ಫಿಕ್ಸೆಡ್ ಡಿಪಾಸಿಟ್ ಆದರೆ ಕುಳ ಇಷ್ಟು ಕಾಲದವರೆಗೆ ಅದನ್ನು ಹಿಂದಕ್ಕೆ ಕೇಳಕೂಡದೆಂಬ ನಿಯಮವಿರುತ್ತದೆ. ದೊಡ್ಡ ಮೊತ್ತವಾಗಿ, ಅದನ್ನು ಹಿಂದಕ್ಕೆ ತೆಗೆದುಕೊಳ್ಳಬೇಕಾದರೆ ಮುಂದಾಗಿ ಎಚ್ಚರಿಕೆ ಕೊಡಬೇಕೆಂಬ ಮಾತೂ ನಿಯಮವೂ ಇರುತ್ತವೆ. ಎಂದರೆ ಅಷ್ಟು ಕಾಲದವರೆಗೂ ಕುಳ ಅದನ್ನು ಬ್ಯಾಂಕಿನ ವಶಕ್ಕೇ ಬಿಟ್ಟಿರು ವುದರಿಂದ ಅದರ ಆಧಾರದಮೇಲೆ ಬ್ಯಾಂಕು ತನ್ನ ಗಿರಾಕಿಗಳಿಗೆ ಸಾಲ ಕೊಡುತ್ತ ಹೋಗಬಹುದು; ಲಾಭವನ್ನೂ ಪ್ರಯೋಜನವನ್ನೂ ಹೊಂದಬಹುದು. ಚಾಲ್ತಿ ಡಿಪಾಸಿಟ್ಟಿನ ವಿಷಯ ಹಾಗಲ್ಲ. ತಮ್ಮ ಚಾಲ್ತಿ ಡಿಪಾಸಿಟ್ ಮೊಬಲಗಿನ ಒಂದು ಗೊತ್ತಾದ ಪ್ರಮಾಣಕ್ಕೆ ಸರಿಯಾಗಿ ನಗದನ್ನು ತಮ್ಮ ಬಳಿಯಲ್ಲಿಯೋ ಬೇರೆ ಇನ್ನೆಲ್ಲಿಯಾದರೂವೋ—ಮುಖ್ಯ ವಾಗಿ ಸೆಂಟ್ರಲ್ ಬ್ಯಾಂಕಿನಲ್ಲಿ—ಇಟ್ಟುಕೊಂಡು ಉಳಿದ ಹಣವನ್ನು ಒಟ್ಟಿಗೆ ಹೂಡಿ* ಲೇವಾದೇವಿ ಮಾಡುವರು. ಚಾಲ್ತಿ ಡಿಪಾಸಿಟ್‌ದಾರರು ತಮ್ಮ ಠೇವಣಿಗಿಂತ ಹೆಚ್ಚು ಹಣವನ್ನು ಬಯಸುವಾಗ ಬ್ಯಾಂಕಿನವರು ಕುಳದ ನಂಬಿಕೆಯ ಮೇಲೆ ಓವರ್ ಡ್ರಾಫ್ಟು ಎಂಬ ಸಾಲವನ್ನು ಕೊಡುವರು. ಜನರು ಹಣವನ್ನೇ ತಂದು ಡಿಪಾಸಿಟ್ ಇಡಬೇಕೆಂದಿಲ್ಲ. ತಮ್ಮಲ್ಲಿರುವ, ಬ್ಯಾಂಕು ಒಪ್ಪುವ ಚರಸ್ವತ್ತುಗಳನ್ನು, ಮುಖ್ಯವಾಗಿ ಆಸ್ತಿಯ ಮತ್ತು ಬಡ್ಡಿಯ ಪತ್ರಗಳನ್ನು (Bonds and Investments), ಆಧಾರಮಾಡಿ ತಮ್ಮ ಹೆಸರಿನಲ್ಲಿ ಆ ಮೊತ್ತದಷ್ಟು ಡಿಪಾಸಿಟ್ ಇಡಿಸಿ ಕೊಳ್ಳಬಹುದು. ನಂಬಿಕಸ್ತರಾದ ಕುಳಗಳಿಗೆ ಬ್ಯಾಂಕಿನವರೇ, ಕುಳದ

ಜಾಮೀನಿನ ಮೇಲೆಯೊ, ವ್ಯಾಪಾರದ ಅಡವಿನ ಮೇಲೆಯೊ, ಆಸ್ತಿ ಅಥವಾ ಸಾಲ ಪತ್ರಗಳ ಕಂದುವಿನ ಮೇಲೆಯೊ ಕಿರುವಾಯಿದೆಯ ಸಾಲ ಕೊಟ್ಟು, ಆ ಮೊತ್ತಕ್ಕೆ ಗಿರಾಕಿಯ ಹೆಸರಿನಲ್ಲಿ ಡಿಪಾಸಿಟ್ ಲೆಕ್ಕವನ್ನು ನಿರ್ಮಾಣ ಮಾಡಬಹುದು; ಅದರಮೇಲೆ ಓವರ್ ಡ್ರಾಫ್ಟ್ ಅವಕಾಶ ಕಲ್ಪಿಸಬಹುದು. ಹೀಗೆ ನಾನಾಪಥವಾಗಿ ಬ್ಯಾಂಕುಗಳವರು ಚಾಲ್ತಿ ಡಿಪಾಸಿಟ್ ನಿರ್ಮಾಣ ಮಾಡುವರು.

**ದೇಶಕ್ಕೆಲ್ಲ ಒಂದೇ ಬ್ಯಾಂಕಿದ್ದರೆ?**— ಈ ಕೆಲಸವನ್ನು ಎಷ್ಟರವರೆಗೆ ಮಾಡಬಹುದು? ಮಿತಿಯೇನು? ಎಂಬುದು ಮುಂದಿನ ಪ್ರಶ್ನೆ: ಸದ್ಯಕ್ಕೆ ದೇಶಕ್ಕೆಲ್ಲಾ ಒಂದೇ ಬ್ಯಾಂಕಿದೆಯೆಂದುಕೊಳ್ಳೋಣ. ಯಾರಾದರೊಬ್ಬರು ೧ ಲಕ್ಷ ಪೌಂಡು (£) ನಗದು ಹಣವನ್ನು ಚಾಲ್ತಿ ಡಿಪಾಸಿಟ್ಟಿಟ್ಟರೆನ್ನೋಣ. ಬ್ಯಾಂಕಿನ ಅನುಭವದಿಂದ ಅದರ ಶೇಕಡ ೧೦ರ ಪ್ರಮಾಣದ ನಗದನ್ನು ಕೈಯಲ್ಲಿಟ್ಟುಕೊಂಡರೆ ಸಾಕೆಂದು ತೋರಿದ ಪಕ್ಷದಲ್ಲಿ ಬ್ಯಾಂಕಿನವರು ಸಾಧಾರಣವಾಗಿ ೯ ಲಕ್ಷ ಪೌಂಡುಗಳಷ್ಟು ಸಾಲದ ಡಿಪಾಸಿಟ್ಟುಗಳನ್ನು (Credits) ನಿರ್ಮಾಣಮಾಡಿ ಸಾಲ ಹಾಕುವರು. ಎಂದರೆ ನಗದು ಡಿಪಾಸಿಟ್ಟಿನ ಜೊತೆಗೆ ಇದು ಸೇರಿ ಒಟ್ಟು £ ೧೦ ಲಕ್ಷ ಡಿಪಾಸಿಟ್ ಲೆಕ್ಕದ ವ್ಯಾಪಾರವನ್ನು ಬ್ಯಾಂಕು ನಡೆಸಿದಹಾಗಾಗುತ್ತದೆ. ಶೇಕಡ ೧೦ರಂತೆ £ ೧೦,೦೦೦ ವನ್ನು ಕೈಯಲ್ಲಿಟ್ಟುಕೊಂಡರೆ ಉಳಿದ £ ೯೦,೦೦೦ ವನ್ನು ಬ್ಯಾಂಕು ಯಾವನಾದರೂ ಕುಳಕ್ಕೆ ಸಾಲ ಕೊಡುವುದೆನ್ನಿ; ಹೀಗೆ ಸಾಲ ಹಾಕಿದ ತಕ್ಷಣ ಅವನು ಅಷ್ಟಕ್ಕೂ ಒಂದು ಚೆಕ್ ಬರೆದು ತನ್ನ ಸಾಹುಕಾರನಿಗೆ ಹಣ ತೆತ್ತರೆ, ಆ ಕುಳವೂ ಬ್ಯಾಂಕಿನ ಕುಳವಾಗಿರುವುದರಿಂದ ಎರಡನೆಯವನ ಹೆಸರಿನಲ್ಲಿ £ ೯೦,೦೦೦ ಡಿಪಾಸಿಟು ಉಂಟಾಗುವುದು. ಈಗ ಬ್ಯಾಂಕಿನಲ್ಲಿ £ ೧ ಲಕ್ಷ + £ ೯೦,೦೦೦ = £ ೧,೯೦,೦೦೦ ಮೊತ್ತದ ಡಿಪಾಸಿಟು ಆಯಿತು. ಡಿಪಾಸಿಟುದಾರರು ಕೇಳಿದ ತಕ್ಷಣ ಬ್ಯಾಂಕು ಈ ಎರಡು ಹಣವನ್ನೂ ತೆರಬೇಕಾಗಿರುವುದರಿಂದ ಬ್ಯಾಂಕಿಗೆ £ ೧,೯೦,೦೦೦ ದೇಣೆಯಾಯಿತು; ಎಂದರೆ ಆ ಇಬ್ಬರಿಗೂ ಬ್ಯಾಂಕು ಸಾಲಗಾರನಾಯಿತು. ಇದಕ್ಕೆ ಆಧಾರವಾಗಿ ಬ್ಯಾಂಕಿನ ಲೆಕ್ಕದಲ್ಲಿ ಇರುವ ಆಸ್ತಿ ಯಾವುದು? (೧) ಮೊದಲನೆಯ ಕುಳದ ನಗದು ಡಿಪಾಸಿಟು £ ೧ ಲಕ್ಷ + (೨) ಒಬ್ಬ

ಕುಳ ತೆರುತ್ತೇನೆಂದು ಮಾತುಕೊಟ್ಟು ಬರೆದುಕೊಟ್ಟಿರುವ £ ೯೦,೦೦೦ ಸಾಲ ಪತ್ರ.

ಹೀಗೆ ಸಾಲಹಾಕದೆ ಬ್ಯಾಂಕು £ ೯೦,೦೦೦ ಕ್ಕೆ ಒಂದು ಆಸ್ತಿಯ ಪತ್ರವನ್ನು (Investment) ಕೊಂಡಿಟ್ಟುಕೊಂಡರೂ ಇದೇ ಫಲವಾಗುವುದು. ಹೇಗೆಂದರೆ: ಯಾರಿಂದ ಬ್ಯಾಂಕು ಆ ಪತ್ರವನ್ನು ಕೊಂಡಿತೊ ಆತನಿಗೆ ಬ್ಯಾಂಕು ತನ್ನ ಮೇಲೆ £ ೯೦,೦೦೦ಕ್ಕೆ ಚೆಕ್ ಬರೆದುಕೊಡುವುದು. ಅವನೂ ಅದೇ ಬ್ಯಾಂಕಿನಲ್ಲಿ ಲೆಕ್ಕವಿಟ್ಟಿದ್ದರೆ ಅವನ ಹೆಸರಿನಲ್ಲಿ ಆ ಮೊತ್ತಕ್ಕೆ ಹೊಸದಾಗಿ ಡಿಪಾಸಿಟ್ ತೆರೆಯುವುದು. ಎಂದರೆ ಅವನು ತನ್ನಲ್ಲಿದ್ದ ಆಸ್ತಿ ಪತ್ರವನ್ನು ಬ್ಯಾಂಕಿಗೆ ಮಾರಿ ಬಂದ ಹಣವನ್ನು ಅದೇ ಬ್ಯಾಂಕಿನಲ್ಲಿ ಚಾಲ್ತಿ ಡಿಪಾಸಿಟ್ ಇಟ್ಟಹಾಗಾಯಿತು. ಈಗ ಬ್ಯಾಂಕಿನಲ್ಲಿ £ ೧,೯೦,೦೦೦ ದೇಣೆಗೆ ಪ್ರತಿಯಾಗಿ (೧) ಮೊದಲಿನ £ ೧ ಲಕ್ಷ ನಗದು + (೨) £ ೯೦,೦೦೦ದ ಆಸ್ತಿಪತ್ರ—ಇವು ಆಸ್ತಿ ಉಂಟಾದಹಾಗಾಯಿತು. ಹೀಗೆ, ಬ್ಯಾಂಕು ಸಾಲ ಹಾಕುವುದು, ಆಸ್ತಿಪತ್ರಗಳನ್ನು ಕೊಳ್ಳುವುದು ಮುಂತಾದ ಬಗೆಯಲ್ಲಿ ಡಿಪಾಸಿಟ್ ವ್ಯಾಪಾರ ಬೆಳೆದು ಮೊದಲಿನ ಹತ್ತರಷ್ಟಾಗುವುದು.

ಇಂಥ ಬ್ಯಾಂಕುಗಳು ದೇಶದಲ್ಲಿ ಹತ್ತಾರು ಇವೆ ಎಂದಾಗಲೂ ಕಾರ್ಯದ ಗತಿ ಹೀಗೇ. ಒಂದು ಬ್ಯಾಂಕು ಕೊಡುವ ಸಾಲ ಇತರ ಬ್ಯಾಂಕುಗಳ ಗಿರಾಕಿಗಳ ಲೆಕ್ಕಕ್ಕೆ ಸೇರುವುದು. ಆಗ ಅವಕ್ಕೆ ಮೊದಲನೆಯ ಬ್ಯಾಂಕಿನಿಂದ ಅಷ್ಟು ಹಣವನ್ನು ಕೊಡಿರೆಂದು ಕೇಳುವ ಹಕ್ಕು ಬರುವುದು. ಎಂದರೆ ಮೊದಲನೆಯ ಬ್ಯಾಂಕಿನ ಕೈಯಲ್ಲಿರುವ ನಗದು ಹಣ ಆ ಮಟ್ಟಿಗೆ ಕಡಿಮೆಯಾಗಿ—ಆ ಮೊತ್ತದಷ್ಟಕ್ಕೆ ಇತರ ಬ್ಯಾಂಕುಗಳು ತಮ್ಮ ಕುಳಕ್ಕೆ ಸಾಲ ಕೊಡುವ ಶಕ್ತಿ ಹೆಚ್ಚುವುದು. ಈ ಕಾರ್ಯಕ್ಕೆಲ್ಲ ಮಿತಿಯುಂಟು: ಯಾವ ಬ್ಯಾಂಕೇ ಆಗಲಿ ಸುಮ್ಮನೆ ಡಿಪಾಸಿಟ್ ಲೆಕ್ಕವನ್ನು ಬೆಳಸಿಕೊಳ್ಳುತ್ತ ಹೋದರೆ, ಆಗ ಅವರಮೇಲೆ ಚೆಕ್ ಬರೆದು ಹಣ ಕೊಡಿರೆಂದು ಕೇಳುವವರ ಸಂಖ್ಯೆಯೇ ಹೆಚ್ಚಾಗುವುದು. ಇವರಿಗೆ ಬರಬೇಕಾದ ಹಣಕ್ಕಿಂತ ಇವರ ತೆರಾಣೆ ಬಹಳವಾಗುವುದು. ಇದರಿಂದ ಇವರ ನಗದಿನ ಬಹುಭಾಗ ಇತರರ

ಕೈಸೇರುವುದು. ತನ್ನ ವ್ಯಾಪಾರಕ್ಕೆ ಬೇಕಾಗುವಷ್ಟು ನಗದಿನ ಪ್ರಮಾಣ ವನ್ನು ಉಳಿಸಿಕೊಳ್ಳಬೇಕಾದರೆ ತಾನು ಕೊಡುವ ಸಾಲದ ಮೊತ್ತವನ್ನು ಒಂದು ಮಿತಿಯಲ್ಲಿ ಇಟ್ಟುಕೊಳ್ಳಬೇಕಾಗುವುದು. ಸ್ವೇಚ್ಛೆಗೆ ಹೀಗೆ ತಡೆ ಬಂದು ಇತರ ಬ್ಯಾಂಕುಗಳ ವ್ಯಾಪಾರ ಪದ್ಧತಿ ಮತ್ತು ವ್ಯವಹಾರಕ್ಕೆ ಸಮತಾನವಾಗಿಯೇ ಇದೂ ನಡೆಯಬೇಕಾಗುವುದು.

**ಬ್ಯಾಂಕಿನ ನಗದು.**—ಬ್ಯಾಂಕು ತನ್ನಲ್ಲಿಟ್ಟುಕೊಳ್ಳುವ ನಗದು ಹಲವು ರೂಪಗಳಲ್ಲಿರುತ್ತದೆ: (೧) ಬ್ಯಾಂಕು ನೋಟು; (೨) ಕೈಪೆಟ್ಟಿಗೆ ಯಲ್ಲಿಯೂ, ಕೋಶಗಳಲ್ಲಿಯೂ, ಗಿರಾಕಿಗಳಿಗಾಗಿಯೂ, ಸಮಯ ಸಂದರ್ಭ ಗಳಿಗಾಗಿಯೂ ಇಟ್ಟುಕೊಳ್ಳುವ ಕೈಹಣ; (೩) ಬ್ಯಾಂಕ್ ಫ್ ಇಂಗ್ಲಂಡಿ ನಲ್ಲಿ ಇಡುವ ಡಿಪಾಸಿಟ್; (೪) ಇತರ ಬ್ಯಾಂಕುಗಳವರು ಇವರಿಗೆ ತೆರಬೇಕಾಗಿ ಇವರ ಕೈಗೆ ದಿನದಿನವೂ ಬರಬೇಕಾದ ಸಿಲ್ಲಾಳ ಹಣ; (೫) ಇವರು ಇತರ ದೇಶಗಳ ದೊಡ್ಡ ಬ್ಯಾಂಕುಗಳಲ್ಲಿ ತಮ್ಮ ಪರವಾಗಿ ಉಳಿಸಿಕೊಂಡಿರುವ ಶಿಲ್ಕು (Balances). ಬ್ಯಾಂಕ್ ಆಫ್ ಇಂಗ್ಲಂಡು ಬ್ಯಾಂಕುಗಳ ಬ್ಯಾಂಕು ಎಂದು ಹಿಂದೆಯೇ ಹೇಳಿದೆ. ದೇಶದ ಇತರ ಎಲ್ಲ ವ್ಯಾಪಾರದ ಬ್ಯಾಂಕುಗಳ ಡಿಪಾಸಿಟ್ ಲೆಕ್ಕವೂ (Other Deposits ಎಂಬ ಹೆಸರಿನಲ್ಲಿ) ಅಲ್ಲಿ ಇರುವುದು. ದಿನದಿನದ ವ್ಯವಹಾರದಲ್ಲಿ ಒಂದು ಬ್ಯಾಂಕು ಇನ್ನೊಂದಕ್ಕೆ ಹಣವನ್ನು ತೆರಬೇಕಾಗಿ ಬಂದರೆ, ವ್ಯಾಪಾರದ ಬ್ಯಾಂಕು ಗಳೇ ಸದಸ್ಯರಾಗಿ ತಮ್ಮ ಮೇಲೆ ಚೆಕ್ಕುಗಳ ಮೂಲಕ ಬರುವ ಸಾಲಗಳನ್ನು ಹರಿಸಿಕೊಳ್ಳಲು ಮಾಡಿರುವ ಕ್ಲಿಯರಿಂಗ್ ಹೌಸ್ ಎಂಬ ಸಾಲದ 'ಸಿಕಾಲೆ' ಸಂಸ್ಥೆ ಆ ಸಂಗತಿಯನ್ನು ತಿಳಿಸುವುದು. ಅಷ್ಟು ಹಣವನ್ನು ಬ್ಯಾಂಕ್ ಆಫ್ ಇಂಗ್ಲಂಡು ಸಾಲಗಾರ ಬ್ಯಾಂಕಿನ ಲೆಕ್ಕದಿಂದ ಇಳಿತಾಯ ಹಾಕಿ ಸಂದಾಯ ಪಡೆಯುವ ಬ್ಯಾಂಕಿನ ಲೆಕ್ಕಕ್ಕೆ ಜಮ ಹಾಕಿ ಕೊಳ್ಳುವುದು. ಹೀಗೆ ಬ್ಯಾಂಕ್ ಆಫ್ ಇಂಗ್ಲಂಡಿನ ಡಿಪಾಸಿಟ್ ಲೆಕ್ಕದಲ್ಲಿ ಉಂಟಾಗುವ ವ್ಯತ್ಯಾಸಗಳ ಮೂಲಕ ಸದಸ್ಯ ಬ್ಯಾಂಕುಗಳ ಸಾಲ ಹರಿಯುವುದು. ಚಾಲ್ತಿ ಕೆಲಸಗಳಿಗೆ ಹೆಚ್ಚು ನಾಣ್ಯವೊ ನೋಟೊ ಬೇಕಾದಲ್ಲಿ ಅದನ್ನು ಈ ಬ್ಯಾಂಕುಗಳು ಬ್ಯಾಂಕ್ ಆಫ್ ಇಂಗ್ಲಂಡಿನಿಂದ ಪಡೆಯಬಹುದು.

ಕೈಸಗಡನ್ನು ಸುಲಭವಾಗಿ ಬೇಕು ಬೇಕಾದಾಗ ಹೆಚ್ಚಿಸಿಕೊಳ್ಳಲು ಅನುಕೂಲವಾಗುವಂತೆ, ಮಾರಿದ ತಕ್ಷಣದಲ್ಲಿ ಹಣಕ್ಕೆ ತಿರುಗುವ, ಸುಮಾರು ಯಾವಾಗಲೂ ಎಲ್ಲರೂ ಕೊಳ್ಳಲು ಸಿದ್ಧರಾಗಿರುವ, ವ್ಯಾಪಾರ ಪತ್ರಗಳನ್ನೂ ಆಸ್ತಿಯ ಪತ್ರಗಳನ್ನೂ (Liquid Assets)* ಬ್ಯಾಂಕುಗಳವರು ಸಂಗ್ರಹಿಸುತ್ತಾರೆ.

ಮುಖ್ಯವಾಗಿ ಬ್ಯಾಂಕುಗಳವರು ಎಚ್ಚರಿಕೆಯಿಂದಿರಬೇಕಾದುದು ಎರಡು ವಿಷಯವಾಗಿ: (೧) ಯಾವಾಗ ತಮ್ಮ ಕುಳಗಳು ಬಂದು ಕೇಳಿದರೆ ಆಗ ಅವರಿಗೆ ಹಣವನ್ನು ಹಿಂತಿರುಗಿಸಲು ಸಗದನ್ನೂ ಮಾರಿದ ತಕ್ಷಣ ಸಗದು ತರುವ ಹುಂಡಿಗಳನ್ನೂ (Liquid Assets) ಇಟ್ಟುಕೊಂಡಿರಬೇಕು. (೨) ಉಳಿದ ಹಣದಿಂದ ಪರಮಾವಧಿ ಲಾಭವನ್ನು ಸಂಪಾದಿಸಬೇಕು. ಬ್ಯಾಂಕುಗಳ ಕೈಯಲ್ಲಿರುವ ಹಣವೆಲ್ಲ ಇತರರದಾದುದರಿಂದಲೂ, ತಾವು ಅವರಿಗೆ ಬಡ್ಡಿಯನ್ನು ತೆರಬೇಕಾಗಿರುವುದರಿಂದಲೂ ತಮ್ಮ ಕೈಯಲ್ಲಿರುವ ಹಣದಲ್ಲಿ ಎಷ್ಟು ಹೆಚ್ಚು ಸಾಧ್ಯವಾದರೆ ಅಷ್ಟು ಹೆಚ್ಚು ಹಣವನ್ನು—ಎಷ್ಟು ಲಾಭ ಬಂದರೂ ಸರಿಯೆ—ಅದು ಲಾಭವನ್ನೂ ಬಡ್ಡಿಯನ್ನೂ ದುಡಿಯುವಂತೆ ಪ್ರಯೋಗಿಸುತ್ತಿರಬೇಕು. ಯಾವ ಒಂದು ಕುಳದ ಮೇಲೇ ಆಗಲಿ ಬಹುಕಾಲ ಸಾಲ ಹಾಕದೆ ಹಣ ಬೇಗನೆ ಕೈಕೈ ಬದಲಾಯಿಸುವಂತೆ ನೋಡಿಕೊಳ್ಳಬೇಕು. ಒಂದು ದಿನ ಕೂಡ ಅವರು ತಮ್ಮಲ್ಲಿರುವ ಹೆಚ್ಚು ಹಣವನ್ನು ಅಲಸವಾಗಿ ನಿಷ್ಪ್ರಯೋಜಕವಾಗಿ ಇಡಕೂಡದು.

**ಕಾರ್ಯ ವಿಚಕ್ಷಣೆ— ರಚನೆ.** — ಬ್ಯಾಂಕಿನವರು ಸಾಧಾರಣವಾಗಿ ಗುಣಾಕಾರ ಹಾಕುವ ರೀತಿ ಹೀಗೆ:—ತಮ್ಮ ಸಾಮಾನ್ಯ ಸಗದು ಸ್ಥಿತಿ ಇಂತಹುದು ಎಂದು ನೋಡಲು ನೋಡಿಕೊಳ್ಳುತ್ತಾರೆ. ಸಂತತವಾಗಿ ಸಾಲವನ್ನೂ ಮುಂಗಡವನ್ನೂ ಕೊಡುತ್ತಿರುತ್ತಾರೆ. ಹಿಂದಕ್ಕೆ ತೆರುವ ಗಿರಾಕಿಗಳು ಸಂತತವಾಗಿ ಅವರಿಗೆ ಹಣ ತೆರುತ್ತಿರುತ್ತಾರೆ. ಹುಂಡಿಗಳ ಗಡು ಪ್ರತಿದಿನವೂ ಮುಗಿಯುತ್ತಿರುತ್ತದೆ. ದಿನವೂ ನಡೆಯುವ

* ಇವುಗಳ ಕ್ರಮ : ತಕ್ಷಣವೇ ಅಥವಾ ಕೇಳಿದ ತಕ್ಷಣ ಹಣ ತರುವ, ಹುಂಡೀ ದಲ್ಲಾಳಿಗೂ ಸ್ಟಾಕ್ ಎಕ್ಸ್‌ಛೇಂಜಿನ ದಲ್ಲಾಳಿಗೂ ಕೊಟ್ಟ ಕೈಸಾಲ; ವಿದೇಶಿ ಮತ್ತು ಖಜಾನೆ ಹುಂಡಿ; ಆಸ್ತಿ ಪತ್ರ, ಬಂಡವಾಳ ಪತ್ರ: ಕುಳದ ಜೋಗಾರಿಕೆಯ ಮೇಲೆ ಕೊಟ್ಟ ಕೈಸಾಲ ಮತ್ತು ಮುಂಗಡ: ದೇಶಿ ವಿದೇಶಿ ವ್ಯಾಪಾರದ ಒಪ್ಪಿಗೆ ಪತ್ರಗಳು.

ಈ ಕೆಲಸದ ಫಲವಾಗಿ ಕೈನಗದಿನ ಹಣ ಹೆಚ್ಚಿದಂತಾದರೆ, ಅದನ್ನು ಸಂಪಾದನೆಗೆ ಹೇಗೆ ಹೂಡಬೇಕೆಂಬುದು ಅವರ ಚಿಂತೆಯಾಗುತ್ತದೆ. ಸಗಟಿನಲ್ಲಿ ಮೇಲೆ ಹೇಳಿದ ಬಾಬುಗಳಲ್ಲೆಲ್ಲಾ ಹಣವನ್ನೂ ವ್ಯಾಪಾರವನ್ನೂ ಹಂಚಿದರೂ — ಹಂಚಬೇಕಾಗುವುದಾದರೂ — ತಕ್ಷಣದಲ್ಲಿಯೇ ಸಾಲ ಮುಂಗಡಗಳನ್ನು ಕೊಡಲಾಗದೆ ಹೋಗಬಹುದು. ಸಾಲವನ್ನು ಕೇಳುತ್ತಿರುವವರು ಎಷ್ಟು ಜನ? ಅವರ ಉಪಪತ್ತಿ ಎಷ್ಟು? ಅವರು ಕೇಳುವ ಮೊತ್ತವೆಷ್ಟು? ಎಂಬ ಸಂಗತಿಗಳು ಈ ಹಂಚಿಕೆಯ ಪ್ರಮಾಣವನ್ನು ಗೊತ್ತುಮಾಡುತ್ತವೆ. ಆದುದರಿಂದ ಕೈಗೆ ಹೆಚ್ಚು ಹಣ ಬಂದ ತಕ್ಷಣವೇ ಅವರು ಪೇಟೆಯಲ್ಲಿ ಕಿರುವಾಯಿದೆ ಸಾಲ ಕೇಳುವ ಹುಂಡಿ ದಲ್ಲಾಳಿ ಮಂಡಲಿಗೆ ಸಾಲ ಕೊಡುವರು; ಇಲ್ಲವಾದರೆ ವ್ಯಾಪಾರದ ಹುಂಡಿಗಳನ್ನು ವಟ್ಟಕ್ಕೆ ಕೊಂಡಿಡುವರು (Discount Bills); ಅಥವಾ ಆಸ್ತಿ ಪತ್ರಗಳನ್ನು ಕೊಳ್ಳುವರು. ಕೈಗಾವಲಾಗಿ ನಗದು ಎಷ್ಟನ್ನು ಇಟ್ಟುಕೊಂಡಿರಬೇಕಾದೀತು? ತಕ್ಷಣದಲ್ಲಿ ಯಾವ ಬಗೆಯ ಗಿರಾಕಿ ತನ್ನ ಬಳಿಗೆ ಬಂದೀತು? ಯಾವ ಬಗೆಯ ಲೇವಾದೇವಿಯಿಂದ ಎಷ್ಟು ಪ್ರಯೋಜನವಾದೀತು? ಎಂಬ ಗುಣಿತ ಅವರ ಲಕ್ಷ್ಯದಲ್ಲಿ ಸರ್ವದಾ ಇರುವುದು. ಸಾಮಾನ್ಯವಾಗಿ ಕೈಗೆ ಬಂದ ಹೆಚ್ಚು ಹಣವೆಲ್ಲ ಮೊದಲು ಹುಂಡಿ ದಲ್ಲಾಳರಿಗೂ, ಹುಂಡಿ ಪೇಟೆಗೂ (Bill Brokers and the Discount Market) ಒದಗುವುದು. ಆಗ ಆ ವರ್ತಕರ ಕೈಗೆ ಹೆಚ್ಚು ಹಣ ಸಿಕ್ಕಿದಂತಾಯಿತು. ವ್ಯಾಪಾರಕ್ಕಾಗಿ ಹುಂಡಿ ಹೆಚ್ಚಾಗಿ ಬಾರದೆ, ತಮ್ಮ ಕೈಗೆ ಸಿಕ್ಕಿರುವ ಈ ಹಣದ ಮೊತ್ತ ಹೆಚ್ಚಾದರೆ—ಎಂದರೆ ಹುಂಡಿಗಳನ್ನು ಕೊಳ್ಳುವವರಲ್ಲಿ ಪೈಪೋಟಿ ಹೆಚ್ಚಿದರೆ—ವಟ್ಟದ ದರ (Discount Rate) ಕಡಮೆಯಾದೀತು ತಾನೆ? ಹಾಗಲ್ಲದೆ ಹುಂಡಿಯ ವ್ಯಾಪಾರ ಚುರುಕಾಗಿ ನಡೆಯುತ್ತಿದ್ದು ಇವರ ಕೈಗೆ ಸಿಲ್ಕುವ ಹಣ ಕಡಮೆಯಾದರೆ ವಟ್ಟದ ದರ ಏರುವುದು. ಒಟ್ಟಿನಲ್ಲಿ ಹುಂಡಿ ವ್ಯಾಪಾರದ ಪೇಟೆಗೂ ದಲ್ಲಾಳಿ ಮಂಡಲಿಗೂ ಎಷ್ಟು ಹಣ ಹೇಗೆ ದೊರೆಯುತ್ತಿದೆ, ವಟ್ಟದ ದರ ಹೇಗಿದೆ ಎಂಬುದರ ಮೇಲೆ ಬ್ಯಾಂಕುಗಳವರು ಇತರ ಬಗೆಯ, ಕೈಗಾರಿಕೆ ಮುಂಗಡ ಸಾಲ ಮುಂತಾದ ವ್ಯಾಪಾರ ಬಾಬುಗಳಿಗೆ ಎಷ್ಟು ಹಣವನ್ನು ಒದಗಿಸಲು ಶಕ್ತರು ಎಂಬ ಸೂಚನೆಯೂ ಅಳತೆಯೂ ದೊರೆಯುವುದೆನ್ನಬಹುದು.

ಕೈ ನಗದಿನ ಪ್ರಮಾಣ (ಸುಮಾರು ಶೇಕಡ ೧೦) ಕಡಿಮೆಯಿದ್ದರೆ ಕ್ರಮ ಕ್ರಮವಾಗಿ ಬ್ಯಾಂಕುಗಳು ಬೇರೆಬೇರೆ ಬಾಬುಗಳಲ್ಲಿ ತಮ್ಮ ಕೈಯಲ್ಲಿರುವ ಹಣವನ್ನು ಬಡ್ಡಿಗೆ ಹೂಡಿ ಮುಂಚಲು ಅನುಕೂಲವಾಗುವುದು. ಕೈಗಾರಿಕೆ ಮುಂತಾದ ಕೆಲಸಗಳಿಗೆ ಮುಂಗಡವನ್ನು ಕೇಳುವ ಗಿರಾಕಿಗಳು ಉಂಟಾದಂತೆಲ್ಲ ಅವರು ಹುಂಡಿಯ ಪೇಟೆಯಿಂದ ಸ್ವಲ್ಪಸ್ವಲ್ಪವಾಗಿ ಹಣವನ್ನು ಹಿಂದಕ್ಕೆ ತೆಗೆದುಕೊಂಡು ಉದ್ಯೋಗ ಕೈಗಾರಿಕೆಗೆ ಸಹಾಯಮಾಡುವ ಮುಂಗಡಗಳನ್ನು ಕೊಡಲು ಸಿದ್ಧರಾಗುವರು.

**ಬ್ಯಾಂಕ್ ಆಫ್ ಇಂಗ್ಲಂಡಿಗೆ ಅಧೀನತೆ.** — ಇಂಗ್ಲಂಡಿನ ಬ್ಯಾಂಕುಗಳೆಲ್ಲ ತಮ್ಮ ಕೈನಗದಿನಲ್ಲಿ ಆಯಾ ದಿನದ ವೆಚ್ಚಕ್ಕೆ ಬೇಕಾಗುವಷ್ಟು ಭಾಗವನ್ನು ಮಾತ್ರ ಪೆಟ್ಟಿಗೆಗಳಲ್ಲಿಟ್ಟುಕೊಂಡು ಉಳಿದ ನಗದನ್ನು ಬ್ಯಾಂಕ್ ಆಫ್ ಇಂಗ್ಲಂಡಿನಲ್ಲಿಟ್ಟಿರುತ್ತಾರೆ. ಅವರ ಡಿಪಾಸಿಟ್ಟಿನ ಇಷ್ಟೇ ಅಂಶವನ್ನು ಹೀಗೆ ಕೈನಗದಾಗಿಡಬೇಕೆಂಬ ನಿಯಮವೇನೂ ಇಲ್ಲವಾದರೂ ಅದರ ಶೇಕಡ ೬ರಿಂದ ೧೦ ಭಾಗದವರೆಗೂ ಅಲ್ಲಿ ಇಟ್ಟಿರುವುದು ವಾಡಿಕೆ. (ಬೇರೆ ಕೆಲವು ದೇಶಗಳಲ್ಲಿ ಇಷ್ಟೇ ಪ್ರಮಾಣದ ನಗದನ್ನು ಕಡ್ಡಾಯವಾಗಿ ಪ್ರಧಾನ ಬ್ಯಾಂಕಿನಲ್ಲಿ ಪುದುವಟ್ಟಾಗಿಡಬೇಕೆಂಬ ನಿಯಮವಿರುವುದುಂಟು.) ಬ್ಯಾಂಕ್ ಆಫ್ ಇಂಗ್ಲಂಡಿನವರು ಕಲ್ಪಿಸುವ ನಗದೇ ರಾಷ್ಟ್ರದ ಹಣಕ್ಕೆ ಮೂಲ. ಆ ನಗದಿನ ಮೊತ್ತಕ್ಕೆ ಅಧೀನವಾಗಿಯೇ ಎಲ್ಲರೂ ಕೆಲಸಮಾಡಬೇಕಾಗಿರುವುದು. ಏಕೆಂದರೆ, ತಮ್ಮ ಕೈಯಲ್ಲಿಟ್ಟುಕೊಂಡಿರಬೇಕೆಂದು ಅವರು ನಿರ್ಧರಿಸಿರುವ ನಗದಿನ ಪ್ರಮಾಣವನ್ನು ಉಳಿಸಿಕೊಂಡು ಮಿಕ್ಕುದನ್ನು ಮಾತ್ರ ಗಿರಾಕಿಗಳಿಗೆ ಸಾಲ ಕೊಡಬಲ್ಲರು. ಹೆಚ್ಚು ಸಾಲ ಕೊಡಬೇಕಾದರೆ ಬ್ಯಾಂಕ್ ಆಫ್ ಇಂಗ್ಲಂಡೇ ಒದಗಿಸಬೇಕಾಗುವುದು. ಅವರು ವ್ಯಾಪಾರದ ಬ್ಯಾಂಕುಗಳ ಆಡಳಿತವನ್ನೂ ಸಾಲಗಳನ್ನೂ ಕಣ್ಣಿಟ್ಟು ಪರೀಕ್ಷಿಸುತ್ತಿರುತ್ತಾರೆ. ನಿಜವಾಗಿ ವ್ಯಾಪಾರ ಹೆಚ್ಚುತ್ತಿದೆಯೆ? ತಾವು ಹೆಚ್ಚು ನಗದನ್ನು ಒದಗಿಸಿ ಹೊಸ ಸಾಲ ಸೌಕರ್ಯಗಳನ್ನು ಕಲ್ಪಿಸುವುದೆ? ಇರುವುದನ್ನು ಕಡಮೆಮಾಡಬೇಕಾಗಿದೆಯೆ? ತಡೆಯಬೇಕೆ? ಎಂದು ಲೆಕ್ಕಹಾಕುತ್ತಿರುತ್ತಾರೆ. ಆವಶ್ಯಕವೆಂದು ತೋರಿಬಂದಾಗ ಧಾರಾಳ ಮಾಡುತ್ತಿರುವ ಬ್ಯಾಂಕುಗಳ ಸಾಲದ ಕೈ ಬಿಗಿಹಿಡಿಯುವರು. ಮಿತಿಮೀರಿ

ಅವರು ಹುಂಡಿಯ ದರಗಳನ್ನು ಇಳಿಸದಂತೆ ತೆರೆದ ಪೇಟೆಯಲ್ಲಿ ತಾವೂ ಅವರೊಡನೆ ಪೈಪೋಟಿ ಮಾಡಿ ಪಟ್ಟಕ್ಕೆ ಹುಂಡಿಗಳನ್ನು ಕೊಳ್ಳಲು ಮುಂದುವರಿಯುವುದುಂಟು. ಹೀಗೆ ತೀರ್ಮಾನಮಾಡಿ ಅವರು ಸಾಧಿಸುವ ಹುಂಡಿಯ ದರ ಇತರ ಬ್ಯಾಂಕುಗಳು ಕೇಳುವ ದರವನ್ನೂ ಆ ಮೂಲಕ ಬ್ಯಾಂಕುಗಳ ಹುಂಡಿಯ ವ್ಯಾಪಾರವನ್ನೂ ವ್ಯತ್ಯಾಸಮಾಡುತ್ತದೆ. ಕಿರುವಾಯಿದೆ ಸಾಲಗಳ ರೂಪದಲ್ಲಿ ಎಷ್ಟು ಮೊತ್ತ ಹಂಚುತ್ತಿದೆ ಎಂಬ ಸಂಗತಿಯನ್ನು ಮೊದಲು ಗೊತ್ತುಮಾಡಿಕೊಂಡು, ಖಾಸಗಿ ಜನರ ಹೆಸರಿನಲ್ಲಿರುವ ಡಿಪಾಸಿಟ್ ಮೊತ್ತವೆಷ್ಟು? ಹಣದ ಪೇಟೆಯ ಸ್ಥಿತಿ ಗತಿ ಹೇಗಿವೆ? ಎಂಬುವನ್ನು ಒಟ್ಟುಗೂಡಿಸಿ ವ್ಯಾಪಾರದ ಸಾಲವನ್ನು ಎಷ್ಟು ಕೊಡತಕ್ಕದ್ದು ಎಂದು ಬ್ಯಾಂಕ್ ಆಫ್ ಇಂಗ್ಲಂಡು ಗೊತ್ತುಮಾಡುವುದು. ವಿದೇಶಿ ವ್ಯಾಪಾರ ಹೇಗಿದೆ? ತನ್ನ ಧನಕೋಶದ ಸ್ಥಿತಿ ಹೇಗಿದೆ? ಮಾರುವೆಯ ದರವೂ ಹೊರಗಿನ ಬಡ್ಡಿಯ ದರಗಳೂ ಹೇಗಿವೆ ಎಂಬ ಸಂಗತಿಗಳು, ಇಂಥ ಸಮಯಗಳಲ್ಲಿ ಬ್ಯಾಂಕ್ ಆಫ್ ಇಂಗ್ಲಂಡಿನ ಕಾರ್ಯವನ್ನು ಒಂದು ಕಡೆಯಿಂದ ನಡಸುತ್ತವೆ.

**ಒಟ್ಟು ನೋಟ.**—ಹೀಗೆ, ಬ್ಯಾಂಕುಗಳು ಪರಸ್ಪರವಾಗಿ ಗಿರಾಕಿಗಳಿಗೆ ಎಷ್ಟು ಸಾಲದ ಹಣವನ್ನು ಒದಗಿಸಬಲ್ಲುವು ಎಂಬುದು ಒಂದು ಕಡೆ ತಮ್ಮ ಆಸ್ತಿಯೂ ನಗದೂ ಎಷ್ಟಿವೆ ಎಂಬುದರಿಂದಲೂ, ಇನ್ನೊಂದು ಕಡೆ ವ್ಯಾಪಾರ ಕೈಗಾರಿಕೆಗಳ ಪ್ರಯೋಜನಕ್ಕಾಗಿ ಎಷ್ಟು ಜನ ಎಷ್ಟು ಹಣವನ್ನು ಕೇಳುತ್ತಾರೆ ಎಂಬುದರಿಂದಲೂ ನಿರ್ಧಾರವಾಗುತ್ತದೆ. ಅಂಥವರಿಗೆ ಕೊಡುವ ಹಣವೇ ದೇಶದಲ್ಲಿ ಉತ್ಪತ್ತಿ ಕಾರ್ಯಗಳಿಗೆ ಒದಗುವದು. ಉತ್ಪನ್ನವಾದ ಪದಾರ್ಥಗಳು ಪೇಟೆಯಲ್ಲಿ ಮಾರಾಟವಾದರೆ ಉತ್ಪತ್ತಿಕಾರರ ಕೈಗೆ ಹಣ ಬರುವುದು. ಆ ಹಣವೇ ಕಡೆಯಲ್ಲಿ ಗುತ್ತಿಗೆ, ಕಂದಾಯ, ಕೂಲಿ, ಸಂಬಳ, ಬಡ್ಡಿ, ಲಾಭ ಮುಂತಾದ ರೂಪಗಳಲ್ಲಿ ಜನರ ಕೈಗೆ ಹಂಚಿ ಬರುವಂಥದು. ಈ ರೀತಿ ಸಂಪಾದನೆಯಾಗಿ ಬಂದ ಹಣವನ್ನು ಜನರು ಪದಾರ್ಥಗಳನ್ನು ಕೊಳ್ಳಲು ಉಪಯೋಗಿಸುವರು. ಅದರ ಮೊತ್ತ ಪೇಟೆ ಧಾರಣೆಗಳನ್ನು ನಡಸುತ್ತದೆ. ಬ್ಯಾಂಕಿನವರು ಒದಗಿಸುವ ಸಾಲದ ಹಣ ಪರೋಕ್ಷವಾಗಿ ಹೀಗೆ ಪೇಟೆ ಧಾರಣೆಯನ್ನು ಗೊತ್ತುಮಾಡುವುದು.

ಸಂಪಾದನೆಯಲ್ಲಿ ಜನರು ವೆಚ್ಚಮಾಡದೆ ಕೂಡಿಟ್ಟ ಹಣ ಪುನಃ ಬಡ್ಡಿಗೋ ಲಾಭೇಚ್ಛೆಯಿಂದಲೊ ಬಂಡವಾಳದ ರೂಪದಲ್ಲಿ ವ್ಯಾಪಾರ ಕೈಗಾರಿಕೆಗಳಲ್ಲಿ ಹೂಡಲ್ಪಟ್ಟರೆ, ಆ ಹಣ ಬ್ಯಾಂಕುಗಳ ಕೈಗೆ ಬರುವ ನಗದು ಡಿಪಾಸಿಟ್ಟಿನ ಪ್ರಮಾಣವನ್ನು ಹೆಚ್ಚುಮಾಡುತ್ತದೆ; ಅದು ಕೈಗಾರಿಕೆ ಕಾರ್ಖಾನೆಗಳಿಗೆ ದೊರಕುವ ಬಂಡವಾಳದ ಪ್ರಮಾಣವನ್ನು ಹೆಚ್ಚುಕಡಮೆ ಮಾಡುತ್ತದೆ. ಜನರೇ ಕೂಡಿಟ್ಟ ತಮ್ಮ ಹಣವನ್ನು ಕೇವಲ ಚಾಲ್ತಿ ಲೆಕ್ಕಗಳ ರೂಪದಲ್ಲಿಡಬೇಕೆಂದು ಬಯಸುವರೊ (Liquidity Preference), ಕೈಗಾರಿಕೆ ಕಾರ್ಖಾನೆಗಳ ಷೇರುಗಳನ್ನೂ ಸಾಲಪತ್ರಗಳನ್ನೂ ಕೊಳ್ಳಲು ಬಯಸುವರೊ (Investments) ಎಂಬುದರ ಮೇಲೆ ದೇಶದ ಹಣ ಯಾವ ಬಗೆಯಾಗಿ ವ್ಯಾಪಾರ ಕೈಗಾರಿಕೆಗಳಿಗೆ ಒದಗೀತು ಎಂಬುದು ಗೊತ್ತಾಗುವುದು: ಅದರಲ್ಲಿಯೂ ಅವಕ್ಕೆ ಸಿಕ್ಕುವ ಗಟ್ಟಿ ಬಂಡವಾಳ ಎಷ್ಟು ಎಂಬುದನ್ನು ಗೊತ್ತುಮಾಡಬೇಕಾದರೆ, ಮೊದಲು ಅವುಗಳಲ್ಲಿ ಆಗಿರುವ ನಷ್ಟವನ್ನು ತುಂಬಿ, ಕೆಲಸದಿಂದ ತೆಗೆಯಬೇಕಾಗಿರುವ ಯಂತ್ರಾದಿಗಳ ಕೊರತೆಯನ್ನು ತುಂಬಿ ಉಳಿಯುವ ಹಣವನ್ನು ಮಾತ್ರ ಎಣಿಸಬೇಕಾಗುವುದು. ಕೈಗಾರಿಕೆಯಲ್ಲಿ ಜನರಿಗೆ ಆಸಕ್ತಿಯಿಲ್ಲದೆ, ಅದರಲ್ಲಿ ಲಾಭವಿಲ್ಲವೆಂದು ಅರಿತರೆ ಅವರು ಚಾಲ್ತಿ ಡಿಪಾಸಿಟ್ಟಾಗಿಯೇ ಇಟ್ಟಾರು; ಪೇಟೆ ಧಾರಣೆ ಚುರುಕಾಗಿ ವ್ಯಾಪಾರ ಲಾಭಕರವಾಗಿದ್ದರೆ ತಮ್ಮ ಹಣವನ್ನು ನಿಡುಸಾಲದ ಬಡ್ಡಿಗೆ ಹೂಡಲು ಬಯಸುವರು. ಈ ಎಲ್ಲ ಸಂಬಂಧಗಳಲ್ಲಿಯೂ ಬ್ಯಾಂಕು ಅವರ ಕಾರ್ಯವನ್ನೂ, ಅವರ ಇಚ್ಛೆ ಭರವಸೆಗಳು ಬ್ಯಾಂಕಿನ ಕಾರ್ಯವನ್ನೂ, ಇವೆರಡೂ ವ್ಯಾಪಾರ ಕೈಗಾರಿಕೆಗಳಿಗೆ ಒದಗುವ ಧನಸಹಾಯವನ್ನೂ ನಿರ್ಧರಿಸುವುವು.*

---

* ಸಾಹುಕಾರರ ಸ್ವತಂತ್ರದಿಂದ ಉದ್ಯೋಗವೂ ಸಮಾಜದ ಮಂಗಳವೂ ಕೆಡದಂತೆ ನೋಡಿಕೊಳ್ಳುವ ಭಾರ ಸರಕಾರದ ಮೇಲೆ ಬಿದ್ದುದು.

# ಪ್ರಕರಣ ೫

## ವಿದೇಶಿ ವ್ಯಾಪಾರ—ಮಾರುವೆ (Exchange)

### ೧

**ವ್ಯಾಪಾರ ಲಕ್ಷಣ — ಉಪಸಾಧನಗಳು.**— ಅನೇಕ ಪದಾರ್ಥಗಳ ಮಾರಾಟಕ್ಕೆ ಈಗ ಪ್ರಪಂಚವೆಲ್ಲ ಒಂದೇ ಪೇಟೆಯಾಗಿದೆ. ಪ್ರತಿ ದೇಶದವರೂ ತಮಗಿರುವ ಪ್ರಕೃತಿಯ ವಿಶೇಷ ಅನುಕೂಲಗಳಿಂದಲೂ ನೈಪುಣ್ಯದಿಂದಲೂ ಪದಾರ್ಥಗಳನ್ನು ತಯಾರಿಸಿ ಹೆಚ್ಚು ಬೆಲೆಗೆ, ಯಾರಿಗೆಂದರವರಿಗೆ—ಎಲ್ಲಿಗೆಂದರಲ್ಲಿಗೆ—ಮಾರಲು ಸಿದ್ಧರಿರುವರು. ಬೇಕಾದ ಪದಾರ್ಥಗಳನ್ನು ಎಲ್ಲಿ ಅಗ್ಗವಾಗಿ ಕೊಳ್ಳಬಹುದೋ ಅಲ್ಲಿಂದ ತರಿಸಿಕೊಳ್ಳುವರು. ಎಲ್ಲರೂ ಎಲ್ಲವನ್ನೂ ತಯಾರಿಸಬೇಕಾದುದು ಅನಾವಶ್ಯಕವಾಗಿದೆ; ಸಾಧ್ಯವಲ್ಲದ್ದಾಗಿದೆ. ದೇಶದ ಒಳಗೇ ಪ್ರಾಂತ ಪ್ರಾಂತಗಳವರಿಗೂ ಅಥವಾ ಒಂದೇ ಪ್ರದೇಶದಲ್ಲಿ ಜನಜನರಿಗೂ ನಡೆಯುವ ವ್ಯಾಪಾರಕ್ಕೆ ಒಳದೇಶ ವ್ಯಾಪಾರವೆಂದೂ, ನಾಡಿನ ಎಲ್ಲೆಕಟ್ಟನ್ನು ದಾಟಿ ಇನ್ನೊಂದಕ್ಕೆ ಸಾಗುವ, ಅಲ್ಲಿಂದ ನಾಡಿನೊಳಕ್ಕೆ ಬರುವ ವ್ಯಾಪಾರಕ್ಕೆ ವಿದೇಶಿ ವ್ಯಾಪಾರವೆಂದೂ ಹೆಸರು. ಒಳಕ್ಕೆ ಬರುವುದು ಆಮದು ವ್ಯಾಪಾರ; ಹೊರಕ್ಕೆ ಸಾಗುವುದು ರಫ್ತು.

ಇಂತಿಂತಹ ಸರಕು ಇಲ್ಲಿಲ್ಲಿ ತಯಾರಾಗಿ ಮಾರಾಟಕ್ಕಿದೆ; ಇಂಥವರು ಉತ್ಪತ್ತಿಕಾರರು, ವ್ಯಾಪಾರಿಗಳು ಎಂಬ ತಿಳಿವಳಿಕೆ ವ್ಯಾಪಾರಕ್ಕೆ ಅತ್ಯಗತ್ಯ. ಈ ಸಂಗತಿಗಳನ್ನು ತಿಳಿಸಲು ವರ್ತಮಾನ ಪತ್ರಿಕೆಗಳೂ; ಅಂಚೆ, ತಂತಿ ಸಹಾಯಗಳೂ; ರೈಲು, ಲಾರಿ, ಹಡಗು ಮುಂತಾದ ಯಾನ ಸೌಕರ್ಯಗಳೂ ಬೇಕು. ಅವು ಸುಲಭವಾಗಿ ಸುರಕ್ಷಿತವಾಗಿ ಸಂಚಾರ ಮಾಡಲು ದಾರಿ ರಸ್ತೆಗಳೂ, ರೇವು ಬಂದರುಗಳೂ, ರಾಜಕೀಯ ಸುವ್ಯವಸ್ಥೆಯೂ ಬೇಕು; ಉತ್ಪತ್ತಿಕಾರರು ಮಾರಾಟಕ್ಕೂ, ಕೊಳ್ಳುವವರು ಪೇಟೆಗೂ ತಿರುಗುವ ಅಗತ್ಯವಿಲ್ಲದಂತೆ ತರಗಿನ ವರ್ತಕರು ನಿಂತು ವ್ಯಾಪಾರವನ್ನು ಕೈ ಕೈಗೆ ದೇಶ ದೇಶಕ್ಕೆ ಸಾಗಿಸುವ ಅನುಕೂಲ ಬೇಕು. ದೇಶ ವಿದೇಶಗಳವರ ವ್ಯಾಪಾರ ವ್ಯವಹಾರಗಳಲ್ಲಿ ಯಾವ ಪಕ್ಷದವರಿಗೂ ಅನ್ಯಾಯವಾಗದಂತೆ,

ಎಲ್ಲರಿಗೂ ಸಮವಾದ ಅನುಕೂಲ ಅವಕಾಶ ಇರುವಂತೆ ತೂಕ, ಅಳತೆ, ವ್ಯಾಪಾರ ಶಾಸನ, ವ್ಯವಹಾರ ಧರ್ಮ, ಪರಸ್ಪರ ವಿಶ್ವಾಸ — ಇವು ಸ್ಥಾಪಿತವಾಗಬೇಕು. ಒಂದು ವೇಳೆ ನಷ್ಟ ಸಂಭವಿಸಿದರೆ ಅದರಿಂದ ಚೇತರಿಸಿಕೊಳ್ಳಲು ಸಹಾಯವಾಗುವಂತೆ ವಿಮೆಯ ರಕ್ಷಣೆ ಬೇಕು. ಈ ಸಾಧನಗಳಿಲ್ಲದೆ ಬೇರೆಬೇರೆ ಕಡೆಯವರು, ಭಾಷೆಯವರು, ಉದ್ದೇಶಗಳವರು ಪೇಟೆಗಳಲ್ಲಿ ಬೆರೆದು ವ್ಯಾಪಾರಮಾಡುವುದು ಅಸಾಧ್ಯ. ಈಗ್ಗೆ ಸುಮಾರು ೩೦–೪೫ ವರ್ಷಗಳಿಂದ ಈಚೆಗೆ ದೇಶದೇಶಗಳ ಪರಸ್ಪರ ವ್ಯಾಪಾರ ಬಾಂಧವ್ಯ ರಾಜಕೀಯ ಮತ್ತು ಆರ್ಥಿಕ ಕಾರಣಗಳೆರಡರ ಬಲದಿಂದಲೂ ಬಹುವಾಗಿ ಹೆಚ್ಚಿದೆ.*

**ಈ ಬಗೆಯ ವಿದೇಶಿ ವ್ಯಾಪಾರದಿಂದ ಲಾಭ ನಷ್ಟಗಳು.**—ಈ ಪರಿಸ್ಥಿತಿಯಿಂದ ಒಂದು ಬಗೆಯಲ್ಲಿ ಅನುಕೂಲವೂ ಇನ್ನೊಂದು ಬಗೆಯಲ್ಲಿ ಪ್ರತಿಕೂಲವೂ ಉಂಟೆಂದು ಹೇಳಬಹುದು. ಅನುಕೂಲ ಹೇಗೆಂದರೆ: ಪ್ರತಿ ದೇಶದವರೂ ತಮಗೆ ಚೆನ್ನಾಗಿ, ಅಗ್ಗವಾಗಿ ಮಾಡುವುದಕ್ಕೆ ಬರುವ ಪದಾರ್ಥಗಳನ್ನೇ ತಯಾರುಮಾಡಿ, ಗಿರಾಕಿಗಳಿಗೆ ಮಾರಿ, ಬಂದ ಹಣದಿಂದ ತಮಗೆ ಬೇಕಾದ ಪದಾರ್ಥಗಳನ್ನು (ಅವನ್ನು ಸುಲಭವಾಗಿ, ಸೊಗಸಾಗಿ ತಯಾರಿಸುತ್ತಿರುವವರಿಂದ) ಕೊಳ್ಳಬಹುದಾಗುವುದು. ಅಗ್ಗಕ್ಕೆ ಕೊಂಡು ತಗ್ಗಿಗೆ ಮಾರಿ ಎರಡೂ ಬಗೆಯಲ್ಲಿ ಇಬ್ಬರೂ ಲಾಭ ಪಡೆಯಬಹುದು! ವ್ಯಾಪಾರ ಪ್ರಪಂಚಕ್ಕೆ ಶಾಂತಿಸುಭಿಕ್ಷಗಳು ಆವಶ್ಯಕವಾಗಿರುವುದರಿಂದಲೂ, ವರ್ತಕ ಮಂಡಲಿಯಲ್ಲಿ ಪರಸ್ಪರ ನಂಬಿಕೆ ಬೇಕಾಗಿರುವುದರಿಂದಲೂ, ಅವರು ಅಲ್ಲಿಗೆ ಇಲ್ಲಿಗೆ ಹೋಗಿಬರುವುದು ಅಗತ್ಯವಾಗುವುದರಿಂದಲೂ, ಅದಕ್ಕೆ ಬೇಕಾದ ನೌಕಯಾನ ಏರ್ಪಟ್ಟಿರುವುದರಿಂದಲೂ, ದೇಶವಿದೇಶಗಳಿಗಿರುವ ದೂರವೂ ಪರಕೀಯ ಭಾವವೂ ಕಡಮೆಯಾಗಿ ಪ್ರಪಂಚದವರೆಲ್ಲ ಒಂದು ದೇಶದವರಂತೆ ಕೆಲಸ ಮಾಡುವುದು ಸಾಧ್ಯವಾಗುವುದು; ವ್ಯಾಪಾರ ಬಾಂಧವ್ಯವೂ ಸುಗುಣಗಳೂ ಬೆಳೆಯುವುವು; ಪರಸ್ಪರ ಲಾಭನಷ್ಟಗಳಲ್ಲಿ ಎಲ್ಲರೂ ಭಾಗಿಗಳಾಗುವಂತಾಗುವುದು; ಒಟ್ಟಿನಮೇಲೆ ಒಬ್ಬರಿಗೆ ಸುಭಿಕ್ಷ

* ಒಟ್ಟು ಪ್ರಪಂಚದ ವಿದೇಶಿ ವ್ಯಾಪಾರ ೧೯೨೯ರಲ್ಲಿ ಸು. ೬,೮೬೪ ಕೋಟಿ ಡಾಲರುಗಳು (೧ ಡಾ = ಸು. ೩ ರೂ. ಬೆಲೆ). ಆದರೆ ಈಚೆಗೆ ಈ ವ್ಯಾಪಾರ ಕುಗ್ಗಿದೆ.

ವಿದ್ದ ಹೊರತು ಇನ್ನೊಬ್ಬರಿಗೆ ಸುಭಿಕ್ಷ ದೊರಕದು ಎಂಬ ತಿಳಿವು ಬಂದು ಪರಸ್ಪರವಾಗಿ ಅದನ್ನು ಸಾಧಿಸಲು ಜನರು ನೆರವಾಗುವರು. ಪದಾರ್ಥಗಳನ್ನು ಮಾರುವವರಲ್ಲಿ ಉತ್ತಮವಾದ ತೀವ್ರವಾದ ಪೈಪೋಟಿಯಿರುವುದರಿಂದ ಸಾಧಾರಣವಾಗಿ ಪದಾರ್ಥಗಳನ್ನು ಕೊಂಡು ತಿನ್ನುವವರಿಗೆ ಅವು ಅಗ್ಗವಾಗುವ ಸಂಭವ ಹೆಚ್ಚು. ಮಾರುವವರಲ್ಲಿ ಪೈಪೋಟಿ ತೀವ್ರವಾಗಿರುವಾಗ, ಕೊಳ್ಳಬಹುದಾದ ಪದಾರ್ಥಗಳೂ ಸರ್ವೋತ್ತಮವಾಗುವುವು. ಈ ರೀತಿ ನಿರೀಕ್ಷಣೆಯಾದರೂ ಇದೆ.

**ವ್ಯಾಪಾರ ವಿಜೃಂಭಣದಲ್ಲಿ ಪ್ರತಿಕೂಲ.**—ಯಾವ ದೇಶವಾಗಲಿ, ದೇಶದ ಒಂದು ಭಾಗವಾಗಲಿ, ಹಿಂದೆ ಸ್ವಸಂಪೂರ್ಣವಾಗಿ ತನಗೆ ಬೇಕಾದುದನ್ನೆಲ್ಲ ತಾನೇ ತಯಾರುಮಾಡಿಕೊಳ್ಳುತ್ತ ಸ್ವತಂತ್ರವಾಗಿದ್ದ ಸ್ಥಿತಿ ಮುರಿದು ತನಗೆ ಬೇಕಾದ ಪದಾರ್ಥಗಳಿಗಾಗಿ ಪರಾಧೀನವಾಗುವಂತೆ ಆಗುವುದು. ಅಂತಹ ಪದಾರ್ಥಗಳು ದಿನಚರಿಯ ಅಗತ್ಯ ಆಹಾರಾದಿ ಸಾಮಗ್ರಿಗಳಾಗಿದ್ದರಂತೂ ಸ್ಥಿತಿ ವಿಷಮವಾಗುವ ಸಂಭವ ಹೆಚ್ಚು. ಹೊರಗೆ ಹೆಚ್ಚಾಗಿ ಬೆಲೆ ಬರುವುದೆಂಬ ಆಸೆಯಿಂದ ಒಳಗೆ ಬೇಕಾಗುವ ಪದಾರ್ಥ ರಫ್ತಾಗಿ ಇಲ್ಲಿ ಕೊಂಡು ತಿನ್ನುವವರಿಗೆ ಅವುಗಳ ಬೆಲೆ ಏರಿ ಜೀವನ ಕಷ್ಟತರವಾಗಬಹುದು. ಎಲ್ಲಿ ಹೆಚ್ಚು ಬೆಲೆ ದೊರೆತರೆ ಅಲ್ಲಿಗೆ ಸರಕನ್ನು ಸಾಗಿಸಲು ಮಾರುವವರೂ ಸಗಟು ದಲ್ಲಾಳಿ ವರ್ತಕರೂ ಸಿದ್ಧರಾಗಿರುವುದರಿಂದ ಒಂದೇ ಕ್ಷಣದಲ್ಲಿ ಹತ್ತಾರು ಲಕ್ಷ ರೂಪಾಯಿಗಳ ವ್ಯಾಪಾರ ದೇಶದಿಂದ ಹೊರಕ್ಕೆ ಸಾಗಿ ಇಲ್ಲಿ ಆ ಪದಾರ್ಥಕ್ಕೆ ಕ್ಷಾಮ ಬರುವುದು. ಹಿಂದೆ ನಡೆಯುತ್ತಿದ್ದ ಉದ್ಯೋಗ ಕೈಗಾರಿಕೆಗಳಲ್ಲಿ ಹಲವು ಪ್ರಯೋಜನಕರವಲ್ಲವಾಗಿ, ಹೂಡಿದ ಬಂಡವಾಳವೂ ಕೆಲಸಗಾರ ವರ್ಗವೂ ಇನ್ನೊಂದಕ್ಕೆ ಸಾಗಬೇಕಾಗುವುದು ; ಇಲ್ಲವಾದರೆ ಆ ಕೆಲಸಗಾರರು ನಿರುದ್ಯೋಗದಲ್ಲಿ ತೊಳಲಬೇಕಾಗುವುದು. ಹೊರಗಿನ ದೇಶಗಳಲ್ಲಿ ಯಾವ ಕಾರಣದಿಂದಲಾದರೂ ದುರ್ಭಿಕ್ಷವೊ ಯುದ್ಧವೊ ಅರಾಜಕತೆಯೊ ಒದಗಿದರೆ ಅಲ್ಲಿನ ಕಷ್ಟ ಇಲ್ಲಿನವರ ತಲೆಯ ಮೇಲೆ ಬೀಳುವುದು. ಹೊರಗಿನ ಧಾರಣೆವಾಸಿ, ಬಡ್ಡಿಯ ದರಗಳಿಗೆ ಇಲ್ಲಿನವು ತೂಗಿಯಬೇಕಾಗುವುದು. ಹೀಗೆ ಯಾವುದು ಒಂದು ದೃಷ್ಟಿಯಿಂದ ಬಹಳ ಪ್ರಯೋಜನಕರವೊ ಅದೇ ಇನ್ನೊಂದು ದೃಷ್ಟಿಯಿಂದ ದೊಡ್ಡ

ಕೆಡುಕಾಗುವುದು. ಅಲ್ಲದೆ ದೇಶವಿದೇಶಗಳ ಪೈಪೋಟಿಯಲ್ಲಿ ಹಣಶಕ್ತಿ, ಉತ್ಪತ್ತಿಶಕ್ತಿ, ಮಾರಾಟಶಕ್ತಿ ಸ್ಪರ್ಧಾಶಕ್ತಿಗಳಲ್ಲಿ ಪ್ರಬಲರಾಗಿರುವವರೇ ಗೆಲ್ಲಬೇಕಾದರೆ. ಬಡನಾಡುಗಳವರು ಸಂತತವಾಗಿ ಪ್ರಬಲರಿಗೆ ಅಧೀನರಾಗಬೇಕಾಗಿ ಬರುವುದು.

ಹೇಗೇ ಆಗಲಿ ಚುರುಕಾಗಿ ವಿದೇಶಿ ವ್ಯಾಪಾರ ನಡೆಯುತ್ತಿರುವ ಪ್ರದೇಶಗಳಲ್ಲೆಲ್ಲಾ ಹಲವು ಕಟ್ಟುಗಳೂ ಸುವಿಧಾನಗಳೂ ಏರ್ಪಟ್ಟು ಆ ಕೆಲಸಕ್ಕೆ ಸಹಕಾರಿಯಾಗುತ್ತವೆ. ಎಲ್ಲ ಕಡೆಯೂ ಗಿರಾಕಿಯಿರುವ ಒಂದೇ ಬಗೆಯ ಪದಾರ್ಥಕ್ಕೆ ಒಂದೇ ಪೇಟೆಯಲ್ಲಿ ಒಂದೇ ಕಾಲದಲ್ಲಿ ಒಂದೇ ದರ ಏರ್ಪಟ್ಟಿರುತ್ತದೆ. ಪದಾರ್ಥಗಳು ಹಸನಿಗೆ ತಕ್ಕಂತೆ ವಿಂಗಡವಾಗಿ ಪೇಟೆಯಲ್ಲಿ ಮಾರಾಟಕ್ಕೆ ಒದಗುತ್ತವೆ. ಅನೇಕ ರೂಢಿ ನಿಯಮಗಳೂ, ಸಂಪ್ರದಾಯಗಳೂ ಏರ್ಪಡುತ್ತವೆ. ವ್ಯಾಪಾರ ಧರ್ಮಗಳು ಊರ್ಜಿತವಾಗುತ್ತವೆ.

**ವಿದೇಶಿ ವ್ಯಾಪಾರಕ್ಕೆ ಬ್ಯಾಂಕುಗಳ ಸಹಾಯ.**—ದೇಶವಿದೇಶಗಳಿಗೆ ನಡೆಯುವ ವ್ಯಾಪಾರದಲ್ಲಿ ತರಿಸಿಕೊಂಡ ಪದಾರ್ಥಕ್ಕೆ ಹೊರದೇಶದಲ್ಲಿ ಹಣ ಸಂದಾಯಮಾಡಬೇಕಾಗುವುದು; ಕಳುಹಿಸಿಕೊಟ್ಟ ಪದಾರ್ಥಕ್ಕೆ ಸ್ವದೇಶದ ಹಣದಲ್ಲಿ ಬೆಲೆ ಪಡೆಯಬೇಕಾಗುವುದು. ವರ್ತಕರಿಗೆ ಒಬ್ಬೊಬ್ಬರ ಪರಿಚಯವಾಗಲಿ ಕುಳದ ನಂಬಿಕೆಯಾಗಲಿ ಇಲ್ಲದಿರುವುದು ಸಹಜ. ಇರಲಿ, ಇಲ್ಲದಿರಲಿ, ಆಯಾ ಸ್ಥಳಗಳಿಗೆ ಹೋಗಿ ಹಣ ಕೊಡುವುದೂ ತರುವುದೂ ಕಷ್ಟ. ಅಂತಹ ಕೆಲಸಗಳನ್ನೆಲ್ಲಾ ವರ್ತಕರಿಗೆ ಅನುಕೂಲವಾಗುವಂತೆ ಈಗ ಬ್ಯಾಂಕುಗಳವರು ಸ್ವಲ್ಪ ಖರ್ಚಿಗೇ—ಅಲ್ಪ ದಲ್ಲಾಳಿಗೇ—ವಟ್ಟಕ್ಕೇ—ಮಾಡಿಕೊಡುವರು; ಬರಬೇಕಾದ ಹಣವನ್ನು ಸುಲಭವಾಗಿ ತರಿಸಿಕೊಡುವರು; ಕಳುಹಿಸಬೇಕಾದ ಹಣವನ್ನು ಸುಲಭವಾಗಿ ಕಳುಹಿಸಿಕೊಡುವರು. ಕಡೆಗೆ ದೇಶದಿಂದ ದೇಶಕ್ಕೆ ಹಣವಾಗಲಿ ಚಿನ್ನ ಬೆಳ್ಳಿಯಾಗಲಿ ಹೋಗಿಬರುವ ಆವಶ್ಯಕತೆ ಇಲ್ಲದಂತೆ, ಆಯಾ ದೇಶದ ಬ್ಯಾಂಕುಗಳ ಲೆಕ್ಕದ ಪುಸ್ತಕಗಳಲ್ಲಿ ಲೆಕ್ಕಗಳನ್ನು ವ್ಯತ್ಯಾಸಮಾಡುವುದರ ಮೂಲಕವೇ ವರ್ತಕರ ಸಾಲಗಳನ್ನು ಹರಿಸಿ, ವ್ಯಾಪಾರದ ರಾಟೆಯನ್ನು ಸುಸೂತ್ರವಾಗಿ ನಡಸಿಕೊಂಡು ಹೋಗುತ್ತಿರುವರು.

**ಒಟ್ಟು ದೇಶ ವಿದೇಶ ವ್ಯಾಪಾರಗಳ ಸಾಲ — ಕಣ್ಣಿಗೆ ಕಾಣಿಸದ ಆಮದು ರಫ್ತು.** — ಈ ವ್ಯಾಪಾರದಲ್ಲಿ ನಾವು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾದುದು ಕೇವಲ ಸಾಮಾನುಗಳ ಎಣಿಕೆಯೊಂದನ್ನೇ ಅಲ್ಲ. ಯಾವ ಯಾವ ರೂಪದಲ್ಲಿ ಒಂದು ದೇಶದ ಜನರು ಇನ್ನೊಂದು ದೇಶದ ಜನರಿಗೆ ಹಣವನ್ನು ತೆರಬೇಕಾಗುವುದೋ, ಜನರಿಂದ ಹಣವನ್ನು ಬರಮಾಡಿಕೊಳ್ಳಬೇಕಾಗುವುದೋ ಆ ಬಾಬುಗಳನ್ನೆಲ್ಲ ತೆಗೆದುಕೊಳ್ಳಬೇಕು. ಸಾಗಿರುವ ಸರಕು; ಚಿನ್ನ, ಬೆಳ್ಳಿ, ರತ್ನ, ಆಭರಣ, ನಾಣ್ಯ ಮುಂತಾದ ಧನವಿಶೇಷಗಳು; ಇಲ್ಲಿನವರಿಗೆ ಬೇರೆಯವರು ತೆರಬೇಕಾಗಿರುವ ಸಾಲ ಮತ್ತು ಸಾಲದ ಮೇಲಿನ ಬಡ್ಡಿ; ಬಂಡವಾಳಗಾರರಿಗೂ ಸಾಹಸಿಗಳಿಗೂ ಬರಬೇಕಾದ ಲಾಭದ ಹಣ; ಇಲ್ಲಿನವರು ಬೇರೆ ಕಡೆಗಳಲ್ಲಿ ಹೋಗಿ ಕೆಲಸಮಾಡುತ್ತಿದ್ದರೆ ತಮ್ಮ ಮನೆಯವರಿಗೂ ಮಕ್ಕಳ ವಿದ್ಯಾಭ್ಯಾಸ ಮುಂತಾದುವಕ್ಕೂ ಅವರು ಕಳುಹಿಸುವ ಹಣ; ಬೇರೆಯವರ ಪರವಾಗಿ ಇಲ್ಲಿ ಅಧಿಕಾರಿ ವರ್ಗವೋ, ಸರಕಾರದ ಆಳುಗಳೋ ಇದ್ದರೆ ಅವರಿಗೆ ಬರಬೇಕಾದ ಸಂಬಳ ಸಾರಿಗೆ, ಸಿಬ್ಬಂದಿ ವೆಚ್ಚಗಳು; ಅಲ್ಲಿ ಕೆಲಸಮಾಡಿ ವಿಶ್ರಾಂತರಾದವರಿಗೆ ಬರಬೇಕಾದ ವೇತನಗಳು; ಅಲ್ಲಿನವರು ಇಲ್ಲಿ ಸಂಚಾರಮಾಡುತ್ತ ಅಥವಾ ಭೋಗವಸತಿ ಆರೋಗ್ಯವಸತಿಗಳನ್ನು ಕಲ್ಪಿಸಿಕೊಂಡಿದ್ದರೆ ಖರ್ಚಿಗಾಗಿ ಅವರು ತರಿಸಿ ಕೊಳ್ಳುವ ಹಣ; ಇಲ್ಲಿನವರು ಬೇರೆದೇಶಗಳವರಿಗೆ ಮಾಡುವ ಲೇವಾದೇವಿ ಸಹಾಯ; ಯಾನ, ವಾಹನ ಸೌಕರ್ಯಗಳನ್ನು ಒದಗಿಸುತ್ತಿದ್ದರೆ ಅದಕ್ಕೆ ನಮಗೆ ತೆರಬೇಕಾದ ಹಣ; ವಿಲ್ಲಾಳಿಗಳು; ಸರಕಾರಿ ವ್ಯವಹಾರಗಳು; ಅಂಚೆಯ ಮೂಲಕವಾಗಿ ಹೋಗಿಬರುವ ಹಣ ಮತ್ತು ಪದಾರ್ಥಗಳ ಬೆಲೆ; ಹಣದ ಅಥವಾ ಸಾಲದ ಪತ್ರಗಳು—ಇವುಗಳ ಲೆಕ್ಕವೆಲ್ಲ ಈ ವ್ಯಾಪಾರಕ್ಕೆ ಸೇರುವುದು. ಇವುಗಳಲ್ಲಿ ಕೆಲವು ಹೊರಗಣ್ಣಿಗೆ ಕಾಣುವುವು; ಇನ್ನು ಕೆಲವು ಹೊರಗಣ್ಣಿಗೆ ಕಾಣುವುದಿಲ್ಲ. ಅವನ್ನೇ ಅಗೋಚರವಾದ ಆಮದು ರಫ್ತು (Invisible Imports and Exports) ಎನ್ನುವುದು. ಗೋಚರವಾಗುವ ಪದಾರ್ಥಗಳ ಜೊತೆಗೆ ಈ ಅಗೋಚರವಾದ ಅಂಶಗಳನ್ನೂ ಸೇರಿಸಿಕೊಂಡು ಒಂದು ದೇಶದ ವಿದೇಶಿ ವ್ಯಾಪಾರದ ಒಟ್ಟು ನಿವ್ವಳ ಸಾಲವನ್ನೂ ಮೊತ್ತವನ್ನೂ ಕಂಡುಹಿಡಿಯ ಬೇಕು. ಆ ಲೆಕ್ಕವನ್ನೆಲ್ಲಾ ಪರಿಶೀಲಿಸಿದರೆ ಯಾವ ಒಂದು ದೇಶವೇ ಆಗಲಿ

ತಾನು ಎಷ್ಟು ಬೆಲೆ ಸ್ವೀಕರಿಸಿ (ಆಮದು ಮಾಡಿಕೊಂಡು) ಇದೆಯೋ ಅಷ್ಟು ಬೆಲೆಯನ್ನು ಒಂದು ರೀತಿಯಲ್ಲಲ್ಲದಿದ್ದರೆ ಇನ್ನೊಂದರಲ್ಲಿ ತೆತ್ತಿದೆ (ರಫ್ತು ಮಾಡಿದೆ) — ತೆರಲೇಬೇಕು ಎಂಬುದು ಗೊತ್ತಾಗುವುದು. ಎಂದರೆ ಒಟ್ಟು ಆಮದು ಲೆಕ್ಕ ಒಟ್ಟು ರಫ್ತು ಲೆಕ್ಕಕ್ಕೆ ಯಾವರೀತಿಯಲ್ಲಾದರೂ ಹೊಂದಿಕೊಳ್ಳಬೇಕು; ಚಿರಕಾಲ ಹೊಂದಿಕೊಳ್ಳದೆ ಇರುವುದು ಸಾಧ್ಯವಿಲ್ಲ.

**ಬ್ಯಾಂಕುಗಳ ಕೈವಾಡ.** — ಎಲ್ಲ ಹಣಗಳನ್ನು ತರಿಸುವುದೂ ರವಾನಿಸುವುದೂ ಈಗ ಬ್ಯಾಂಕುಗಳ ಕೈಯಲ್ಲಿದೆ. ಅವರು ಈ ಕೆಲಸವನ್ನು ಯಾವ ಸಮಯದಲ್ಲಿ ಹೇಗೆ ಮಾಡುತ್ತಾರೆ? ಹೇಗೆ ಮಾಡಲು ಮಾತ್ರ ಒಪ್ಪುತ್ತಾರೆ? ಸಿದ್ಧರಿರುತ್ತಾರೆ? ಅವರಿಗೆ ಅದರಿಂದ ಯಾವ ಪ್ರಯೋಜನವಿದೆ? ಎಂಬುದನ್ನು ಕೈಗೆ ಬರುವ ಒಟ್ಟು ಕೆಲಸವೂ ಅವರ ಸಂಪತ್ತು, ಶಕ್ತಿ, ಸಾಹಸಬುದ್ಧಿಗಳೂ ನಿರ್ಧರಿಸುತ್ತವೆ. ಈ ಮೂಲಕ ಹೆಚ್ಚು ಲಾಭವನ್ನು ಬಯಸುವವರಾದ್ದರಿಂದ ಈ ವ್ಯಾಪಾರದ ಮೊತ್ತವನ್ನೂ ಸ್ವರೂಪವನ್ನೂ ಅವರು ಸ್ವತಃ ಹೊಂದಿಸಲು ಪ್ರಯತ್ನಪಡಬಹುದು. ವ್ಯಾಪಾರದ ಸಾಲ ಸಂಬಂಧಗಳನ್ನೂ ಆರ್ಥಿಕ ಪ್ರಪಂಚದ ರಚನೆಯನ್ನು ಸ್ವತಃ ಮಾಡಿ, ತಮಗೆ ಬೇಕಾದವರಿಗೆ ಅನುಕೂಲವನ್ನೂ ಬೇಡದವರಿಗೆ ಪ್ರತಿಕೂಲವನ್ನೂ ಉಂಟುಮಾಡಿ, ಏಳು ಬೀಳುಗಳನ್ನೂ ಐಶ್ವರ್ಯ ದಿವಾಳಿತನಗಳನ್ನೂ ಉಂಟುಮಾಡುತ್ತ, ವ್ಯಾಪಾರ ಕೈಗಾರಿಕೆಗಳನ್ನು ಅವರು ಆಳಬಲ್ಲರು. ಅವುಗಳ ದಾರಿ ಜಾಡು, ಪ್ರಮಾಣ, ರೀತಿನೀತಿಗಳನ್ನು ನಿರ್ಧರಿಸುತ್ತ, ಇಲ್ಲದುದನ್ನು ಉಂಟುಮಾಡಿ, ಇರುವುದಕ್ಕೆ ಆಧಾರಸ್ತಂಭರಾಗಬಹುದು; ಇರುವುದನ್ನು ಮುರಿದು ನಾಶಮಾಡಬಹುದು. ನೆರವೇನು, ಕೇಡುಕೇನು? ಕಾರ್ಯವಿಧಾನವಾವುದು? ಎಂಬುದು ಇಲ್ಲಿನ ವಿಷಯ.

೨

**ಸಾಮಾನ್ಯವಾಗಿ ಸಾಲಗಳನ್ನು ಹರಿಸುವ ಬಗೆ.** — ಒಳಗೆ ನಾವಿರುವ ಕಡೆಯೋ ಯಾರಿಗಾದರೂ ಸಾಲ ತೀರಿಸಬೇಕಾಗಿದ್ದರೆ—ನಾಣ್ಯವನ್ನೊ ನೋಟನ್ನೊ ಕೊಟ್ಟು ಹರಿಸಬಹುದು; ಚೆಕ್ಕನ್ನು ಬರೆದುಕೊಡಬಹುದು; ಆ ಬೆಲೆಯ ಪದಾರ್ಥಗಳನ್ನೊ ಆಸ್ತಿಪತ್ರಗಳನ್ನೊ ಪ್ರತಿಯಾಗಿ ಕೊಡ

ಬಹುದು; ಸಾಹುಕಾರರು ತಾಳುವಹಾಗಿದ್ದರೆ ಒಂದು ಪ್ರಾಮಿಸರಿ ನೋಟನ್ನು (ಸಾಲಪತ್ರ) ಬರೆದುಕೊಟ್ಟು ಮುಂದಕ್ಕೆ ತೀರಿಸುವೆವೆನ್ನಬಹುದು; ಇನ್ನೊಬ್ಬರಿಂದ ಸಾಲ ತೆಗೆದು ಈ ಹಣ ಸಲ್ಲಿಸಬಹುದು; ನಮಗೆ ಹಣ ಕೊಡಬೇಕಾದವರಿಗೂ ನಾವು ತೆರಬೇಕಾದವರಿಗೂ ಒಬ್ಬರನ್ನೊಬ್ಬರಿಗೆ ಒಪ್ಪಿಸಿ, ನಾವು ಸಾಲದಿಂದ ಬಿಡಿಸಿಕೊಳ್ಳಬಹುದು; ಇಲ್ಲವಾದರೆ ಅದೇ ಸಾಹುಕಾರರಿಂದಲೇ ಇನ್ನಷ್ಟು ಹೆಚ್ಚು ಸಾಲ ತೆಗೆದು, ಹಿಂದಿನ ಮೊಬಲಗು ಕಳೆದು ಉಳಿಯುವುದನ್ನು ಹೊಸ ಸಾಲ ಮಾಡಿಕೊಂಡು ಹಣ ತೆರಬೇಕಾದ ಹೊರೆ ಅಗ್ಗ ಇಳಿಸಿಕೊಳ್ಳಬಹುದು! ಹೀಗೆ, ನಗದು ಕೊಡುವುದು; ಪುನಃ ಸಾಲ ಕೇಳುವುದು; ಇನ್ನಾರಿಂದಲಾದರೂ ಕೊಡಿಸುವುದು; ಇನ್ನಾರಿಗಾದರೂ ಹಣ ತೆರುವ ಜವಾಬ್ದಾರಿಯನ್ನು ವಹಿಸುವುದು ಮುಂತಾದುವು ಸಾಲವನ್ನು ಹರಿಸುವ ಮಾರ್ಗಗಳು.

**ಹುಂಡಿಗಳು.**— ಸಾಹುಕಾರನು ಬೇರೆ ಊರಿನವನಾದರೆ ಸಾಲದ ಹಣದ ರವಾನೆಯ ಅಂಶವೂ ಅದರ ವೆಚ್ಚವೂ ಸೇರಿಕೊಳ್ಳುತ್ತವೆ. ಅಂಚೆ ಅಥವಾ ತಂತಿಯ ಮೂಲಕ ಕಳುಹಿಸಬಹುದು; ಹಣವನ್ನು ಇಲ್ಲ ಯಾರಿಗೂ ಸಂದಾಯಮಾಡಿ, ಆತನ ಊರಿನಲ್ಲಿ ಇವರ ಅಂಗಡಿಯೊ ಬ್ಯಾಂಕೊ ಇದ್ದರೆ ಅವುಗಳ ಮೂಲಕ ಹಣ ಸಲ್ಲುವಂತೆ ಮಾಡಬಹುದು; ಸಾಹುಕಾರನೂ ಸಾಲಗಾರನೂ ಒಂದು ಬ್ಯಾಂಕಿನ ಕುಳಗಳಾಗಿದ್ದರೆ ಅಲ್ಲಿನ ಇಬ್ಬರ ಲೆಕ್ಕಗಳಲ್ಲಿಯೂ ಸ್ವಲ್ಪ ವ್ಯತ್ಯಾಸವನ್ನು ಮಾಡಿ ಸಾಲವನ್ನು ತೀರಿಸಬಹುದು. ಈ ಮಾರ್ಗಗಳಲ್ಲದೆ ವಿದೇಶಿ ವ್ಯಾಪಾರಕ್ಕೇ ವಿಶೇಷವಾದ ಬೇರೆ ಒಂದು ಮಾರ್ಗವುಂಟು: ವರ್ತಕ ಮಂಡಲಿಯಲ್ಲಿ ತಕ್ಷಣ ನಗದು ಕೊಡಲು ಹಣವಿಲ್ಲದಿರುವಾಗ ಅದರೆ ಸಾಮಾನನ್ನು ತರಿಸಿಕೊಳ್ಳಬೇಕಾಗಿರುವಾಗ, ಒಬ್ಬರಿಗೊಬ್ಬರು ಒಂದು ಬಗೆಯ ಹಣದ ಪತ್ರವನ್ನು ಬರೆದು ಕಳುಹಿಸುವ ವಾಡಿಕೆಯುಂಟು; ಆ ಪತ್ರಕ್ಕೆ ಹುಂಡಿ ಎಂದು ಹೆಸರು. ನಾವು ಕಳುಹಿಸಿರುವ ಸಾಮಾನಿಗೆ ಹಣ ಬರಬೇಕಾಗಿರುವಾಗ, ನಮಗೆ ಯಾರಿಂದ ಬರಬೇಕಾಗಿದೆಯೊ ಅವರ ಹೆಸರಿಗೆ ಒಂದು ಅಪ್ಪಣೆ ಪತ್ರ ಬರೆದು, ಅದರಲ್ಲಿ ಸೂಚಿಸಿರುವ ಹಣವನ್ನು, ಅದನ್ನು ಕಂಡ ಕೂಡಲೆ ('ದರ್ಶನಿ' ಹುಂಡಿ) ಅಥವಾ, ಅದನ್ನು ಕಂಡ ತಾರೀಖಿನಿಂದ ೧, ೨, ೩ ತಿಂಗಳ ಒಳಗಾಗಿ

('ಮುದ್ದತಿ' ಹುಂಡಿ) ತೆರಬೇಕು ಎಂದಿರುತ್ತದೆ. ಇಂತಹ ಪತ್ರವನ್ನು ಯಾರಿಗಾದರೂ ಮಾರಿ, ಅಥವಾ ಯಾರಲ್ಲಾದರೂ ಅಡವಿಟ್ಟು, ಅಥವಾ ಪಟ್ಟಕ್ಕೆ ಮಾರಿ, ತಕ್ಷಣಕ್ಕೆ ಹಣವನ್ನು ಪಡೆದುಕೊಳ್ಳಬಹುದಾಗಿರುತ್ತದೆ. ಆ ಹುಂಡಿ ಬೇಕು ಬೇಕಾದಹಾಗೆ ಕೈ ಕೈ ಸಾಗಿ ಕಡೆಗೆ ಯಾರ ಹೆಸರಿಗೆ ಅದನ್ನು ಬರೆದಿದೆಯೊ ಆತನಿಗೆ ಸಕಾಲಕ್ಕೆ ಸೇರಿ ಅವನಿಂದ ಹಣ ಸಂದಾಯ ಪಡೆದು ಪೂರ್ಣವಾಗುವುದು.

**ನಂಬಿಕೆ.**—ಚೆಕ್ಕಿನಂತೆಯೇ ಹುಂಡಿಯೂ ಪರಸ್ಪರ ವಿಶ್ವಾಸದ ಮೇಲೆ ಸಂಚಾರ ಮಾಡುತ್ತದೆ. ಅದರ ಆಧಾರದಮೇಲೆ ವರ್ತಕರು ಹಣ ಹುಟ್ಟಿಸಿಕೊಳ್ಳುತ್ತಾರೆ, ಸಾಲ ಹರಿಸಿಕೊಳ್ಳುತ್ತಾರೆ.

**ಮಾರುವೆ ಹುಂಡಿ.**—ವಿದೇಶಿ ವ್ಯಾಪಾರದಲ್ಲಿಯೂ ಸುಮಾರು ಇದೇ ಬಗೆಯ ವ್ಯವಹಾರ ನಡೆಯುವುದು. ಆಯಾ ದಿನದ ಮಾರುವೆಯ ದರದಂತೆ ದೇಶಿ ಹಣವನ್ನು ಅಂಚೆಯ ಕಚೇರಿಗೆ ಸಲ್ಲಿಸಿ ವಿದೇಶದವರಿಗೆ ತೆರಬೇಕಾದ ಹಣವನ್ನು 'ಪೋಸ್ಟಲ್ ಆರ್ಡರ್' ಮೂಲಕ ಕಳುಹಿಸಬಹುದು. ಇಲ್ಲಿ ರೂಪಾಯಲ್ಲಿ ಸಂದ ಹಣ ಇಂಗ್ಲೆಂಡಿನಲ್ಲಿ ಪೌಂಡು ಲೆಕ್ಕದಲ್ಲಿಯೊ, ಜರ್ಮನಿಯಲ್ಲಿ ಮಾರ್ಕುಗಳ ಲೆಕ್ಕದಲ್ಲಿಯೊ ಸಂದಾಯವಾಗುವುದು. ಆದರೆ ಈ ಬಗೆಯ ನೇರವಾದ ತೆರಾಣೆಗಳಿಗಿಂತ ಹೆಚ್ಚಾಗಿ 'Bills of Exchange' ಎಂದರೆ **ಮಾರುವೆ ಹುಂಡಿ** ಎಂಬ ಹುಂಡಿಗಳ ಮೂಲಕ ಸಲ್ಲುವುದೇ ಹೆಚ್ಚು.

**ಚೆಕ್ಕು, ಮಾರುವೆ ಹುಂಡಿ.**—ಚೆಕ್ಕಿಗೂ ಮಾರುವೆ ಹುಂಡಿಗೂ ಒಂದೆರಡು ವ್ಯತ್ಯಾಸಗಳಿವೆ. ಚೆಕ್ಕನ್ನು ಬ್ಯಾಂಕಿನ ಮೇಲೆಯೇ ಬರೆಯಬೇಕು. ಯಾರು ಹಣವನ್ನು ತೆಗೆದುಕೊಳ್ಳುವರೊ ಅವರಿಗೆ—ಚೆಕ್ಕು ಸರಿಯಾಗಿದ್ದರೆ—ಅದನ್ನು ತೋರಿಸಿದ ತಕ್ಷಣ ಬ್ಯಾಂಕಿನವರು ಹಣ ಕೊಡಬೇಕು. ಅಲ್ಲದೆ ಒಂದೇ ಊರು ಅಥವಾ ದೇಶದಲ್ಲಿ ಚೆಕ್ಕುಗಳನ್ನು ಬರೆದು ಕೊಡಬಹುದು. ಮಾರುವೆ ಹುಂಡಿ ಹಾಗಲ್ಲ. ಅದು ಒಂದು ದೇಶದಲ್ಲಿರುವ ವರ್ತಕರು ಇನ್ನೊಂದು ದೇಶಕ್ಕೆ ತಮ್ಮಿಂದ ಸಾಮಾನು ತರಿಸಿಕೊಂಡು ತಮಗೆ ಹಣ ತೆರಬೇಕಾಗಿರುವಾಗ ಅವರ ಹೆಸರಿಗೆ ಬರೆದು ಕಳುಹಿಸುವ ಅಪ್ಪಣೆ ಪತ್ರ. ಅದನ್ನು ಎಷ್ಟು ಹಣಕ್ಕೆ ಬರೆದಿದೆಯೊ ಅಷ್ಟಕ್ಕೆ ಸರಕಾರ

ದವರು ಗೊತ್ತುಮಾಡಿರುವ ಸ್ಟಾಂಪು ಹಚ್ಚಬೇಕು. ಪ್ರತಿಯೊಂದು ದೇಶದಲ್ಲಿಯೂ ಅನೇಕ ವರ್ತಕರು ಸಾಮಾನನ್ನು ತರಿಸಿಕೊಳ್ಳುತ್ತಿರುತ್ತಾರೆ; ಮಾರಲು ಹೊರಗೆ ಕಳುಹಿಸುತ್ತಿರುತ್ತಾರೆ. ದೇಶದಿಂದ ದೇಶಕ್ಕೆ ಹಣವನ್ನು ಕಳುಹಿಸಿ ಸಾಲವನ್ನು ಹರಿಸಿಕೊಳ್ಳುವುದಕ್ಕೆ ಬದಲಾಗಿ ಈ ಹುಂಡಿಗಳ ಮೂಲಕ ಹಣಗಳು ಸಲ್ಲುವ ಏರ್ಪಾಡು ಮಾಡಿಕೊಳ್ಳುತ್ತಾರೆ. ಈ ವರ್ತಕರೆಲ್ಲರ ಪರವಾಗಿ ಬ್ಯಾಂಕುಗಳವರು ಹಣ ಸಲ್ಲಿಸಿ ಸಾಲ ಹರಿಯುವ ವ್ಯವಸ್ಥೆ ಮಾಡುವರು. ಹುಂಡಿಗಳು ಒಂದು ದೇಶದಿಂದ ಇನ್ನೊಂದಕ್ಕೆ ತಲುಪಬೇಕಾದರೆ ಸ್ವಲ್ಪ ಕಾಲ ಹಿಡಿಯುವುದು.

**ವಟ್ಟದ ವ್ಯಾಪಾರ — ಹುಂಡಿಯಿಂದ ಕಿರುಸಂಪಾದನೆ.** — ಸಾಧಾರಣವಾಗಿ ಸಾಗುತ್ತಿರುವ ಪದಾರ್ಥಗಳ ಆಧಾರದ ಮೇಲೆಯೇ ಮಾರುವ ಹುಂಡಿಗಳನ್ನು ಬರೆಯುವುದು ವಾಡಿಕೆ. ಸಾಮಾನು ಕಳುಹಿಸಿರುವ ವರ್ತಕನು ಸಾಮಾನೂ ಕಾಗದವೂ ವಿದೇಶಿ ವರ್ತಕನಿಗೆ ತಲುಪಿ ಅವನಿಂದ ಹಣ ಬರುವವರೆಗೂ ಏಕೆ ಕಾಯಬೇಕು? ತನ್ನ ಹಣವನ್ನು ಇತರರಿಗೆ ಕೊಟ್ಟು ಏಕೆ ಸುಮ್ಮನಿರಬೇಕು? ಅಷ್ಟು ಹಣದ ಮೇಲೆ ತಾನು ಏಕೆ ಬಡ್ಡಿ ಪ್ರಯೋಜನಗಳನ್ನು ಕಳೆದುಕೊಂಡು ಕುಳಿತಿರಬೇಕು? ಅತ್ತ ಕಡೆ, ವಿದೇಶಿ ವರ್ತಕನು ಹುಂಡಿಯಲ್ಲಿ ಸೂಚಿಸಿರುವ ಸಾಮಾನು ತನ್ನ ಕೈಸೇರದೆ ಇರುವಾಗ ಈ ವರ್ತಕನಿಗೆ ಏಕೆ ಹಣವನ್ನು ಸಲ್ಲಿಸಬೇಕು? ಆ ಸಾಮಾನು ತನ್ನ ಕೈಗೆ ಬಂದು ಅದು ಪೇಟೆಯಲ್ಲಿ ಮಾರಾಟವಾದ ಮೇಲೆಯೇ ಅದರ ಹಣ ಆತನ ಕೈಗೆ ಸಿಕ್ಕಬೇಕಾಗಿದ್ದರೆ! ಅಲ್ಲಿಯವರೆಗೂ ಇವನೇಕೆ ಕಾಯಬೇಕು? ಆದುದರಿಂದ ಆ ಸಾಮಾನನ್ನು ರಫ್ತುಮಾಡಿದ ವರ್ತಕನು ಇಷ್ಟು ಸಾಮಾನನ್ನು — ನಿಮ್ಮ ಪ್ರಾರ್ಥನೆಯಂತೆ — ಇಂತಹ ದಿವಸ, ಇಂತಹ ಹಡಗಿನಲ್ಲಿ ನಿಮಗೆ ಕಳುಹಿಸಿದ್ದೇನೆ; ಅದಕ್ಕೆ ಕ್ರಯ ಇಷ್ಟು; ಅದನ್ನು ನಿಮಗೆ ಸಾಗಿಸುವ ವೆಚ್ಚ ಇಷ್ಟು; ದಾರಿಯಲ್ಲಿ ಅಪಾಯ ಸಂಭವಿಸಿದರೆ ಅದನ್ನು ತುಂಬಿಕೊಡುವುದಕ್ಕಾಗಿ ಮಾಡಿರುವ ವಿಮೆ (Insurance) ಇಷ್ಟು (C. I. F.—Cost, Insurance, Freight) ಎಂದು ತಿಳಿಸಿ, ಒಟ್ಟು ಮೊತ್ತಕ್ಕೆ ಆ ಸಾಮಾನನ್ನು ಆಮದುಮಾಡಿಕೊಳ್ಳುವ ವಿದೇಶಿ ವರ್ತಕನ ಹೆಸರಿಗೆ ಹುಂಡಿ ಬರೆದು, ಹುಂಡಿಯನ್ನು ಕಂಡ ತಕ್ಷಣವೋ, ಕಂಡ ೧, ೨, ೩

ತಿಂಗಳ ಒಳಗಾಗಿಯೊ ಆ ಮೊಬಲಗನ್ನು ತನಗಾಗಲಿ ತನ್ನ ಅಪ್ಪಣೆ ಪಡೆದವರಿಗಾಗಲಿ ಸಲ್ಲಿಸತಕ್ಕದ್ದು ಎಂದು ಬರೆಯುವನು. ಹುಂಡಿಯ ಜೊತೆಗೆ ಹಡಗಿನ ಮೇಲೆ ಹಾಕಿರುವ ಸಾಮಾನುಗಳ ಪಟ್ಟಿ; ಹಡಗಿನವರು ಕೊಟ್ಟಿರುವ ರಸೀತಿ; ವಿಮೆ ಪತ್ರ ಈ ಮೂರನ್ನೂ ಕೊಟ್ಟು ಕಳುಹಿಸುವನು. ಈ ಕಾಗದಗಳು ವಿದೇಶಿ ವರ್ತಕನಿಗೆ ಸೇರಿದ ತಕ್ಷಣ ಆತನು 'ಆಗಬಹುದು, ಒಪ್ಪಿದೆ' (Accepted) ಎಂದು ಆ ಹುಂಡಿಯ ಮೇಲೆ ಬರೆದು ರುಜು ಹಾಕಿ ಅದನ್ನು ಹಿಂದಕ್ಕೆ ಕಳುಹಿಸುವನು. ಎಂದರೆ ಸಕಾಲಕ್ಕೆ ಹಣವನ್ನು ಖಂಡಿತವಾಗಿಯೂ ಸಲ್ಲಿಸುವೆನೆಂದು ಮಾತುಕೊಡುತ್ತಾನೆ.

ಇದು ಹಿಂದಕ್ಕೆ ಕೈಗೆ ಬರಲು ಈತನು ಅವಧಿ ಕಳೆಯುವ ತನಕ ಕಾದಿದ್ದು (ಅವಧಿಯ ಜೊತೆಗೆ ಮೇಲೆ ಮೂರು ದಿನ ರಿಯಾಯತಿ—Days of Grace) ಹುಂಡಿಯ ಹಣವನ್ನು ಪೂರ್ತಿಯಾಗಿ ತಾನೇ ಸಂದಾಯ ಮಾಡಿಸಿಕೊಳ್ಳಬಹುದು. ಅವರೆಗೂ ಕಾಯುವುದಕ್ಕೆ ವ್ಯವಧಾನ ಅಥವಾ ಇಷ್ಟ ಇಲ್ಲದಿದ್ದರೆ—ಅಥವಾ ತಕ್ಷಣ ಇವನಿಗೆ ಹಣ ಬೇಕಾಗಿದ್ದರೆ—ಇತರ ವರ್ತಕರಿಗೂ, ದಲ್ಲಾಳರಿಗೂ, ಬ್ಯಾಂಕಿನವರಿಗೂ ಕೊಟ್ಟು ಆ ಕ್ಷಣಕ್ಕೆ ಎಷ್ಟು ಬೆಲೆ ಬರುವುದೊ ಅದನ್ನು ತೆಗೆದುಕೊಳ್ಳಬಹುದು. ಹುಂಡಿಯಲ್ಲಿ ಕಾಣಿಸಿರುವ ಹಣ ಪೂರ್ತಿ ಬರಬೇಕಾದರೆ ಅಲ್ಲಿ ಸೂಚಿಸಿರುವಷ್ಟು ಕಾಲದ ವರೆಗೂ ಕಾಯಬೇಕು. ತಕ್ಷಣ ಅದಕ್ಕೆ ಅಷ್ಟು ಬೆಲೆಯಿಲ್ಲ. ಆದುದರಿಂದ ಅದನ್ನು ಕೊಂಡುಕೊಳ್ಳುವ ವರ್ತಕರು ಅದಕ್ಕೆ ಪೂರ್ತಿ ಹಣ ಕೊಡುವುದಿಲ್ಲ. ಪೇಟೆಯ ದರದಂತೆ ಅಷ್ಟು ಕಾಲಕ್ಕೆ ಅಷ್ಟು ಮೊತ್ತದ ಮೇಲಿನ ಬಡ್ಡಿ, ಮಾಡಿದ ಸಹಾಯಕ್ಕೆ ದಲ್ಲಾಳಿ—ಇವನ್ನು ವಟ್ಟ ಮುರಿದುಕೊಂಡು ಬಾಕಿ ಹಣವನ್ನು ಈತನಿಗೆ ಸಲ್ಲಿಸುವರು.* ಅಷ್ಟು ಕಾಲದವರೆಗೂ ಈತನು ಕಾಯಬೇಕಾಗದಂತೆ ಈ ಹುಂಡಿಯ ಸಹಾಯದಿಂದ ಈತನಿಗೆ ಈಗಲೇ ಹಣ ದೊರಕುವಂತಾಯಿತು. ಅದನ್ನು ಕೊಂಡುಕೊಂಡಿರುವವನಿಗೆ ಅದನ್ನು ಯಾವಾಗ ಯಾರಿಗೆ ಮಾರಿದರೂ ಹಣ ಬರುತ್ತದೆಂದು ಗೊತ್ತಿರುವುದರಿಂದ ವಟ್ಟ, ದಲ್ಲಾಳಿ ಸಂಪಾದಿಸಿಕೊಳ್ಳಲು ಅವಕಾಶ ದೊರೆತಂತಾಯಿತು.

* ಹೀಗ ಚೆಕ್ಕು ತಕ್ಷಣ ಹಣವಾದರೆ ಮಾರುವ ಹುಂಡಿ ಒಂದು ಕಾಲದ ಅವಧಿಯ ಮೇಲೆ ಮಾತ್ರ ಕೈಗೆ ಬರುವ ಹಣ. ಆದುದರಿಂದ ಇದಕ್ಕೆ ಒಂದು ಕಾಲದ ತವೆ ಇದೆ.

ಮುಸಲ, ತನಗೇ ಹಣ ಬೇಕಾದರೆ ಈ ಎರಡನೆಯವಾತನು ಅದನ್ನು ಯಾರಿಗಾದರೂ ಪುನಃ ಪಟ್ಟ, ದಲ್ಲಾಳಿ ತೆತ್ತು ನಗದು ಮಾಡಿಕೊಳ್ಳುವ ಅವಕಾಶವಿದೆ, ಅನುಕೂಲವಿದೆ ಎಂದು ಅವನಿಗೆ ಗೊತ್ತು. ಆದುದರಿಂದ ಅನೇಕ ಜನ ದಲ್ಲಾಳಿಗಳು ತಮ್ಮಲ್ಲಿರುವ ಹಣವನ್ನು ಒದಗಿಸಿ ಇಂತಹ ವ್ಯಾಪಾರದ ಹುಂಡಿಗಳನ್ನು ಪಟ್ಟಕ್ಕೆ ಕೊಂಡಿಟ್ಟುಕೊಳ್ಳುವರು. ಇತರ ಕಿರುವಾಯಿದೆ ಸಾಲಪತ್ರಗಳನ್ನು ಕೊಂಡಂತೆಯೇ ಕೊಳ್ಳುವರು. ತಮ್ಮ ಹಣಕ್ಕೆ ಸಂಪಾದನೆ ಒಂದಂತಾಯಿತು; ಯಾವಾಗ ಎಂದರೆ ಆಗ ಅದಕ್ಕೆ ಪ್ರತಿಯಾಗಿ ನಗದು ಸಿಕ್ಕುವುದು; ಅಷ್ಟು ವ್ಯಾಪಾರಕ್ಕೆ ಅವರು ನೆರವಾದ ಹಾಗಾಯಿತು. ಈ ರೀತಿ ಮಾರುವೆಹುಂಡಿ ಹಣವನ್ನು ಸಂಪಾದಿಸುವ ಒಂದು ಸಾಧನ, ವಿಧಾನ—(Investment)—ಆಯಿತು. ಎಂದರೆ ಮಾರುವೆ ಹುಂಡಿಯಿಂದ ವ್ಯಾಪಾರದ ಸಂಚಾರಕ್ಕೆ ಉತ್ತಮವಾದ ಸಹಾಯಮಾಡಿ ಸಾಲಗಳನ್ನು ಹರಿಸುವ ಒಂದು ಸಾಧನ ದೊರೆಯಿತು; ಕಿರುವಾಯಿದೆ ಪತ್ರಗಳನ್ನು ಕೊಂಡು ಹಣ ಸಂಪಾದಿಸಬೇಕೆನ್ನುವರಿಗೆ ಒಂದು ಆಸ್ತಿಪತ್ರ ದೊರೆತಂತಾಯಿತು.*

**ಇವುಗಳ ಸಂಚಾರ ವಿಧಾನ, ಸಾಲ ತೀರುವ ಬಗೆ, ಸೂಕ್ಷ್ಮಾಂಶಗಳು.—** ದಿನಚರಿಯ ವ್ಯವಹಾರದಲ್ಲಿ ಈ ಹುಂಡಿ ಹೇಗೆ ಕೆಲಸ ಮಾಡುವುದೆಂಬುದನ್ನು ತಿಳಿಯಬೇಕಾದರೆ ಅದರ ವಿಧಾನವನ್ನು ಒಳಹೊಕ್ಕು ನೋಡಬೇಕು. ಅತಿ ಸುಲಭವಾಗಿರುವ ಒಂದು ವ್ಯಾಪಾರವನ್ನು ಮೊದಲು ಇಲ್ಲಿ ವರ್ಣಿಸುತ್ತೇವೆ. ಮಾರುವೆಹುಂಡಿಗೆ ಸಂಪೂರ್ಣತೆ ಬರಬೇಕಾದರೆ—ಅದು ಒಂದು ಚಕ್ರ ಪೂರ್ತಿ ಸುತ್ತಬೇಕಾದರೆ—ಎರಡು ದೇಶಗಳಲ್ಲಿ ಎರಡು ಬಗೆಯ ವರ್ತಕರಾದರೂ ಇರಬೇಕು. ಇಲ್ಲಿನ ಗೋವರ್ಧನದಾಸ್ ಕಂಪನಿಯವರು ಇಂಗ್ಲಂಡಿನಲ್ಲಿರುವ ಟೇಲರ್ ಕಂಪನಿಯವರಿಂದ ಯಂತ್ರಗಳನ್ನು ತರಿಸಿಕೊಂಡಿದ್ದಾರೆ. ಯಂತ್ರದ ಬೆಲೆ ಒಂದು ಲಕ್ಷ ರೂಪಾಯಿ. ಇಂಗ್ಲಂಡಿನಲ್ಲಿರುವ ಎಲ್ಲಿಸ್ ಕಂಪನಿಯವರು ಇಲ್ಲಿನ ಹೀರಾಚಂದರಿಂದ ಒಂದು ಲಕ್ಷ ರೂಪಾಯಿ ಬೆಲೆ ಬಾಳುವ ಹತ್ತಿಯನ್ನು ತರಿಸಿಕೊಂಡಿದ್ದಾರೆ. ಈಗ ಟೇಲರ್ ಕಂಪನಿಗೆ ಗೋವರ್ಧನದಾಸ್ ಕಂಪನಿಯವರೂ ಹೀರಾಚಂದರಿಗೆ

* *Cf.* Hartley Withers: *Money Changing.*

ಎಲ್ಲಿಸ್ ಕಂಪನಿಯವರೂ ಹಣ ಸಲ್ಲಿಸಬೇಕಾಗಿದೆ. ಅವರು ಇಂಡಿಯಾಕ್ಕೂ ಇವರು ಇಂಗ್ಲಂಡಿಗೂ ಹಣವನ್ನು ಕಳುಹಿಸುವ ಬದಲು ಈ ಬಗೆಯ ಹುಂಡಿಯ ಆಧಾರದ ಮೇಲೆ ಎಲ್ಲಿಸ್ ಕಂಪನಿಯವರು ಟೇಲರಾ ಕಂಪನಿಗೂ ಗೋವರ್ಧನದಾಸರು ಹೀರಾಚಂದರಿಗೂ ಹಣವನ್ನು ಸಂದಾಯಮಾಡಿ ಪರಸ್ಪರ ಸಾಲಗಳನ್ನು ಹರಿಸಿಕೊಳ್ಳುತ್ತಾರೆ. ನೇರವಾಗಿ ಹಣಕ್ಕೆ ಬದಲು ಈ ಸಾಲ್ಪುರ ಪಟ್ಟಿಯೂ ಹುಂಡಿಗಳು ಓಡಿಯಾಡುವುವು.

ಈ ವರ್ತಕರ ಪರಿಚಯ ಒಬ್ಬರಿಗೊಬ್ಬರಿಗೆ ಇಲ್ಲದಿರಬಹುದು ; ಅವರ ವ್ಯಾಪಾರವೂ ಒಬ್ಬರನೊಬ್ಬರಿಗೆ ಗೊತ್ತಿಲ್ಲದೆ ನಡೆದಿರಬಹುದು. ಆದುದರಿಂದ ಅವರಿಂದ ಒಪ್ಪಿ ಬಂದ ಪತ್ರವನ್ನು ಇವರೂ ಇವರು ಒಪ್ಪಿ ಕಳುಹಿಸಿದ ಪತ್ರವನ್ನು ಅವರೂ ಪೇಟೆಯಲ್ಲಿ ಮಾರಿ ತಮ್ಮ ತಮ್ಮ ಹಣಗಳನ್ನು ಸಲ್ಲಿಸಿಕೊಳ್ಳುವರು. ಹೀಗೆ ಸಂದಾಯವಾಗುವುದನ್ನು ಸುಲಭಮಾಡುವ ಕೆಲಸವೇ ಬ್ಯಾಂಕಿನವರದು. ಎಲ್ಲಿಸಾರವರಿಂದ ಅಮೇಲೆ ವಸೂಲುಮಾಡುವ ಕೆಲಸವನ್ನು ತಮ್ಮ ಮೇಲೆ ಹಾಕಿಕೊಂಡು ಟೇಲರ್ ಕಂಪನಿಗೆ ಗೋವರ್ಧನದಾಸರು ಒಪ್ಪಿ ಕಳುಹಿಸಿದ ಹುಂಡಿಯನ್ನು ಕೊಂಡುಕೊಂಡು ಉದಾ.— ಲ್ಲಾಯಿಡ್ಸ್ ಬ್ಯಾಂಕಿನವರು ಹಣ ಸಲ್ಲಿಸುವರು. ಇತ್ತ ಎಲ್ಲಿಸ್ ಅವರು ಒಪ್ಪಿ ಕಳುಹಿಸಿರುವ ಹುಂಡಿಯನ್ನು ಹೀರಾಚಂದರು ಉದಾ.—ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾದವರು ಕೊಳ್ಳುವಂತೆ ಮಾಡಿ ಮುಂದೆ ಅವರು ಗೋವರ್ಧನದಾಸರಿಂದ ಹಣ ವಸೂಲುಮಾಡಿಕೊಳ್ಳುವ ಹಕ್ಕು ಸಂಪಾದಿಸುವಂತೆ ಮಾಡುವರು.

**ಎರಡನೆಯ ಹೆಜ್ಜೆ — ಬ್ಯಾಂಕು ಲೆಕ್ಕಗಳಲ್ಲಿ ಜಮಾ ಖರ್ಚು.** — ಅಥವಾ ಸೆಂಟ್ರಲ್ ಬ್ಯಾಂಕಿನಲ್ಲಿ ಹೀರಾಚಂದ್ ಗೋವರ್ಧನದಾಸರಿಬ್ಬರ ಲೆಕ್ಕವೂ ಇದ್ದರೆ, ಲ್ಲಾಯಿಡ್ಸ್ ಬ್ಯಾಂಕಿನಲ್ಲಿ ಟೇಲರ್ ಎಲ್ಲಿಸ್ ಕಂಪನಿಗಳೆರಡರ ಲೆಕ್ಕವೂ ಇದ್ದರೆ, ಸೆಂಟ್ರಲ್ ಬ್ಯಾಂಕಿನವರು ಹೀರಾಚಂದರ ಲೆಕ್ಕಕ್ಕೆ ಜಮಾ ಹಾಕಿ ಗೋವರ್ಧನದಾಸರ ಲೆಕ್ಕಕ್ಕೆ ಖರ್ಚು ಹಾಕಿ ಸಾಲ ಹರಿಸುವರು. ಅತ್ತ, ಲ್ಲಾಯಿಡ್ಸ್ ಬ್ಯಾಂಕಿನವರು ಎಲ್ಲಿಸ್ ಕಂಪನಿಯ ಲೆಕ್ಕಕ್ಕೆ ಖರ್ಚು ಹಾಕಿ ಟೇಲರ್ ಕಂಪನಿ ಲೆಕ್ಕಕ್ಕೆ ಜಮಾ ಹಾಕಿ ಸಾಲ ತೀರಿಸುವರು. ಹುಂಡಿಗಳನ್ನು ಕೊಂಡ ಸೆಂಟ್ರಲ್ ಬ್ಯಾಂಕಿಗೂ ಲ್ಲಾಯಿಡ್ಸ್ ಬ್ಯಾಂಕಿಗೂ

ಕಾಗದ ಪತ್ರವ್ಯವಹಾರ ನಡೆದು ಇವರಿಗೆ ಪ್ರತಿಕೂಲವಾದ ಹುಂಡಿಯನ್ನು ಇವರೂ ಅವರಿಗೆ ಪ್ರತಿಕೂಲವಾದ ಹುಂಡಿಯನ್ನು ಅವರೂ ರದ್ದುಮಾಡಿ ಕಡೆಗೆ ನಾಲ್ಕುಮಂದಿ ವರ್ತಕರ ಲೆಕ್ಕಾಚಾರವೂ ತೀರಿದ ಮೇಲೆ ಉಳಿದ ಹುಂಡಿಗಳನ್ನೂ ಕಾಗದಪತ್ರಗಳನ್ನೂ ರದ್ದುಮಾಡುವರು.

**ಆದರೆ ವಾಸ್ತವವಾಗಿ ನಡೆಯುತ್ತಿರುವ ರೀತಿ.**— ಇದೊಂದು ಬಗೆ. ಆದರೆ ದಿನದಿನವೂ ನಡೆಯುತ್ತಿರುವ ವ್ಯಾಪಾರ ಇಷ್ಟು ಸುಲಭವಾಗಿಯೂ ಇರುವುದಿಲ್ಲ. ಎಲ್ಲ ದೇಶದ ಎಲ್ಲ ಬ್ಯಾಂಕುಗಳವರೂ ಎಲ್ಲ ಬಗೆಯ ವರ್ತಕರೂ ಬಗೆಬಗೆಯ ಮೊತ್ತದ ವ್ಯಾಪಾರಗಳನ್ನು ಮಾಡುತ್ತಿರುತ್ತಾರೆ. ಗೊತ್ತಾಗಿ ಇಂತಹ ಆಮದಿಗೆ ಇಂತಹ ರಫ್ತುಮಾಡಿದವರನ್ನು ಗಂಟುಹಾಕಿ ಅವರ ಸಾಲಗಳನ್ನು ಹರಿಸಬೇಕೆಂದು ಯಾರೂ ಪ್ರಯತ್ನಪಡಲಾಗುವುದಿಲ್ಲ. ವರ್ತಕರೂ ಬ್ಯಾಂಕುಗಳವರೂ ಹುಂಡಿಗಳನ್ನು ವಟ್ಟಕ್ಕೂ ಸಾಲಕ್ಕೂ ಸಂತತವಾಗಿ ಕೊಳ್ಳುತ್ತಿರುತ್ತಾರೆ, ಮಾರುತ್ತಿರುತ್ತಾರೆ. ವಟ್ಟಕ್ಕೆ ಹುಂಡಿ ಕೈ ಕೈ ಸಾಗುತ್ತಲೇ ಇರುವುದರಿಂದ ಯಾವ ಒಂದು ಸಮಯದಲ್ಲಿಯೇ ಆಗಲಿ ಯಾವ ದೇಶದ ಎಷ್ಟು ಮೊಬಲಗಿನ ಹುಂಡಿ ಯಾವ ವರ್ತಕರ ಅಥವಾ ಯಾವ ಬ್ಯಾಂಕಿನ ಕೈಯಲ್ಲಿರುತ್ತದೆಂದು ಗೊತ್ತುಹಚ್ಚಲಾಗುವುದಿಲ್ಲ. ಅಂತು ತಾವು ಕೊಂಡಿಟ್ಟುಕೊಂಡಿರುವ ಹುಂಡಿಗಳ ಕಾಲ ಒದಗಿಬಂದರೆ ಅವನ್ನು ಒಪ್ಪಿಕೊಂಡಿರುವ ವರ್ತಕರೋ ಅವರ ಪರವಾಗಿ ಅವರ ಬ್ಯಾಂಕಿನವರೋ ಇನ್ನಾರಾದರೂ ಹಣವನ್ನು ಖಂಡಿತವಾಗಿ ಕೊಟ್ಟೇಕೊಡುವರೆಂದೂ, ಕೊಟ್ಟೇತೀರುವಂತೆ ಅವರನ್ನು ಬಲಾತ್ಕರಿಸಬಹುದೆಂದೂ, ಒಟ್ಟಿನಲ್ಲಿ ತಮ್ಮ ಗಂಟಿಗೆ ಮೋಸವಿಲ್ಲವೆಂದೂ ಗೊತ್ತಿರುವುದರಿಂದ ಅವುಗಳನ್ನು ನಿರಂತರವಾಗಿ ಕೊಂಡು ಮಾರಿ ವ್ಯಾಪಾರವನ್ನು ತೂಗಿಸುತ್ತಿರುತ್ತಾರೆ.

**ಬ್ಯಾಂಕುಗಳ ವಿದೇಶಿ ವ್ಯಾಪಾರ ಶಾಖೆ.**— ಪ್ರತಿಯೊಂದು ದೊಡ್ಡ ಬ್ಯಾಂಕಿಗೂ ದೇಶವಿದೇಶಗಳಲ್ಲಿ ಶಾಖೆಗಳೋ ವ್ಯಾಪಾರ ಪ್ರತಿನಿಧಿಗಳೋ ಇದ್ದು ಇವರ ಪರವಾದ ಎಲ್ಲ ಕಾಗದಪತ್ರಗಳನ್ನೂ ತರಿಸಿಕೊಳ್ಳುತ್ತಾರೆ; ಲೇವಾದೇವಿ ವ್ಯವಸ್ಥೆಮಾಡಿ, ಬರಬೇಕಾದುದನ್ನು ಬರಮಾಡಿಕೊಂಡು, ಕೊಡಬೇಕಾದುದನ್ನು ಕೊಡುತ್ತಿರುತ್ತಾರೆ; ಕುಳದ ಯೋಗ್ಯತೆಯನ್ನೂ

ವ್ಯಾಪಾರದ ಸ್ವರೂಪವನ್ನು ತಿಳಿಸುತ್ತಿರುತ್ತಾರೆ. ಇವರ ಮಾತಿನ ನಂಬಿಕೆಯ ಮೇಲೆ ಅಪರಿಚಿತರಾದ ವರ್ತಕರ ಲಕ್ಷಾಂತರ ರೂಪಾಯಿನ ಅನೇಕ ಹುಂಡಿಗಳ ಮೇಲೆ ಹಣ ಒದಗಿಸುತ್ತಿರುತ್ತಾರೆ. ಅವರು ಕೇಳುವ ದಲ್ಲಾಳಿಯ ದರ ಕೂಡ ಬಹು ಅಲ್ಪ. ಶೇಕಡ ಒಂದರಲ್ಲಿ ಎಂಟನೆಯ ಒಂದು ಭಾಗ (ಎಂದರೆ ೧೦೦ ರೂಪಾಯಿಗೆ ೨ ಆಣೆ ಭಾಗ) ಇರುತ್ತದೆ, ಅಷ್ಟೇ.

**ಇಂಗ್ಲಂಡಿನ ಒಪ್ಪಿಕೆ ಅಂಗಡಿಗಳು (Accepting Houses)—ಪಟ್ಟದ ವರ್ತಕರು.**— ಇಷ್ಟೇ ಅಲ್ಲ. ಇಂಗ್ಲಂಡಿನ ದೇಶದ ವ್ಯಾಪಾರ ಮಂಡಲವನ್ನೂ ಬ್ಯಾಂಕು ವರ್ಗವನ್ನೂ ಪರೀಕ್ಷಿಸಿದರೆ ಅಲ್ಲಿ ಒಂದು ವಿಶೇಷ ಬಗೆಯ ಸಂಸ್ಥೆಗಳಿರುವುದನ್ನು ನೋಡಬಹುದು. ಹುಂಡಿ ಹಣ ತೆರಬೇಕಾದ ವರ್ತಕರ ಪ್ರಾರ್ಥನೆಯಂತೆ ಇವು ಅವರಿಗೆ ಪ್ರತಿಯಾಗಿ ಹುಂಡಿಯ ಹಣ ಸಲ್ಲಿಸುವ ಒಪ್ಪಿಕೆಯನ್ನು ಬರೆದುಕೊಡುವ ದಲ್ಲಾಳಿ ಅಂಗಡಿಗಳು. ವಿದೇಶದಲ್ಲಿ ವಾಸಮಾಡುವ ವರ್ತಕ ಕುಳಗಳಲ್ಲಿ ಒಬ್ಬರೊಬ್ಬರಿಗೆ ನಂಬಿಕೆ ಹೇಗೊ ಏನೋ? ಆದರೆ ಈ ಒಪ್ಪಿಕೆ ಅಂಗಡಿಗಳು (ಇಂಗ್ಲಿಷಿನಲ್ಲಿ ಇವಕ್ಕೆ Accepting Houses ಎಂದು ಹೆಸರು) ಪ್ರಸಿದ್ಧವಾಗಿರುವುದರಿಂದ ಅವರ ಒಪ್ಪಿಕೆಯ ಬರಹವೂ ರುಜುವೂ ಹುಂಡಿಯ ಮೇಲೆ ಕಂಡರೆ ಸಾಕು. ಹುಂಡಿಯನ್ನು ಯಾರೇ ಬರೆದಿರಲಿ, ಯಾರ ಹೆಸರಿಗೇ ಬರೆದಿರಲಿ, ವರ್ತಕರೂ ಬ್ಯಾಂಕುಗಳೂ ಹಿಂದು ಮುಂದೆ ನೋಡದೆ ಅಂತಹ ಹುಂಡಿಗಳನ್ನು ಕೊಂಡುಕೊಳ್ಳಲು ಸಿದ್ಧರಾಗಿರುವರು. ಇನ್ನೊಂದು ಬಗೆಯ ಸಂಸ್ಥೆಯೂ ವರ್ತಕ ಮಂಡಲಿಯೂ ಕೇವಲ ಪಟ್ಟಕ್ಕೆ ಹುಂಡಿಗಳನ್ನು ಕೊಂಡು ಮಾರುವ ಕೆಲಸವನ್ನೇ ಮಾಡುತ್ತವೆ. ಇಂಗ್ಲಂಡು ಎಲ್ಲ ದೇಶಗಳ ವ್ಯಾಪಾರಕ್ಕೂ ಈಗ್ಗೂ ಮಧ್ಯರಾಷ್ಟ್ರವೇ ಆಗಿದೆ ಎನ್ನಬಹುದು. ಇಂಗ್ಲಂಡಿನ ವ್ಯಾಪಾರ ವ್ಯಾಪಕತೆ ಪ್ರಪಂಚದ ಅಗಲಕ್ಕೂ ಹರಡಿದೆ. ಇಂಗ್ಲಂಡಿನ ಮೇಲೆ (ಇಂಗ್ಲಿಷ್ ವರ್ತಕರ ಅಥವಾ ಬ್ಯಾಂಕುಗಳ ಮೇಲೆ ಎಂದರ್ಥ) ಬರೆದು ಪೌಂಡಿನ ಲೆಕ್ಕದಲ್ಲಿ ತೆರಾಣೆಯಾಗಬೇಕಾಗಿರುವ ಒಂದು ಹುಂಡಿಯನ್ನು ಕೊಂಡುಕೊಂಡರೆ ಯಾವ ದೇಶದವರಾದರೂ ಬೇರೆ ಯಾವ ದೇಶಕ್ಕೇ ಆಗಲಿ ತೆರಬೇಕಾದ ಸಾಲವನ್ನು ತೆರುವಹಾಗಾಯಿತೆಂದು ತಿಳಿಯುವರು.

---

* ಉದಾ: ಷ್ರೋಡರ್ಸ್, ಹ್ಯಾಂಬ್ರೋಸ್ ಮುಂತಾದುವು.

ಇಂಗ್ಲಂಡಿನೊಡನೆ ಎಲ್ಲರಿಗೂ ವ್ಯಾಪಾರದ ಸಂಬಂಧವಿರುವುದರಿಂದ ಆ ಮೂಲಕ ದೇಶಪರದೇಶಗಳ ಸಾಲ ಹರಿಯುವುದು ಸಾಧ್ಯವಾಗುವುದು. ಮುಖ್ಯ ವ್ಯಾಪಾರ ರಾಷ್ಟ್ರಗಳವರೆಲ್ಲ ಇಂಗ್ಲಂಡ್ ಅಮೆರಿಕಾ ದೇಶಗಳಲ್ಲಿ ತಮ್ಮ ಹೆಸರಿನಲ್ಲಿ ಡಿಪಾಸಿಟ್ಟುಗಳನ್ನೂ ಲೇವಾದೇವಿಯನ್ನೂ ಇಟ್ಟುಕೊಂಡಿರುತ್ತಾರೆ. ತಮ್ಮ ಕೈಗಾರಿಕೆ ವ್ಯಾಪಾರಗಳಿಗಾಗಿಯೊ ಸರಕಾರಿ ಅಥವಾ ಖಾಸಗಿ ಸಂಸ್ಥೆಗಳಿಗಾಗಿಯೊ ತೆಗೆಯಬೇಕಾದ ಸಾಲಗಳನ್ನು ಕೂಡ ಅನೇಕ ವೇಳೆ ಲಂಡನ್, ನ್ಯೂಯಾರ್ಕ್ ಪಟ್ಟಣಗಳಲ್ಲಿಯೇ ತೆಗೆಯುತ್ತಾರೆ. ಆದುದರಿಂದ ಯಾವಾಗೆಂದರೆ ಆಗ ಈ ಪಟ್ಟಣಗಳಲ್ಲಿ ವಿದೇಶಿ ಹುಂಡಿಗಳ ಮಾರಾಟಕ್ಕೆ ಸೌಲಭ್ಯವೂ ಅವಕಾಶವೂ ಇರುವುವು.

**ಬ್ಯಾಂಕ್ ಡ್ರಾಫ್ಟ್.**— ಮೇಲೆ ತಿಳಿಸಿದ ಹುಂಡಿಗಳೆಲ್ಲ ನಿಜವಾಗಿ ನಡೆದಿರುವ ವಸ್ತು ವ್ಯಾಪಾರಕ್ಕೆ ಸಂಬಂಧಿಸಿದವು. ಬೇರೆ ಬಗೆಯವೂ ಉಂಟು. ಅವುಗಳಲ್ಲಿ ಒಂದನ್ನು ಮಾತ್ರ ಇಲ್ಲಿ ಸೂಚಿಸಿ ಮುಂದುವರಿಯುತ್ತೇವೆ: ವ್ಯಾಪಾರ ನಡೆಯುವುದಕ್ಕೆ ಮೊದಲೇ ವರ್ತಕರೂ ಕೈಗಾರಿಕೆಯವರೂ ತಮ್ಮ ಬ್ಯಾಂಕಿಗೆ ಹೋಗಿ ಮುಂದೆ ತಾವು ಉತ್ಪತ್ತಿಮಾಡುವ ವಸ್ತುಗಳ ಆಧಾರದ ಮೇಲೆ, ಅವುಗಳ ಮಾರಾಟದ ಮೇಲೆ ಹುಂಡಿಗಳನ್ನು ಬರೆದುಕೊಡುವುದೂ ಉಂಟು. ಉದಾ.— ನನ್ನಲ್ಲಿ ಈಗ ದವಸವಿಲ್ಲ. ಆದರೆ ಇಂಗ್ಲಂಡಿನಿಂದ ಸಾಮಾನನ್ನು ಅಗತ್ಯವಾಗಿ ತರಿಸಬೇಕಾಗಿದೆ. ಅಲ್ಲಿನ ಆ ವರ್ತಕನಿಗೆ ತಕ್ಷಣ ಹಣ ತೆರುವುದಕ್ಕೆ ನನ್ನ ಕೈಯಲ್ಲಿ ಹಣವಿಲ್ಲ. ಹಣವಿಲ್ಲದೆ ಅವನು ಸಾಮಾನನ್ನು ಕಳುಹಿಸುವ ಹಾಗಿಲ್ಲ. ಆಗ ನನ್ನ ಬ್ಯಾಂಕಿಗೆ ಹೋಗಿ ಅವರ ಸಹಾಯ ಬೇಡಿದರೆ ಅವರು ಲಂಡನ್ನಿನಲ್ಲಿರುವ ಒಂದು ದೊಡ್ಡ ಬ್ಯಾಂಕಿನ ಮೇಲೆಯೊ, ಒಂದು ಒಪ್ಪಿಕೆ ಅಂಗಡಿಯ ಮೇಲೆಯೊ ಒಂದು ಡ್ರಾಫ್ಟ್ (ಒಂದು ಬಗೆಯ ಹುಂಡಿ) ಬರೆದುಕೊಡುವರು. ಅವರ ಒಪ್ಪಿಕೆ ಹೊಣೆಯುಳ್ಳ ಹುಂಡಿ ಪೇಟೆಯಲ್ಲಿ ಸುಲಭವಾಗಿ ಮಾರಾಟವಾಗುವುದರಿಂದ ಅಷ್ಟು ಬೆಲೆ ಆಗಲೇ ದೊರೆಯುವಂತಾಗಿ ಇಂಗ್ಲಂಡಿನ ವ್ಯಾಪಾರಿ ನನಗೆ ಬೇಕಾದ ಸಾಮಾನನ್ನು ಕಳುಹಿಸುವುದು ಸಾಧ್ಯವಾಗುವುದು. ನನ್ನ ಬೆಳೆ ಬೆಳೆದು ನನ್ನ ಸಾಮಾನನ್ನು ಮಾರಲು ಅನುಕೂಲವಾದಾಗ ಬ್ಯಾಂಕಿನ ಸಾಲ ಹರಿಯುವುದು.

ವಿದೇಶಿ ವ್ಯಾಪಾರಕ್ಕೆ ಹಣವೊದಗುತ್ತ ಅದರ ಚಾಲನೆಯಾಗುತ್ತಿರುವುದು ಈಗ ಸಾಧಾರಣವಾಗಿ ಹೀಗೆ: ಹುಂಡಿಗಳನ್ನು ಖಾಸಗಿ ಕುಳಗಳ ಹೆಸರಿಗೆ ಬರೆಯುವುದಕ್ಕಿಂತ ಹೆಚ್ಚಾಗಿ ಬ್ಯಾಂಕು (ಪ್ರಾಸ್ಪಿಸ) ಹುಂಡಿಯ ಮೂಲಕವೂ, ಒಪ್ಪಿಕೆ ಅಂಗಡಿಗಳ ಹೊಣೆಗಾರಿಕೆಯ ಮೂಲಕವೂ ಚಲಾಯಿಸುವರು.

**ಒಪ್ಪಿಕೆ ಅಂಗಡಿಗಳ ಮೂಲಕವೇ ಆದರೆ?**— ಈ ಒಪ್ಪಿಕೆ ಅಂಗಡಿಗಳ ಮೂಲಕವೇ ವ್ಯಾಪಾರಕ್ಕೆ ಸೌಕರ್ಯ ಪಡೆಯುವವನು ಮೊದಲು ತನಗೆ ಬಳಕೆಯಿರುವ ಅಂತಹ ಒಂದು ಅಂಗಡಿಗೆ (ಉದಾ.— ಹ್ಯಾಂಬ್ರೋಸ್) ಹೋಗಿ ಇಂಡಿಯಾ ದೇಶದ ಯಾವುದಾದರೂ ಒಂದು ಬ್ಯಾಂಕಿನಲ್ಲಿ ತನಗೆ ಸಾಮಾನನ್ನು ಕಳುಹಿಸಬೇಕಾದ ಒಬ್ಬ ವರ್ತಕನ ಪರವಾಗಿ (ಉದಾ.— ಗೋವರ್ಧನದಾಸ್) ಒಂದು ಲೆಕ್ಕವನ್ನು ತೆರೆಯುವಂತೆ ಕೇಳಿಕೊಳ್ಳುವನು. ಗೋವರ್ಧನದಾಸರು ಇಂಗ್ಲಂಡಿಗೆ ಸಾಮಾನನ್ನು ಕಳುಹಿಸುವರು. ಎಂದಿನಂತೆ ಹಡಗಿನ ರಸೀತಿ, ಸಾಮಾನು ಬೆಲೆ ಪಟ್ಟಿ, ವಿಮೆ ಪತ್ರ, ಸಾಮಾನು ಸಾಗಿಸುವ ಖರ್ಚು ಮುಂತಾದುವು ಸೇರಿ ಆಗುವ ಹಣಕ್ಕೆ, ಇಂಗ್ಲಂಡಿನ ಒಪ್ಪಿಕೆ ಅಂಗಡಿಯ ಹೆಸರಿಗೆ ಹುಂಡಿ ಬರೆದು ಅದನ್ನು ಬೊಂಬಾಯಿಯಲ್ಲಿರುವ ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾಕ್ಕೆ ವಟ್ಟ ತೆತ್ತು ಮಾರಿ ತಕ್ಷಣ ಹಣವನ್ನು ಪಡೆಯುವರು. ಪತ್ರಗಳನ್ನೂ, ಒಪ್ಪಿಕೆ ಅಂಗಡಿಯ ಕೀರ್ತಿಯನ್ನೂ ನೆಚ್ಚಿ ಸೆಂಟ್ರಲ್ ಬ್ಯಾಂಕಿನವರು ಹಣ ಕೊಡಲು ಒಪ್ಪುವರು. ಆಮೇಲೆ ಬ್ಯಾಂಕಿನವರು ಈ ಹುಂಡಿಯನ್ನು ಇಂಗ್ಲಂಡಿನ ತಮ್ಮ ಪ್ರತಿನಿಧಿಗಳ (ಉದಾ.—ಲ್ಲಾಯಿಡ್ಸ್ ಬ್ಯಾಂಕು) ಮೂಲಕ ಕಳುಹಿಸಿ ಲಂಡನ್ನಿನಲ್ಲಿರುವ ಒಪ್ಪಿಕೆ ಅಂಗಡಿಯವರಿಗೆ ಹ್ಯಾಂಬ್ರೋಸ್ ಹಾಜರು ಮಾಡಿ, ಅವರ ಒಪ್ಪಿಕೆಯನ್ನು ಪಡೆದುಕೊಳ್ಳಬೇಕೆಂದು ಹೇಳಿಕಳುಹಿಸುವರು. ಆ ಹುಂಡಿಗೆ ತಾವು ಹೊಣೆಯೆಂದು ಒಪ್ಪಿ ಅವರು ರುಜು ಹಾಕಿದ ಕೂಡಲೆ, ಇತರ ಹುಂಡಿಗಳಂತೆ ಅದನ್ನು ಬೇಕಾದರೆ ತಮ್ಮ ಕೈಯಲ್ಲಿಯೇ ಇಟ್ಟುಕೊಳ್ಳಬಹುದು; ಅಥವಾ ವಟ್ಟಕ್ಕೆ ಮಾರಿ ತಕ್ಷಣ ಹಣಕ್ಕೆ ಮುರಿಸಿಕೊಳ್ಳಬಹುದು. ಹೀಗೆ ಗೋವರ್ಧನದಾಸರ ಕೈಗೆ ತಕ್ಷಣ ಹಣ ಬಂದ ಹಾಗಾಯಿತು; ಇಂಗ್ಲಂಡಿನ ಆಮದು ವರ್ತಕನಿಗೆ ಒಪ್ಪಿಕೆ ಅಂಗಡಿಯ

ಹೊಣೆಗಾರಿಕೆಯಿಂದ ಸಾಲ ತೀರಿಸಲು ವ್ಯವಧಾನ ದೊರೆಯಿತು ; ಹುಂಡಿಗೆ ರುಜು ಹಾಕಿದ್ದಕ್ಕೆ ಒಪ್ಪಿಕೆ ಅಂಗಡಿಗೆ ದಲ್ಲಾಳಿ ಸಂಪಾದನೆಯಾಯಿತು ;* ಹುಂಡಿಯನ್ನು ವಟ್ಟಕ್ಕೆ ಕೊಂಡವನಿಗೆ, ವಟ್ಟ ಸಿಕ್ಕಿತು.

**ದಲ್ಲಾಳಿ ದರ.**—ಆಯಾ ವ್ಯಾಪಾರಕನ್ನು ಕುಳದ ಸಂಪತ್ತಿಗೂ ನಂಬಿಕೆಗೂ ತಕ್ಕಂತೆ ಈ ಅಂಗಡಿಗಳು ಯಾವುದಾದರೂ ಗಿರವಿ (Security) ತೆಗೆದುಕೊಂಡೊ ಸುಮ್ಮನೆಯೊ ಈ ಬಗೆಯ ದಲ್ಲಾಳಿ ಕೆಲಸ ಮಾಡುವರು. ತಿಳಿಯದ ವರ್ತಕನಾದರೆ (ಶೇಕಡ ೧ರಿಂದ ೨ರವರೆಗೂ) ದಲ್ಲಾಳಿ ಕೇಳುವರು. ಸಕಾಲಕ್ಕೆ (ಸೆಂಟ್ರಲ್ ಬ್ಯಾಂಕಿನ ಲಂಡನ್ ಪ್ರತಿನಿಧಿಗಳಾದ ಲ್ಲಾಯಿಡ್ಸ್ ಬ್ಯಾಂಕಿಗೆ) ಇವರು ಹಣ ಸಲ್ಲಿಸಲು ಅನುಕೂಲವಾಗುವಂತೆ ಇಂಗ್ಲಿಷ್ ವರ್ತಕನು ಹೇಗಾದರೂ ಹಣವನ್ನು ಜೊತೆಮಾಡಿಕೊಡಬೇಕಾಗುವುದು.

ಬ್ಯಾಂಕುಗಳವರೇ ಈ ಒಪ್ಪಿಕೆ ಕೆಲಸವನ್ನು ಮಾಡುವುದೂ ಉಂಟು. ಅಗಲೂ ಇಂಗ್ಲೆಂಡಿನ ಒಂದು ಬ್ಯಾಂಕು, ವಿದೇಶದ ಒಂದು ಬ್ಯಾಂಕಿಗೆ ಕಾಗದ ಬರೆದು ಇಷ್ಟು ಮೊತ್ತದವರೆಗೂ ತಮ್ಮ ಅಥವಾ ತಮ್ಮ ಕುಳಗಳ ಹುಂಡಿಗಳನ್ನು ಸ್ವೀಕರಿಸಿ ಒಪ್ಪಿಕೆಗಾಗಿ ತಮಗೆ ಅವನ್ನು ಕಳುಹಿಸಬಹುದೆಂದು ಅಧಿಕಾರ ಕೊಡುವರು. ಆ ಬ್ಯಾಂಕಿನವರೂ ವರ್ತಕನೂ ಸಾಧಾರಣವಾಗಿ ಗೊತ್ತಾದ ಮಿತಿ ಮುಟ್ಟುವವರೆಗೂ ಪೌಂಡು (Sterling) ಹುಂಡಿಗಳನ್ನು ಇಂಗ್ಲೆಂಡಿಗೆ ಕಳುಹಿಸುತ್ತಿರಬಹುದು.

ಇಂಗ್ಲೆಂಡಿನ ಒಪ್ಪಿಕೆ ಅಂಗಡಿಗಳ ಗೌರವ ಅತ್ಯಧಿಕವಾಗಿರುವುದರಿಂದಲೂ ವ್ಯಾಪಾರದಲ್ಲಿ ನಿಷ್ಪಳವಾಗಿ ಹೊತ್ತ ಸಾಲಗಳನ್ನು ತೀರಿಸಲು ಇಂಗ್ಲೆಂಡಿನಿಂದ ಚಿನ್ನ ಹೆಚ್ಚು ಸುಲಭವಾಗಿ ರಫ್ತಾಗಬಲ್ಲದ್ದರಿಂದಲೂ ಎಲ್ಲ ದೇಶದವರೂ ಪೌಂಡು ಹುಂಡಿಗಳನ್ನು ಕೊಂಡು ಲಂಡನ್ನಿನಲ್ಲಿಟ್ಟು ತಾವು ಇತರರಿಗೆ ಕೊಡಬೇಕಾದ ಹಣಗಳನ್ನು ತೆತ್ತು ತಂತಮ್ಮ ಸಾಲ ಹರಿಸಿಕೊಳ್ಳುತ್ತಾರೆ.†

---

* ಕುಳ ದಿವಾಳಿಯಾಗದಿರುವ ತನಕ ಕುಳದಿಂದ ಹಣ ಸಂದಾಯವಾಗುವುದೆಂದು ಒಪ್ಪಿಕೆ ಅಂಗಡಿಗೆ ಗೊತ್ತು. ಅವನು ಸಕಾಲಕ್ಕೆ ಹಣವನ್ನು ಸಲ್ಲಿಸಲಾರನಾದರೆ ಮಾತ್ರ ಇವರು ಕೈಯಿಂದ ಹಣ ತೆರಬೇಕಾಗುವುದು.

† ಇಂತಹ ಹಣ ೧೯೩೦ನೇ ಜೂನಿನಲ್ಲಿ ಇಂಗ್ಲೆಂಡಿನಲ್ಲಿ ಸುಮಾರು £ ೪೫.೭ ಕೋಟಿ ಇತ್ತು. ಇವರ ಬಲಾಬಲ ವಿಚಾರ ಇಲ್ಲಿ ಬೇಡ.

ಕೇವಲ ಒಪ್ಪಿಕೆ ಕೆಲಸವನ್ನೇ ವಿಶೇಷವಾಗಿ ಮಾಡುವ ವರ್ತಕರ ಅಂಗಡಿಗಳು ಹೇಗೆ ಇವೆಯೋ ಕೇವಲ ಪಟ್ಟದ ಕೆಲಸವನ್ನೇ ಮಾಡುವ ಅಂಗಡಿಗಳೂ ಇಂಗ್ಲಿಷ್ ವರ್ತಕ ಪ್ರಪಂಚದಲ್ಲಿ ಉಂಟೆಂದು ಹೇಳಿದೆವಲ್ಲವೆ? ಅವರು ಆಸ್ತಿಪತ್ರಗಳನ್ನೂ ವ್ಯಾಪಾರದ ಹುಂಡಿಗಳನ್ನೂ ಕೊಂಡುಕೊಳ್ಳುವರು. ತಾವು ಬ್ಯಾಂಕುಗಳಿಂದ ಸಾಲ ತೆಗೆಯಬೇಕಾದರೆ ಈ ಹುಂಡಿಗಳನ್ನೂ ಪತ್ರಗಳನ್ನೂ ಆಧಾರವಾಗಿ ಇಟ್ಟು ಹಣವನ್ನು ಸಾಲ ತರುವರು. ತಮ್ಮ ವ್ಯಾಪಾರಕ್ಕೆ ಬೇಕಾಗುವ ಹೆಚ್ಚು ಹಣವನ್ನೆಲ್ಲ ವ್ಯಾಪಾರದ ಬ್ಯಾಂಕುಗಳು, ಒಪ್ಪಿಕೆ ಅಂಗಡಿಗಳು ಮುಂತಾದ ಲೇವಾದೇವಿ ಸಂಸ್ಥೆಗಳಿಂದ ತೆಗೆದುಕೊಳ್ಳುವರು. ಖಾಸಗಿ ಜನರೂ ಈ ಅಂಗಡಿಗಳಲ್ಲಿ ತಮ್ಮ ಡಿಪಾಸಿಟ್ಟುಗಳನ್ನು ಇಡುವರು. ಸಾಧಾರಣವಾಗಿ ಬ್ಯಾಂಕುಗಳವರು ಕೊಡುವುದಕ್ಕಿಂತಲೂ ಡಿಪಾಸಿಟುದಾರರಿಗೆ ಶೇಕಡ ½ ರಿಂದ ೧ ರ ವರೆಗೂ ಇಲ್ಲಿ ಹೆಚ್ಚು ಬಡ್ಡಿ ದೊರೆಯುವುದರಿಂದ ಹಲವು ಡಿಪಾಸಿಟ್‌ದಾರರು ತಮ್ಮ ಹಣವನ್ನು ಇವರ ವಶದಲ್ಲಿಡುತ್ತಾರೆ.

**ಪಟ್ಟದ ಹುಂಡಿ ಪೇಟೆಯವರಿಗೆ ಹಣ ಒದಗುವ ಬಗೆ.**—ಬ್ಯಾಂಕುಗಳು ಈ ವರ್ತಕರಿಗೆ ಕೊಡುವ ಸಾಲಗಳೂ ಮುಂಗಡಗಳೂ ಯಾವಾಗ ಬೇಕೆಂದರೆ ಆಗ ನಗದಾಗಿ ಹಿಂತಿರುಗಿ ಬರುವವು (Money at Call and at Short Notice) ಎಂಬ ಬಾಬಿನಲ್ಲಿ ಬಹು ಭಾಗದ ಹಣವನ್ನು ವ್ಯಾಪಾರದ ಬ್ಯಾಂಕುಗಳವರು ಈ ಬಗೆಯ ವರ್ತಕರಿಗೇ ಎರವಲಾಗಿ ಕೊಡುವುದು. ತಮ್ಮ ಕೈಯಲ್ಲಿ ಬೇರೆ ಹಣವಿರುವವರೆಗೂ ಇವರ ವಶಕ್ಕೆ ಕೊಟ್ಟಿರುವ ಹಣವನ್ನು ಹಿಂದಕ್ಕೆ ಕಡ್ಡಾಯವಾಗಿ ಕೇಳದೆ ಹೆಚ್ಚು ಕಾಲದವರೆಗೆ—ಒಂದು ವಾರಕ್ಕೆ—ಮುಂದೆ ಇನ್ನೊಂದು ವಾರಕ್ಕೆ, ಹೀಗೆ—ಅವರಲ್ಲಿಯೇ ನಿಲ್ಲುವಂತೆ ಅನುಕೂಲ ಮಾಡಿಕೊಡುವರು. ತಮ್ಮ ಕೈ ನಗದು ತೀರಿತೆಂದರೆ, ಕೂಡಲೆ ಈ ವರ್ತಕ ಮಂಡಲಿಗೆ ಎರವಲಾಗಿ ಕೊಟ್ಟಿರುವ ದಿನ ವಾರ ಲೆಕ್ಕದ ಸಾಲದ ಹಣವನ್ನು ಹಿಂದಕ್ಕೆ ಕೇಳುವರು. ಈ ಸಾಲಗಳಿಗೆ ಸಾಮಾನ್ಯವಾಗಿ ತಾವು ತಮ್ಮ ಡಿಪಾಸಿಟ್‌ದಾರರಿಗೆ ತೆರುವ ದರಕ್ಕಿಂತಲೂ ಹೆಚ್ಚು ಬಡ್ಡಿಯ ದರವನ್ನು ಹಾಕುವರು. ಇದರ ಜೊತೆಗೆ ಪ್ರತಿದಿನವೂ ತಮ್ಮ ಕೈಯಲ್ಲಿ ಉಳಿಯುವ ಹೆಚ್ಚು ಹಣವನ್ನು ಕಡಮೆ ಬಡ್ಡಿಗೆ ದಿನ ಸಾಲಕ್ಕೆ ಕೊಡುವರು. ಎರವಲಾಗಿ

ಕೊಟ್ಟಿದ್ದ ಹಣವನ್ನೆಲ್ಲ ಬ್ಯಾಂಕುಗಳವರು ಹಿಂದಕ್ಕೆ ತೆಗೆದುಕೊಂಡಾಗ ಇವರಿಗೆ ಹಣಕ್ಕೆ ಮುಗ್ಗಟ್ಟಾದರೆ ಇವರು ಬ್ಯಾಂಕ್ ಆಫ್ ಇಂಗ್ಲಂಡಿಗೆ ಹೋಗಿ ಹುಂಡಿಗಳ ಮೇಲೆ ಹೆಚ್ಚು ವಟ್ಟ ಕೊಟ್ಟು ಸಾಲವನ್ನು ತೆಗೆಯ ಬೇಕಾಗುವುದು.* ವ್ಯಾಪಾರದ ಕಿರುವಾಯಿದೆ ಹಣದ ಪೇಟೆಯೆಂದರೆ ಈ ವ್ಯಾಪಾರದ ಬ್ಯಾಂಕುಗಳು, ಒಪ್ಪಿಕೆ ಅಂಗಡಿಗಳು, ವಟ್ಟದ ಅಂಗಡಿಗಳು ಎಂದರ್ಥ.

**ಇತರ ವಟ್ಟದ ವರ್ತಕರು.**— ಈ ಬ್ಯಾಂಕುಗಳೇ ಅಲ್ಲದೆ ಇತರ ಕೆಲವು ಸಾಹುಕಾರರೂ ವರ್ತಕರಿಗೆ ಇದೇ ಬಗೆಯ ಕಿರುವಾಯಿದೆ ಸಾಲಗಳನ್ನು ಕೊಡುವುದುಂಟು. ಈ ಖಾಸಗಿ ಸಾಹುಕಾರರಿಗೆ ಬ್ಯಾಂಕುಗಳ ಪ್ರೈಪೋಟಿ ಬಹಳವಾಗಿದೆಯೆಂದು ಕಂಡುಬಂದರೆ ತಮ್ಮ ಕೈಹಣಕ್ಕೆ ಸಂಪಾದನೆಯಿಲ್ಲ ವಾಗುವುದರಿಂದ ಅವರಿಗಿಂತ ಕಡಮೆ ದರಕ್ಕೆ ಸಾಲಹಾಕಲು ಮುಂದೆ ಬರುತ್ತಾರೆ. ಆಗ ವಟ್ಟದ ದರಗಳು ಬಹಳವಾಗಿ ಇಳಿಯುವುವು.† ಇದನ್ನು ತಡೆಯುವುದೂ ನಿಲ್ಲಿಸುವುದೂ ಸುಲಭವಲ್ಲ. ಇಂತಹ ಎಲ್ಲರ ಸ್ಪರ್ಧೆಯಿಂದಲೂ ಪೇಟೆಯ ಕಿರುವಾಯಿದೆ ಸಾಲಗಳ ಮೇಲಿನ ಬಡ್ಡಿಯ ದರ ನಿರ್ಧರವಾಗುವುದು. ವಟ್ಟದ ದರ ಇಳಿಯಿತೆಂದರೆ ಪೇಟೆಯಲ್ಲಿ ಬೇಕಾದಷ್ಟು ಹಣವಿದೆಯೆಂದೂ ಏರಿದರೆ ಹೆಚ್ಚು ಹಣವಿಲ್ಲವೆಂದೂ ಎಣಿಕೆ.

**ಸಾಲದ ಹಣದ ಬೆಲೆ - ವಟ್ಟ.**— ಧಾರಣೆವಾಸಿಯ ಪರಿಶೀತಗಳಿಂದ ಆಳೆಯುವ ಹಣದ ಬೆಲೆಯೊಂದನ್ನು ಹಿಂದೆ ತಿಳಿಸಿ ಆಯಿತು. ಹುಂಡಿ ವರ್ತಕರು ಮತ್ತು ವಟ್ಟದ ದಲ್ಲಾಳರು ಪೇಟೆಯಲ್ಲಿ ಉತ್ತಮವಾದ ಹುಂಡಿಗಳನ್ನು ಕೊಂಡುಕೊಳ್ಳಿರೆಂದು ಬ್ಯಾಂಕುಗಳವರನ್ನು ಕೇಳುವಾಗ ಅವರು ಎಷ್ಟು ಶೇಕಡ ವಟ್ಟ ಕೊಡಬೇಕಾಗುವುದೊ ಆ ವಟ್ಟದ ದರವೇ ಪೇಟೆಯಲ್ಲಿ ಹಣದ ಕರೀದಿ ಎನ್ನಬಹುದು. ಇಲ್ಲಿ ಹಣವೆಂದರೆ ನಾಣ್ಯವಲ್ಲ, ನೋಟಲ್ಲ;

* ಹಣಕ್ಕೆ ಮುಗ್ಗಟ್ಟಾದ ಕಾಲಗಳಲ್ಲಿಯೂ ವಿಪರೀತ ಪ್ರಸಂಗಗಳಲ್ಲಿಯೂ ಬ್ಯಾಂಕ್ ಆಫ್ ಇಂಗ್ಲಂಡು ಹೇಗೆ ಪೇಟೆಗೆ ನೆರವಾಗಿ ಹಣದ ಸ್ಥಿತಿಯನ್ನು ಒಂದು ದರ್ಜೆಯಿಂದಲೂ ಸ್ಥೈರ್ಯದಿಂದಲೂ ನಡೆಸುತ್ತದೆಂಬುದನ್ನೂ, ಅದರ ಬ್ಯಾಂಕ್ ರೇಟು ಹೇಗೆ ಪೇಟೆಯನ್ನು ಆಳುವುದೆಂಬುದನ್ನೂ ೯ನೆಯ ಪ್ರಕರಣದಲ್ಲಿ ವಿವರಿಸಿದೆ.

† ಇಂತಹ ಕಾಲಗಳಲ್ಲಿ ಹೊರಗಿನ ಅನೇಕ ವರ್ತಕರು ಹುಂಡಿಗಳನ್ನು ಇಲ್ಲಿ ವಟ್ಟಕ್ಕೆ ಮಾರಲು ಕಳುಹುವರು. ದರಗಳು ಆಗ ಇನ್ನೂ ಕೆಳಕ್ಕಿಳಿಯುವುವು

ಬ್ಯಾಂಕಿನ ಹಣವನ್ನು ಸ್ವಲ್ಪ ಕಾಲ ತಮ್ಮ ಕೆಲಸಕ್ಕೆ ಉಪಯೋಗಿಸಿಕೊಳ್ಳುವ ಹಕ್ಕನ್ನು ಪಡೆಯಲು ತೆರಬೇಕಾದ ಬಡ್ಡಿ ಅಥವಾ ವಟ್ಟ. ಎಂದರೆ ಬ್ಯಾಂಕುಗಳವರು, ಈ ವ್ಯಾಪಾರಸ್ಥರು ತಮ್ಮಲ್ಲಿ ಕುದುವಿಡುವ ಉತ್ತಮ ಹುಂಡಿಗಳ ಮತ್ತು ಕುಳದ ನಂಬಿಕೆಯ ಮೇಲೆ ಅತಿಕಡಮೆ ಕಾಲದ (ದಿನದ ಅಥವಾ ವಾರದ) ಅವಧಿಯಿಟ್ಟು ಈ ದರದ ಮೇರೆಗೆ ಸಾಲವನ್ನು ಕೊಡಲು ಒಪ್ಪಿಕೊಂಡು, ತಮ್ಮ ಮೇಲೆ ಚೆಕ್ಕು ಬರೆದು ಕಳುಹಿಸುವ ಅಧಿಕಾರವನ್ನು ಅವರಿಗೆ ಕಲ್ಪಿಸಿಕೊಡುವರು.

## ೩

**ಹಣದ ರವಾನೆ—ಮಾರುವೆ ದರ.**—ಹೊರನಾಡಿನ ವ್ಯಾಪಾರವೆಲ್ಲ ಬ್ಯಾಂಕುಗಳ ಮತ್ತು ಹುಂಡಿಗಳ ಮೂಲಕ ನಡೆಯುವುದರಿಂದ ಬ್ಯಾಂಕುಗಳ ಕೈಯಲ್ಲಿ ದಿನದಿನವೂ ಬಿಕರಿಯಾಗುವ ದೇಶಿ ವಿದೇಶಿ ಹುಂಡಿಗಳ ಮಾರಾಟ ಕೊಳ್ಳಾಟಗಳ ತೀವ್ರತೆಯಿಂದ ಮಾರುವೆ ದರ ಏರ್ಪಡುವುದು. ಹೊರಗಿನವರು ದೇಶಿ ಹುಂಡಿಗಳನ್ನು ಹೆಚ್ಚಾಗಿ ಕೊಳ್ಳುತ್ತಿದ್ದರೆ ಈ ದೇಶದ ಹಣದ ಬೆಲೆ ಏರುವುದು; ಈ ಹುಂಡಿಗಳನ್ನು ಮಾರುವವರು ಹೆಚ್ಚಾದರೆ ದರ ಇಳಿಯುವುದು. ಹಣಗಳನ್ನು ಕೊಂಡು ಮಾರುವಾಗ ಈ ಹಣದ ಎಷ್ಟಕ್ಕೆ ಆ ಹಣದ ಎಷ್ಟನ್ನು ಕೊಟ್ಟರೆ ಲೆಕ್ಕ ಸರಿಹೊಂದುವುದು ಎಂಬುದೇ ಮಾರುವೆಯ ದರ. ಹುಂಡಿಗಳ ಸರಬರಾಯಿಗೂ ಗಿರಾಕಿಗೂ ಇರುವ ಹೊಂದಿಕೆ ಯಾವ ದರದ ಮೇರೆಗೆ ಆಗುವುದೆಂಬುದನ್ನು ಈ ದರ ಸೂಚಿಸುವುದು.

**ರವಾನೆಯ ರೀತಿಗಳು.**—ವಿದೇಶಗಳಿಗೆ ಹಣವನ್ನು ನಾನಾ ರೀತಿ ಕಳುಹಿಸಬಹುದು; ತರಿಸಬಹುದು:

(೧) ಚಿನ್ನ, ಬೆಳ್ಳಿ ಕೊಟ್ಟು ನಮ್ಮ ಸಾಲವನ್ನು ಹರಿಸಿಕೊಳ್ಳಬಹುದು. ಇದು ನೇರವಾದ ಕೆಲಸ. ಆದರೆ ಎಲ್ಲರ ಎಲ್ಲ ತೆರಾಣೆಗೂ ಸಾಕಾಗುವಷ್ಟು ಚಿನ್ನ, ಬೆಳ್ಳಿ ಸುಲಭವಾಗಿ ಒದಗುವುದಿಲ್ಲ. ಒದಗಿದರೂ ಅವನ್ನು ಸಾಗಿಸುವುದು ಸುಲಭವಲ್ಲ; ವೆಚ್ಚವೂ ಜವಾಬ್ದಾರಿಯೂ ಹೆಚ್ಚು; ಬಹಳ

ಕಾಲ ಹಿಡಿಯುವುದು; ಲಾಭಕರವಲ್ಲ. ಪ್ರತಿಯೊಬ್ಬರ ಉದ್ದೇಶವೇನು? ತಮಗೆ ಬರಬೇಕಾದುದನ್ನೂ ತಾವು ತೆರಬೇಕಾದುದನ್ನೂ ಎಷ್ಟು ಸುಲಭದಲ್ಲಿ ಎಷ್ಟು ಜಾಗ್ರತೆ ತರಿಸಿಕೊಳ್ಳುವುದೂ ತೆರುವುದೂ ಸಾಧ್ಯವಾದರೆ ಅಷ್ಟು ಬೇಗ ಆ ಕೆಲಸವನ್ನು ಮಾಡಿಕೊಳ್ಳಬೇಕೆಂಬುದು.*

(೨) ಹುಂಡಿಗಳ (ವ್ಯಾಪಾರ ಪತ್ರ—ಬ್ಯಾಂಕು ಪತ್ರಗಳ) ಮೂಲಕ ಕಳುಹಿಸಬಹುದು: ಆ ಪತ್ರಗಳಲ್ಲಿ ಕಾಣಿಸಿರುವ ಹಣ ತಕ್ಷಣ ಸಂದಾಯವಾಗುವಂತೆ ಇರಬಹುದು; ಇಲ್ಲವಾದರೆ ಅದು ತಲುಪಿ ವರ್ತಕನು ಅದನ್ನು ಕಂಡ ೧, ೨, ೩ ತಿಂಗಳ ಮೇಲೆ ಸಂದಾಯವಾಗುವಂತೆ ಬರೆದಿರಬಹುದು.

(೩) ತಂತಿ (ತಾರು) ಅಥವಾ ಕೇಬಲ್ (ಸಮುದ್ರದ ಒಳಗೆ ಹಾಕಿರುವ ತಂತಿ) ಮೂಲಕವೂ ರವಾನಿಸಬಹುದು; ತರಿಸಿಕೊಳ್ಳಬಹುದು.

**T. T.**—ಈ ಮೂರರಲ್ಲಿ ಎಲ್ಲಕ್ಕಿಂತ ನೇರವಾದ್ದು, ಸುಲಭವಾದ್ದು, ಅತಿಸ್ವಲ್ಪ ಕಾಲ ಹಿಡಿಯುವಂಥಾದ್ದು ತಂತಿ ಕೇಬಲ್ಲುಗಳ ಮೂಲಕ ನಡೆಯುವ ವ್ಯಾಪಾರ. ಇದಕ್ಕೆ T. T. (Telegraphic or Cable Transfer) ಎಂದು ಹೆಸರು. ಒಂದು ಬ್ಯಾಂಕು ಇನ್ನೊಂದು ದೇಶದ ಬ್ಯಾಂಕಿನ ಮೇಲೆ ತಂತಿಯ ಮೂಲಕ ಕಳುಹಿಸುವ ಆಜ್ಞಾವರ್ತಮಾನ. ಅಷ್ಟಕ್ಕೆ ಕಳುಹಿಸುವ ಬ್ಯಾಂಕಿನ ಲೆಕ್ಕಕ್ಕೆ ಖರ್ಚು ಹಾಕಿ ತಂತಿಯಲ್ಲಿ ತಿಳಿಸಿರುವ ಯಾರಾದರೂ ಒಬ್ಬರ ಹೆಸರಿಗೆ (ಅಥವಾ ಅವರಿಂದ ಅಧಿಕಾರ ಪಡೆದವರಿಗೆ) ಅಲ್ಲಿ ಹೇಳಿರುವಷ್ಟು ಹಣ ಕೊಡಿರೆಂದು ಅಲ್ಲಿಗೆ ಸುದ್ದಿ ಹೋಗುವುದು. ಇಂತಹ ತಂತಿಯ ಸುದ್ದಿಗಳನ್ನು ಒಂದು ಸಂಕೇತದಲ್ಲಿ (Code) ಕಳುಹಿಸುವರಾದುದರಿಂದ ತಂತಿಯಲ್ಲಿ ಎಲ್ಲವನ್ನೂ ವಿಶದವಾಗಿ

---

* ಅಂಚೆಯ ಕಚೇರಿಗೆ ಹೋಗಿ ಇಷ್ಟನ ಹಣವನ್ನು ಕೊಟ್ಟು ಕಳುಹಿಸಿದರೂ ಅದು ಆ ದೇಶಕ್ಕೆ ಸಂಚಾರವಾಗುವುದಿಲ್ಲ. ಅಂಚೆಯವರು ಈ ಹಣ ಸಂದ ಸಮಾಚಾರವನ್ನು ಕಾಗದವನ್ನು ಆ ದೇಶಕ್ಕೆ ತಲುಪಿಸುವವರೆಗೂ ಅಲ್ಲಿ ಆ ಹಣ ಸಂದಾಯವಾಗುವುದಿಲ್ಲ. ಅದಕ್ಕೂ ಕಾಲ ಹಿಡಿಯುವುದು. ವೆಚ್ಚವೂ ಬ್ಯಾಂಕಿನ ದರಕ್ಕಿಂತ ಸ್ವಲ್ಪ ಹೆಚ್ಚು.

ಬರೆಯಬೇಕಾಗದೆ ಅದನ್ನು ಕಳುಹಿಸುವ ವೆಚ್ಚ ಬಹು ಕಡಮೆಯಾಗುವುದು. ಹೀಗೆ ಕಾಲವಿಳಂಬವಿಲ್ಲದೆ ಸುಲಭವಾಗಿ ಬೇರೆ ದೇಶದಲ್ಲಿರುವ ಮೂರಸೆಯವರಿಗೆ ಹಣ ಸಂದಾಯವಾಗುವುದು. ಒಂದೇ ದಿವಸದಲ್ಲಿ ಕಳುಹುವವರು ಹಣವನ್ನು ಕಳುಹಿಸಿ, ಪಡೆಯಬೇಕಾದವರು ಅದನ್ನು ಪಡೆಯುವುದು ಸಾಧ್ಯವಾಗುವುದು. ಸ್ಟಾಂಪು, ಬಡ್ಡಿ, ಒಪ್ಪಿಕೆ ದಲ್ಲಾಳಿ, ವಿಮೆ ಮುಂತಾದ ಖರ್ಚು ವೆಚ್ಚಗಳಾವುವೂ ಇಲ್ಲವಾಗುವುವು. ಈವರೆಗೆ ಸುಮಾರು ೧೦–೧೫ ವರ್ಷ ಕಾಲ ದೇಶವಿದೇಶಗಳಲ್ಲಿ ನಾನಾಕಾರಣಗಳಿಂದ ಹಣಗಳ ಬೆಲೆ ಅತಿಯಾಗಿ ವ್ಯತ್ಯಾಸವಾಗುತ್ತ ವಿನಿಮಯದ ದರ ಬಹಳವಾಗಿ ಏರಿಳಿಯುತ್ತಿದ್ದುದರಿಂದ—ಹೀಗೆ ತಂತಿಯ ಮೂಲಕ ಮಾಡುವ ರವಾನೆಗಳೇ ಹೆಚ್ಚು ಬಳಕೆಗೆ ಬಂದಿವೆ. ದರಗಳಲ್ಲಿನ ಯಾವ ವ್ಯತ್ಯಾಸದಿಂದಲೂ ನಷ್ಟವಾಗದಂತೆ ಈ ಮೂಲಕ ಏರ್ಪಡಿಸಿಕೊಳ್ಳಬಹುದು.

**ಬ್ಯಾಂಕ್ ಡ್ರಾಫ್ಟ್ ಮೂಲಕ ರವಾನೆ.**— ಹಣವನ್ನು ಯಾರು ಪಾವತಿ ಮಾಡಬೇಕೋ ಅವರು ತಮ್ಮ ಬ್ಯಾಂಕಿನಿಂದ ಒಂದು ಡ್ರಾಫ್ಟನ್ನು (ಹಣದ ಅಪ್ಪಣೆ ಪತ್ರ) ಕೊಂಡುಕೊಳ್ಳುವರು. ಇದು ಹೊರದೇಶದವರಿಗೆ ತಲುಪಬೇಕಾದರೆ ಕಾಲ ಹಿಡಿಯುವುದು.* ಆವಧಿಯವರೆಗೂ ಗಿರಾಕಿಯ ಹಣ ಬ್ಯಾಂಕಿನ ವಶದಲ್ಲಿರುವುದು. ಆದರಿಂದ ಬ್ಯಾಂಕಿಗೆ ಲಾಭ; ಪೇಟೆಯ ದರದಂತೆ ಅದರಮೇಲೆ ಬ್ಯಾಂಕು ಬಡ್ಡಿ ಸಂಪಾದನೆ ಮಾಡಿಕೊಳ್ಳಬಹುದು. ತನಗೆ ಸಂಪಾದನೆಯಾಗುವ ಲಾಭದಲ್ಲಿ ಸ್ವಲ್ಪ ಭಾಗವನ್ನು ಬ್ಯಾಂಕು ಗಿರಾಕಿಗೆ ಬಿಟ್ಟುಕೊಡಲು ಅವಕಾಶವುಂಟು. ಆದುದರಿಂದ ರೂಪಾಯಿ ಒಂದಕ್ಕೆ ಹೆಚ್ಚು ಪೆನ್ನಿಗಳು ದೊರಕುವುವು. (ಸಾಮಾನ್ಯವಾಗಿ ರೂಪಾಯೊಂದಕ್ಕೆ ತಂತಿಯ ದರದಲ್ಲಿ ೧೮ ಪೆನ್ಸ್ ಬರುತ್ತಿದ್ದರೆ ಈಗ ೧೮$\frac{1}{8}$ ಅಥವಾ ೧೮$\frac{3}{16}$ ಪೆನ್ಸ್ ದೊರೆಯಬಹುದು.)

ಈ ಬ್ಯಾಂಕಿನ ಅಪ್ಪಣೆ ಪತ್ರದಲ್ಲಿಯೂ ಗೊತ್ತಾದ ಇಷ್ಟು ಹಣವನ್ನು ಇಂತಹವರಿಗೂ (ಅವರ ಅಧಿಕಾರ ಪಡೆದವರಿಗೂ) ಕೊಡುವುದೆಂದು

---

* ಬೊಂಬಾಯಿಂದ ಲಂಡನ್ನಿಗೆ ವಾಯುಮಾರ್ಗದಲ್ಲಾದರೆ ೮ ದಿನಗಳೂ ಹಡಗಿನ ಮೇಲಾದರೆ ೧೬ ದಿನಗಳ ಕಾಲವೂ ಹಿಡಿಯುವುದು. ಇಂಗ್ಲೆಂಡಿನಿಂದ ನ್ಯೂಯಾರ್ಕಿಗೆ ೮ ದಿನ ಹಿಡಿಯುವುದು.

ಬರೆದಿರುವರು. ತನ್ನಿಂದ ಡ್ರಾಫ್ಟನ್ನು ಕೊಂಡುಕೊಂಡಿರುವ ವರ್ತಕನ ಪ್ರಯೋಜನಕ್ಕೆ ಎಂದೋ — ಅಥವಾ ವಿದೇಶದಲ್ಲಿ ಅವನ ಪರವಾಗಿ ಇಂತಹವನಿಗೆ ಕೊಡತಕ್ಕದ್ದು ಎಂದೋ — ಅಲ್ಲಿ ಬರೆದಿರುವರು. ಸ್ವಂತ ಪ್ರಯೋಜನಕ್ಕೆಂದು ಅದರಲ್ಲಿ ಬರೆದಿದ್ದರೆ ಅವನು ಯಾರಿಗೆ ಹಣ ತೆರಬೇಕಾಗಿದೆಯೋ ಅಂಥವನ ಹೆಸರಿಗೆ ಆ ಪತ್ರವನ್ನು 'ಎಂಡಾರ್ಸ್' (ಪುರಾವಣಿಕೆ) ಮಾಡಿ ಕಳುಹಿಸುವನು. ಅವನು ವಿದೇಶದಲ್ಲಿರುವ ವರ್ತಕನಿಗೆ ರವಾನಿಸುವನು. ಅವನು ಡ್ರಾಫ್ಟನ್ನು ತಂದು ತೋರಿಸಿದ ಕೂಡಲೆ (ಅಥವಾ ಅಲ್ಲ ಆ ರೀತಿ ಹೇಳಿದ್ದರೆ ಕೆಲವು ದಿನ ಹೆಚ್ಚು ಕಳೆದ ಮೇಲೆ) ಅವನಿಗೆ ಹಣ ಸಲ್ಲುವಂತೆ ಬ್ಯಾಂಕು ಸಿದ್ಧವಾಗಿರಲು ಇಲ್ಲಿನ ಬ್ಯಾಂಕಿನವರು ಈ ವ್ಯಾಪಾರದ ವಿವರವನ್ನು ಅಗತ್ಯವಾಗಿ ತಿಳಿಸುವರು.

ಮುದ್ದತಿ ಪತ್ರವನ್ನು ಹುಂಡಿಯನ್ನು (Bank Drafts 1, 2, 3 Months) ಯಾರ ಹೆಸರಿಗೆ ಬರೆದಿದೆಯೋ ಆತನು ನೋಡಿ, ಅದನ್ನು ಒಪ್ಪಿಕೊಂಡ ೧, ೨, ೩ ತಿಂಗಳ ಮೇಲೆ ಮಾತ್ರವೇ ಹಣ ಕೊಡಬೇಕಾಗುವಂತೆ ಅದರಲ್ಲಿ ಬರೆದಿದ್ದರೆ ಹುಂಡಿ ಬರೆಯಿರುವ ಗಿರಾಕಿಯು ಕೈಗೆ ಹಣ ಬರಬೇಕಾದರೆ ಇನ್ನೂ ತಿಂಗಳುಗಟ್ಟಲೆ ಕಾಲ ಹಿಡಿಯುವುದಿಲ್ಲವೆ? ಹಣ ಪಡೆಯಬೇಕಾದವನು ಅವರೆಗೂ ಕಾಯಬೇಕಾಗಿರುವುದರಿಂದ ಯಾರು ಇಂಥ ಹುಂಡಿಯನ್ನು ಬ್ಯಾಂಕಿನಿಂದ ಕೊಳ್ಳುವರೋ ಅಂಥವರಿಗೆ ಇನ್ನೂ ಅನುಕೂಲವಾದ ದರ ಸಿಕ್ಕುವುದು. ಏಕೆಂದರೆ, ಅಷ್ಟು ಕಾಲದವರೆಗೂ ಹಣ ಬ್ಯಾಂಕಿನ ಉಪಯೋಗದಲ್ಲಿಯೇ ಉಳಿದಿದ್ದಹಾಗಾಯಿತು. ಅದುದರಿಂದ ಗಿರಾಕಿಗೂ ಆ ಪ್ರಯೋಜನದಲ್ಲಿ ಸ್ವಲ್ಪ ಭಾಗ ಬರುವುದು. ಯಾವ ದೊಡ್ಡ ವೃತ್ತಪತ್ರಿಕೆಯನ್ನು ನೋಡಿದರೂ ದಿನ ದಿನವೂ ಅಲ್ಲಿ ಕೊಡುವ ಮಾರುಪೆ ದರದ ಲೆಕ್ಕ ಈ ಅಂಶವನ್ನು ಸೂಚಿಸುವುದು.

೪

**ತಕ್ಷಣದ ದರ — ಮುದ್ದತಿ ದರ.** — ಈ ವ್ಯಾಪಾರದಲ್ಲೆಲ್ಲ ಬ್ಯಾಂಕಿನವರ ಸಹಾಯ ಎಷ್ಟು ಮುಖ್ಯ, ಅಗತ್ಯ ಎಂಬುದು ಗೊತ್ತಾಗುವುದು. ವರ್ತಕರ ಲಕ್ಷ್ಯ ಒಂದೇ: ಇತರ ದೇಶದ ವರ್ತಕರಿಂದ ತಮಗೆ ಬರಬೇಕಾದ ಹಣವನ್ನು

ತಮ್ಮ ದೇಶದ ಹಣ ರೂಪದಲ್ಲಿ ಹೇಗೆ ಎಷ್ಟು ಹೆಚ್ಚು ಸುಲಭವಾಗಿ, ಅನುಕೂಲಕ್ಕೆ ತರಿಸಿಕೊಳ್ಳಬಹುದು ಎಂಬುದು. ಇಂತಹ ವರ್ತಕರು ಬ್ಯಾಂಕುಗಳಿಗೆ ಹೋದಾಗ ಮತ್ತೊಂದು ಕೆಲಸವಾಗುವುದು. ಹುಂಡಿಯ ಮೇಲೆ ಹಣ ಬರಬೇಕಾದರೆ ಇನ್ನೂ ಕಾಲ ಹಿಡಿಯುವುದಲ್ಲವೆ? ಆಗ ಮಾರುವೆ ದರ ಹೇಗಿರುವುದೋ ಯಾರಿಗೆ ಗೊತ್ತು? ಅನುಕೂಲವಾದರಂತೂ ಸರಿಯೆ; ಪ್ರತಿಕೂಲವಾದರೆ ನಷ್ಟಮಾಡಿಕೊಳ್ಳುವುದಕ್ಕೆ ಅವರಿಗೆ ಸುತರಾಂ ಇಷ್ಟವಿಲ್ಲದಿರುವುದು ಸಹಜ. ನನಗೆ ನಷ್ಟವೂ ಬೇಡ; ಲಾಭವೂ ಬೇಡ; ದರ ಈಗ ಹೇಗಿದೆ; ಇದರ ಲೆಕ್ಕದಂತೆ ನಾನು ಸಾಮಾನು ಕಳುಹಿಸಿರುವುದು; ಇಷ್ಟು ಬಂದರೆ ಸರಿ; ಹೆಚ್ಚು ಬಂದರೆ ಯಾರಾದರೂ ತೆಗೆದುಕೊಳ್ಳಲಿ; ಕಡಿಮೆಯಾದರೆ ಯಾರಾದರೂ ನಷ್ಟಪಡಲಿ—ನನಗೆ ಆ ಗೊಡವೆ ಬೇಡ ಎಂದು ಮಾರುವೆ ದರದ ಲಾಭ ನಷ್ಟಗಳನ್ನು ಹೊರುವ ಜವಾಬ್ದಾರಿಯನ್ನು ವರ್ತಕನು ಬ್ಯಾಂಕಿನ ಮೇಲೆ ಹಾಕಲು ಸಿದ್ಧನಾಗುವುದು ವಾಡಿಕೆ. ಬುದ್ಧಿವಂತನಾಗಿ, ಬರಬೇಕಾದ ಹಣ ತನ್ನ ಕೈಗೆ ಬಂದರೆ ಸಾಕೆಂದು ಬ್ಯಾಂಕಿನೊಡನೆ ಮುಂಗಡವಾಗಿ ಒಪ್ಪಂದ ಮಾಡಿಕೊಂಡು ಆ ಲೆಕ್ಕದಂತೆ ತನ್ನ ಹುಂಡಿಯ ಮೇಲೆ ಹಣ ಪಡೆಯಲು ಬಯಸುವನು. ಬ್ಯಾಂಕು ಹುಂಡಿಯನ್ನು ಕೊಳ್ಳುವಾಗ (೧) ಸ್ಪಾಟ್ ದರ (Spot Rate), (೨) ಮುಂಗಡ ಒಪ್ಪಂದದ ದರ (ಮುಂದ್ರತಿ, Forward Rate) ಎಂಬ ಎರಡು ಬಗೆಯ ದರಗಳಿರುವುವು. ಸ್ಪಾಟ್ ದರವೆಂದರೆ ಆ ಸ್ಥಳದಲ್ಲಿ ಅದೇ ದಿನ ಕೊಂಡ ಸಾಮಾನಿಗೆ ಎಷ್ಟು ನಗದು ಕೊಡಬೇಕಾಗುವುದೋ ಅಷ್ಟು ಮಾರುವೆ ದರ.

**ಸ್ಪಾಟ್ ದರ ಮತ್ತು ಒಪ್ಪಂದದ ದರ.**—ಸ್ಪಾಟ್ ದರದ ಮೇರೆಗೆ ತೆರಬೇಕಾಗುವ ವ್ಯಾಪಾರದ ಒಪ್ಪಂದವನ್ನು ಪೂರ್ತಿಮಾಡುವುದಕ್ಕಾಗಿ ಮುಂಗಡ ದರದ ಒಂದು ಒಪ್ಪಂದವನ್ನು ಬ್ಯಾಂಕೂ ಕುಳವೂ ಮಾಡಿಕೊಳ್ಳುವರು. ಎಂದರೆ ವ್ಯಾಪಾರ ನಡೆದ ದಿನ ಯಾವ ದರವಿತ್ತೋ ಅದರ ಆಧಾರದಮೇಲೆ ಮುಂದೆ ಅದಕ್ಕೆ ಎಷ್ಟರಂತೆ ಕೊಡುವುದು ಎಂಬ ಒಡಂಬಡಿಕೆ ಮಾಡಿಕೊಳ್ಳುವರು. ಇದರ ಪ್ರಕಾರ ತಕ್ಷಣ ಯಾರೂ ನಗದು ಸುರಿಯಬೇಕಾಗಿಲ್ಲ. ಸಾಮಾನು ಕೈಗೆ ಬರುವವರೆಗೆ ತಾನೇ ಹಣವನ್ನು ಸಲ್ಲಿಸಲು

ಕಾದಿದ್ದರೆ ಹೇಗೆ ಸುಮ್ಮನಿರಬಹುದಾಗಿತ್ತೋ ಹಾಗೆಯೇ ನಗದು ತೆರುವ ಆಗತ್ಯವಿಲ್ಲದೆ ಇರಬಹುದು. ಆದರೆ ಗಡುವಿನ ಕಡೆಯ ದಿನ ನಾಣೆ ದರ ಏರಿ ತನಗೆ ಉಂಟಾಗಬಹುದಾದ ನಷ್ಟವನ್ನು ಮಾತ್ರ ಇಂಥ ಒಪ್ಪಂದದ ಮೂಲಕ ತಪ್ಪಿಸಿಕೊಳ್ಳಬಹುದು. ವರ್ತಕನು ಬ್ಯಾಂಕಿಗೆ ಹೋಗಿ ತನಗೆ ವಿದೇಶಿ ಹಣ ಈಗಿನ ದರದ ಮೇರೆಗೆ ಇಷ್ಟು ಬರತಕ್ಕದ್ದಿದೆ ಎಂದು ಮೊದಲೇ ಬ್ಯಾಂಕಿನೊಡನೆ ಒಪ್ಪಂದ ಮಾಡಿಕೊಳ್ಳಲು* ಅವರು ಒಪ್ಪಿ ಒಡಂಬಡಿಕೆಗೆ ಬಂದರೆ ಬ್ಯಾಂಕು ಅಷ್ಟು ಮುಂಗಡ ಹಣ ಕೊಂಡಹಾಗಾಯಿತು. ಸಾಮಾನನ್ನು ರಫ್ತುಮಾಡುವ ಆ ವರ್ತಕನಿಗೆ ಬ್ಯಾಂಕು ಒಂದು ಪತ್ರ ಬರೆದುಕೊಡುತ್ತದೆ. ಅನಂತರ ನಾಣೆದರದ ಏರಿಳಿತಗಳ ಅನಿಶ್ಚಯವೂ ಭಯವೂ ತಪ್ಪುವವು. ತಾರೀಖಿಗೆ ಸರಿಯಾಗಿ ಆ ದರದಂತೆ ವರ್ತಕನಿಗೆ ನಾಣೆ ಹಣ ಸಿಕ್ಕುವುದು. ಈ ವ್ಯಾಪಾರದಲ್ಲಿ ವರ್ತಕನು ನಾಣೆ ಮಾರಿದವನು; ಬ್ಯಾಂಕು ಕೊಂಡಿತು.

ಆಮದು ವರ್ತಕನೂ ಹೀಗೆಯೇ: ತಾನು ಎಷ್ಟು ತೆರಬೇಕಾಗುವುದೆಂಬುದು ಮುಂಗಡವಾಗಿಯೇ ಗೊತ್ತಾಗುವಂತೆ ವಿದೇಶಿ ಹಣವನ್ನು ಕೊಳ್ಳಬಹುದು. ಸಾಮಾನು ಬಂದು ವಾರದ ಮೇಲೋ ೧, ೨, ೩ ತಿಂಗಳ ಮೇಲೋ ಆತನ ಕೈಗೆ ಬರುವುದು. ಯಾವಾಗಾದರೂ ಬರಲಿ; ಆಗಿನ ದರದ ಏರಿಳಿತದಿಂದ ತನಗೆ ನಷ್ಟವಾಗದಂತೆ ಗೊತ್ತಾದ ಒಂದು ಬೆಲೆಗೆ ವಿದೇಶಿ ಹಣವನ್ನು ಕೊಂಡಿಟ್ಟುಕೊಳ್ಳಬಹುದು. ಹಣ ತೆರಬೇಕಾದ ತಾರೀಖಿಗೆ ತಾನು ಬ್ಯಾಂಕಿನೊಡನೆ ಮಾಡಿಕೊಂಡಿರುವ ಒಪ್ಪಂದದ ಮೇರೆಗೆ ಮಾತ್ರವೇ ಹಣ ಕೊಡುವ ಏರ್ಪಾಡುಮಾಡಿಕೊಳ್ಳಬಹುದು. ದರದ ಅನಿಶ್ಚಯಕ್ಕೆ (Uncertainty) ಸಂಬಂಧಿಸಿದ ಭಾರವನ್ನು ಬ್ಯಾಂಕು ಹೊರಲು ಒಪ್ಪುವುದರಿಂದ ಆಮದು ವರ್ತಕನಿಗೆ ಆ ಯೋಚನೆ ತಪ್ಪುವುದು.

ಬ್ಯಾಂಕಿನವರು ಈ ಬಗೆಯ ನಗದು ದರ, ಮುಂಗಡ ದರಗಳಿಗೆ ನಾಣೆಯನ್ನು ಕೊಂಡು, ಮಾರಿ ಹೇಗೆ ಲಾಭ ಪಡೆಯುತ್ತಾರೆ, ನಷ್ಟ ಸಂಭವವನ್ನು ಹೇಗೆ ನಿವಾರಿಸುತ್ತಾರೆ, ಆ ದರಗಳನ್ನು ಹೇಗೆ ಗುಣಿಸುತ್ತಾರೆ

---

* ಹುಂಡಿಯನ್ನೂ ಸಾಮಾನಿನ ಮೇಲೆ ತನ್ನ ಒಡೆತನವನ್ನು ಸ್ಥಾಪಿಸುವ ಪತ್ರಗಳನ್ನೂ ಅವರಿಗೆ ಕೊಡುವನು.

ಎಂಬುದು ಬಹು ಸೂಕ್ಷ್ಮವಾದ ವಿಷಯ. ಆಮದು ವರ್ತಕರ ಮುಂಗಡ ಕೊಳ್ಳುವ ವ್ಯಾಪಾರವೂ ರಫ್ತು ವರ್ತಕರ ಮುಂಗಡ ಮಾರಾಟದ ವ್ಯಾಪಾರವೂ ಎರಡೂ ಬ್ಯಾಂಕುಗಳ ಮೂಲಕವೇ ಬಹುವಾಗಿ ನಡೆಯುವುದರಿಂದಲೂ, ದರದ ಲಾಭ ನಷ್ಟಗಳನ್ನು ವರ್ತಕರು ಬ್ಯಾಂಕಿನ ತಲೆಯ ಮೇಲೆ ಹೊರಿಸುವುದರಿಂದಲೂ ಬ್ಯಾಂಕುಗಳು ಈ ವಿದೇಶಿ ವ್ಯಾಪಾರಿಗಳ ನಡುವೆ ದಲ್ಲಾಳರಂತೆ ನಿಂತು ಮಾರುವೆಯ ಸಾಲಗಳನ್ನು ಹರಿಸುವ ವ್ಯವಸ್ಥೆ ಮಾಡುವಂತಾಗುವುದು. ದರ ಅತಿಯಾಗಿ ಏರಿಳಿಯುತ್ತಿದ್ದರೆ ಯಾರಿಗೂ ಪರಿಣಾಮದಲ್ಲಿ ಪ್ರಯೋಜನವಿಲ್ಲದಿರುವುದರಿಂದ ಬ್ಯಾಂಕುಗಳು ತಾವು ಮುಂಗಡ ಕೊಂಡ ದರಕ್ಕೆ ತೂಕ ಸರಿಗಟ್ಟುವಂತೆ ಮುಂಗಡಕ್ಕೆ ಮಾರುವ ಒಪ್ಪಂದವನ್ನು, ಮಾರುವ ಒಪ್ಪಂದಕ್ಕೆ ಪ್ರತಿಯಾಗಿ ಕೊಳ್ಳುವ ಒಪ್ಪಂದವನ್ನು ಮಾಡಿಕೊಂಡು ದರಗಳನ್ನು ಒಂದು ಸಮಪದದಲ್ಲಿಟ್ಟುಕೊಳ್ಳುತ್ತಾರೆ. ಅಥವಾ ಕೊಂಡ ಒಂದು ನಗದು ದರಕ್ಕೆ (Spot Rate) ಒಂದು ಮುಂಗಡ ಮಾರಾಟದ ಲೆಕ್ಕವನ್ನು ಗಂಟುಹಾಕಿಕೊಳ್ಳುತ್ತಾರೆ.

ವ್ಯಾಪಾರವೊಂದಕ್ಕೇ ಅಲ್ಲದೆ ಇತರ ಅನೇಕ ಬಾಬುಗಳಲ್ಲಿ ಹಣ ದೇಶದಿಂದ ಹೊರಕ್ಕೆ ಸಾಗುತ್ತ ಒಳಕ್ಕೆ ಬರುತ್ತ ಇರುವುದರಿಂದ ಬ್ಯಾಂಕುಗಳು ಕಳುಹಿಸಬೇಕಾದ ಅಥವಾ ತರಿಸಿಕೊಳ್ಳಬೇಕಾದ ಒಟ್ಟು ಮೊತ್ತಗಳನ್ನು ಹಾಗೆ ಹೀಗೆ ಹೆಚ್ಚು ಕಡಮೆ ಮಾಡಿ ಕಾಲಕ್ರಮಕ್ಕೆ ಹರಡಿಕೊಂಡು ನೇರವಾಗಿಯೂ ಪರೋಕ್ಷವಾಗಿಯೂ ದರಗಳ ವ್ಯವಸ್ಥೆಗೆ ನೆರವೀಯುತ್ತಾರೆ.

**ದರದ ವ್ಯತ್ಯಾಸಕ್ಕೆ ಇತರ ಒಂದೆರಡು ಕಾರಣಗಳು.**— ಹಣ ಒಂದು ದೇಶದಿಂದ ಇನ್ನೊಂದಕ್ಕೆ ಸಾಗುತ್ತಿರುವುದು ಸ್ವಾಭಾವಿಕವಾದರೂ ಬ್ಯಾಂಕುಗಳವರ ಕೈಗೆ ಸಿಗದ ವಿದೇಶಿ ಶಕ್ತಿಗಳು ಅವರು ಸಂಪಾದಿಸಬಹುದಾದ ಬಡ್ಡಿಯನ್ನೂ ಲಾಭವನ್ನೂ ಹಾಗೆ ಅವರಿಗೆ ನಷ್ಟವುಂಟುಮಾಡಬಹುದು. ಉದಾ.—ಯಾವ ದೇಶಕ್ಕೆ ಹಣ ಸಾಗಬೇಕಾಗಿದೆಯೊ ಅಲ್ಲಿನ ಆರ್ಥಿಕ ತೊಂದರೆ, ಹಣದ ತೊಡಕು; ರಾಜಕೀಯ ಅವ್ಯವಸ್ಥೆ; ಆ ದೇಶೀಯರು ಕೊಡಬೇಕಾದ ಸಾಲಗಳನ್ನು ಬ್ಯಾಂಕುಗಳು ಕೆಲವು ಕಾಲ ತೆರಬೇಕಾಗಿಲ್ಲವೆಂದು ಆ ರಾಜ್ಯದ ಅಧಿಕಾರಿಗಳು ಮಾಡುವ ಪ್ರಕಟನೆಗಳು (Moratoria); ಅಲ್ಲಿನ ಪ್ರಧಾನ ಬ್ಯಾಂಕುಗಳವರೊ, ಸರಕಾರದವರೊ

ಮಾರುವೆ ದರವನ್ನೂ, ಮಾರುವೆಯ ಸ್ವರೂಪವನ್ನೂ ಕೃತಕವಾಗಿ ಗೊತ್ತುಮಾಡಿ ಸ್ಥಿರಿಸುವುದು (Pegging); ತಮ್ಮ ಹಣದ ಬೆಲೆಯನ್ನು ಕುಗ್ಗಿಸಿಕೊಳ್ಳುವುದು (De-Valuation)—ಮುಂತಾದ ಕಾರಣಗಳಿಂದ ಒಂದು ದೇಶದವರು ಇನ್ನೊಂದರಲ್ಲಿ ತಮ್ಮ ಹಣವನ್ನು ಸಾಲರೂಪದಲ್ಲಿಯೂ ಹುಂಡಿ ಮತ್ತು ಕಿರುಗಾಲದ ಡಿಪಾಸಿಟ್ ರೂಪಗಳಲ್ಲಿಯೂ ಸಂಗ್ರಹಿಸುವ ಕೆಲಸಕ್ಕೆ ಅಡ್ಡಿ ಬರಬಹುದು.

ಅಲ್ಲದೆ ದೇಶದಿಂದ ದೇಶಕ್ಕೆ ಹಣ ಸುಲಭವಾಗಿ ಸಾಗುವ ಅವಕಾಶವಿಲ್ಲದೆ ತಡೆ ಬರಬಹುದು. ಮುಂಗಡದ ವ್ಯಾಪಾರ ಚೆನ್ನಾಗಿ ನಡೆಯಬೇಕಾದರೆ ಬ್ಯಾಂಕು ಅಥವಾ ಆ ಬಗೆಯ ಸಂಸ್ಥೆಗಳ ಮೂಲಕವೇ ನಡೆಯಬೇಕಲ್ಲವೆ? ದೇಶದ ಮಾರುವೆ ವ್ಯಾಪಾರದ ಬಹುಭಾಗ ಇಂತಹ ಕೆಲವು ಸಂಸ್ಥೆಗಳ ಕೈಗೆ ಸಿಕ್ಕಿಕೊಂಡಿದ್ದರೆ ಅವರು ಪರಸ್ಪರ ಒಂದು ಒಪ್ಪಂದಕ್ಕೆ ಬಂದು ಈ ಬಗೆಯ ಮಾರುವೆಯ ಲಾಭಗಳನ್ನು ಹೆಚ್ಚು ಮಾಡಿಕೊಳ್ಳಬಹುದು*.

ಸ್ಪಾಟ್ ದರಗಳಿಗೂ ಮುಂಗಡದ ದರಗಳಿಗೂ ಇರುವ ವ್ಯತ್ಯಾಸ ಹೆಚ್ಚಾದಂತೆಲ್ಲ, ವರ್ತಕರು ಮಾರುವೆಯನ್ನು ಕೊಳ್ಳಲೂ ಮಾರಲೂ ಲಾಭಾಶಿ ದೃಷ್ಟಿಯಿಂದ ಮುಂದೆ ಬಂದು ಪೇಟೆಯ ದರಗಳಲ್ಲಿ ಅವ್ಯವಸ್ಥೆಯನ್ನುಂಟುಮಾಡಬಹುದು. ಮುಂದೆ ದರ ಹೆಚ್ಚಿ ಅತಿಲಾಭ ಬರುವುದೆಂಬ ಆಶೆಯಿಂದ ಕೊಂಡು ಪತ್ರದ ಬೆಲೆಯನ್ನು ಯೋಗ್ಯತೆಗೆ ಮೀರಿ ಏರಿಸಬಹುದು (Bulls); ಬೆಲೆ ಇನ್ನೂ ಇಳಿಯುವುದು, ಈಗ ಮಾರಿ ಆಗ ಕೊಳ್ಳೋಣವೆಂದು ಮಾರಿ ಅನ್ಯಾಯವಾಗಿ ಇಳಿಸಬಹುದು (Bears). ವಸ್ತುಸ್ಥಿತಿಯಲ್ಲಿ ಬುಡವಿಲ್ಲದಿದ್ದರೂ ಊಹೆಗಳ ಹೋರಾಟದಿಂದ ಈ ಬಗೆಯ ಏರಿಳಿತಗಳಾಗುವುವು. ಅಥವಾ, ಇದ್ದಕ್ಕಿದ್ದಹಾಗೆ ಸರಕಾರಗಳವರು ಪೇಟೆಗೆ ನುಗ್ಗಿ ಕಿರುವಾಯಿದೆ ಸಾಲಗಳನ್ನೆತ್ತಿಯೊ, ಇದ್ದ ಸಾಲಗಳನ್ನು ಪರಿಸಿಕೊಂಡೊ ಪೇಟೆಯನ್ನು ಹದಗೆಡಿಸಬಹುದು; ಮಾರುವೆಯ ವ್ಯಾಪಾರವನ್ನು ತಲೆಕೆಳಗು ಮಾಡಬಹುದು.

* ನಗದು ದರಕ್ಕೂ ಮುಂಗಡದ ದರಕ್ಕೂ ಶೇಕಡ ೭ ರಿಂದ ಹಿಡಿದು ೧೭ ವರೆಗೂ ಇರುತ್ತದೆ. ಈ ಅಂತರವನ್ನು ಇನ್ನೂ ಹೆಚ್ಚುಮಾಡಿಕೊಂಡು ಲಾಭದರ್ಥ. ಈ ವ್ಯತ್ಯಾಸಕ್ಕೆ ತಕ್ಕಂತೆ ಬ್ಯಾಂಕುಗಳವರೂ ವರ್ತಕರೂ ಕೈಹಣವನ್ನು ಬೇರೆ ದೇಶಗಳಿಗೆ ಸಾಗಿಸುತ್ತಿರುತ್ತಾರೆ. ಒಂದು ಕಡೆ ಮಾರಿ ಇನ್ನೊಂದು ಕಡೆ ಕೊಳ್ಳುತ್ತಿರುತ್ತಾರೆ.

ಹೀಗೆ ಮಾರುಪೆಯ ದರಗಳು ನಾನಾಬಗೆಯ ಜನರ, ವ್ಯಾಪಾರದ ಲೇಣೆದೇಣೆಗಳಿಂದಲೂ ವೃಷ್ಟಿ ಉದ್ವೇಶಗಳ ಪ್ರಭಾವದಿಂದಲೂ ಹೆಚ್ಚು ಕಡಮೆಯಾಗುತ್ತಲೇ ಇರುವವು. ಆದುದರಿಂದಲೇ ಅವುಗಳ ಮೇಲೆ ಕೈಯಿಟ್ಟು ಎಲ್ಲವನ್ನೂ ಸುಸೂತ್ರವಾಗಿ ಹಿತಕ್ಕೆ ನಡಸಬೇಕಾಗುವದು.

**ಬ್ಯಾಂಕಿನ ವಿದೇಶಿ ಹುಂಡಿಗಳ ಸ್ಟಾಕು.**—ವಿದೇಶಿ ವ್ಯಾಪಾರಕ್ಕೆ ಹಣ ಒದಗಿಸುವ ಬ್ಯಾಂಕುಗಳು ಅದನ್ನು ಸರಿಯಾಗಿ ತೂಗಲು ಸಂತತವಾಗಿ ಆಮದು ವರ್ತಕರಿಗೂ, ರಫ್ತು ವರ್ತಕರಿಗೂ, ಸ್ಪಾಟ್ ದರಕ್ಕೂ, ಮುಂಗಡಕ್ಕೂ ಹಣದ ರವಾನೆಮಾಡುವ—ಮತ್ತು ಸಾಲ ಹರಿಸುವ—ಸೌಲಭ್ಯಗಳನ್ನು ಕಲ್ಪಿಸುತ್ತಿರುತ್ತಾರೆ. ತಾವೂ ತಮ್ಮ ಗಿರಾಕಿಗಳೂ ನಾನಾದೇಶಗಳೊಡನೆ ವ್ಯಾಪಾರ ವ್ಯವಹಾರವಿಟ್ಟುಕೊಂಡಿರುವುದರಿಂದ ನಾನಾದೇಶಗಳ ಹಣದ ಮಾರುಪೆ ನಡೆಯಬೇಕಾಗುತ್ತದೆ; ಹಣವನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ ಎಲ್ಲ ದೇಶಗಳ ಹುಂಡಿಗಳನ್ನೂ ಕೊಳ್ಳುತ್ತ ಮಾರುತ್ತ ಇರಬೇಕಾಗುತ್ತದೆ; ಕೂಡಿಸಿ ಇಟ್ಟುಕೊಳ್ಳಬೇಕಾಗುತ್ತದೆ. ತಮ್ಮ ಲೆಕ್ಕ ಇತರ ದೇಶದ ಬ್ಯಾಂಕುಗಳಲ್ಲಿ ಇರುವಂತೆ ಬ್ಯಾಂಕು ಏರ್ಪಡಿಸಿಕೊಂಡಿರುತ್ತದೆ. ಇವರು ಕೊಂಡಿಡುವ ವಿದೇಶಿ ಮಾರುಪೆ ಹುಂಡಿ ಮತ್ತು ಸಾಲಪತ್ರಗಳೇ ಇವರ ಸ್ಟಾಕ್ ಸರಕು. ಒಂದು ಕಡೆ ಮಾರುಪೆ ಮಾರಿದರೆ ಇನ್ನೊಂದು ಕಡೆ ಕೊಂಡು ದರವನ್ನು ಒಂದು ಮಿತಿಯಲ್ಲಿ, ಹದದಲ್ಲಿ ಇಟ್ಟುಕೊಳ್ಳುವುದು ದೊಡ್ಡ ಸಾಧನ. ಮಾರುವ ದರಕ್ಕೂ ಕೊಳ್ಳುವ ದರಕ್ಕೂ ಇರುವ ವ್ಯತ್ಯಾಸವೇ (Difference) ಇವರ ಸಂಪಾದನೆ. ಈ ವ್ಯಾಪಾರದ ಪ್ರಯೋಜನ ಪರಮಾವಧಿಯಾಗಿ ದೊರಕುವಂತೆ ಬ್ಯಾಂಕುಗಳವರು ಪ್ರತಿ ವಿದೇಶಿ ಪೇಟೆಯ ಮೇಲೆಯೂ ಕಣ್ಣಿಟ್ಟು ತಮ್ಮ ವಿದೇಶಿ ಪ್ರತಿನಿಧಿಗಳ ಮೂಲಕ ಕಾರ್ಯಭಾರಮಾಡುವರು. ಇಂಥ ಬ್ಯಾಂಕುಗಳ ಕಾರ್ಯದಿಂದ ದೇಶದ ಸಂಪತ್ತೂ ಉದ್ಯೋಗವೂ ಧಾರಣೆವಾಸಿಯೂ ಕೆಡದಂತೆ ನೋಡಿಕೊಂಡು ಒಳದೇಶವನ್ನು ರಕ್ಷಿಸುವ ಭಾರ ಸರಕಾರದ್ದು.

## ಪ್ರಕರಣ ೬

# ಕೈಗಾರಿಕೆಗೆ ಹಣವೊದಗುವ ಬಗೆ

**ಈ ಪ್ರಕರಣದ ವಿಷಯ.**— ವ್ಯಾಪಾರದ ಸಾಲಗಳೆಲ್ಲ ದಿನದ, ವಾರದ, ತಿಂಗಳ, ಹೆಚ್ಚೆಂದರೆ ಮೂರು ತಿಂಗಳ ವಾಯಿದೆಗೆ ಮೀರದ ಸಾಲಗಳು. ಅಲ್ಲಿ ಬ್ಯಾಂಕುಗಳು ಉತ್ಪತ್ತಿಮಾಡುವ ಲೆಕ್ಕದ (Bank Credit, ಉದ್ದರಿ ಅಥವಾ ಪತ್ತಿನ) ಸಾಲಗಳ ಪ್ರಭಾವ ಹೆಚ್ಚು. ವ್ಯಾಪಾರದ ಬ್ಯಾಂಕುಗಳ ಪರಸ್ಪರ ಸಂಬಂಧ, ಅಧೀನತೆ, ಹಣದ ಪೇಟೆಯ ವ್ಯವಸ್ಥೆ—ಎಲ್ಲವೂ ಸೆಂಟ್ರಲ್ ಬ್ಯಾಂಕಿನ ಆಡಳಿತಕ್ಕೆ ನೇರವಾಗಿ ಒಳಪಡುವಿಕೆ ಅಲ್ಲಿ ವಿಶೇಷ; ಕುಳದ ನಂಬಿಕೆಯ ಮೇಲೆ ಉತ್ಪನ್ನವಾದ ಹುಂಡಿಗಳ ಮೇಲೆ ಕೊಡುವ ಕಡಗಳ ಸಮಾಚಾರ ಅಲ್ಲಿ; ಹಣವಂತೂ ಪಾದರಸದಂತೆ ಕೈಯಿಂದ ಕೈಗೆ ಓಡಿಯಾಡುತ್ತಿರುತ್ತದೆ; ದೇಶದ ಕ್ಲಿಯರಿಂಗ್ ಹೌಸಸ್ ಎಂಬ ಸಂಸ್ಥೆಗಳ ಸಹಾಯದಿಂದ ಆಯಾ ದಿನ, ಅಥವಾ ವಾರದ ಕಡೆಯಲ್ಲಿ ಅವರಮೇಲೆ ಬರೆದಿರುವ ಚೆಕ್ಕುಗಳ ಜಮಾಖರ್ಚು ಮಾಡಿ ಸಾಲಗಳನ್ನು ಹರಿಸುವ ಪ್ರಪಂಚ ಅದು; ನಿವ್ವಳವಾಗಿ ಬರುವ ಸಾಲಗಳನ್ನು ಸೆಂಟ್ರಲ್ ಬ್ಯಾಂಕಿನ ಲೆಕ್ಕಗಳಲ್ಲಿ ಇಳಿತಾಯ ಹಾಕಿ ಅಥವಾ ಜಮಾ ಕಟ್ಟಿ ಹರಿಸುವ ಲೆಕ್ಕಗಳಿಗೆ ಸಂಬಂಧಪಟ್ಟದ್ದು. ಈ ಪ್ರಕರಣದಲ್ಲಿ ವಿವರಿಸುವ ಹಣಕಾರ್ಯ ನಿಡುಸಾಲಗಳಿಗೆ ಸಂಬಂಧಿಸುವುದು. ಕೈಗಾರಿಕೆಗೆ ಹಣ ಒದಗಿಸುವ ಕಾರ್ಯಗಳು, ಎಂದರೆ, ಅದಕ್ಕೆ ಬಂಡವಾಳವನ್ನೂ ಸಾಲವನ್ನೂ ಒದಗಿಸುವ ರೀತಿ; ಒದಗಿಸುವ ಸಂಸ್ಥೆಗಳು; ಅವುಗಳ ರೂಪ ರಚನೆ ವ್ಯವಹಾರಗಳಿಂದ ಉಂಟಾಗುವ ಪರಿಣಾಮಗಳು; ಹುಟ್ಟುವ ಸಾಲಪತ್ರ ಬಂಡವಾಳಪತ್ರಗಳ ಸಂಚಾರಕ್ಕೂ ಒಡೆತನದ ವರ್ಗಾವರ್ಗಿಗೂ ನೆರೆಯುವ ವರ್ತಕ ಮಂಡಲಿಗಳು—ಅವುಗಳ ವ್ಯವಹಾರ ರೀತಿ; ಇವಕ್ಕೂ ಹಿಂದೆ ವಿವರಿಸಿದ ಬ್ಯಾಂಕಾ ಮಂಡಲಿಗೂ ಇರುವ ಸಂಬಂಧ ಮುಂತಾದ ಸಂಗತಿಗಳು.

**ದೊಡ್ಡ ಕಂಪನಿಗಳು.**— ಪಶ್ಚಿಮ ದೇಶಗಳಲ್ಲಿ ಕೈಗಾರಿಕೆ ಸಂಸ್ಥೆಗಳ ಸಂಖ್ಯೆ, ಆಕಾರ, ಬಂಡವಾಳ, ಕಾರ್ಯಕಲಾಪ ಇವು ಅದ್ಭುತವಾಗಿರುತ್ತವೆ. ಲಕ್ಷಾಂತರ ರೂಪಾಯಿ ಬಂಡವಾಳ, ಅದಕ್ಕೆ ಹತ್ತರಷ್ಟು ನೂರರಷ್ಟು

ಒಟ್ಟು ವ್ಯಾಪಾರ, ಉತ್ಪತ್ತಿ; ಹತ್ತಾರು ಸಾವಿರ ಜನರು ಒಂದು ಕಡೆ ಕೂಡಿ ರಾಕ್ಷಸಾಕಾರದ ಯಂತ್ರಗಳ ಸಹಾಯದಿಂದ ಮಾಡುವ ಕೆಲಸ; ಅತಿವಿಚಕ್ಷಣೆಯಿಂದಲೂ ಸಂವಿಧಾನಕ್ರಮದಿಂದಲೂ ನಡೆಯುವ ಆಡಳಿತ ವ್ಯವಸ್ಥೆ; ಹತ್ತಾರು ಕಡೆಗಳಿಂದ ಅಮಿತ ಪರಿಮಾಣಗಳಲ್ಲಿ ಕೊಂಡು ತರುವ ಮೂಲ ಸಾಮಗ್ರಿ; ನೂರಾರು ಎಕರೆ ಪ್ರದೇಶದಲ್ಲಿ ಕಟ್ಟಿರುವ ಕಾರ್ಖಾನೆ ಕಾರ್ಯಾಲಯ, ಮಳಿಗೆ, ರೈಲ್ವೆ ಏರ್ಪಾಡು—ಇಂಥವುಗಳನ್ನು ನೋಡಿದರೆ ಅವುಗಳ ಉತ್ಪತ್ತಿಶಕ್ತಿಯೂ ಪ್ರಭಾವವೂ ಎಷ್ಟೆಂಬುದು ಅರ್ಥವಾಗುವುದು.

**ದೊಡ್ಡ ಬಂಡವಾಳ ಮತ್ತು ದೊಡ್ಡ ಕೆಲಸದ ಅನುಕೂಲಗಳು.—** ಇವಕ್ಕೆ ಬೇಕಾಗುವ ಹಣವನ್ನು ಯಾರೊಬ್ಬರೇ ಆಗಲಿ ಒದಗಿಸಲಾರರು. ಪ್ರಪಂಚದಲ್ಲಿ ಹೆಸರಾದ ಹತ್ತಿಪ್ಪತ್ತು ಜನ ಕೋಟ್ಯಧೀಶ್ವರರು ಬಹುಶಃ ಒಂದೊಂದನ್ನು ನಡೆಸಲು ಶಕ್ತರಾದರೂ, ಅವರೂ ಭಯದಿಂದ ಹಿಮ್ಮೆಟ್ಟುವಷ್ಟು ಆಕಾರ ಏರುವುದು ಸಾಮಾನ್ಯ. ಅಲ್ಲದೆ, ಯಾರೊಬ್ಬರ ಲಾಭಕ್ಕಿಂತ ನೂರಾರು ಜನ ಇಂತಹ ಸಂಸ್ಥೆಗಳ ಕಾರ್ಯದಿಂದ ಲಾಭ ಪಡೆಯುವ ಏರ್ಪಾಡು ನಡೆಯುತ್ತಿರುವುದು. ಯಾರೊಬ್ಬರ ತಲೆಯಮೇಲಾಗಲಿ ಅತಿಯಾಗಿ ನಷ್ಟ ಹೊತ್ತು ಅವರು ಪೂರ್ತಿ ಮುಳುಗಿಹೋಗುವುದಕ್ಕಿಂತ ನೂರಾರು ಜನ ಅದನ್ನು ಸ್ವಲ್ಪಸ್ವಲ್ಪ ಹಂಚಿಕೊಂಡು ಎಲ್ಲರೂ ಬದುಕುವ ಏರ್ಪಾಡು ಕಾಣಬರುತ್ತಿದೆ. ಅನೇಕ ಸಣ್ಣ ಸಣ್ಣ ಬಂಡವಾಳಸ್ಥರು ಕೂಡಿ, ಸಂಘಶಕ್ತಿಯಿಂದ ದೊಡ್ಡ ಕೈಗಾರಿಕೆಗಳನ್ನು ನಡೆಸುವ ಪ್ರಯತ್ನಗಳು ದಿನ ದಿನವೂ ಹೆಚ್ಚುತ್ತಿವೆ. ದೊಡ್ಡ ಪ್ರಮಾಣದಲ್ಲಿ ಕೊಳ್ಳುವುದರಿಂದ ಮೂಲ ಸಾಮಗ್ರಿಯನ್ನು ಅಗ್ಗವಾಗಿ ಕೊಳ್ಳಬಹುದು; ಹೊಸದಾಗಿ ಕಂಡುಹಿಡಿದ ಯಂತ್ರವಿಧಾನಗಳನ್ನೂ, ಉತ್ಪತ್ತಿ ರೀತಿಗಳನ್ನೂ ಹೂಡಿ ಒಂದು ತಯಾರಾಗುತ್ತಿದ್ದ ಕಡೆ ಹತ್ತು ತಯಾರಾಗುವಂತೆ ಮಾಡಬಹುದು; ಕೆಲಸ ನಾಲ್ಕಾರು ಕಡೆ ಚೆದರುವ ಬದಲು ಒಂದೇ ಕಡೆ ಸಮುದಾಯದಲ್ಲಿ ಸೇರಿ, ಒಂದೇ ಆಡಳಿತದ ಅಂಕೆಯಲ್ಲಿ ಹೆಚ್ಚು ಉತ್ಪತ್ತಿಮಾಡಬಹುದು; ಸುವ್ಯವಸ್ಥ ಕಾರ್ಯರಚನೆಯಿಂದ, ಕಡಮೆಯ ವೆಚ್ಚಕ್ಕೆ ಹೆಚ್ಚು ನಯವಾಗಿ ಪದಾರ್ಥವನ್ನು ತಯಾರಿಸಿ ಪೇಟೆಗೆ ಸಾಗಿಸಿ ಅಲ್ಲಿ ಹೆಚ್ಚು ಅಗ್ಗವಾಗಿ ಅದನ್ನು

ಮಾರಿ ಇತರ ಉತ್ಪತ್ತಿಕಾರರೊಡನೆ ಪೈಪೋಟಿಯಲ್ಲಿ ಉತ್ತೀರ್ಣರಾಗಬಹುದು. ಮಾರುವ ಪದಾರ್ಥವೊಂದಕ್ಕೆ ಬಹು ಸಣ್ಣ ದರದಲ್ಲಿ ಲಾಭ ಬಂದರೂ ಮೊತ್ತದಲ್ಲಿ ಹೆಚ್ಚು ಲಾಭ ಬರುವಂತೆ ಮಾಡಿಕೊಳ್ಳಬಹುದು. ದಿನದಿನವೂ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡು ಕಡೆಗೆ ತಮ್ಮ ಸರ್ವಾಧಿಕಾರ ಸಮಗ್ರವಾಗಿ ಪ್ರಪಂಚದ ಆ ಕೈಗಾರಿಕೆಯಲ್ಲಿ ನಡೆಯುವಂತೆ ಏರ್ಪಡಿಸಿಕೊಳ್ಳುವುದು ಕೂಡ ಸಾಧ್ಯ. ಇವೇ ಮೊದಲಾದ ಉದ್ದೇಶಗಳಿಂದ ಇಂಥ ಸಂಸ್ಥೆಗಳು ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಬೆಳೆಯುತ್ತಿರುವುವು. ಇವು ಹೀಗೆ ವ್ಯಾಪಕವಾಗುವುದರಿಂದ ಉತ್ಪತ್ತಿಯ ಸ್ವರೂಪ, ಪೇಟೆಯ ವ್ಯಾಪಾರ ರೀತಿ, ಜನರಿಗೆ ದೊರೆಯುವ ಉಪಕಾರ, ಅನುಕೂಲ, ಅವರ ಸಂಪತ್ ಅಥವಾ ಭೋಗಸ್ಥಿತಿ ಎಲ್ಲವೂ ವ್ಯತ್ಯಾಸವಾಗುವುವು. ಆದುದರಿಂದ ಅವಕ್ಕೆ ಹಣ ಒದಗುವ ರೀತಿಯನ್ನೂ ಅವಕ್ಕೂ ಧನಮಂಡಲಕ್ಕೂ ಇರುವ ಸಂಬಂಧವನ್ನೂ ತಿಳಿಯುವುದು ಅವಶ್ಯಕ.

**ಕೂಡುಬಂಡವಾಳದ ಸಂಘಗಳು — ಇತರ ಸಂಸ್ಥೆಗಳು.** — ಈಗ ಸುಮಾರು ಎಲ್ಲ ಕೈಗಾರಿಕೆ ರಾಷ್ಟ್ರಗಳಲ್ಲಿಯೂ ದೊಡ್ಡದೊಡ್ಡ ಕೂಡುಬಂಡವಾಳದ ಕಂಪನಿಗಳು (Joint-Stock Companies) ಮಿತ ಜವಾಬ್ದಾರಿ ವಿಧಾನವನ್ನು ಮೆಂಬರುಗಳಿಗೆ ಮಾಡಿಕೊಟ್ಟು ಕೆಲಸಕ್ಕೆ ಬೇಕಾಗುವ ಎಲ್ಲ ಹಣವನ್ನೂ ಒದಗಿಸಿಕೊಳ್ಳುತ್ತಿವೆ; ಕೆಲಸದ ಆಡಳಿತವನ್ನು ಕೈಕೊಳ್ಳುತ್ತಿವೆ. ವ್ಯಾಪಾರ ಉದ್ಯೋಗಗಳಿಗೆ ವಸತಿಗಳನ್ನು ಕಲ್ಪಿಸಿಕೊಳ್ಳುವುದಕ್ಕಾಗಿಯೂ, ರಾಜಕೀಯ ಉದ್ದೇಶಗಳಿಂದಲೂ ಇವು ಪಶ್ಚಿಮ ದೇಶಗಳಲ್ಲಿ ೧೭–೧೮ನೆಯ ಶತಮಾನಗಳಲ್ಲಿ ಹುಟ್ಟಲು ಮೊದಲಾಗಿ ಈ ಇನ್ನೂರು ವರ್ಷಗಳ ಕಾಲದಲ್ಲಿ ಆರ್ಥಿಕ ಜೀವನದ ರಂಗವನ್ನೆಲ್ಲಾ ವ್ಯಾಪಿಸಿವೆ. ಇಂಥ ಕೂಡುಬಂಡವಾಳದ ಕಂಪನಿಗಳ ಗಾತ್ರಕ್ಕೆ ಮೇರೆಯೊಂದನ್ನು ಬಿಟ್ಟು ಬೇರೆ ಯಾವ ಮಿತಿಯೂ ಇಲ್ಲದ್ದರಿಂದ ಎಷ್ಟು ಬಂಡವಾಳ ಬೇಕಾದರೂ ಕೂಡಿಸಿ ಅವುಗಳ ವಿಸ್ತರಣವಾಗಬಹುದು. ಹೀಗೆ ಒಂದು ಕಡೆ ಉತ್ಪತ್ತಿವಿಧಾನದಲ್ಲಿ ಉಂಟಾದ ವಿಶೇಷ ವಿಚಕ್ಷಣೆ (Specialisation); ಕೂಡುಬಂಡವಾಳದ ಪ್ರಭಾವ; ಪರಸ್ಪರ ಸ್ಪರ್ಧೆಯಲ್ಲಿ ಉಳಿದು ಪೇಟೆಯನ್ನು ಕೈಯಲ್ಲಿಟ್ಟುಕೊಳ್ಳಬೇಕೆಂಬ ಉತ್ಪತ್ತಿಕಾರರ ಉದ್ದೇಶ; ವ್ಯಾಪಾರದ ಧಾರಾಳದಿಂದ

ದೇಶವಿದೇಶಗಳ ಎಲ್ಲೆಯನ್ನೆಣಿಸದೆ ಉಂಟಾಗಿರುವ ಪೇಟೆಯ ವಿಸ್ತರಣ; ವ್ಯಾಪಾರದ ಬ್ಯಾಂಕುಗಳು ಮತ್ತು ಕೈಗಾರಿಕೆಗೆ ಹಣವೊದಗಿಸುವ ಉದ್ದೇಶದಿಂದ ಸ್ಥಾಪಿತವಾಗಿರುವ ಸಂಘಸಂಸ್ಥೆಗಳು; ಜನರು ಕೂಡಿಸಿದ ಹಣವನ್ನು ಅನೇಕ ಬಗೆಯಲ್ಲಿ ಸಂಗ್ರಹಿಸಿ ತಮ್ಮ ಕೈಯಲ್ಲಿ ಬಹುಕಾಲ ಇರುವ ಹಣವನ್ನು ನಿಡುಕಾಲದ ಬಡ್ಡಿಗೆ ಹಾಕುವ ಟ್ರಸ್ಟೀ ಕಂಪನಿ, ವಿಮೆ ಕಂಪನಿ ಮುಂತಾದವುಗಳ ಕಾರ್ಯಕಲಾಪ; ಹೊಸ ಕಂಪನಿಗಳಿಗೆ ಮೂಲ ಧನವನ್ನೂ, ಹಳೆಯ ಕಂಪನಿಗಳಿಗೆ ಹೊಸ ಬಂಡವಾಳವನ್ನೂ, ಸಾಲಗಳನ್ನೂ ಒದಗಿಸುವ ದಲ್ಲಾಳಿ ಪರ್ತಕ ಮಂಡಲಿ; ಸಾಲಪತ್ರ ಬಂಡವಾಳ ಪತ್ರಗಳ ಒಡೆತನ ಸುಲಭವಾಗಿ ಒಬ್ಬರಿಂದೊಬ್ಬರಿಗೆ ಸಾಗಲು ಅನುಕೂಲವನ್ನು ಕಲ್ಪಿಸಿ ಪೇಟೆಯಲ್ಲಿ ಸರ್ವದಾ ಅವುಗಳಿಗೆ ಗಿರಾಕಿಯನ್ನು ಒದಗಿಸುವ ಸ್ಟಾಕ್ ಎಕ್ಸ್‌ಛೇಂಜ್ ಮುಂತಾದ ಸಂಸ್ಥೆಗಳು; ಸರಕಾರಗಳು—ಎಲ್ಲವೂ ಈ ಬಗೆಯ ಕೈಗಾರಿಕೆ ಬೆಳವಣಿಕೆಗೆ ಭುಜಕೊಟ್ಟಿರುತ್ತವೆ.

**ಸಂಪಾದನೆಗೆ ಹಣ ಹೂಡುವವರು.**—ಹಣವನ್ನು ಕೂಡಿಸುವ ಜನರಿಲ್ಲದಿದ್ದರೆ ಯಾವುದಕ್ಕೂ ಬಂಡವಾಳ ದೊರೆಯದು. ಸಂಪಾದಿಸಿದುದನ್ನೆಲ್ಲಾ ಖರ್ಚುಮಾಡಿಬಿಟ್ಟರೆ ಗಂಟು ಹೇಗೆ ಕೂಡುತ್ತದೆ? ಆದುದರಿಂದ ಬಂದ ವರಮಾನದಲ್ಲಿ ಸ್ವಲ್ಪ ಭಾಗವನ್ನು ಬಂದು ಕಡೆ ತೆಗೆದಿಡುವವರ ಸಂಖ್ಯೆ ಹೆಚ್ಚಿದಂತೆಲ್ಲ ಉತ್ಪತ್ತಿ ವ್ಯಾಪಾರ ಕಾರ್ಯಗಳಿಗೆ ಮೂಲಧನವಾಗಬಲ್ಲ ಹಣದ ಮೊತ್ತ ಹೆಚ್ಚುವುದು. ಆದರೂ ಸಣ್ಣ ಸಂಪಾದನೆಯವರು ಎಷ್ಟು ಕೂಡಿಟ್ಟರೂ ಒಟ್ಟು ಗಂಟು ಬಹಳ ದೊಡ್ಡದಾಗಲಾರದು. ತಿಂಗಳಿಗೆ

* (೧) ಹಣ ಕೊಡುವ ಜನರು → (೨) ಅವುಗಳನ್ನು ಕೂಡಿಸಿ ಒಟ್ಟಿಗೆ ಕೊಡುವ ಮತ್ತು ಒಟ್ಟಿಗೆ ಹಾಕುವ ಸಂಸ್ಥೆಗಳು (Banks, Insurance Companies, Savings Banks, etc.) → (೩) ದಲ್ಲಾಳರು (Underwriters Commission Agents)

→ (೪) ಕೈಗಾರಿಕೆ ಕಾರ್ಖಾನೆಗಳು (Industrial Companies) → (೫) ಬಂಡವಾಳಪತ್ರ ಸಾಲಪತ್ರಗಳು (Shares, Bonds & Debentures) → (೬) ಸ್ಟಾಕ್ ಎಕ್ಸ್‌ಛೇಂಜುಗಳು (Stock-Exchanges)

} ಸರಕಾರಗಳ ರೀತಿ, ನೀತಿ, ನೆರವು

ಸಾವಿರಾರು ಲಕ್ಷಾಂತರಗಟ್ಟಳೆ ಸಂಪಾದನೆ ಇರುವವರು ಮಾತ್ರ ಹೆಚ್ಚು ಹಣವನ್ನು ಕೂಡಿಡಲಾಪರು. ಸ್ವಂತ ಸಂಪಾದನೆ ಮಾಡುವವರು; ತಂದೆ ತಾತಂದಿರು ಗಳಿಸಿಟ್ಟುದನ್ನು ಬಡ್ಡಿಗೆ ಹಾಕಿ ಅದನ್ನುಂಡು ಸುಖವಾಗಿರುವವರು; ಇತರರ ಕೈಯಲ್ಲಿದ್ದ ಹಣವನ್ನು ಕೂಡಿಸಿ ತಾವು ಎರವಲಾಗಿ ತೆಗೆದುಕೊಂಡು ಅದನ್ನು ಹೆಚ್ಚು ಸಂಪಾದನೆ ಬರುವ ಕಾರ್ಯಗಳಿಗೆ ಹೂಡುವವರು ಎಲ್ಲರೂ ಸೇರಿ ಕೈಗಾರಿಕೆಗಳಿಗೆ ಒದಗುವ ಬಂಡವಾಳ ಮತ್ತು ಹಣದ ಮೊತ್ತವನ್ನು ಹೆಚ್ಚುಮಾಡುತ್ತಾರೆ. ಇವರ ಕೈಗೆ ಹೆಚ್ಚು ಹಣ ಬಂದರೆ ಸಂಪಾದನೆ ಹೆಚ್ಚಾಗುತ್ತದೆ; ಸಂಪಾದನೆ ಹೆಚ್ಚಿದಂತೆಲ್ಲ ಪುನಃ ಕೈಗಾರಿಕೆಗಳಿಗೆ ಹಣ ಹೂಡಬಲ್ಲ, ಹಣವನ್ನು ಬಡ್ಡಿಗೆ ಹಾಕಬಲ್ಲ ಶಕ್ತಿ ವೃದ್ಧಿಯಾಗುತ್ತದೆ. ಬಡ್ಡಿಯ ರುಚಿ ಕಂಡಂತೆಲ್ಲ ಬಡ್ಡಿಗೆ ಸಿಕ್ಕುವ ಹಣ ದೊಡ್ಡದಾಗುತ್ತದೆ.

**ಈ ಬಂಡವಾಳದ ಮೂಲ — ಬಗೆ ಬಗೆಯ ಜನರು.** — ಅನೇಕರು ತಮ್ಮ ಅನುಕೂಲಕ್ಕಾಗಿಯೊ, ಮಕ್ಕಳುಮರಿಯ ಅನುಕೂಲಕ್ಕಾಗಿಯೊ ಹಣ ಕೂಡಿಡುವರು; ಕೇವಲ ಜಿಪುಣಬುದ್ಧಿಯಿಂದ ಹಣ ಕೂಡಿಸುವುದರಿಂದ ಮೊದಲಾಗಿ ಹತ್ತು ಜನರಿಗೆ ಉಪಯೋಗವಾಗುವ ಕಾರ್ಯಗಳನ್ನು ಮಾಡುವುದು ಸಾಧ್ಯವಾಗುವಂತೆ ಕೂಡಿಡುವವರವರೆಗೂ ಅನೇಕ ಬಗೆಯ ಜನರು ಅನೇಕ ಉದ್ದೇಶಗಳಿಂದ ಹಣ ಕೂಡಿಸುವರು. ಆ ಹಣವೆಲ್ಲವನ್ನೂ ನೆಲದಲ್ಲಿಯೊ, ಪೆಟ್ಟಿಗೆಗಳಲ್ಲಿಯೊ, ಚಿನ್ನ ಬೆಳ್ಳಿ ಗಟ್ಟಿಗಳಲ್ಲಿಯೊ, ಒಡವೆಗಳ ರೂಪದಲ್ಲಿಯೊ ಹಾಕಿಟ್ಟರೆ ವ್ಯಾಪಾರ ಕೈಗಾರಿಕೆಗಳಿಗೆ ಯಾವ ಪ್ರಯೋಜನವೂ ಇಲ್ಲ. ಹಲವರು ಬ್ಯಾಂಕುಗಳಲ್ಲಿ ಹಣವನ್ನಿಟ್ಟರೂ ಚಾಲ್ತಿ ಡಿಪಾಸಿಟ್ ರೂಪದಲ್ಲಿಡುವರೇ ಹೊರತು, ಫಿಕ್ಸೆಡ್ ಡಿಪಾಸಿಟ್ಟಿನ ರೂಪದಲ್ಲಿ ಇಡಲು ಇಷ್ಟಪಡದಿರಬಹುದು. ಯಾವ ದೇಶದಲ್ಲಿ ಹೆಚ್ಚು ಬಡ್ಡಿ ಸಿಕ್ಕಿದರೆ ಅಲ್ಲಿಗೆ ಅದನ್ನು ಸಾಗಿಸಲು ಕಾದುಕೊಂಡಿರಬಹುದು. ಬ್ಯಾಂಕುಗಳವರು ಈ ಹಣದ ಬಹುಭಾಗವನ್ನು ಉದ್ಯೋಗ ಕೈಗಾರಿಕೆಗಳಿಗೆ ಬೇಕಾಗುವ ಸಿಡು ಸಾಲಗಳಿಗಾಗಿ ಹೂಡುವುದು ಸಾಧ್ಯವಾಗದೆ ಹೋಗುವುದು. ಹೀಗಾದರೆ ಎಷ್ಟು ಹಣವಿದ್ದರೂ ಬಂಡವಾಳಕ್ಕೂ ಸಾಲಪತ್ರಗಳ ಕೊಳ್ಳಾಟಕ್ಕೂ ಹಣದ ಒದಗುವಿಕೆ ಕಡಮೆಯಾಯಿತು.

**ಯಾರು ಯಾರು ಹೇಗೆ ಹಣ ಹೂಡುವರು?** — ಕೆಲವರ ಉದ್ದೇಶ ಸ್ವಂತಕ್ಕೂ ಕುಟುಂಬದವರಿಗೂ ಅನುಕೂಲವಾಗಲಿ ಎಂಬುದು; ಕಾಯಿಲೆ, ವೃದ್ಧಾಪ್ಯ, ಆಪತ್ತು, ಕೆಲಸ ಹೋಗುವಿಕೆ, ಅಂಗಹೀನತೆ ಮುಂತಾದ ತೊಂದರೆ ಬಂದಲ್ಲಿ ಕೈಗಾವಲಾಗಿ ಇರಲಿ ಎಂದು ಕೆಲವರು ಕೂಡಿಡುವರು; ಮಕ್ಕಳುಮರಿಯ ವಿದ್ಯಾಭ್ಯಾಸ; ಅವರನ್ನು ಒಳ್ಳೆಯ ಸ್ಥಿತಿಯಲ್ಲಿ ನಿಲ್ಲಿಸಬೇಕೆಂಬ ಬುದ್ಧಿ; ತನ್ನ ವ್ಯಾಪಾರವನ್ನೇ ವಿಸ್ತರಿಸಿಕೊಳ್ಳಬೇಕೆಂಬ ಉದ್ದೇಶ; ಎಲ್ಲರಿಗಿಂತ ಹೆಚ್ಚು ಧನಿಕರಾಗಬೇಕು, ಪ್ರತಿಷ್ಠೆ ಸಂಪಾದಿಸಬೇಕು ಎಂಬ ಆಸೆ ಇವೂ ಇರುತ್ತವೆ. ಇವರಲ್ಲಿ ಅನೇಕರಿಗೆ ಸಾಹಸ ಬುದ್ಧಿ ಇಲ್ಲವಾದರೆ ಇಂತಹವರು ಹಣ ಹೂಡುವ ರೀತಿಯೇ ಒಂದು. ಎಲ್ಲಿ ಯಾವ ರೀತಿ ಹೂಡಿದರೆ ನಷ್ಟದ ಸಂಭವ ಕಡಮೆಯೋ ಅಲ್ಲಿ ಬಡ್ಡಿಗೆ ಹಾಕಿ ಹಣವನ್ನು ಕಾಪಾಡಿಕೊಳ್ಳುವರು. ಇಂಥವರು ಸೇವಿಂಗ್ಸ್ ಬ್ಯಾಂಕು, ವಿಮೆ ಕಂಪನಿ, ಟ್ರಸ್ಟೀ ಕಂಪನಿ, ಸ್ಟಾಕ್ ಟ್ರಸ್ಟು, ಸರಕಾರಿ ಸಾಲ, ದೊಡ್ಡ ಬ್ಯಾಂಕುಗಳಲ್ಲಿ ಡಿಪಾಸಿಟ್ಟು ಮುಂತಾದ ರೂಪದಲ್ಲಿ ಮಾತ್ರ ಹಣ ಹಾಕುತ್ತಾರೆ. ಇವರ ಹಣಕ್ಕೆ ಇನ್ನೊಬ್ಬರ ಹೊಣೆಗಾರಿಕೆ ಬೇಕು. ಕೈಗಾರಿಕೆಗಳಿಗೆ ಇದು ಸೇರಿದರೆ ಪರೋಕ್ಷವಾಗಿ; ಆ ಸಂಸ್ಥೆಗಳ ಸಾಹಸದಿಂದ ಮಾತ್ರ. ಇನ್ನು ಕೆಲವರು ಗುಣಾಕಾರ ಹಾಕುತ್ತ ಹೆಚ್ಚು ಬಡ್ಡಿ ಎಲ್ಲಿ ಸಿಕ್ಕುವುದೋ ಅಲ್ಲಿಗೆ ಹಣವೊದಗಿಸುವರು. ಆ ಸಂಭವವಿದ್ದರೆ ಹೆಚ್ಚು ಕೊಡುವುದು; ಇಲ್ಲವಾದರೆ ಕಡಮೆ ಮಾಡುವುದು—ಈ ರೀತಿ ಈಚೆ ಆಚೆ ಹಣದ ಹದ ನೋಡಿಕೊಂಡು ಬಡ್ಡಿಗೆ ಹಾಕುತ್ತಾರೆ. ಇವರೆಲ್ಲರಿಗಿಂತಲೂ ಸಾಹಸಿಗಳಾದವರು ನಷ್ಟಕ್ಕೆ ಹೆದರದೆ, ಲಾಭಸಂಭವನದಲ್ಲಿ ಧನವನ್ನಿಟ್ಟು ಹೊಸಹೊಸ ಉದ್ಯೋಗ ಸಾಹಸಗಳಿಗೆ ಬಂಡವಾಳವೊದಗಿಸುವರು; ಬಡ್ಡಿಯ ಜೊತೆಗೆ ಲಾಭವನ್ನೂ ತಿನ್ನಲು ಬಯಸುವವರು ಇವರು. ಇಂತಹ ಸಾಹಸಿಗಳಿಂದಲೇ ಈಗಿನ ಕೈಗಾರಿಕೆ ಪ್ರಪಂಚಕ್ಕೆ ಬದುಕು, ಪುಷ್ಟಿ. ಈ ಎಲ್ಲ ಬಗೆಯ ಉದ್ದೇಶಗಳುಳ್ಳ ಬಂಡವಾಳಸ್ಥರ ಹಣವನ್ನು ಎಲ್ಲ ಸಂಘಗಳಲ್ಲಿಯೂ ಕೂಡಿಸಿ ಅದನ್ನು ವ್ಯಾಪಾರಕ್ಕೂ ಕೈಗಾರಿಕೆಗಳಿಗೂ ಒದಗಿಸುವ ಜನವೂ, ಬ್ಯಾಂಕು ಸಂಸ್ಥೆಗಳೂ ನೇರವಾಗಿಲ್ಲದಿದ್ದರೆ ಪರೋಕ್ಷವಾಗಿ ಮಧ್ಯಸ್ಥವಾಗುವುವು.

**ಒಟ್ಟು ಬಂಡವಾಳ — ಷೇರು ಒದಗಿದ್ದು — ಸಂದಾಯವಾಗಿರುವುದು.—** ಕೂಡುಬಂಡವಾಳದ ಸಂಸ್ಥೆಯೊಂದು ಏರ್ಪಡುವ ರೀತಿಯನ್ನು ಈ ಪ್ರಕರಣದ ಕಡೆಯಲ್ಲಿ ಕಾಣಿಸಿದೆ. ಎಲ್ಲ ಕಂಪನಿಯವರೂ ತಮಗೆ ಬೇಕಾಗಬಹುದೆಂಬಷ್ಟು ಹಣವನ್ನು 'Authorised Capital' ಎಂಬ ಹೆಸರಿನಲ್ಲಿ ಷೇರುದಾರರಿಂದ ತೆಗೆದುಕೊಳ್ಳುವ ಹಕ್ಕು ಪಡೆದುಕೊಳ್ಳುವರು. ಅಷ್ಟು ಮೊಬಲಗನ್ನೂ ಮೊದಲೇ ಷೇರಾಗಿ ಕೇಳುತ್ತೇವೆನ್ನುವುದಿಲ್ಲ. ಮೊದಲು ಕೆಲಸಕ್ಕೆ ಎಷ್ಟು ಬೇಕಾಗುವುದೆಂದು ತೋರುವುದೊ ಅದನ್ನು ಪ್ರಕಟನೆಯ ಪತ್ರದಲ್ಲಿ ಸೂಚಿಸಿ ಅಷ್ಟು ಷೇರುಗಳು ಮಾತ್ರ ಮಾರಲಿವೆಯೆಂದು ಹೇಳುವರು. ಅದಕ್ಕೆ ಚಂದಾ ಎತ್ತುವ (ಎತ್ತಿದ) ಬಂಡವಾಳ (Subscribed Capital) ಎಂದು ಹೆಸರು. ಆ ಮೊತ್ತದ ಷೇರುಗಳನ್ನು ಕೇಳಿದವರಿಗೆ ಹಂಚುವರು. ಷೇರಿನ ಮೇಲಿನ ಮೊಬಲಗನ್ನೆಲ್ಲಾ ಕಂತು ಕಂತಾಗಿಯೊ ಒಟ್ಟಾಗಿಯೊ ತೆಗೆದುಕೊಳ್ಳುವರು. ಆದರೆ ಯಾವ ಒಂದು ಸಮಯದಲ್ಲಿಯಾಗಲಿ ಈ ಷೇರು ಚಂದಾವನ್ನು ಅವುಗಳ ಬೆಲೆಯ ಪೂರ್ತ ಬರಮಾಡಿಕೊಳ್ಳದೆ ಇರಬಹುದು. ಕಂತು ಚಂದಾ ಮೂಲಕ ಷೇರುಗಳ ಮೇಲೆ ಎಷ್ಟು ಹಣ ಕಂಪನಿಗೆ ಸಂದಿರುತ್ತದೆಯೊ ಅದಕ್ಕೆ ಸಂದ ಬಂಡವಾಳ (Paid-up Capital) ಎಂದು ಹೆಸರು. ಹೆಚ್ಚು ಬಂಡವಾಳ ಬೇಕಾದಂತೆಲ್ಲ ಉಳಿದಿರುವ ಕಂತುಗಳನ್ನು ಬರಮಾಡಿಕೊಳ್ಳುವರು. ಅಲ್ಲಿಗೂ ಕಂಪನಿಯ ಕೆಲಸಕ್ಕೆ ಬಂಡವಾಳ ಸಾಲದಾದರೆ ಮೇಲ್ಮಿತಿಯಂತೆ ಇರುವ 'Authorised Capital' ಎಂಬ ಮೂಲದ ಮೊತ್ತಕ್ಕೆ ಹೊಸ ಷೇರುಗಳನ್ನು ನಿರ್ಮಾಣ ಮಾಡಿ ಅವನ್ನು ಮಾರಾಟಕ್ಕಿಡುವರು. ಹಳೆಯ ಷೇರುದಾರರಾಗಲಿ ಹೊಸಬರಾಗಲಿ ಯಾರಾದರೂ ಅವನ್ನು ಕೊಳ್ಳಬಹುದು. ಸಾಮಾನ್ಯವಾಗಿ ಬಂಡವಾಳದ ಮೂಲಕ ಇನ್ನು ಹಣ ಬಾರದೆಂದು ತಿಳಿದಾಗ ಡಿಬೆಂಚರ್ ಸಾಲವೆತ್ತುವರು. ಕಂಪನಿಯ ಹಾಲಿ ಗಟ್ಟಿ ಬಂಡವಾಳ ಎಷ್ಟು ಎಂದು ಎಣಿಸುವಾಗ ಒಟ್ಟು ಮೊತ್ತದಲ್ಲಿ ಡಿಬೆಂಚರ್ ಸಾಲದ ಮೊತ್ತವನ್ನು ಇಳಿಕೆ ಹಾಕಿ ಉಳಿದುದನ್ನು ಮಾತ್ರ ಎಣಿಸುವುದು ವಾಡಿಕೆ.*

* ಸ್ಥೂಲವಾಗಿ. ಏಕೆಂದರೆ ಇತರ ಬಗೆಯ ಪುಡಿ ಸಾಲಗಳೂ ದೇಣಿಗಳೂ ಬೇಕಾದಷ್ಟು ಕಂಪನಿಗೆ ಇರಬಹುದು.

**ರಿಸರ್ವ್ (ಆಪದ್ಧನ) — ರಿಸರ್ವನ್ನು ಹೂಡುವ ಮೂಲಕ ಕ್ಷೇತ್ರ, ಗಾತ್ರ ವಿಸ್ತರಣ.**—ಕಂಪನಿಗಳ ವ್ಯಾಪಾರವೂ ಉದ್ಯೋಗ ಉತ್ಪತ್ತಿಗಳೂ ಬೆಳೆದಂತೆಲ್ಲ ಸಾಧಾರಣವಾಗಿ ಲಾಭದಿಂದ ಆಪದ್ಧನವೆಂಬ ಹೆಸರಿನಲ್ಲಿ ಒಂದು ಬಗೆಯ ನಿಧಿಯನ್ನು ಶೇಖರಿಸುವರು. ಖರ್ಚು ವೆಚ್ಚ ತೇಮಾನ ಧನಗಳೆಲ್ಲ ಕಳೆದು ಡಿವಿಡೆಂಡ್ ರೂಪದಲ್ಲಿ ನಿವ್ವಳ ಲಾಭವನ್ನು ಹಂಚುವ ಮುಂಚೆ ಈ ಆಪದ್ಧನಕ್ಕೆ ಗೊತ್ತಾಗಿ ಲಾಭದಲ್ಲಿ ಇಷ್ಟು ಭಾಗವನ್ನು ಹಾಕತಕ್ಕದ್ದೆಂದು ತೆಗೆದಿಡುವರು. ಎಂದರೆ, ನ್ಯಾಯವಾಗಿ ಅದು ಷೇರುದಾರರಿಗೇ ಹಂಚ ಬೇಕಾಗಿರುವ ಹಣ. ಆದರೂ ಕಂಪನಿಯ ಕಷ್ಟಕ್ಕೆ—ಸುಖಕ್ಕೆ—ಒದಗಲಿ ಎಂದು ತೆಗೆದಿಡುವರು. ರಿಸರ್ವ್ (Reserve) ಎಂಬ ಈ ನಿಧಿ ಬೆಳೆದಹಾಗೆಲ್ಲ ಕಂಪನಿಯ ಆಕಾಂಕ್ಷೆ ಹೆಚ್ಚಿ ತನ್ನ ಕಾರ್ಯಕ್ಷೇತ್ರವನ್ನೂ ವ್ಯಾಪಾರದ ಪ್ರಮಾಣವನ್ನೂ ಹೆಚ್ಚಿಸಿಕೊಳ್ಳಬೇಕು ಎಂಬ ಬಯಕೆ ಬರುವುದು. ಇಂಗ್ಲೆಂಡು, ಜರ್ಮನಿ, ಅಮೇರಿಕಾ ಮುಂತಾದ ರಾಷ್ಟ್ರಗಳಲ್ಲಿ ಕಂಪನಿಗಳು ಹೀಗೆ ಹಾರೈಸಿ ತಮ್ಮ ಗಾತ್ರವನ್ನು ಬೆಳಸಿಕೊಂಡು ಹೊಸ ಮುಖಗಳಲ್ಲಿ ಹರಡಲು ಪ್ರಯತ್ನಿಸುತ್ತವೆ—ಅಥವಾ ತಮಗೆ ಸಂಬಂಧಿಸಿದ ಅಥವಾ ಪ್ರತಿಸ್ಪರ್ಧಿಗಳಾಗಿರುವ ಇತರ ಕಂಪನಿಗಳನ್ನು ಕೊಳ್ಳಲೂ, ತಮ್ಮಲ್ಲಿ ಸೇರಿಸಿಕೊಳ್ಳಲೂ ಪ್ರಯತ್ನಿಸುತ್ತವೆ. ಆಯಾ ಕೈಗಾರಿಕೆ ವ್ಯಾಪಾರಗಳಿಗೆ ಸಂಬಂಧಿಸಿದ ಎಲ್ಲವನ್ನೂ ತಮ್ಮ ಅಧಿಕಾರಕ್ಕೆ ತಂದು, ಇತರರ ಸ್ಪರ್ಧೆಯಿಲ್ಲದಂತೆ ಮಾಡಿ ಪೇಟೆಯಲ್ಲಿ ತಮಗೆ ಬೇಕಾದಂತೆ ಧಾರಣೆ ಏರ್ಪಡಿಸಿ ಲಾಭ ಸಂಪಾದಿಸಬೇಕೆಂಬುದೇ ಬಹುತರವಾಗಿ ಇಂಥ ವಿಸ್ತರಣಗಳ ಉದ್ದೇಶ.

**ಇದರ ಪರಿಣಾಮ.**—ಇವುಗಳ ಗಾತ್ರ ದೊಡ್ಡದಾಗುತ್ತ ಆಗುತ್ತ ಇವಕ್ಕೆ ಹಣವೊದಗುವ ರೀತಿಯೂ ವಿಚಿತ್ರವಾಗುವುದು. ಹೊಸ ಕಂಪನಿಗಳಿಗೆ ಬಂಡವಾಳ ಅಥವಾ ಸಾಲವನ್ನು ಒದಗಿಸುವುದಕ್ಕಿಂತ ಮುಂಚೆ ಹಲವು ವರ್ಷ ಚೆನ್ನಾಗಿ ನಡೆದಿರುವ ಕಂಪನಿಗೆ ಬೇಗನೆ ಸಾಲಕೊಡಲು ಜನರು ಸಿದ್ಧರಾಗುವರು. ಬ್ಯಾಂಕುಗಳವರೂ ದೊಡ್ಡ ಸಂಸ್ಥೆಗಳಿಗೆ ಬೇಗ—ಸುಲಭವಾಗಿ—ಮುಂಗಡಗಳನ್ನೂ ಸಾಲಗಳನ್ನೂ ಕೊಡುವರು. ಆದುದರಿಂದಲೂ, ಸಣ್ಣ ಸಂಸ್ಥೆಗಳು ಬೆಳೆಯಲು ಆಸ್ಪದಕೊಡದೆ ಎಲ್ಲವನ್ನೂ

ತವನ್ನು ಆಡಳಿತಕ್ಕೆ ತಂದುಕೊಳ್ಳಲೆಳಸುವ ದೊಡ್ಡ ಕಂಪನಿಗಳಿಗೆ ಈ ಹಣ ಸಹಾಯ ಇಂಬಾಗುವುದು. ಇದರಿಂದ ಎರಡು ಬಗೆಯ ಪರಿಣಾಮವುಂಟು: ಅತಿದೊಡ್ಡದಾದ ಕೆಲವು ಕಂಪನಿಗಳ ಕೈಯಲ್ಲಿ ಹಣ ಸೇರಿ ಒಮ್ಮನಸೆಯಿಂದ ಕೆಲಸಮಾಡುವಂತಾಗುವುದು ಒಂದು; ಬ್ಯಾಂಕು, ಕೈಗಾರಿಕೆ, ವ್ಯಾಪಾರಗಳಿಗೆ ಸಂಬಂಧಿಸುವ ಲೇವಾದೇವಿ ಸ್ವರೂಪವೇ ಬದಲಾಯಿಸುವುದು ಇನ್ನೊಂದು. ಜನರಿಗೆ ಯಾವ ಬಗೆಯ ಕಂಪನಿಯಲ್ಲಿ ಪ್ರೀತಿ, ಭರವಸೆ, ನಚ್ಚಿಕೆ ಇವೆಯೊ ಅವಕ್ಕೆ ಸಾಲಕೊಡಲೂ, ಬಂಡವಾಳ ಒದಗಿಸಲೂ ಇಚ್ಛೆಪಡುವುದು ಸ್ವಾಭಾವಿಕ. ಹಾಗೆ ಹಣ ಒದಗಿಸಿದರೆ, ಆ ಕಂಪನಿಯ ಚಾಲಕರ ಕೈಗೆ ಹೆಚ್ಚು ಹಣವನ್ನು ಕೊಟ್ಟು ಅವರಿಗೆ ಬೇಕಾದ ಉಪಕರಣಗಳನ್ನು ಹೆಚ್ಚಾಗಿ ಸಂಗ್ರಹಿಸಲು ಅವಕಾಶವನ್ನು ಕಲ್ಪಿಸಿಕೊಟ್ಟ ಹಾಗಾಯಿತು; ಕಂಪನಿಗೆ ಬರುವ ಲಾಭದಲ್ಲಿ ಇವರು ಹಂಚಿಕೆ ಪಡೆಯುವ ಹಕ್ಕನ್ನು ಸಂಪಾದಿಸಿದಹಾಗಾಯಿತು. ಆ ಲಾಭವೆಲ್ಲ ಷೇರುದಾರರಿಗೆ ಹಂಚಿಕೆಯಾದರೆ, ಇವರು ಪುನಃ ತಮಗೆ ಇಷ್ಟವಾದ ಕಂಪನಿಗಳ ಹುಟ್ಟಿಗೂ ಬೆಳವಣಿಗೆಗೂ ಹಣದ ನೆರವನ್ನು ಕೊಡಲು ಅವಕಾಶವಾಗುವುದು.

**ರಿಸರ್ವ್ ಹಣದ ವಿನಿಯೋಗ— ಅದರ ಫಲ.**—ಆದರೆ ಈಗಿನ ದೊಡ್ಡ ಕಂಪನಿಗಳ ಲಾಭವನ್ನೆಲ್ಲಾ ಡಿವಿಡೆಂಡು ರೂಪದಲ್ಲಿ ಹಂಚಿಬಿಡದೆ ಅದರಲ್ಲಿ ಕೆಲವು ವೇಳೆ ೩೫–೪೦% ವರೆಗೂ ರಿಸರ್ವ್ ರೂಪದಲ್ಲಿ ತೆಗೆದು ಕೂಡಿಡುವರು. ಇದರ ಜೊತೆಗೆ ಆ ಹೆಸರಿನ ಮರೆಯಲ್ಲಿ, ಈ ಹೆಸರಿನ ಮರೆಯಲ್ಲಿ ಇನ್ನೂ ಅಷ್ಟು ಹಣವನ್ನು ಉಳಿಸಿಕೊಳ್ಳುವುದೇ ರೂಢಿ.* ಕೆಲವು ಕೈಗಾರಿಕೆಗಳಲ್ಲಿ ಇತರ ಕಡೆಗಳಿಗಿಂತಲೂ ಹೆಚ್ಚು ಭಾಗವನ್ನು ತೆಗೆದಿಡುತ್ತಾರೆ. ಇದರ ತಕ್ಷಣ ಫಲ ಇಷ್ಟು: ಈ ನಿಧಿಯಷ್ಟು ಲಾಭ ಭಾಗ ಇತರ ಕಂಪನಿಗಳಲ್ಲಿ ಹೂಡಲು ಬರುವುದಿಲ್ಲ. ಈ ಹಣವನ್ನು ವಿನಿಯೋಗಿಸುವ ರೀತಿ ವ್ಯತ್ಯಾಸವಾದಂತೆ ಫಲಗಳು ಬೇರೆಯಾಗುವುವು. ಹಿಂದೆ ಸರಕಾರಿ ಸಾಲಪತ್ರಗಳನ್ನೊ, ಅಥವಾ ನಂಬಿಕೆಯಾದ ಯಾವುದೊ ಸಂಸ್ಥೆಯ ಡಿಬೆಂಚರ್ ಪತ್ರ

* ಉದಾ.—೧೯೧೫ರಲ್ಲಿ ಇಂಗ್ಲೆಂಡಿನ ಎಣ್ಣೆಯ ಕಂಪನಿಗಳು ಲಾಭವೆಂದು ತಾವು ತೋರಿಸಿದ ಮೊತ್ತದಲ್ಲಿ ೭೪%ನ್ನು ನಿಧಿಯಾಗಿ ತೆಗೆದಿಟ್ಟರು. ಕಬ್ಬಿಣ ಉಕ್ಕುಗಳವರು ತೆಗೆದಿಟ್ಟದ್ದು ೬೧.೪%.

ಗಳನ್ನೂ ಕೊಂಡಿಟ್ಟುಕೊಳ್ಳುತ್ತಿದ್ದವರು ಈಗ ಹಣವನ್ನು ಸ್ವಂತ ವೃದ್ಧಿಗೆ ತಮ್ಮ ರೆಕ್ಕೆ ಹರಡಲು ವಿನಿಯೋಗಿಸಬಹುದು. ಎಂದರೆ ಚಾಲಕರು ಷೇರುದಾರರನ್ನು ಒಂದು ವಿಧದಲ್ಲಿ ಬಲಾತ್ಕರಿಸಿ ಅವರಿಗೆ ಹಂಚಿಕೆಯಾಗಿ ಹೋಗಬೇಕಾಗಿದ್ದ ಲಾಭವನ್ನು ಲಾಭ ಉತ್ಪತ್ತಿಯಾದ ಕಂಪನಿಯಲ್ಲಿಯೇ ಪುನಃ ಹೂಡುವಂತೆ ಮಾಡುತ್ತಾರೆಂದಹಾಗಾಯಿತು. ಬ್ಯಾಂಕುಗಳ ಮೂಲಕ ಷೇರುದಾರರ ಕೈಗೆ ಹಸುಗೆ ಹೋಗಿ ಅವರ ಮೂಲಕ ಇತರ ಕೈಗಾರಿಕೆ ಕಾರ್ಖಾನೆಗಳ ಅಭಿವೃದ್ಧಿಗಾಗಿ ಹಣವನ್ನು ಹೂಡುವ ಅವಕಾಶವಿಲ್ಲದಾದಂತಾಯಿತು. ಆ ಮಟ್ಟಿಗೆ ಬ್ಯಾಂಕುಗಳ ಕೈಯಲ್ಲಿನ ಹಣ ಸಂಚಾರ ಕಾರ್ಯವನ್ನು ತಡೆದು ಅವರ ಕೈಕಟ್ಟಿದಹಾಗಾಯಿತು. ಇಷ್ಟೇ ಅಲ್ಲ; ಹಲವು ವೇಳೆ ತನ್ನ ವ್ಯಾಪಾರ ಎಷ್ಟರವರೆಗೆ ಬೆಳೆಯಬಹುದೊ ಆ ಮಿತಿಯನ್ನು ಮುಟ್ಟಿದ್ದರೂ, ಸಮೀಪದಲ್ಲಿರುವ, ಅಧೀನವಾಗಿರುವ ಅಥವಾ ಪೋಷಕವಾಗಿರುವ ಕಾರ್ಯಮಂಡಲವನ್ನು ತನ್ನ ವಶಮಾಡಿಕೊಳ್ಳಲು ಪ್ರಯತ್ನಿಸಬಹುದು ಎಂದು ಹೇಳಿದೆವಲ್ಲ! (ಉದಾ.—ರೈಲ್ವೆ ಕಂಪನಿಯೊಂದು ಬೇಕಾದಷ್ಟು ಬೆಳೆದಮೇಲೆ ಕಬ್ಬಿಣ ಕಲ್ಲಿದ್ದಲು ಗಣಿಗಳು, ಎಂಜಿನ್, ಯಂತ್ರ, ಕಂಬಿ ಇವುಗಳನ್ನೂ ಇತರ ಉಪಕರಣಗಳನ್ನೂ ತಯಾರಿಸುವ ಕಾರ್ಖಾನೆಗಳು, ವಿದ್ಯುಚ್ಛಕ್ತಿ ಶಾಖೆಗಳು, ಗಾಡಿ ಪಟ್ಟಿ, ಸಾಗುವಾನಿ ಕೋಠಿ, ಅಚ್ಚಿನ ಕಾರ್ಖಾನೆ, ಬಸ್ಸು, ಲಾರಿ, ಹೋಟೆಲ್ಲು, ಮಡಿವಾಳಿ ಕೆಲಸ, ಲೇವಾದೇವಿ ಮುಂತಾದವನ್ನು ಸಂಗ್ರಹಿಸಬಹುದು. ವೃತ್ತಪತ್ರಿಕೆಗಳವರು, ಮುದ್ರಣ ಯಂತ್ರಗಳು, ಅಚ್ಚನ್ನು ತಯಾರಿಸುವ ಕಾರ್ಖಾನೆಗಳು, ಕಾಗದದ ಕಾರ್ಖಾನೆ; ಕಾಗದದ ಸರಿ ಒದಗಿಸುವ ಬೊಂಬಿನ ಕಾಡುಗಳು, ಮಸಿಗಳು, ಚಿತ್ರ ಕೆಲಸಗಳು, ಫೋಟೊ ಕೆಲಸಗಳು ಮುಂತಾದ ಸಹಾಯಕ ಯಂತ್ರವನ್ನೆಲ್ಲಾ ಕೈವಶಮಾಡಿಕೊಳ್ಳಲು ಯತ್ನಿಸಬಹುದು. ತಾವೇ ತಮ್ಮ ಲೇವಾದೇವಿ ಶಾಖೆಗಳನ್ನೂ ದಲ್ಲಾಳಿ ವರ್ತಕರನ್ನೂ ನಿಯಮಿಸಿಕೊಳ್ಳಬಹುದು.) ಹೀಗೆ ಇತರರು ಮಾಡಿಕೊಡುತ್ತಿದ್ದ ಕೆಲಸವನ್ನೆಲ್ಲಾ ಈಗ ತಾವೇ ಮಾಡಿಕೊಳ್ಳುವುದರಿಂದಲೂ ಇತರರ ಕೈಗೂ ಬ್ಯಾಂಕುಗಳ ಕೈಗೂ ಸಾಗುತ್ತಿದ್ದ ಹಣವೆಲ್ಲ ತಡೆದು ಇಲ್ಲೇ ನಿಂತಹಾಗಾಗುವುದು. ಈ ಎಲ್ಲ ವ್ಯಾಪಾರಗಳನ್ನೂ ತಮ್ಮ ಕಾರ್ಯಶಾಖೆ

ಗಳಲ್ಲಿಯೇ ಆಯಾ ಇಲಾಖೆಗಳ ಲೆಕ್ಕ ಪುಸ್ತಕಗಳ ಮೂಲಕವೇ ನಡೆಸುತ್ತಾ ಹೊರಗಿನ ವ್ಯಾಪಾರದ ಬ್ಯಾಂಕುಗಳ ಕೆಲಸಗಳನ್ನು ಕಡಮೆಮಾಡುವರು. ಕಂಪನಿಯ ಒಂದು ಭಾಗದ ಪುಸ್ತಕದಲ್ಲಿ ಖರ್ಚು ಹಾಕಿ, ಇನ್ನೊಂದರಲ್ಲಿ ಜಮಾ ಹಾಕಿ ಕೆಲಸಗಾರರಿಗೆಲ್ಲ — ಷೇರುದಾರರಿಗೆಲ್ಲ — ಬೇಕಾದ್ದನ್ನು ಒದಗಿಸುವುದರಿಂದ ಹಣದ ಸಂಚಾರ ಕಡಮೆಯಾಗಿ, ಹೊರಕ್ಕೆ ಹಣ ಹೋಗುವುದು ಮತ್ತೂ ಕುಗ್ಗುವುದು.

ಹೀಗೆ, ಮೊದಲು ಯಾವ ಬ್ಯಾಂಕುಗಳ ಸಹಾಯದಿಂದ ಕಂಪನಿ ತಲೆಯೆತ್ತಲು ಅವಕಾಶವಾಯಿತೋ ಅಂತಹ ಬ್ಯಾಂಕುಗಳನ್ನು ಬಿಟ್ಟು ಇವು ಮುಂದುವರಿಯುವಂತಾಗಿದೆ. ಇತರ ಕೈಗಾರಿಕೆಗಳಿಗೆ ಹೂಡಬಹುದಾದ ಹಣದ ಮೊತ್ತ ಕಡಮೆಯಾಗುವುದರ ಜೊತೆಗೆ ಹಣವನ್ನು ಕೈಯಿಂದ ಕೈಗೆ ಸಂಚಾರಮಾಡಿಸುವ ಬ್ಯಾಂಕುಗಳ ವಿನಿಮಯದ ಕೆಲಸಕ್ಕೂ ಅಡಚಣೆಯಾಯಿತು. ಇದರ ಪರಮಾವಧಿ ಸ್ಥಿತಿ ಬಂತೆಂದರೆ—ಈಗ ಹಣದ ಮೂಲಕ ಯಾವೆಲ್ಲ ಲೇವಾದೇವಿ ನಡೆಯುವುದೊ ಅದು ಬೇಕೇ ಇಲ್ಲದಂತಾಗುವುದು! ಯಾವ ದೊಡ್ಡ ಕಂಪನಿಯೊಂದೇ ಈ ರೀತಿ ಕೆಲಸ ಮಾಡಲಿ—ಅಥವಾ, ಸರಕಾರ (ರಷ್ಯಾದಲ್ಲಿ ನಡೆಯುತ್ತಿರುವಂತೆ) ಸಮಷ್ಟಿ ದೃಷ್ಟಿಯಿಂದ ಕೈಕೊಳ್ಳಲಿ—ಉತ್ಪತ್ತಿ, ವಿನಿಮಯ, ಆದಾಯ ವಿಭಾಗ, ವಸ್ತು ಭೋಗ ಇದೇ ರೀತಿ ವ್ಯತ್ಯಾಸಪಡುವುವು. ಲೆಕ್ಕದಲ್ಲಿ ಅಲ್ಲಿ ಕೂಡಿಸಿ ಇಲ್ಲಿ ಕಳೆದು, ಇನ್ನೊಂದು ಕಡೆ ಹಂಚಿ, ಉಳಿದುದು ಮುಂದಿನ ಬೆಳಸಿನ ಕೆಲಸಕ್ಕೆ ಮೂಲಸಾಮಗ್ರಿಯಾಗುವುದು; ಬಂಡವಾಳವಾಗುವುದು.

ಇತ್ತ ಹೊಸ ಕಂಪನಿಗಳಿಗೆ ಬಂಡವಾಳ ಸಿಕ್ಕುವುದು ಕಷ್ಟವಾಗುವುದು. ಬ್ಯಾಂಕುಗಳೇನೊ ಸ್ವಲ್ಪ ದಿನ ಉದ್ರಿ (ನಂಬಿಕೆ ಲೆಕ್ಕದ) ಸಾಲಗಳನ್ನು ಕೊಡಬಹುದು. ಆದರೆ ಇದೆಷ್ಟು ದಿನ ನಡೆದೀತು? ಹಣ ಹೆಚ್ಚಿಸಿದರೆ ಪದಾರ್ಥ ಹೆಚ್ಚಿಸಿದಂತಾಯಿತೆ? ಉತ್ಪತ್ತಿ ಮಂಡಲದವರೇ ತಮ್ಮ ನಾನಾ ಇಲಾಖೆಗಳಲ್ಲಿ ಅವು ಉಪಯೋಗವಾಗುವಂತೆ ಮಾಡಿಕೊಳ್ಳುವರು.*

* ಅನೇಕ ಕಂಪನಿಗಳ ಸಮ್ಮೇಳನದಿಂದ ಯುನೈಟೆಡ್ ಸ್ಟೇಟ್ಸ್ ಸ್ಟೀಲ್ ಕಾರ್ಪೊರೇಷನ್, ಸ್ಟ್ಯಾಂಡರ್ಡ್ ಆಯಿಲ್ ಕಂಪನಿ (Socony), ಬರ್ಮಾ ಆಯಿಲ್ ಕಂಪನಿ (BOC), ಪಿ ಆಂಡ್ ಓ ಕಂಪನಿ, ಚಿಕಾಗೊ ಮೀಟ್ ಟ್ರಸ್ಟ್, ಮೆಟ್ರೊಪಾಲಿಟನ್ ವಿಕರ್ಸ್, ಜನರಲ್ ಎಲೆಕ್ಟ್ರಿಕ್ ಕಂಪನಿ, ಇಂಪೀರಿಯಲ್ ಕೆಮಿಕಲ್ಸ್, ಮುಂತಾದ ಬೃಹತ್ ಸಂಸ್ಥೆಗಳು ಆಗಿವೆ.

**ಕಂಪನಿಗಳ ಸರ್ವಾಧಿಕಾರ ದೃಷ್ಟಿ.**— ಈ ಮಹಾಕಂಪನಿಗಳು ಬಹು ಮುಖ್ಯವಾದ ತಮ್ಮ ಕೆಲಸವನ್ನೆಲ್ಲ ತಮ್ಮ ಒಡೆತನದಲ್ಲಿಯೇ ಇಟ್ಟುಕೊಂಡು ಒಂದೇ ಕೂಡುಬಂಡವಾಳದ ಸಂಸ್ಥೆಯಾಗಿರಬಹುದು; ಅಥವಾ ಸರಕಾರಗಳವರು ಆಗಗೊಡಿಸದಿದ್ದರೆ, ಹೆಸರಿಗೆ ಸ್ವಾಧೀನವಾಗಿರುವಂತೆ ಕಾಣುವ ಇತರ ಕಂಪನಿಗಳ ಪಕ್ಕಕ್ಕೆ ಕೊಟ್ಟು ಹಿಂದಿನಿಂದ ಒಳಗಿಂದ ಅವನ್ನು ಆಳುತ್ತಿರಬಹುದು. ಹೊರ ತೋರಿಕೆಗೆ ಸ್ವತಂತ್ರವಾಗಿ ಕಾಣುವ ಅವು, ಈ ದೊಡ್ಡ ಕಂಪನಿಗಳು ತೋರಿಸಿದ ಜಾಡನ್ನೇ ಹಿಡಿದು ಕೆಲಸಮಾಡಬೇಕಾಗುವದು. ತಮ್ಮ ವ್ಯಾಪಾರದಲ್ಲಿ ಅವರು ಸರ್ವಾಧಿಕಾರ ಪಡೆದು ವ್ಯಾಪಿಸುವರು. ತಮ್ಮಲ್ಲಿರುವ ಅಮಿತ ಧನದ ಸಹಾಯದಿಂದಲೂ ಸ್ಪರ್ಧಾಶಕ್ತಿಯಿಂದಲೂ ನಾಲ್ಕಾರು ವರ್ಷ ಇತರರೊಡನೆ ಪೈಪೋಟಿಮಾಡಿ ಅವರ ಕೊರಳು ಕೊಯ್ಯುವಂತೆ ಕಿರುಬೆಲೆಗೆ ಅವೇ ಪದಾರ್ಥಗಳನ್ನು ಮಾರಿ ಪ್ರತಿಸ್ಪರ್ಧಿಗಳನ್ನು ಮುಳುಗಿಸುವರು. ಸರಕಾರದಲ್ಲಿ ಪ್ರಬಲರಾದ ಅಧಿಕಾರಿಗಳ ಸಹಾಯ ದೊರೆತು ರಾಜಕೀಯ ಸನ್ನಿವೇಶಗಳು ತಮಗೆ ಅನುಕೂಲವಾಗುವಂತೆಯೂ, ದೇಶದ ಕರಪದ್ಧತಿಯೂ ಶಾಸನಗಳೂ ತಮಗೆ ಸಹಾಯವಾಗುವಂತೆಯೂ, ನೋಡಿಕೊಳ್ಳುವರು. ಇಂತಹ ಒಂದು ಕಂಪನಿಗೆ ಕೇಡು ತಟ್ಟಿದರೆ ಪ್ರಪಂಚದಲ್ಲಿ ಅನೇಕ ಕಾರ್ಯಮಂಡಲಗಳು ದಿವಾಳಿಯಾಗುವವು.

**ಸರಕಾರದ ಅಂಕೆ.**— ಇವರ ಸರ್ವಾಧಿಕಾರದಿಂದ ಪದಾರ್ಥಗಳ ಬೆಲೆ ಏರಿ ಅವನ್ನು ಕೊಂಡು ತಿನ್ನುವ ಮಹಾಜನಕ್ಕೆ ಪ್ರತಿಕೂಲವಾಗದಿರುವಂತೆ ಸರಕಾರ ವ್ಯವಸ್ಥೆಮಾಡಬೇಕಾಗುವುದು. ಈ ವ್ಯವಸ್ಥೆ ಮೂರು ಬಗೆಯಾಗಿರಬಹುದು:—

(೧) ಕೆಲವು ನಿಯಮಗಳನ್ನು ಮಾಡಿ ವಿಧಿಸಿ, ಈ ಮಿತಿಗೆ ಮೀರಿ ಪದಾರ್ಥಗಳ ದರಗಳನ್ನೇರಿಸಕೂಡದು, ಇಂತಹ ಸ್ಪರ್ಧೆ ಸರಿಯಲ್ಲ ಎಂದು ಮುಂತಾಗಿ ಶಾಸನವೇರ್ಪಡಿಸುವುದು.

(೨) ಕಂಪನಿಯ ಚಾಲಕ ಮಂಡಲಿಯಲ್ಲಿ ತಮ್ಮ ಪ್ರತಿನಿಧಿಯನ್ನಿಟ್ಟು ಅದರ ಆಲೋಚನೆಯಲ್ಲಿ ಧ್ವನಿ ಸೇರಿಸಿ ಕಾರ್ಯದಲ್ಲಿ ಕೈಬೆರಸಿ ಎಲ್ಲವನ್ನೂ ಸುಭಿಕ್ಷಕ್ಕೆ ನಡಸುವುದು; ಬೇಕಾದರೆ ತಾವೂ ಬಂಡವಾಳದಲ್ಲಿ ಭಾಗ ಹಾಕಿ ಅಧಿಕಾರಪಡೆಯುವುದು.

(೩) ಅದೂ ಸಾಲದೆಂದರೆ—ಇಂತಹ ಕಂಪನಿಗಳು ಸಾಹುಕಾರಿ ಜನರ ಕೈಯಲ್ಲಿರುವುದರಿಂದ ಪ್ರಜಾಸಾಮಾನ್ಯಕ್ಕೆ ಸಾಧಕಕ್ಕಿಂತ ಬಾಧಕವೇ ಹೆಚ್ಚು ಎಂದು ತಿಳಿದರೆ ಅವನ್ನು ತನ್ನ ವಶಕ್ಕೆ ತೆಗೆದುಕೊಂಡು ನಡಸುವುದು. ಅವು ಖಾಸಗಿ ಜನರ ಕೈಯಲ್ಲಿರುವವರೆಗೂ ಅವುಗಳ ಲೆಕ್ಕಪತ್ರ ಮತ್ತು ಲೇವಾದೇವಿ ವ್ಯವಹಾರ ವಿಚಾರವನ್ನು ವೃತ್ತಪತ್ರಿಕೆಗಳೂ ಸರಕಾರದ ಮೇಲ್ತನಿಖೆಯೂ ತಿದ್ದುವ ಮತ್ತು ಒಂದು ಹದದಲ್ಲಿಡುವ ಪ್ರಯತ್ನ ನಡೆಯುವುದು. ಈ ವಿಮರ್ಶೆ ಎಷ್ಟು ಚೆನ್ನಾಗಿ ನಡೆಯುವುದೆಂಬುದು ಸಮಾಜ ಕ್ಷೇಮಸಾಧಕ ಯಂತ್ರಗಳ ಧರ್ಮಬುದ್ಧಿ, ಯೋಗ್ಯತೆ, ಕಾರ್ಯದಕ್ಷತೆ, ಇಂತಹ ಕಂಪನಿಗಳಿಗೇ ವಿಶೇಷವಾಗಿ ಸಂಬಂಧಿಸಿದ ಆಗಿನ ಜ್ಞಾನ ಎಷ್ಟು ಎಂಬುದಕ್ಕೆ ಒಳಪಡುವುದು.

**ಇಂಗ್ಲಂಡ್, ಜರ್ಮನಿ ಮತ್ತು ಅಮೇರಿಕಾದ ಪದ್ಧತಿಗಳು.**— ಕೈಗಾರಿಕೆಗೆ ಹಣವೊದಗಿಸುವಲ್ಲಿ ಇಂಗ್ಲಿಷ್ ಪದ್ಧತಿಗೂ ಜರ್ಮನ್ ಅಮೇರಿಕನ್ ಪದ್ಧತಿಗಳಿಗೂ ವ್ಯತ್ಯಾಸವುಂಟು. ಇಂಗ್ಲಂಡಿನಲ್ಲಿ ಆ ಕೆಲಸಕ್ಕೇ ಪ್ರತ್ಯೇಕ ಸಂಸ್ಥೆಗಳಿವೆ. ವ್ಯಾಪಾರದ ಬ್ಯಾಂಕುಗಳು ನೇರವಾಗಿ ಆ ಕೆಲಸಕ್ಕೆ ಕೈಹಾಕುವುದಿಲ್ಲ. ಜರ್ಮನಿಯಲ್ಲಿ ಬ್ಯಾಂಕುಗಳ ಕೈವಾಡ ಕೈಗಾರಿಕೆಗಳಲ್ಲಿ ಹೆಚ್ಚು; ಅಮೇರಿಕಾದಲ್ಲಿ ಕೈಗಾರಿಕೆಗಳ ಒಡೆಯರ ಪ್ರಭಾವ ದೇಶದ ಬ್ಯಾಂಕುಗಳಲ್ಲಿ ಹೆಚ್ಚು.

**ಇಂಗ್ಲಂಡ್.**— ಇಂಗ್ಲಿಷ್ ಬ್ಯಾಂಕ್ ಪ್ರಪಂಚದಲ್ಲಿ ಬೇಕಾದವರಿಗೆಲ್ಲ ಸಾಕಾದಷ್ಟು ಹಣ ದೊರೆಯುವ ಸೌಲಭ್ಯವಿದ್ದರೂ ವ್ಯಾಪಾರದ ಬ್ಯಾಂಕುಗಳು ಈ ಬಗೆಯ ನಿಡುಸಾಲಗಳನ್ನು ಒದಗಿಸುವುದಿಲ್ಲ. ದೊಡ್ಡ ರೈಲ್ವೆ ಕಂಪನಿ, ಹಡಗಿನ ಕಂಪನಿ, ಅಥವಾ ಪೇಟೆಯಲ್ಲಿ ತಕ್ಷಣ ಮಾರಾಟವಾಗುವ ಯಾವುದೋ ಕಂಪನಿಯ ಪತ್ರಗಳನ್ನು ಮಾತ್ರ ತಮ್ಮ ಹಣಸ್ಥಿತಿಯನ್ನು ನೋಡಿಕೊಂಡು ಕೊಂಡಿಡುವರು; ಅಥವಾ ಸ್ಟಾಕ್ ಎಕ್ಸ್ಚೇಂಜ್ ದಲ್ಲಾಳರಿಗೆ ಸಾಲಕೊಡುವರು; ಇಶ್ಯೂ ಹೌಸಸ್ ಎಂಬ ಅಂಗಡಿಗಳವರಿಗೆ ಸಹಾಯಮಾಡುವರು. ಆದುದರಿಂದ ಇವರ ಕಾರ್ಯ ಬಳಸು.

ತಮ್ಮ ಕೈಕಟ್ಟಿ ತಮಗೆ ಹಣ ಬೇಕಾದಾಗ ಆ ಸಾಲ ಸಹಾಯಗಳನ್ನೆಲ್ಲ ತಕ್ಷಣ ಹಿಂದಕ್ಕೆ ತೆಗೆದುಕೊಳ್ಳುವರು. ಹೀಗಾಗಿ ಬ್ಯಾಂಕುಗಳಿಗೆ ಕೈಗಾರಿಕೆ ಮಂಡಲಿಯೊಡನೆ ಹತ್ತಿರದ—ಆಪ್ತ—ಸಂಬಂಧವಿಲ್ಲ. ಬ್ಯಾಂಕಿನ ಹಣದ ಭದ್ರತೆ ಸುರಕ್ಷಿತವಾಗುವುದಾದರೂ ಕೈಗಾರಿಕೆ ಪ್ರಪಂಚದಲ್ಲಿ ಯಾವ ಹೆಚ್ಚಿನ ಪ್ರಭಾವವೂ ಇಲ್ಲದೆ ಅವುಗಳ ಓಟದ ಮೇಲೂ ಏಳಿಗೆಯ ಮೇಲೂ ಕೈಯಿಲ್ಲದಂತಾಗುವುದು. ಲಾಭಕೋರರಾಗಲಿ, ದುಸ್ಸಾಹಸಿಗಳಾಗಲಿ ಕೈಗಾರಿಕೆ ಯಂತ್ರವನ್ನು ಅವ್ಯವಸ್ಥೆಗೊಳಿಸುತ್ತಿದ್ದರೆ, ಇವರು ಯಾವ ವಿಧದಲ್ಲಿಯೂ ಅವರನ್ನು ತಡೆಯಲು ಶಕ್ತರಾಗುವುದಿಲ್ಲ.*

**ಜರ್ಮನಿ.**—ಫ್ರಾಂಚ್ ಬ್ಯಾಂಕುಗಳೂ ಸುಮಾರು ಹೀಗೆಯೇ. ಜರ್ಮನ್ ಬ್ಯಾಂಕುಗಳ ರೀತಿ ಬೇರೆ. ಧನವ್ಯವಹಾರ ವಿಚಕ್ಷಣೆ; ಒಮ್ಮೊಗದಲ್ಲಿ ನಾಲ್ಕಾರು ಸಂಸ್ಥೆಗಳ ಸಂಪತ್ತನ್ನು ಕೂಡಿಸುವ ಶಕ್ತಿ; ಇವೆಲ್ಲವನ್ನೂ ಲಾಭಕ್ಕೂ ಉತ್ಪತ್ತಿಗೂ ನಡೆಸಬಲ್ಲ ಜಾಣ್ಮೆ—ಇವಕ್ಕೆ ಜರ್ಮನಿಯವರೂ ಜಪಾನಿನವರೂ ಪ್ರಸಿದ್ಧರು. ಅಲ್ಲಿ ಬ್ಯಾಂಕುಗಳ ಕೆಲಸಕ್ಕೂ ಉತ್ಪತ್ತಿ ಮಂಡಲಿಕ್ಕೂ ಅತಿ ಹತ್ತಿರದ ಸಂಬಂಧವಿದೆ. ಬ್ಯಾಂಕುಗಳು ಉತ್ಪತ್ತಿ ಸಂಘದ ಚಾಲಕ ಅಥವಾ ಮಂತ್ರಿ ಮಂಡಲಿಯಲ್ಲಿ ತಮ್ಮ ಪ್ರತಿನಿಧಿಗಳನ್ನು ಇರಿಸಿ ಆಡಳಿತದಲ್ಲಿ ಸೇರುತ್ತಾರೆ. ಇತ್ತ ಆ ಮಂಡಲಿಗಳ ನಾಯಕರು ಬ್ಯಾಂಕಿನ ನೀತಿಯ ಆಲೋಚನೆಗೆ ನೆರೆಯುವರು. ಬ್ಯಾಂಕುಗಳವರು ಉತ್ಪತ್ತಿಯ ಪ್ರಮಾಣವೂ ಮಾರಾಟದ ಲಾಭವೂ ಹೆಚ್ಚಲು ಬೇಕಾದ ಸೌಕರ್ಯಗಳನ್ನು ಒದಗಿಸಲು ಸಿದ್ಧರಿರುತ್ತಾರೆ.

ಹಣ, ಕೈಗಾರಿಕೆ, ಯಾನ ಸೌಕರ್ಯ ಕಲ್ಪನೆ ಮೂರೂ ಒಂದರೊಡನೊಂದು ಸೇರಿ ನಡೆಯುವುವು. ಅಲ್ಲಿನ ಬ್ಯಾಂಕ್ ಪ್ರತಿನಿಧಿಗಳು ಪೇಟೆಗಳನ್ನು ಪರೀಕ್ಷಿಸುತ್ತಿರುವರು. ಅವರ ಗೊತ್ತಾದ ಕೆಲಸಗಳಲ್ಲಿ ಅಂಡರ್ ರೈಟಿಂಗ್ ಒಂದು. ಜರ್ಮನ್ ಬ್ಯಾಂಕುಗಳು ಸ್ಟಾಕು, ಸ್ವದೇಶಿ ಹುಂಡಿ

* ಈಗ ೧೫—೨೦ ವರ್ಷಗಳಿಂದ ಕೇಂದ್ರ ರಾಷ್ಟ್ರೀಯ ಸಂಸ್ಥೆಗಳ ಮೂಲಕವೂ ನೇರವಾಗಿಯೂ ಆಗಾಗ ಬ್ಯಾಂಕುಗಳು ಈ ಕೆಲಸಕ್ಕೆ ಹೆಚ್ಚು ನೆರವು ಕೊಡುತ್ತಿರುವುದುಂಟು. ಉದಾ.—ಲಾಂಕಾಷೈರಿನ ಹತ್ತಿಯ ಕಾರ್ಖಾನೆಗಳಿಗೆ ಕೊಟ್ಟ ಹಣ ಸಹಾಯ. ಬ್ರಿಟಿಷ್ ಟ್ರೇಡ್ ಕಾರ್ಪೊರೇಷನ್ ಮೂಲಕವೇ, ಎಕ್ಸ್‌ಪೋರ್ಟ್ ಕ್ರೆಡಿಟ್ ಸ್ಕೀಮ್ ಎಂಬ ವ್ಯಾಪಾರದ ಮರೆಯಲ್ಲಿಯೂ ಆಗಾಗ ಕೊಡುವ ಸಹಾಯ.

ಮತ್ತು ವಿನಿಮಯದ ಹುಂಡಿಗಳ ದಲ್ಲಾಳಿ ಕೆಲಸ ಮಾಡುವರು ; ವರ್ತಕತನ ವಿಟ್ಟುಕೊಂಡಿರುವವರು ಕಂಪನಿಗಳನ್ನು ಸ್ಥಾಪಿಸಲೂ ದೊಡ್ಡ ಬಂಡವಾಳಗಳನ್ನು ಒದಗಿಸಲೂ ನೆರವಾಗುವರು.

ಇಂಗ್ಲೆಂಡಿನಂತೆಯೇ ಇಲ್ಲಿಯೂ ಅನೇಕ ಸಣ್ಣ ಬ್ಯಾಂಕುಗಳು ಸೇರಿ ಸಮ್ಮೇಳನಗಳನ್ನೂ ಸಂಘಗಳನ್ನೂ (Amalgamations) ಮಾಡಿಕೊಂಡು ದೊಡ್ಡವಾಗುವುದುಂಟು. ಆದರೆ ಇಲ್ಲಿ ಸದಸ್ಯ ಬ್ಯಾಂಕುಗಳಿಗೆಲ್ಲಾ ಉತ್ಪತ್ತಿಕ್ಷೇತ್ರಗಳೂ, ವ್ಯಾಪಾರಕ್ಷೇತ್ರಗಳೂ, ಮಾರಾಟದ ಕಾರ್ಯಗಳೂ ಸೇರಿರುವುದರಿಂದ ಅವನ್ನು ನಡಸಿ, ವಿಸ್ತರಿಸಿ ಮೇಲ್ಗೆ ತರುವ ಕಾರ್ಯ ಮೊದಲಿಗಿಂತಲೂ ಹೆಚ್ಚು.*

ಯಾರಿಗಾದರೂ ಹೊಸದಾಗಿ ಒಂದು ಯೋಜನೆ ಹೊಳೆದು ಅದನ್ನು ಕಾರ್ಯಕ್ಕೂ ಫಲಕ್ಕೂ ತರಗಿಸಬೇಕಾದರೆ ಅತನು ಬ್ಯಾಂಕಿಗೆ ಹೋಗಿ ಅಲ್ಲಿನ ಕೈಗಾರಿಕೆ ಶಾಖೆಯ ಮುಂದೆ ತನ್ನ ಯೋಜನೆಯ ಸ್ವರೂಪವನ್ನೂ ಪ್ರಯೋಜನವನ್ನೂ ವಿವರಿಸಬಹುದು. ಆಗ ಆ ಭಾಗವನ್ನು ತಿಳಿದ ಅನುಭವಸ್ಥರು ಕೂಡಿ ಯೋಜನೆಯ ಯೋಗ್ಯತೆಯನ್ನು ಪರಿಶೀಲಿಸಿ ಅದಕ್ಕೆ ಬೆಲೆ ಕಟ್ಟುವರು. ಅದರ ಪ್ರಯೋಜನವಿಷ್ಟು, ಅಗತ್ಯವಾಗಿ ಹಣವೊದಗಿಸಬೇಕು ಎಂದು ಅವರು ಸಲಹೆಕೊಟ್ಟರೆ ಬ್ಯಾಂಕು ಅದನ್ನು ಫಲಕ್ಕೆ ತರಲು ಹಣವೊದಗಿಸುವ ಏರ್ಪಾಡುಮಾಡುವುದು. ಅದರ ಬಂಡವಾಳ ಪತ್ರಗಳನ್ನು ಸ್ಟಾಕ್ ಎಕ್ಸ್ಛೇಂಜಿನಲ್ಲಿಯೂ ಬಳಕೆಗೆ ತರುವುದು.

**ಅಮೇರಿಕಾ.**— ಇಲ್ಲಿಯೂ ಬ್ಯಾಂಕುಗಳಿಗೂ ಕೈಗಾರಿಕೆ ಕಂಪನಿಗಳಿಗೂ ಅಷ್ಟು ಸಂಬಂಧವಿದೆ. ಜರ್ಮನಿಯಲ್ಲಿ ಧನಿಕ ಮಂಡಲಿಗಳಿಗಿರುವ ಬಂಡವಾಳದ ಏಕಾಗ್ರತೆಗಿಂತಲೂ ಅಮೇರಿಕಾದಲ್ಲಿ ಅದರ ಪ್ರಭಾವ ಹೆಚ್ಚೆನ್ನಬಹುದು. ಆದರೆ ಜರ್ಮನಿಯಲ್ಲಿ ಬ್ಯಾಂಕುಗಳು ಎಷ್ಟು ವಿಚಕ್ಷಣೆಯಿಂದಲೂ, ಸೂಕ್ಷ್ಮದೃಷ್ಟಿಯಿಂದಲೂ, ಸಂವಿಧಾನ ಕೌಶಲದಿಂದಲೂ ನಡೆಯುವುವೋ ಆ ರೀತಿ ನಡೆಯುವುದಿಲ್ಲ. ಅಲ್ಲಿ ಹೆಚ್ಚು ಹಣ ಓಡಿಯಾಡಿದರೂ ಯುರೋಪಿನವರಲ್ಲಿ ಎಷ್ಟು ಎಚ್ಚರಿಕೆ, ಹಿಡಿತ, ಲೆಕ್ಕಾಚಾರ

* ಐದಾರು ದೊಡ್ಡ ಬ್ಯಾಂಕುಗಳು ಸುಮಾರು ೪೦೦ ಕೈಗಾರಿಕೆ ಕಂಪನಿಗಳ ಕಾರ್ಯಕಲಾಪಗಳಲ್ಲಿ ಭಾಗಿಗಳಾಗುತ್ತಾರೆ.

ಬುದ್ಧಿಗಳಿಂದ ಒಂದು ಸಂಪ್ರದಾಯ ನಡೆಯುವುದೊ, ಹಾಗೆ ನಡೆಯುವುದಿಲ್ಲ. ಕೇವಲ ಸಾಹಸದೃಷ್ಟಿಯೇ ಹೆಚ್ಚು. ದೊಡ್ಡ ಕಂಪನಿಗಳ ಸ್ವಾಳುವ ಕೋಟ್ಯಧೀಶ್ವರರು ಕೆಲವರು ಎಲ್ಲ ಕೈಗಾರಿಕೆ, ಮಾರಾಟ, ಪೈಪೋಟಿ ಕಾರ್ಯಗಳನ್ನು ತಮ್ಮ ವಶಮಾಡಿಕೊಂಡು ಸರ್ವಾಧಿಕಾರದಿಂದ ಪ್ರಬಲಿಸಬೇಕೆಂಬ ಉದ್ದೇಶ ಅಮೇರಿಕಾದಲ್ಲಿರುವಷ್ಟು ಬೇರೆಲ್ಲಿಯೂ ಇಲ್ಲ. ಕಾರ್ನೇಗಿ, ರಾಕ್‌ಫೆಲ್ಲರ್, ಫೋರ್ಡ್, ಮಾರ್ಗನ್, ವಾನಮೇಕರ್ ಮುಂತಾದವರ ಹೆಸರನ್ನು ಕೇಳದವರೇ ಇಲ್ಲ. ರೈಲ್ವೆ ಕಂಪನಿಗಳು, ಪೆಟ್ರೋಲ್ ಗಣಿಗಳು, ಲೋಹಸಾಧನೆ, ಉತ್ಪತ್ತಿಕಾರ್ಯಗಳು, ಬ್ಯಾಂಕ್ ಲೇವಾದೇವಿ, ಎಲ್ಲದರ ಮೇಲೂ ಅಧಿಪತ್ಯವಹಿಸುತ್ತ ತಮ್ಮ ಲಾಭಕ್ಕೆ ಬೇಕಾದಂತೆ ಅವರು ಲಕ್ಷ್ಯವಿಲ್ಲದೆ ಕೆಲಸಮಾಡುತ್ತಾರೆ. ಬ್ಯಾಂಕುಗಳನ್ನು ಯಾವ ಬಗೆಯಲ್ಲಿ ಸಂಸ್ಥಾಪಿಸಿದರೂ ಈ ಧನಿಕರ ಹಿಡಿಯಿಂದ ಬಿಡುಗಡೆಯಿಲ್ಲ.* ಒಂದರ ಬಾಂಡುಗಳನ್ನೂ ಸ್ಟಾಕುಗಳನ್ನೂ ಇನ್ನೊಂದು ಕಂಪನಿಯ ಮಾಲೀಕರೂ ಚಾಲಕರೂ ಕೊಂಡುಕೊಂಡರೆ, ಇದರಮೇಲಿನ ಅಧಿಕಾರವೆಲ್ಲ ಅವರ ಕೈಗೇ ಸಾಗುವುದು ತಾನೆ!

ಇನ್ನು ಕೆಲವು ಕಡೆ ವ್ಯಕ್ತಿಗಳಿಗೆ ಆಸ್ತಿಯ ಮೇಲ್ವಿಚಾರಣೆಯನ್ನು ವಹಿಸುವುದಕ್ಕೆ ಬದಲು ಟ್ರಸ್ಟೀ ಕಂಪನಿಗಳೆಂಬ ಸಂಸ್ಥೆಗಳಿಗೆ ವಹಿಸುವರು. ಅವೂ ಹಣ ಸಂಘಗಳೂ ಸೇರಿಕೊಂಡು ರೈಲ್ವೆ ಕಂಪನಿಗಳ ಮತ್ತು ಇತರ ಕೈಗಾರಿಕೆ ಕಂಪನಿಗಳ ಷೇರನ್ನೂ ಸ್ಟಾಕನ್ನೂ ಕೊಂಡು ನೇರವಾಗಿ ಸ್ವಾಧೀನಕ್ಕೆ ತೆಗೆದುಕೊಳ್ಳುವುದುಂಟು. ಅಥವಾ ಅವುಗಳ ಚಾಲಕರೊಡನೆ ಅನುಕೂಲವಾದ ಒಪ್ಪಂದಗಳನ್ನು ಮಾಡಿಕೊಳ್ಳುವರು. ತಮಗೆ ಪ್ರಯೋಜನವಾಗುವಂತೆ ಅವರ ಷೇರುದಾರರು ವೋಟುಕೊಡಬೇಕೆಂದು ಗೊತ್ತುಮಾಡಿಕೊಳ್ಳುವರು. ದೊಡ್ಡ ಕಂಪನಿಗಳು ಹೀಗೆ ಒಡಂಬಡಿಕೆ ಮಾಡಿಕೊಂಡು, ವ್ಯಾಪಾರ ಕೈಗಾರಿಕೆಗಳ ಏಳುಬೀಳುಗಳನ್ನೂ ಸ್ಟಾಕ್ ಎಕ್ಸ್‌ಛೇಂಜಿನ ಕೆಲಸವನ್ನೂ ವಿಧಿಯಂತೆ ನಡೆಸುವರು. ಯಾರನ್ನಾದರೂ ಎತ್ತಬಲ್ಲವರಾಗುವರು; ಯಾರನ್ನಾದರೂ ಮುರಿಯಬಲ್ಲವರಾಗುವರು: ಇಂತಹ ಕೆಲಸಕ್ಕೆ ಅಂತರ್‌ರಾಷ್ಟ್ರೀಯ ವಿಸ್ತಾರ ಬರುವುದೂ ಉಂಟು.

* ಆದುದರಿಂದಲೇ ರೂಸ್‌ವೆಲ್ಟ್ ಅವರು ಒಂದು ಹೊಸ ಕಟ್ಟನ್ನು ರಚಿಸಿ ತಮ್ಮ ರಾಷ್ಟ್ರದ ಉತ್ಪತ್ತಿ ಮಂಡಲದ ಮೇಲೆಲ್ಲ ಒಂದು ಪರಿಷ್ಕಾರಣವನ್ನು ತರಲು ಪ್ರಯತ್ನಪಡುತ್ತಿರುವುದು.

# ಅನುಬಂಧ

## ಕೂಡುಬಂಡವಾಳದ ಕಂಪನಿಗಳು

**ಕಂಪನಿಯ ನಿರ್ಮಾಣದಲ್ಲಿ ಕ್ರಮ.** — ಕೂಡುಬಂಡವಾಳದ ಹೊಸ ಕಂಪನಿಯೊಂದು ಹೇಗೆ ನಿರ್ಮಾಣವಾಗುವುದು ಎಂಬುದನ್ನು ನೋಡೋಣ: ಅದು ಏರ್ಪಡುವ ಗತಿಯಲ್ಲಿ ಮೂರು ಹೆಜ್ಜೆಗಳುಂಟು :—

(೧) ಕಂಪನಿ ಕಾರ್ಖಾನೆಗಳನ್ನು ಈ ಈ ಕೆಲಸಕ್ಕಾಗಿ ಸ್ಥಾಪಿಸಿದರೆ ಲಾಭವುಂಟು ಎಂದು ತಿಳಿದು ಅವನ್ನು ಏರ್ಪಡಿಸಲು ತರದೂದು ಮಾಡುವ ಮುಂದಾಳುತನ ಮೊದಲನೆಯದು; ಈ ಹೆಜ್ಜೆಗೆ ಇಂಗ್ಲಿಷಿನಲ್ಲಿ ಪ್ರಮೋಷನ್ ಎನ್ನುವರು.

(೨) ಅದಕ್ಕೆ ಬಂಡವಾಳವನ್ನು ಒದಗಿಸಲು ಧನಿಕ ವರ್ತಕ ಮಂಡಲಿಗಳ ಮುಂಗಡದ ಒಪ್ಪಿಗೆಯನ್ನು ಪಡೆಯುವ ಎರಡನೆಯದಕ್ಕೆ ಅಂಡರ್ ರೈಟಿಂಗ್ ಎಂದು ಹೆಸರು.

(೩) ಸಾರ್ವಜನರು ಬಂಡವಾಳದ ಷೇರುಗಳನ್ನು ಕೊಂಡುಕೊಳ್ಳುವಂತೆ ಪ್ರಕಟನೆಯನ್ನು ಮಾಡಿ ಚಂದಾದಾರರಾಗಲಿಚ್ಛಿಸುವವರಿಗೆಲ್ಲಾ ಷೇರುಗಳನ್ನು ಹಂಚುವುದು ಮೂರನೆಯದು. ಇದಕ್ಕೆ ಇಶ್ಯೂ ಎನ್ನುವರು.

**(೧) ಮುಂದಾಳುತನ — ಕಲ್ಪನೆ — ಪ್ರಯತ್ನ** (Promotion).— ಹೊಸ ಕಂಪನಿಗಳನ್ನು ಸ್ಥಾಪಿಸುವುದಕ್ಕೂ, ಹಳೆಯ ಕಂಪನಿಗಳನ್ನು ವಿಸ್ತರಿಸುವುದಕ್ಕೂ ಪ್ರತ್ಯೇಕವಾಗಿ ಕೆಲಸಮಾಡುತ್ತಿದ್ದ ಕೆಲವು ಕಂಪನಿಗಳನ್ನು ಸೇರಿಸಿ ಒಂದು ಹೊಸ ಸಂಘವನ್ನು ಏರ್ಪಡಿಸುವುದಕ್ಕೂ ಒಂದು ಬಗೆಯ ಜನ ಒದಗುತ್ತಾರೆ. ಕೆಲವು ಕೆಲಸಗಳಲ್ಲಿ ಮುಂದೆ ಬಹಳ ಪ್ರಯೋಜನವಿದೆ; ಈಗಿರುವುದನ್ನು ಬಹಳವಾಗಿ ಬೆಳಸಬಹುದು ಎಂಬ ಅಂಶ ಎಲ್ಲರಿಗೂ ತಿಳಿದಿರುವುದಿಲ್ಲ. ಕುಶಲಿಯಾದ ದೂರಾಲೋಚನಾಪರನಾದ ಒಬ್ಬನಿಗೆ ಈ ಅವಕಾಶ ತಿಳಿಯುವುದು. ಅವನು ಮುಂದೆ ಬಂದು ಆ ಗುರಿಯನ್ನು ಸಾಧಿಸಲು ತೊಡಗುವನು; ಇರುವ ಸಂಸ್ಥೆಗೆ ಹೆಚ್ಚು ಲಾಭ ಬರುವ ಮಾರ್ಗವನ್ನು ತೋರಿಸುವನು. ಯಾವುದಾದರೊಂದು

ಪ್ರದೇಶದಲ್ಲಿ ಒಂದು ವಿಶೇಷ ವ್ಯವಸಾಯ ಕಾರ್ಯವನ್ನೊ, ಲೋಹ ಸಂಗ್ರಹ ಕಾರ್ಯವನ್ನೊ, ಲಾಭಕರವಾಗಿ ನಡಸಬಹುದೆಂದು ಅನೇಕರಿಗೆ ಗೊತ್ತಿಲ್ಲದಿರಬಹುದು. ಅಜ್ಞಾನದಿಂದಲೊ, ಧನ ಸಂಪತ್ತಿಯಿಲ್ಲದ್ದರಿಂದಲೊ, ಕಾರ್ಯಸಾಹಸವಿಲ್ಲದ್ದರಿಂದಲೊ ಆ ಪ್ರದೇಶದ ಜನರು ಎದುರಿಗಿರುವ ಪ್ರಯೋಜನವನ್ನು ದೂಡಿಸಿಕೊಳ್ಳದಿರಬಹುದು. ಈತನು ಮುಂದೆ ಬಂದು ಅಲ್ಲಿಗೆ (ಉದಾ.—ಒಂದು ರೈಲ್ವೆ ಹಾಕಿಸಿ) ಪ್ರಕೃತಿದತ್ತವಾದ ಅಲ್ಲಿನ ಸಂಪತ್ತನ್ನೆಲ್ಲಾ ದೂಡಿಸುವ ಹೊಸ ಕೈಗಾರಿಕೆ ಸಂಸ್ಥೆಯನ್ನು ಏರ್ಪಡಿಸಲು ನೆರವಾಗುವನು. ಇದರಿಂದ ಅವನಿಗೂ ಇತರರಿಗೂ ದೇಶಕ್ಕೂ ಎಲ್ಲರಿಗೂ ಲಾಭ.

ಎಲ್ಲಿ ಯಾರು ಹೊಸ ಯಂತ್ರವನ್ನು ನಿರ್ಮಾಣಮಾಡುತ್ತಿದ್ದಾರೆ; ಹೊಸ ಉತ್ಪತ್ತಿ ವಿಧಾನಗಳನ್ನು ಕಂಡುಹಿಡಿಯುತ್ತಿದ್ದಾರೆ; ಯಾವ ಬಗೆಯ ಪದಾರ್ಥಗಳಿಗೆ ಎಲ್ಲಿ ಗಿರಾಕಿ ದೊರೆಯಬಹುದು; ಎಲ್ಲಿಗೆ ರೈಲ್ವೆ, ರಸ್ತೆ, ಯಾನವಾಹನ ಸೌಕರ್ಯ ಬೇಕಿವೆ; ಎಲ್ಲಿನ ಯಾವಯಾವ ಕೈಗಾರಿಕೆ ಕಾರ್ಯರಂಗಗಳನ್ನು ಒಂದುಗೂಡಿಸಬಹುದು—ಇಂಬುದರ ಮೇಲೆಯೇ ಇಂಥವರು ಕಣ್ಣಿಟ್ಟಿರುವರು. ಪರೀಕ್ಷಿಸುತ್ತ ಯಾವ ಎದುರಾಳಿಗಳ ಸ್ಪರ್ಧೆಯಿಂದ ಎಷ್ಟು ನಷ್ಟವೆಂದೂ, ಯಾವ ಕೆಲಸದಿಂದ ವೆಚ್ಚಗಳು ಕಡಮೆಯಾಗಿ ಲಾಭ ಹೆಚ್ಚಾದೀತೆಂದೂ ಯೋಚಿಸುತ್ತಿರುವರು. ಜೊತೆಸೇರಿಯಾಗುವ ಕಂಪನಿಗಳನ್ನು ಒಂದುಗೂಡಿಸಬೇಕೆಂಬ ಯೋಜನೆ ಪ್ರೊಮೋಟರಿಗೆ ಹೊಳೆದರೆ ಪ್ರತಿಯೊಬ್ಬರಲ್ಲಿಗೂ ಹೋಗಿ, ಅವರನ್ನು ತನ್ನ ಯೋಜನೆಗೆ ಒಪ್ಪಿಸಿ ಆಗಲೇ ಅವರ ಕೈಗೆ ಸಂಚಕಾರ ಹಾಕಿ, ಇಷ್ಟು ಎಂದು ಗೊತ್ತಾದ ಕಾಲದೊಳಗಾಗಿ ಅವರ ಕಾರ್ಖಾನೆ ಕಾರ್ಯಾಲಯಗಳನ್ನು ಕೊಳ್ಳುವ ಮುಂಗಡದ ಹಕ್ಕನ್ನು (Option) ಪಡೆದುಕೊಳ್ಳುವನು. ಈ ಈ ಷರತ್ತುಗಳಿಗೆ ಒಳಪಟ್ಟು ಕೊಳ್ಳುವೆನೆಂದೂ, ಕಂಪನಿಯ ವಶದಲ್ಲಿರುವ ಎಲ್ಲ ಹಣಪತ್ರ ಸಾಲಪತ್ರ ವ್ಯಾಪಾರ ಪತ್ರಗಳನ್ನೂ ಒಪ್ಪಂದದ ಪ್ರಕಾರ ಅವರು ತನಗೆ ಒಪ್ಪಿಸಬೇಕೆಂದೂ ಮಾತು ಮಾಡಿಕೊಳ್ಳುವನು. ಹಿಂದೆಬಿದ್ದ ಅಥವಾ ಹಳದಾದ ಯಂತ್ರಾದಿಗಳನ್ನೂ ಕಾರ್ಯಶಾಲೆಗಳನ್ನೂ ಹೊಸ ಕೆಲಸಕ್ಕೆ ಪ್ರಯೋಜನವಾಗು

ವಂತೆ ಹೇಗೆ ಒದಗಿಸಿಕೊಳ್ಳುವುದು, ಹಳೆಯದು ಯಾವ ಯಾವುದನ್ನು ಗುಡಿಸಿಹಾಕಬೇಕು (Scrap) ಎಂಬುದನ್ನು ಗುಣಿಸುವನು. ಆಮೇಲೆ—ಆತನ ಕೈಯಲ್ಲಿಯೆ ಇದಕ್ಕೆಲ್ಲ ಬೇಕಾಗುವ ಹಣವಿರುವುದು ಅಪರೂಪವಾದ್ದರಿಂದ—ತನಗೆ ತಿಳಿದ ಧನಿಕರ ಬಳಿಗೆ ಹೋಗಿ ತನ್ನ ಉದ್ದೇಶವನ್ನು ಅವರಿಗೆ ಅರಿಕೆಮಾಡಿ, ಈವರೆಗೂ ತಾನು ನಡಸಿರುವ ಕೆಲಸವನ್ನೂ ಇನ್ನು ಮುಂದೆ ಮಾಡಬೇಕಾಗಿರುವುದರ ವಿವರವನ್ನೂ ತಿಳಿಸುವನು. ಇಷ್ಟು ಬಂಡವಾಳ ದೊರೆತರೆ ಖಂಡಿತ ಇಷ್ಟಾದರೂ ಲಾಭ ಬರುವುದು ಎಂದು ಅವರಿಗೆ ನಂಬಿಕೆ ಬರುವಂತೆ ಹೇಳಿ, ಹೊಸದಾಗಿ ನಿರ್ಮಾಣಮಾಡಲಿರುವ ಕಂಪನಿಗೆ ಅವರು ಎಷ್ಟು ಬಂಡವಾಳವನ್ನು ಒದಗಿಸಬಲ್ಲರೊ ಕೇಳುವನು.

**(೨) ಹಣವೊದಗಿಸುವ ಮುಂಗಡದ ಒಪ್ಪಿಕೆ** (Underwriting).—ಕೆಲಸ ಈಗ ಎರಡನೆಯ ಮೆಟ್ಟಿಗೆ ಸಾಗಿದಂತಾಯಿತು. ಅವರಿಗೆ ಈತನ ಯೋಜನೆಯು ಪ್ರಯೋಜನ ತೋರಿದರೆ ತಾವು ಇಷ್ಟರವರೆಗೆ ಬೇಕಾದರೆ ಹಣವನ್ನು ಒದಗಿಸುವೆನೆಂಬ ಮಾತು ಕೊಡುವರು. ಸಾಮಾನ್ಯವಾಗಿ ಅವರು ತಕ್ಷಣ ಹಣ ಕೊಡುವುದಿಲ್ಲ. ಮಹಾಜನರು ಷೇರುಪತ್ರಗಳನ್ನೂ ಡಿಬೆಂಚರ್ ಬಾಂಡುಗಳನ್ನೂ ಕೊಳ್ಳದೆ ಹೋದರೆ ತಾವು ಹಣವನ್ನು ಒದಗಿಸಿ ಆ ಪತ್ರಗಳನ್ನು ಕೊಳ್ಳುವೆವೆಂದು ಮಾತುಕೊಡುವರು. ಜನರಿಗೆ ಹೇಳುವ ದರಕ್ಕಿಂತಲೂ ಶೇಕಡ ೧೦—೨೦ರಂತೆ ಕಡಮೆ ದರ ಈ ಬಂಡವಾಳಸ್ಥರಿಗೆ ಸಿಕ್ಕುತ್ತದೆ. ತಾನು ಆಸ್ತಿಗಳನ್ನು ಕೊಳ್ಳುವ ಹಕ್ಕಿಗಾಗಿ ಯಾವ ದರವನ್ನು ಹೇಳಿದ್ದಾನೆ, ಹೊಸ ಕಂಪನಿಗೆ ಹಣ ಹೇಗೆ ಒದಗುತ್ತದೆ ಎಂದು ನೋಡಿ ಆ ಒಡಂಬಡಿಕೆ ಹಣಕ್ಕೂ ಇದಕ್ಕೂ ತಾಳೆ ಹಾಕಿ, ನಡುವೆ ತನಗೆ ಏನಾದರೂ ಕೈತುಂಬ ಉಳಿಯುವಹಾಗಿದ್ದರೆ ಮಾತ್ರ ಹೊಸ ಕಂಪನಿಯನ್ನು ಏರ್ಪಡಿಸಲು ಈ ಉತ್ಸಾಹ ಸಾಹಸಿ ಮುಂದೆ ಬರುವನು. ತನ್ನ ಬುದ್ಧಿವಂತಿಕೆಯನ್ನೆಲ್ಲ ಲೋಕಾನುಭವವನ್ನೆಲ್ಲ ವೆಚ್ಚಮಾಡಿ ಹಿಂದಿನ ಯಜಮಾನರು ತಮ್ಮ ಆಸ್ತಿಗಳನ್ನು ಮಾರುವಂತೆ ಆತನು ಒಡಂಬಡಿಸಬೇಕಾಗುತ್ತದೆ.

**(೩) ಪ್ರಕಟನೆ—ಬಂಡವಾಳದ ಹಕ್ಕು ಹಂಚುವುದು** (Issue).—ಜನರಿಗೆ ಈ ಹೊಸ ಕಂಪನಿಯ ಬಂಡವಾಳದಲ್ಲಿ ಷೇರು ತೆಗೆದುಕೊಂಡರೆ

ಲಾಭವುಂಟು ಎಂಬ ನಂಬಿಕೆ ಹುಟ್ಟಿಸಲು ಕೂಡ ಅವನು ಬಹಳ ಹಣವನ್ನು ವೆಚ್ಚಮಾಡಬೇಕಾಗುವುದು. ಆಗ ಒಬ್ಬ ದೊಡ್ಡ ವಕೀಲರು, ಲೆಕ್ಕಾಚಾರಗಳನ್ನು ಪರಿಶೀಲನೆ ಮಾಡುವ ಒಬ್ಬ ತನಿಖೆಯವರು, ದೇಶದಲ್ಲಿನ ಒಂದು ದೊಡ್ಡ ಬ್ಯಾಂಕು, ಇವರುಗಳಿಗೆ ಈ ಸಂಗತಿಯನ್ನು ಹೇಳಿ ಅವರ ಸಹಾಯ ಹೊಸ ಕಂಪನಿಗೆ ದೊರೆಯುವಂತೆ ಮಾಡಿಕೊಂಡು, ಪ್ರಕಟನಾ ಪತ್ರದಲ್ಲಿ ಅವರ ಹೆಸರುಗಳನ್ನು ಹಾಕಲು ಅವರ ಒಪ್ಪಿಗೆ ಪಡೆದು, ಕಂಪನಿಯ ಹೆಸರು, ಅದರ ಉದ್ದೇಶ, ಕೆಲಸದ ವಿವರ, ರೀತಿ, ಇಷ್ಟು ಲಾಭ ಬಂದೀತೆಂಬ ಊಹೆ, ಅದಕ್ಕಾಗಿ ಬಂದು ಕೆಲಸಮಾಡುವವರ ಹೆಸರು, ಷೇರುಗಳನ್ನು ಕೊಂಡು ಡೈರೆಕ್ಟರುಗಳಾಗಲು ಈಗಾಗಲೆ ಒಪ್ಪಿರುವ ನಂಬಿಕಸ್ಥರಾದ ದೊಡ್ಡಮನುಷ್ಯರ ಹೆಸರು, ಒಟ್ಟು ಕಂಪನಿಗೆ ಬೇಕಾಗಬಹುದಾದ ಬಂಡವಾಳದ ಮೊತ್ತ, ಅದನ್ನು ಎಷ್ಟು ಷೇರು (ಅಂಶ, ಭಾಗ) ಗಳಾಗಿ ವಿಂಗಡಿಸಿದೆ, ಷೇರು ಚಂದಾವನ್ನು ಸಲ್ಲಿಸುವ ರೀತಿ ಯಾವುದು ಎಂಬ ಸಂಗತಿ, ಷೇರುದಾರರಿಗೆ ಏರ್ಪಡಿಸಿರುವ ಹಕ್ಕು ಅನುಕೂಲಗಳು ಮುಂತಾದ ಅಂಶಗಳನ್ನೊಳಗೊಂಡ ಪ್ರಕಟನಾ ಪತ್ರಿಕೆಯೊಂದನ್ನು (Prospectus) ಹೊರಡಿಸುತ್ತಾರೆ. ಜನರು ಇದನ್ನು ಓದಿ ಅವರ ಆಸೆ ಕೆರಳಿದರೆ ಅಲ್ಲಿನ ಡೈರೆಕ್ಟರುಗಳ ಬ್ಯಾಂಕು ಆಡಿಟರುಗಳ ಹೆಸರನ್ನು ನೋಡಿ ಧೈರ್ಯಮಾಡಿ ಷೇರುಗಳನ್ನು ಕೊಂಡು ಬಂಡವಾಳದಲ್ಲಿ ಪಾಲುಗಾರರಾಗುವರು.

**ಪ್ರೊಮೋಟರು.**— ಯೋಗ್ಯರಾದ ಕಂಪನಿ ಸ್ಥಾಪಕರಿಂದ ಉತ್ತಮವಾದ ಕಂಪನಿಗಳು ಏರ್ಪಡುತ್ತವೆ. ಧನಿಕರ ಹಣ ಉತ್ತಮವಾದ ಕಾರ್ಯಗಳಿಗೆ ಹರಿದು ಲಾಭದ ಹೊಸ ದಾರಿಗಳು ತೆರೆಯುತ್ತವೆ. ಇವರು ಅಯೋಗ್ಯರಾದರೆ ಎಲ್ಲರಿಗೂ ನಷ್ಟ. ಮಾತಿನಿಂದ ಜನರನ್ನು ವಂಚಿಸಿ ಮೊದಲು ತಾವು ದುಡ್ಡುಮಾಡಿಕೊಂಡು ಕಂಪನಿ ಮುರಿದು ಬೀಳುವ ಮುನ್ನ ನೀಚರು ಅಲ್ಲಿಂದ ಜಾರಿಕೊಳ್ಳುವರು. ಅಂಥವರ ವಿಷಯದಲ್ಲಿ ಜನರು ಎಷ್ಟು ಎಚ್ಚರಿಕೆಯಿಂದಿದ್ದರೂ ಸಾಲದು. ಕಂಪನಿ ಪ್ರೊಮೋಟರ್ ಎಂಬ ಹೆಸರಿಗೇ ಈ ಬಗೆಯ ದುರ್ಮಾರ್ಗರು ಅಪಕೀರ್ತಿ ತಂದಿದ್ದಾರೆ.*

---

* **ಕಂಪನಿ ಮುಚ್ಚುವುದು.**— ಕಂಪನಿ ಚೆನ್ನಾಗಿ ನಡೆದು ಲಾಭ ಬರುತ್ತಿದ್ದರೆ ಎಲ್ಲಾ ಚೆನ್ನಾಗಿರುತ್ತದೆ. ಅದರ ಷೇರುದಾರರಾಗಲು ಜನರು ಆಸೆಪಡುತ್ತಾರೆ, ಷೇರಿನ ಬೆಲೆ

**ಅಂಡರ್‌ರೈಟಿಂಗ್ — ದಲ್ಲಾಳಿ.** — ಹೊರಗಿಂದ (ಮಹಾಜನರಿಂದ) ಬರುವ ಷೇರು ಹಣಕ್ಕಾಗಿ ಕಾಯುವ ಅಗತ್ಯವಿಲ್ಲದಂತೆ ಸ್ಥಾಪಕರೂ ಚಾಲಕರೂ ಒಂದು ಬಗೆಯ ದಲ್ಲಾಳಿ ಧನಿಕರ ಆಶ್ರಯವನ್ನು ಬೇಡುವರು ಎಂದು ಹೇಳಿತು. ಅವರಿಗೆ 'ಅಂಡರ್‌ರೈಟರ್ಸ್' ಎಂದು ಹೆಸರು. ಅವರು ಸಾಹುಕಾರರಾಗಿರಬಹುದು, ಸಂಘಗಳಾಗಿರಬಹುದು, ಅಥವಾ ಬ್ಯಾಂಕುಗಳಾಗಿರಬಹುದು. ಕೇವಲ ಅಂಡರ್‌ರೈಟಿಂಗ್ ಕೆಲಸಕ್ಕೇ ಒದಗುವ ವರ್ತಕರೂ ಕಂಪನಿಗಳೂ ಅನೇಕವಿರುವುದುಂಟು. ಅವರು ಕಂಟ್ರಾಕ್ಟು ದಲ್ಲಾಳರು. ಹಿಂದಿನಿಂದ ನಡೆಯುತ್ತಿರುವ ದೊಡ್ಡ ಕಂಪನಿಗೆ ಹೊಸದಾಗಿ ಹಣ ಬೇಕಾದಾಗ ಅವರ ಕಾಯಂ ದಲ್ಲಾಳನು (Broker) ಮುಂದೆ ಬಂದು ತಾನು ಹೇಗಾದರೂ ಆ ಹಣವನ್ನು ಒದಗಿಸುವೆನೆಂದು ಮಾತುಕೊಡುವನು. ಅವನಿಗೆ ಕಂಪನಿಯ ಯೋಗ್ಯತೆಯೂ ಸ್ಥಿತಿಯೂ ಚೆನ್ನಾಗಿ ಗೊತ್ತು. ಅದಕ್ಕೆ ತಕ್ಕಂತೆ ದಲ್ಲಾಳಿ ಕೇಳುವನು. ಪ್ರಸಿದ್ಧ ಕಂಪನಿಗೂ ಸರಕಾರಕ್ಕೂ ಸಾಲ ಬೇಕಾದರೆ ದರ ಕಡಿಮೆಯಾಗುವುದು. ಹೊಸ ಕಂಪನಿಗಳಿಗೂ ಕೈಗಾರಿಕೆಯ ಸಾಹಸೋದ್ಯಮಕ್ಕೂ ಸ್ವಲ್ಪ ಹೆಚ್ಚು.

## ಷೇರುಗಳು

ಕಂಪನಿಯ ಬಂಡವಾಳವನ್ನು ಷೇರು ಷೇರಾಗಿ ಕೊಳ್ಳುವವರಲ್ಲಿ ಬಗೆಬಗೆಯ ಧಾರಾಳವಿರುತ್ತದೆ; ಆಶೆಯಿರುತ್ತದೆ: ಕೆಲವರಿಗೆ ಹಣ ಭದ್ರವಾಗಿರಬೇಕು. ಕೆಲವರಿಗೆ ಹೆಚ್ಚು ಲಾಭ ಬೇಕು. ಅದಕ್ಕೆ ತಕ್ಕಂತೆ ಷೇರುಗಳು ಹುಟ್ಟಿರುತ್ತವೆ. ಷೇರುಗಳಲ್ಲಿ ಎರಡು ಬಗೆ: (೧) ಪ್ರಿಫರೆನ್ಸ್ ಷೇರು, (೨) ಆರ್ಡಿನರಿ ಅಥವಾ ಸಾಧಾರಣ ಷೇರು. ಕಂಪನಿಯ

---

ಹೆಚ್ಚುತ್ತಿರುವ ಚೆನ್ನಾಗಿ ನಡೆಯದ ನಷ್ಟ ಸಂಭವಿಸುವ [illegible] ಷೇರುಗಳನ್ನು ಮಾರುವ ಸಂಭವಗಳುಂಟಾಗುತ್ತವೆ. ಆಗ ಅದರ ಬೆಲೆ ಇಳಿಯುತ್ತದೆ. ಕೆಲವು ಅವ್ಯವಸ್ಥವಾದರೆ ಕಡೆಗೆ ಮಹಾಜನರೆಲ್ಲರೂ ಮುಂದೆ ಬಂದು ಉತ್ತಮ ಕಂಪನಿಗಳನ್ನು ರದ್ದುಮಾಡತಕ್ಕದ್ದು ಎಂದು ಸರಕಾರದವರನ್ನು ಪ್ರಾರ್ಥಿಸಿ ಅವನ್ನು ಮುಚ್ಚಿಸಿರುವರು.

**ಮಿತ ಹೊಣೆಗಾರಿಕೆ.** — ಸಾಮಾನ್ಯವಾಗಿ ಈಗಿನ ಕೂಡುಬಂಡವಾಳದ ಕಂಪನಿಗಳೆಲ್ಲ ದೇಶದ ಕಾನೂನಿಗೆ ಒಳಪಟ್ಟು ಸರಕಾರದಲ್ಲಿ ರೆಜಿಸ್ಟರ್ ಆಗಬೇಕಾಗುತ್ತದೆ. ಅವುಗಳಲ್ಲಿ ಮಿತ ಹೊಣೆಗಾರಿಕೆಯೇ ಹೆಚ್ಚು. ಎಂದರೆ ಕಂಪನಿ ಬಿದ್ದು ಸಾಲ ಕೊಟ್ಟವರಿಗೆ ಸಾಲ ತೀರಿಸಬೇಕಾದಾಗ ಕಂಪನಿಯ ಬಂಡವಾಳದಲ್ಲಿ ಷೇರುದಾರರ ಷೇರು ಎಷ್ಟೋ ಅಷ್ಟು ಭಾಗದ ಸಾಲಕ್ಕೆ ಮಾತ್ರ ಅವರು ಹೊಣೆ. ಅವರ ಬಾಧ್ಯತೆ ಅಷ್ಟೇ.

ನಿವ್ವಳ ವರಮಾನವನ್ನು ಹಂಚುವಾಗ ಒಂದು ಗೊತ್ತಾದ ಬಡ್ಡಿಯನ್ನು ಪ್ರಿಫರೆನ್ಸ್ ಷೇರಿನವರಿಗೆ ಮೊದಲು ಹಂಚಿ ಉಳಿದುದನ್ನು ಸಾಧಾರಣ ಷೇರುದಾರರಿಗೆ ಲಾಭವಾಗಿ ಹಂಚುವರು. ಮೊದಲನೆಯವರಿಗೆ ಬಡ್ಡಿಯಾದರೂ ಗಟ್ಟಿ; ಎರಡನೆಯವರಿಗೆ ಯಾವುದೂ ನಿಶ್ಚಯವಿಲ್ಲ. ಶೇಷಭಾಗಗಳು ಅವರು. ಎಲ್ಲ ನಷ್ಟವನ್ನೂ ಹೊರುವರಾದ್ದರಿಂದ ನಿವ್ವಳ ಲಾಭವನ್ನು ಅವರೇ ಹಂಚಿಕೊಳ್ಳುವರು. ಕಂಪನಿಯ ಆಡಳಿತವೆಲ್ಲ ಸಾಧಾರಣ ಷೇರುದಾರರ ಮತ್ತು ಅವರು ತಮ್ಮ ವೋಟಿನ ಮೂಲಕ ಆರಿಸುವ ಚಾಲಕ ಮಂಡಳಿಯವರ ಕೈಯಲ್ಲಿರುತ್ತದೆ. ಒಂದು ಷೇರಿಗೆ ಒಂದು ವೋಟಿರುವುದರಿಂದ ಸಾಹಸಿಗಳಾದ ಬಂಡವಾಳಸ್ಥರು ಹಲವು ಸಾಧಾರಣ ಷೇರುಗಳನ್ನು ಕೊಂಡು ಪ್ರಬಲರಾಗುವರು.

## ಡಿಬೆನ್ಚರುಗಳು

ಕಂಪನಿ ಸಾಲವೆತ್ತಿದರೆ ಸಾಲಪತ್ರಗಳನ್ನು ಕೊಂಡಿರುವ ಸಾಹುಕಾರರಿಗೆ ಕಂಪನಿ ಬರೆದುಕೊಡುವ ಆಧಾರಪತ್ರಗಳಿಗೆ ಡಿಬೆನ್ಚರುಗಳೆಂದು ಹೆಸರು. ಕಂಪನಿಯ ಆಸ್ತಿ ಈ ಸಾಲಕ್ಕೆ—ಎಂದರೆ ಡಿಬೆನ್ಚರ್ ಪತ್ರದ ಒಡೆಯರಿಗೆ ಹೊಣೆ. ಕಂಪನಿಗೆ ಲಾಭ ಬರಲಿ ಬಾರದಿರಲಿ ಕೈಹಣದಿಂದ ಈ ಪತ್ರಗಳವರಿಗೆ ಮೊದಲು ಬಡ್ಡಿ ತೆರಬೇಕು. ಸಕಾಲಕ್ಕೆ ಬಡ್ಡಿ ಸಲ್ಲದೆ ಹೋದರೆ ಕೋರ್ಟಿನ ಮೂಲಕ ಕಂಪನಿಯ ಆಸ್ತಿಗಳನ್ನು ಜಪ್ತಿಮಾಡಿ ಪೇಟೆಯಲ್ಲಿ ಹರಾಜುಮಾಡಿಸಿ ಇವರು ತಮ್ಮ ಹಣವನ್ನು ಬರಮಾಡಿಕೊಳ್ಳಬಹುದು. ಕಂಪನಿಯ ರುಜುವೂ ಮುದ್ರೆಯೂ ಇದ್ದು ಈ ಪತ್ರಗಳು ಬರೆದಿರುತ್ತವೆ. ಹೇಗೇ ಇರಲಿ ಸಾರಿದ ತಕ್ಷಣ ಖಂಡಿತವಾಗಿ ಹಣ ಬಂದೇ ಬರುವುದೆಂಬ ನಂಬಿಕೆಯಿಲ್ಲದಿದ್ದರೂ ಷೇರುದಾರರಿಗಿಂತ ಮುಂಚೆ ಕಂಪನಿಯ ಹಣದಿಂದಲೇ ಇವರಿಗೆ ಬಡ್ಡಿ ಸಲ್ಲುವ ನಿಶ್ಚಯವಿದೆ. ಆದ್ದರಿಂದ ಇವುಗಳ ಮೇಲೆ ತೆರುವ ಬಡ್ಡಿಯ ದರ ಕಡಮೆ.

**ಷೇರು, ಸ್ಟಾಕು.**—ಕಂಪನಿಯ ಪತ್ರಗಳ ಮಾರಾಟ ಕೊಳ್ಳಾಟದಲ್ಲಿ ಷೇರು, ಸ್ಟಾಕು ಎಂಬ ಪದಗಳನ್ನು ಉಪಯೋಗಿಸುವುದುಂಟು. ಷೇರು ಸಾಧಾರಣವಾಗಿ ೫, ೧೦, ೨೦, ೫೦, ೧೦೦ ಹೀಗೆ ರೂಪಾಯಿ (ಆಯಾ

ದೇಶದ ಮೂಲನಾಣ್ಯದ) ಗುಣಿತಗಳ ಮೊತ್ತದವಾಗಿರುತ್ತದೆ. ಕೊಳ್ಳುವವರು ಇಷ್ಟು ಷೇರುಗಳನ್ನೆಂದು ಕೊಳ್ಳುತ್ತಾರೆ. ಕಂಪನಿಯ ಬಂಡವಾಳವನ್ನು ಸೂರು ಅಥವಾ ಸೂರರ ಗುಣಿತಗಳಾಗಿ ಭಾಗಿಸಿ ಅವುಗಳನ್ನು ಸ್ಟಾಕ್ ಎನ್ನುವರು. ಷೇರಿನ ಧಾರಣೆಯನ್ನು ತಿಳಿಸಬೇಕಾದರೆ ಷೇರಿಗೆ ಇಷ್ಟು ಎಂದೂ ಸ್ಟಾಕನ್ನು ಸೂರಕ್ಕೆ ಇಷ್ಟು ಎಂದೂ ಬೆಲೆ ಹೇಳುವುದು ಪೇಟೆಯಲ್ಲಿ ವಾಡಿಕೆ. ಒಬ್ಬರಿಂದೊಬ್ಬರಿಗೆ ವರ್ಗಾಯಿಸಬೇಕಾದರೆ ಇಡಿ ಷೇರುಗಳನ್ನೆ ವರ್ಗಾಯಿಸಬೇಕು. ಸ್ಟಾಕನ್ನು ಗೊತ್ತಾದ ಗುಣಿತಗಳಲ್ಲಿ (Stated Multiples) ಅಥವಾ ಗೊತ್ತಾದ ಮೊತ್ತಗಳಿಗೆ ಮಾತ್ರ ಮಾಡಬಹುದು. ಷೇರು ಮೊಬಲಗನ್ನೆಲ್ಲ ಷೇರುದಾರರು ಕೊಟ್ಟಿಲ್ಲದೆ ಇರಬಹುದು. ಸ್ಟಾಕಿನ ಮೇಲಿನ ಹಣವೆಲ್ಲ ಕಂಪನಿಗೆ ಸಂದಿರುತ್ತದೆ.

# ಪ್ರಕರಣ ೭

## ಸ್ಟಾಕ್ ಎಕ್ಸ್‌ಛೇಂಜು

**ಸಾಮಾನ್ಯ ಸ್ವರೂಪ — ಕೆಲಸ.** — ಕೈಗಾರಿಕೆಗೆ ಬೇಕಾದ ನಿಡುಸಾಲಗಳನ್ನು ಒದಗಿಸುವ ಬಂಡವಾಳಸ್ಥರು, ನೇರವಾಗಿಯೊ, ಬ್ಯಾಂಕು, ಟ್ರಸ್ಟೀ ಕಂಪನಿ, ಇಶ್ಯೂ ಅಂಗಡಿ, ಬಾಂಡ್ ಅಂಗಡಿ, ವಿಮೆ ಕಂಪನಿ—ಮುಂತಾದವುಗಳ ಮೂಲಕವೊ ತಮ್ಮ ಹಣವನ್ನು ಇಂಥ ಯಾವ ಸಾಲಗಳಲ್ಲಿ ಎಷ್ಟು ಹೂಡುತ್ತಾರೆ? ಪತ್ರಗಳನ್ನೂ ಕಂಪನಿಗಳನ್ನೂ ಅವರು ಒಲಿಯುವ ಮತ್ತು ಆರಿಸಿಕೊಳ್ಳುವ ರೀತಿ ಹೇಗೆ? ಯಾವುದಾದರೂ ಒಂದು ಕಡೆ ತಮ್ಮ ಹಣವನ್ನೆಲ್ಲ ಹೂಡಿ ಮುಗಿಸದೆ ಬಗೆಬಗೆಯ ನಿಡುವಾಯಿದೆ ಬಡ್ಡಿಯ ಪತ್ರಗಳನ್ನು ಕೊಳ್ಳಲು ಏಕೆ ಬಯಸುತ್ತಾರೆ? ಆಸ್ತಿಪತ್ರಗಳನ್ನೂ ಬಡ್ಡಿಪತ್ರಗಳನ್ನೂ ಕೊಳ್ಳುವಾಗ ಸ್ವದೇಶಿ ವಿದೇಶಿ ಸಂಸ್ಥೆ ಕಾರ್ಯಾಲಯಗಳ ಸಂಪತ್ ಸ್ಥಿತಿಗೆ ಸಂಬಂಧಿಸಿದ ಅಂಶಗಳನ್ನೂ—ಯಾವ ಪತ್ರಗಳ ಬೆಲೆ ಎಷ್ಟು? ಏರುತ್ತಿದೆಯೆ, ಇಳಿಯುತ್ತಿದೆಯೆ ಎಂಬ ಸಂಗತಿಗಳನ್ನೂ ಹೇಗೆ ತಿಳಿದುಕೊಳ್ಳುತ್ತಾರೆ? ಗೊತ್ತಾಗಿ ಆಸ್ತಿಪತ್ರಗಳನ್ನು ಕೊಂಡು ಮಾರುವ ಕೇಂದ್ರ ಸಂಸ್ಥೆಗಳು ಅವರಿಗೆ ಸಹಾಯವಾಗುವುದು ಹೇಗೆ? ಅವುಗಳ ಸ್ವರೂಪ, ಕೆಲಸದ ರೀತಿ, ಪರಿಣಾಮ ಎಂಥವು? ವಿದೇಶಿ ಬಂಡವಾಳದ ಲಾಭ ನಷ್ಟಗಳೇನು? ಮುಂತಾದವನ್ನೆಲ್ಲ ವಿವರಿಸುವುದು ಇಲ್ಲಿ ಸಾಧ್ಯವಿಲ್ಲ. ಯಾವ ಪತ್ರಗಳಿಂದ ಲಾಭ ಬಹಳವೊ, ಅಸಲಿಗೆ ಮೋಸವಿಲ್ಲವೊ, ನಷ್ಟ ಕಡಮೆಯೊ ಅಂಥವಕ್ಕೆ ಹಣ ಹೂಡಲು ಜನರು ಆಸೆಪಡುವುದು ಸ್ವಾಭಾವಿಕ. ಒಂದೇ ಬಗೆಯ ಪತ್ರಗಳನ್ನು ಕೊಂಡು ಹಣವನ್ನೆಲ್ಲ ಒಂದು ಸಂಸ್ಥೆಯ ಮೇಲೆ ಹಾಕುವುದಕ್ಕೆ ಬದಲಾಗಿ ಬೇರೆಬೇರೆ ಹತ್ತು ಕಡೆ ಹಾಕಿ ಒಂದರ ನಷ್ಟವನ್ನು ಇನ್ನೊಂದರ ಲಾಭದಿಂದ ತುಂಬಿಕೊಳ್ಳುವುದು ಸಾಧ್ಯವಾಗುವಂತೆ ದೊಡ್ಡ ಹಣವಂತರೂ ಬಂಡವಾಳ ಸಂಸ್ಥೆಗಳವರೂ ಪತ್ರಗಳನ್ನು ಕೊಳ್ಳುವುದು ವಾಡಿಕೆ.* ಕೆಲವು ಪತ್ರಗಳ ಬೆಲೆ ಇಳಿಯುತ್ತಿರುವ ಕಾಲದಲ್ಲಿ ಇನ್ನು ಕೆಲವು

---

* ಅಲ್ಲದೆ, ಹಾಗೆ ಬಡ್ಡಿಗೆ ಹೂಡುವ ಸಂಸ್ಥೆಗಳೇ (ಇನ್‌ವೆಸ್ಟ್‌ಮೆಂಟ್ ಟ್ರಸ್ಟ್ಸ— Investment Trusts) ಹಲವಿರುತ್ತವೆ.

ದರ ಬೆಲೆ ಏರುತ್ತಿರಬಹುದಾದ ಕಾರಣ ಸಾಧ್ಯವಾದಮಟ್ಟಿಗೂ ತಮ್ಮ ಸಂಪಾದನೆ ಒಂದು ಹದದಲ್ಲಿ ನಿಲ್ಲುವಂತೆ ಈ ಬಗೆಯ ಸಂಸ್ಥೆಗಳೂ ವ್ಯಕ್ತಿಗಳೂ ಏರ್ಪಡಿಸಿಕೊಳ್ಳಬಹುದಾಗುವುದು. ಪತ್ರಗಳನ್ನು ಕೊಳ್ಳುವುದಕ್ಕೂ ಮಾರುವುದಕ್ಕೂ ಅವಕ್ಕೆ ಸಂಬಂಧಿಸಿದ ಸಂಗತಿಗಳನ್ನೆಲ್ಲ ತಿಳಿಸುವ ಜನರೂ ಸಂಸ್ಥೆಯವರೂ ಅನೇಕರಿರುವರು. ದೊಡ್ಡ ಬ್ಯಾಂಕುಗಳವರೂ ವರ್ತಕರೂ ಈ ಕೆಲಸಕ್ಕಾಗಿ ತಾವೇ ಶಾಖೆಗಳನ್ನು ಏರ್ಪಡಿಸಿಕೊಂಡಿರುವರು. ಎಲ್ಲಕ್ಕೂ ಮೇಲಾಗಿ ಈಗ ಪ್ರತಿ ದೇಶದಲ್ಲಿಯೂ ಈ ಕೆಲಸಕ್ಕಾಗಿಯೇ ಒಂದು ದಲ್ಲಾಳಿ ಮತ್ತು ವರ್ತಕ ಮಂಡಲಿ ಸ್ಟಾಕ್ ಎಕ್ಸ್‌ಛೇಂಜ್ (ಯೂರೋಪಿನಲ್ಲಿ ಇದನ್ನು ಬೂರ್ಸ್ ಎನ್ನುವರು) ಎಂಬ ಹೆಸರಿನಲ್ಲಿ ಸ್ಥಾಪಿತವಾಗಿರುತ್ತದೆ. ಮುಖ್ಯವಾಗಿ ಅದರ ಮೂಲಕ ಪತ್ರಗಳ ಸಂಗತಿಯೆಲ್ಲ ತಿಳಿಯುವುದು. ಕೊಳ್ಳುವವರೂ ಮಾರುವವರೂ ತಮ್ಮ ಇಷ್ಟಕ್ಕೂ ಲಾಭಕ್ಕೂ ತಕ್ಕಂತೆ ಹಣವನ್ನು ಹೂಡುವ, ತೆಗೆಯುವ ಕೆಲಸಮಾಡಿಕೊಳ್ಳುತ್ತಿರುವರು. ಅಲ್ಲದೆ ವರ್ತಮಾನ ಪತ್ರಿಕೆಗಳು ಸಾಧಾರಣವಾಗಿ ಈ ಷೇರು ಹೀಗೆ, ಇಲ್ಲಿ ಬಡ್ಡಿ ಹೀಗೆ, ಲಾಭ ಹೀಗೆ ಎಂಬ ಸಮಾಚಾರವನ್ನು ಪ್ರಕಟಿಸುತ್ತಿರುತ್ತವೆ. ಪತ್ರಗಳನ್ನು ಕೊಂಡು ಮಾರುವ ಕೆಲವು ಖಾಸಗಿ ದಲ್ಲಾಳರೂ ಕುಳಗಳ ಸೌಕರ್ಯಕ್ಕಾಗಿ ಈ ಬಗೆಯ ಸಮಾಚಾರವನ್ನು ಒದಗಿಸುವರು. ಆದರೆ ಹೂಡಿಗನವರೆಲ್ಲರಿಗೂ ಸ್ಟಾಕ್ ಎಕ್ಸ್‌ಛೇಂಜಿನ ಮೂಲಕವೇ ಬೆಲೆಗಳೂ ವ್ಯಾಪಾರಗಳೂ ತಿಳಿಯಬೇಕಾದರೆ.

ಆಸ್ತಿ ಯಾವ ದೇಶದಲ್ಲಿಯೇ ಇರಲಿ, ಅವುಗಳ ಬಂಡವಾಳದಲ್ಲಿ ಭಾಗಸ್ಥರಾದವರೂ ಚಾಲಕ ಕಂಪನಿಗಳಿಗೆ ಸಾಲಕೊಟ್ಟವರೂ ಅನೇಕರಿರುತ್ತಾರೆ. ಈಗಿನ ಕಾಲದಲ್ಲಿ ದೇಶದಿಂದ ದೇಶಕ್ಕೆ ಬಂಡವಾಳ ಧಾರಾಳವಾಗಿ ಸಂಚಾರಮಾಡಲು ಬೇಕಾದಷ್ಟು ಅವಕಾಶವೂ ಆಕರ್ಷಣೆಯೂ ಇರುತ್ತವೆ. ಆದ್ದರಿಂದ ಕೇವಲ ಸಂಚಿಕೆಯ ಮೇಲೆ ದೂರದ ಕಂಪನಿಗಳ ಸಾಲಪತ್ರ ಷೇರು ಪತ್ರಗಳನ್ನು ಕೊಳ್ಳಲು ಜನರು ಮುಂದೆ ಬರುತ್ತಾರೆ. ಸ್ಟಾಕ್ ಎಕ್ಸ್‌ಛೇಂಜಿನವರಿಗೆ ಎಲ್ಲ ಕಂಪನಿಗಳ ಚರಿತ್ರೆಯೂ ಪರಿಸ್ಥಿತಿಯೂ ಗೊತ್ತು.

ಪತ್ರಗಳನ್ನು ಕೊಳ್ಳುವವರಿರುವಂತೆಯೇ ಮಾರುವವರೂ ಹಲವರಿರುತ್ತಾರೆ. ಕೆಲವರು ಒಂದು ಕೈಯಲ್ಲಿ ಪತ್ರವನ್ನು ಬೆಲೆಗೆ ಕೊಂಡು

ಇನ್ನೊಂದು ಕೈಯಲ್ಲಿ ಬೇರೆ ಬೆಲೆಗೆ ಮಾರುತ್ತಿರುತ್ತಾರೆ: ಪತ್ರ ತಮ್ಮ ದೇಶದ್ದು ವಿದೇಶದ್ದು ಎಂಬ ಯೋಚನೆ ಅವರನ್ನು ಬಾಧಿಸುವುದಿಲ್ಲ. ಎಲ್ಲಿ ಹೆಚ್ಚು ಪ್ರಯೋಜನ ದೊರೆಯುವುದೆಂದು ಕಂಡರೆ ಅಲ್ಲಿ ತಮ್ಮ ಭಾಗವಿರಲಿ ಎಂದು ಕೈಹಣವನ್ನು ಹೂಡುವರು (Invest); ಎಲ್ಲಿ ನಷ್ಟದ ಸುಳಿವು ತೋರಿದರೆ ಅಲ್ಲಿನ ಭಾಗವನ್ನು ಮಾರಲಿಚ್ಛಿಸುವರು.

**ರಚನೆ.** — ಇದರ ಆಯಾ ವ್ಯಾಪಾರದ ಗುಟ್ಟು ಒಳಬಂದರೂ ಎಲ್ಲರಿಗೂ ತಿಳಿಯುವುದಿಲ್ಲ. ಯಾವ ಆಸ್ತಿಪತ್ರ ಎಲ್ಲಿದೆ ಎಂಬುದೂ ಗೊತ್ತಾಗುವುದಿಲ್ಲ. ವ್ಯಾಪಾರ ರಾಷ್ಟ್ರಗಳಲ್ಲಿರುವ ಸ್ಟಾಕ್ ಎಕ್ಸ್‌ಛೇಂಜುಗಳಿಗೆ ಆ ಅನುಭವವೂ, ವ್ಯಾಪಾರದ ಅಂತರ್ಯಾಮಿತ್ವವೂ ಇರುತ್ತವೆ. ಕೊಂಡು ಮಾರುವವರು ತಮ್ಮ ಪ್ರತಿನಿಧಿಗಳ ಅಥವಾ ದಲ್ಲಾಳಿಗಳ ಮೂಲಕ ಕೆಲಸ ಮಾಡಿಸಿಕೊಳ್ಳುವ ಅನುಕೂಲವಿರುತ್ತದೆ. ಪತ್ರಗಳ ಒಡೆತನವನ್ನು ಕೈ ಕೈ ಬದಲಾಯಿಸುವ ಸೌಲಭ್ಯವಿರುತ್ತದೆ. ಇದರ ಕೆಲಸ ಕೈಗಾರಿಕೆಯ ರಂಗದಲ್ಲಿ ಬಹು ಪ್ರಭಾವಯುತವಾದ್ದು. ಅಲ್ಲಿ ಕೇವಲ ದಲ್ಲಾಳಿಗಳು ಒಂದು ಭಾಗ; ದಣಿ ವರ್ತಕರವೊಂದು ಭಾಗ. ಎಲ್ಲ ಬಗೆಯ ಸರಕಾರಿ ಸಾಲ ಪತ್ರಗಳಿಗೂ ಖಾಸಗಿ ಕಂಪನಿ ಪತ್ರಗಳಿಗೂ ಗಿರಾಕಿ ಇರುತ್ತದೆ. ಪತ್ರಗಳ ಬೆಲೆಯ ಪರಿಮಿತಗಳನ್ನೆಲ್ಲಾ ಪಟ್ಟಿ ಮಾಡಿ ಪ್ರತಿದಿನವೂ ಅಧಿಕಾರಿಗಳು ಪ್ರಕಟಿಸುತ್ತಾರೆ. ಈ ಸಂಸ್ಥೆಯ ಇಂಥ ಇಂಥ ಭಾಗದಲ್ಲಿ ಈ ಈ ಪತ್ರಗಳ ವ್ಯಾಪಾರ ನಡೆಯುವುದೆಂಬುದು ಅಲ್ಲಿನವರಿಗೆ ಗೊತ್ತು. ಒಂದು ಕಡೆ ಕೈಗಾರಿಕೆ ಪತ್ರಗಳು—ಇಂಡಿಯಾದವು, ಆಫ್ರಿಕಾದವು, ಅಮೇರಿಕಾದವು; ಒಂದು ಕಡೆ ಸರಕಾರಿ ಸಾಲಪತ್ರಗಳು; ಒಂದು ಕಡೆ ತಾಮ್ರ, ಟಿನ್, ಸಣಬು, ರಬ್ಬರ್ ಪತ್ರಗಳು; ಇನ್ನೊಂದು ಕಡೆ ರೈಲ್ವೆ, ಹಡಗಿನ ಕಂಪನಿ ಅಥವಾ ಗಣಿಗಳವು ಎಂದು ಮೊದಲಾಗಿ ವ್ಯಾಪಾರದ ಸಂವಿಧಾನವಿರುತ್ತದೆ.

**ಒಳಗಿನ ನಿಯಮಗಳು.** — ಸದಸ್ಯರಿಗಲ್ಲದೆ ಇತರರಿಗೆ ಮಂದಿರದ ಪ್ರವೇಶವಿಲ್ಲ. ಸಾಮಾನ್ಯರು ಸದಸ್ಯರಾಗಲೂ ಸಾಧ್ಯವಿರದು. ಪ್ರವೇಶಧನವೂ ನಿರೋಧಗಳೂ ಬಹಳ. ಸ್ವಂತವಾಗಿ ಲಕ್ಷಾಂತರ ರೂಪಾಯಿಗಳ ಆಸ್ತಿವಂತರಲ್ಲದವರಿಗೆ ಮಾನ್ಯತೆಯಿಲ್ಲ. ನಿಯಮಗಳು ಕಠಿಣ, ನಿಷ್ಠುರ. ಒಳಗುಟ್ಟು ಹೊರಗೆ ಹೋಗದಂತೆ ಕಾಪಾಡಲು ಹಲವು ನಿರ್ಬಂಧಗಳಿರುತ್ತವೆ.

ಇವುಗಳ ರಚನೆ, ರೀತಿ ಒಂದೊಂದು ದೇಶದಲ್ಲಿ ಒಂದೊಂದು ಬಗೆಯಾಗಿದ್ದರೂ ಮಾಡುವ ಕೆಲಸದ ಸ್ವರೂಪ ಎಲ್ಲ ಕಡೆಯೂ ಒಂದೇ.

ಇಂಗ್ಲಿಷ್ ಸ್ಟಾಕ್ ಎಕ್ಸ್‌ಛೇಂಜು* ಹಲವು ವಿಧದಲ್ಲಿ ಉತ್ತಮವಾಗಿರುವುದರಿಂದ ಅದರ ಲಕ್ಷಣಗಳಲ್ಲಿ ಕೆಲವನ್ನು ಇಲ್ಲಿ ತಿಳಿಸಿದೆ.

**ಮಂದಿರದ ಕಾರ್ಯರೀತಿ — ವರ್ತಕ—ದಲ್ಲಾಳಿ.** — ಅಲ್ಲಿ ಬ್ರೋಕರ್ಸ್ (ದಲ್ಲಾಳಿಗಳು), ಜಾಬರ್ಸ್ ಅಥವಾ ಡೀಲರ್ಸ್ (ಕೊಂಡು ಮಾರುವ ವರ್ತಕರು) ಎಂಬ ಎರಡು ಬಗೆಯ ಸದಸ್ಯರುಂಟು. ಸದಸ್ಯನಾಗಲಿರುವವನು ವರ್ತಕತನ ಮಾಡುವನೊ ದಲ್ಲಾಳಿ ಕೆಲಸ ಮಾಡುವನೊ ಮೊದಲೇ ತಿಳಿಸಬೇಕು. ಹೀಗೇ ಕೆಲಸಮಾಡಬೇಕು, ಮಾತಿನಂತೆ ನಡೆದುಕೊಳ್ಳಬೇಕು ಎಂಬ ನಿಯಮವೂ ಹೊಣೆಗಾರಿಕೆಯೂ ಇರುತ್ತವೆ. ಒಳಗಿನ ವರ್ತಕನು ಹೊರಗಿನವರೊಡನೆ ನೇರವಾಗಿ ವ್ಯಾಪಾರ ಮಾಡಲಾಗದು; ಮಂದಿರದೊಳಕ್ಕೆ ಪ್ರವೇಶವಿರುವವರೊಡನೆಯೇ ಮಾರಾಟ, ಕೊಳ್ಳಾಟ. ವರ್ತಕನು ಯಾವಾಗಲೂ ಅಸಲು ಕುಳ. ಆತನ ಹೆಸರಿನ ಲೆಕ್ಕದಲ್ಲಿ ಎಲ್ಲ ವ್ಯಾಪಾರವೂ ಗುರುತಾಗಬೇಕು.

ದಲ್ಲಾಳನಿಗೆ ಮಾತ್ರ ಹೊರಗಿನವರೊಡನೆ ಸಂಬಂಧ. ಕೊಳ್ಳಬೇಕು ಅಥವಾ ಮಾರಬೇಕು ಎಂಬ ತನ್ನ ಕುಳಗಳ ಇಷ್ಟವನ್ನು ಆತನು ನೆರವೇರಿಸಲಿರುವನು. ಅದ್ದರಿಂದ ಅವರ ಪರವಾಗಿ ಒಳಗಿನ ವರ್ತಕರೊಡನೆ ವ್ಯಾಪಾರ ಮಾಡುತ್ತಾನೆ. ಆತನು ಎಂದೂ ಅಸಲು ಕುಳವಲ್ಲ. ದಲ್ಲಾಳರಿಂದ ವ್ಯಾಪಾರ ಕೆಡದಂತೆ ನಿಬಂಧನೆಗಳಿರುವುವು. ಅವರವರಲ್ಲಿ ಸ್ಪರ್ಧೆ ಎದ್ದು ದರವನ್ನೂ ಬೆಲೆಯನ್ನೂ ತಗ್ಗಿಸದಂತೆಯೂ—ಪ್ರಜಾವರ್ಗದಿಂದ ಹೆಚ್ಚು ದರಗಳನ್ನು ಕಿತ್ತುಕೊಳ್ಳದಂತೆಯೂ ಕಠಿಣವಾದ ನಿರ್ಬಂಧವಿರುವುದು. ಕುಳಕ್ಕಾಗಿ ಇವರು ಕೆಲಸಮಾಡುವುದರಿಂದ ಕುಳ ಕೊಡುವ ದಲ್ಲಾಳಿಯೇ ಇವರ ಸಂಪಾದನೆ. ಕುಳಕ್ಕಾಗಿ ಕೊಂಡು ಮಾರುವ ಕೆಲಸದಲ್ಲಿ ಕುಳ ಕೈಬಿಟ್ಟರೆ ದಲ್ಲಾಳನು ಕೈಯಿಂದ ದುಡ್ಡು ಬಿಚ್ಚಿ ವರ್ತಕನಿಗೆ ತೆರಬೇಕಾಗುತ್ತದೆ.

* ಸುಮಾರು ೪,೦೦೦ ಜನ ಸದಸ್ಯರಿದ್ದಾರೆ. ಒಳಗೆ ನಡೆಯುವುದು ಹೊರಗಿನವರಾರಿಗೂ ಗೊತ್ತಾಗದು; ಸದಸ್ಯತ್ವಕ್ಕೆ ಮೊದಲು £ ೨,೨೫೦ (ಎಂದರೆ ಪ್ರವೇಶ ಧನ ರೂ. ೩೦,೦೦೦), ವರ್ಷಕ್ಕೆ ಚಂದ ೫೦ ಗಿನಿ (ಎಂದರೆ ಸುಮಾರು ರೂ. ೭೦೦)

ದಲ್ಲಾಳಿಯೂ ಒಳ ವರ್ತಕರೂ ಯಾವ ಬಗೆಯಲ್ಲಿಯೇ ಆಗಲಿ ಒಂದಾಗಿ ವ್ಯಾಪಾರವನ್ನು ನಡಸಕೂಡದು. ಹೀಗೆ ಮಾಡುವುದರಿಂದ ಹೊರಗಿನ ಜನರಿಗೆ ಒಂದು ನಂಬಿಕೆ: ಸ್ವಪ್ರಯೋಜನಕ್ಕಾಗಿ ದಲ್ಲಾಳಿಯು ವ್ಯವಹರಿಸಿ ಯಾನು ಎಂಬ ಸಂಶಯವಿರುವುದಿಲ್ಲ. ಕುಳಕ್ಕೆ ಎಷ್ಟು ಅನುಕೂಲವಾದ ದರವನ್ನು ಕೊಡಿಸುವುದು ಸಾಧ್ಯವಾದರೆ ಅಷ್ಟನ್ನು ಒಳಗಿನ ವರ್ತಕರಿಂದ ಸಾಧಿಸುವುದು ಇವನ ಕೆಲಸವಾಗುವುದು.

**ವ್ಯಾಪಾರ ವಿಧಾನ.**—ವರ್ತಕನು ಯಾವ ಬಗೆಯ ಪತ್ರಗಳನ್ನು ಕೊಂಡು ಮಾರುವನೊ ಆ ಪೇಟೆಯಲ್ಲಿ ಮಾತ್ರ ಕುಳಿತಿರುವನು. ದಲ್ಲಾಳಿಯು ಎಲ್ಲೆಲ್ಲಿಯೂ ಓಡಿಯಾಡುತ್ತಿರುವನು. ಎಲ್ಲಿ ಯಾರು ಮಾರುವರು, ಯಾರು ಕೊಳ್ಳುವರು ಎಂಬುದು ಅವನಿಗೆ ಗೊತ್ತು. ಆಯಾ ಪತ್ರಗಳ ಚರಿತ್ರೆ, ಸ್ಥಿತಿ, ಯೋಗ್ಯತೆ, ಬೆಲೆ, ಭವಿಷ್ಯ ಮುಂತಾದ ವಿಷಯದಲ್ಲಿ ವರ್ತಕರು ಸಮಾಚಾರದ ಗಣಿಗಳು. ಅವರೂ ಎಲ್ಲ ಬಗೆಯ ಪತ್ರಗಳ ವ್ಯಾಪಾರವನ್ನೂ ಮಾಡುವುದಿಲ್ಲ; ಮಾರಲೂ ಯಾವಾಗಲೂ ಸಿದ್ಧರಿರು ವುದಿಲ್ಲ. ವ್ಯಾಪಾರ ಮಾಡಲು ಇಷ್ಟವಿರುವಾಗ ಮಾತ್ರ, ಒಂದು ಕರೀದಿ ಹೇಳುವರು. ದರ ನುಡಿದರೆ ಆ ದರದಂತೆ ಕೊಳ್ಳಲಾಗಲಿ ಮಾರಲಾಗಲಿ ಅವರಿಗೆ ಇಷ್ಟವಿದೆ ಎಂದು ಸೂಚನೆ. ದಲ್ಲಾಳಿಯ ಉದ್ದೇಶ ಏನೇ ಇರಲಿ— ಆ ದರವನ್ನು ಕೊಡುವೆನೆಂದರೆ ಆ ಬೆಲೆಗೆ ವರ್ತಕನು ಕೊಳ್ಳಬೇಕು ಅಥವಾ ಮಾರಬೇಕು ಎಂಬುದು ಸಂಸ್ಥೆಯ ಮತ್ತು ವ್ಯಾಪಾರದ ನಿಯಮ.

**ಬೆಲೆಗಳು.**—ಬೆಲೆ ಹೇಳುವುದರಲ್ಲಿ ಕೊಳ್ಳುವ ದರಕ್ಕೂ ಮಾರುವ ದರಕ್ಕೂ ವ್ಯತ್ಯಾಸವಿದೆ. (ಉದಾ.—ಯಾವುದಕ್ಕಾದರೂ ಬೆಲೆ ೫೦-೫೫ ಇದೆಯೆಂದರೆ ಕೊಳ್ಳುವ ಬೆಲೆ ೫೦ ಎಂದೂ ಮಾರುವ ಬೆಲೆ ೫೫ ಎಂದೂ ಅರ್ಥ.) ಈ ಅಂತರವೇ ವರ್ತಕನ ಸಂಪಾದನೆ. ಪತ್ರಕ್ಕೆ ಬೇಗ ಗಿರಾಕಿ ಸಿಕ್ಕುವಹಾಗಿದ್ದರೆ; ಅಥವಾ, ದಲ್ಲಾಳಿಗೆ ಸುಲಭವಾಗಿ ವ್ಯಾಪಾರ ಮಾಡಿಸುವ ಶಕ್ತಿ ಹೆಚ್ಚಾಗಿದ್ದರೆ—ಈ ದರಗಳು ಹತ್ತಿರವಿರುವುವು; ಎಂದರೆ ವರ್ತಕನ ಲಾಭ ಕಡಮೆ. ಅಂತರ ಹೆಚ್ಚಿದರೆ ಕೇಳುವ ಲಾಭ ಹೆಚ್ಚು; ಕುಳಕ್ಕೆ ನಷ್ಟ—ಎಂದರೆ ಅವನು ಪತ್ರವನ್ನು ವರ್ತಕರಿಂದ ಕೊಳ್ಳಬೇಕಾದರೆ ಹೆಚ್ಚು ಹಣ ತೆರಬೇಕು; ಮಾರಲಿದ್ದರೆ ಕಡಮೆಗೆ ಮಾರಬೇಕು.

ಇತರ ದಿನಸಿ ವರ್ತಕರಂತೆಯೇ ಈ ವರ್ತಕರಿಗೂ ಧೈರ್ಯ, ಅನುಭವ, ಯಾವ ಬೆಲೆ ಹೇಗೆ ಆಗಬಹುದು ಎಂದು ತಿಳಿಯಬಲ್ಲ ಶಕ್ತಿ—ಇದ್ದರೆ, ಅವಕ್ಕೆ ತಕ್ಕಂತೆ ಲಾಭ ಪಡೆಯಬಹುದು. ಹೊರಗಿನವರಿಗೆ ಪತ್ರಗಳು ಬೇಕಾಗಿರುವಾಗ ಅವನ್ನು ತಮ್ಮ ಕೈಯಲ್ಲಿಯೇ ಇಟ್ಟುಕೊಂಡಿರ ಬೇಕಾದ್ದರಿಂದ ಅವರಲ್ಲಿ ಅಷ್ಟಾದರೂ ಬಂಡವಾಳವಿರಬೇಕು.

ಕುಳ ಕೊಡುವ ದಲ್ಲಾಳಿಯೇ ದಲ್ಲಾಳನ ಸಂಪಾದನೆ. ಕುಳಕ್ಕೆ ಬೇಕಾದ ತಿಳಿವಳಿಕೆಯನ್ನು ಆತನು ಕೊಡುವನು; ಒಬ್ಬರಿಗೊಂದು ಇನ್ನೊಬ್ಬರಿಗೆ ಇನ್ನೊಂದು ಹೇಳಿ ಪಕ್ಷಪಾತ ಮಾಡುವುದಿಲ್ಲ; ಹೆಚ್ಚು ದಲ್ಲಾಳಿಯನ್ನು ಕೇಳುವುದಿಲ್ಲ. ಏಕೆಂದರೆ, ಅದೇ ಕೆಲಸ ಮಾಡಿ ಕೊಡಲು ಇತರ ದಲ್ಲಾಳರಿರುವರು. ಜೊತೆಗೆ, ಕುಳವನ್ನು ತೊರೆದು ಕೊಳ್ಳಲು ಯಾರು ಇಷ್ಟಪಡುವರು?

**ಫಲ — ಪ್ರಭಾವ.**— ಸ್ಟಾಕ್ ಎಕ್ಸ್‌ಛೇಂಜಿನವರೂ, ಇತರ ದೇಶಗಳಲ್ಲಿ ಹೊರಗಿನ ದಲ್ಲಾಳರೂ ಪತ್ರಗಳ ಬೆಲೆಯ ಪಟ್ಟಿಗಳನ್ನು ಪ್ರಕಟಿಸುವರು; ಅವನ್ನು ನೋಡಿ ಹೊರಗಿನವರು ತಮ್ಮ ಕೈಯಲ್ಲಿರುವ ಪತ್ರಗಳನ್ನು ಮಾರಲಿಚ್ಛಿಸುವರು; ಅಥವಾ ಹೊಸವನ್ನು ಕೊಳ್ಳಲಿಷ್ಟಪಡುವರು. ನಷ್ಟವಾದೀತೆಂಬ ಶಂಕೆಯಿಂದ ಕೆಲವರು; ಲಾಭ ಬಂದೀತೆಂಬ ಆಶೆಯಿಂದ ಕೆಲವರು; ವರಮಾನ ಕಡಮೆಯಾಗಿರುವ ಇಲ್ಲಿ ಮಾರಿ ಹೆಚ್ಚು ಪ್ರಯೋಜನ ಸಿಕ್ಕುವ ಇನ್ನೊಂದನ್ನು ಕೊಳ್ಳುವ ಉದ್ದೇಶದಿಂದ ಕೆಲವರು; ಈಗಿರುವ ಎಲ್ಲವನ್ನೂ ಈ ದರಕ್ಕೆ ಕೊಂಡು ಕೈಯಲ್ಲಿಟ್ಟುಕೊಂಡು ಮುಂದೆ ಅದರ ಬೆಲೆಯನ್ನು ತಮ್ಮ ಇಷ್ಟದಂತೆ ನಿರ್ಧರಿಸಿ ಲಾಭಪಡೆಯಬೇಕೆಂಬ ದೃಷ್ಟಿ ಯಿಂದ ಕೆಲವರು; ರಾಜಕೀಯ ಕಾರಣಗಳಿಂದ ಕೆಲವರು—ಎಲ್ಲೆಲ್ಲೂ ಕಣ್ಣಿಟ್ಟು, ತಮ್ಮ ಅನುಕೂಲದಂತೆ ಕೊಳ್ಳುವರು; ಮಾರುವರು. ಈಚೆಕಡೆ ಆಚೆಕಡೆ ಆರು ಕಾಸಿನ ಸಿವ್ವಳಲಾಭ ಬರುವಂತಿದ್ದರೆ ಲಕ್ಷಾಂತರ ರೂಪಾಯಿನ ಪತ್ರಗಳನ್ನು ಈ ಕೈಯಲ್ಲಿ ಕೊಂಡು, ಆ ಕೈಯಲ್ಲಿ ಮಾರಿ ಲಾಭವನ್ನು ಗಂಟುಹಾಕಿಕೊಳ್ಳುತ್ತಾರೆ. ಇವರೆಲ್ಲರೂ ಒಂದೇ ದೇಶದವರಾಗಿದ್ದು ಒಂದೇ ದೇಶದ ಪತ್ರಗಳನ್ನು ಕೊಂಡು ಮಾರುತ್ತಿದ್ದರೆ ಹಣವೂ ಪತ್ರಗಳ ಒಡೆತನವೂ ಅದೇ ದೇಶದಲ್ಲಿ ಉಳಿಯುತ್ತವೆ. ವ್ಯಕ್ತಿಗಳಿಗೆ ನಷ್ಟವಾಗಿ

ವ್ಯಕ್ತಿಗಳಿಗೆ ಲಾಭವಾಗಬಹುದಾದರೂ ಸಂಪತ್ತಿನ ಅಧಿಕಾರವೆಲ್ಲ ಆ ದೇಶದ ಎಲ್ಲೆಕಟ್ಟಿನ ಒಳಗೇ ಇರುವುದು. ಒಟ್ಟು ದೇಶಕ್ಕೆ ಲಾಭವಾಗಲಿ ನಷ್ಟವಾಗಲಿ ಇಲ್ಲದಂತಿರುವುದು. ಆದರೆ ಈಗಿನ ವ್ಯಾಪಾರ ಪ್ರಪಂಚದಲ್ಲಿ ಇಂತಹ ಪೇಟೆಗಳಲ್ಲಿ ಒಂದೊಂದಕ್ಕೂ ಹತ್ತಿರದ ಸಂಬಂಧವುಂಟು. ಅಂಚೆ, ತಂತಿ, ಟೆಲಿಫೋನ್ ಸೌಕರ್ಯ, ವ್ಯಾಪಾರದ ನಂಬಿಕೆ, ಸುರಕ್ಷಣೆ, ರಾಷ್ಟ್ರಗಳ ನ್ಯಾಯಪದ್ಧತಿಗಳ ಸಹಾಯ—ಇವಿರುವುದರಿಂದ ಎಲ್ಲೆಲ್ಲಿಯವರೂ ಯಾವಯಾವ ಉದ್ದೇಶಗಳಿಂದಲೂ ಈ ವ್ಯಾಪಾರಕ್ಕೆ ಸೇರುವರು. ದೇಶದ ಅಧಿಕಾರಿಗಳು ಒಂದು ಕ್ಷಣ ಮೈಮರೆತರೆ ದೇಶದ ಸಂಪತ್ತಿನ ಒಡೆತನವೆಲ್ಲ ಹೊರಕ್ಕೆ ಸಾಗಬಹುದು. ಪತ್ರಗಳ ಒಡೆತನ ಅನ್ಯರಿಗಾದರೆ ದೇಶದ ಸಾಲಗಾರಿಕೆ ಹೆಚ್ಚುವುದು. ಇಲ್ಲಿನ ವ್ಯಾಪಾರ ಕೈಗಾರಿಕೆ ಅವರಿಗೆ ಕುದುವಾಗುವುವು. ಹೀಗೆ ಸ್ಟಾಕ್ ಎಕ್ಸ್‌ಛೇಂಜಿನಲ್ಲಿ ನಡೆಯುವ ವ್ಯಾಪಾರಗಳ ಫಲವಾಗಿ ದೇಶದ ಸಂಪತ್ ವೃದ್ಧಿಯೂ ವ್ಯಾಪಾರ ಕೈಗಾರಿಕೆಗಳ ಏಳುಬೀಳುಗಳೂ ವ್ಯತ್ಯಾಸ ಹೊಂದುವುವು. ಅಲ್ಲಿ ದುಸ್ಸಾಹಸಿಗಳು ಸೇರಿಕೊಂಡು ಪತ್ರಗಳ ಬೆಲೆ ಏರುವುದು ಬೀಳುವುದೆಂಬ ಅಂಶಗಳಲ್ಲಿ ಜೂಜುಗಾರರಂತೆ ಬೆಲೆ ಏರಿಸಿದರೆ ಇಳಿಸಿದರೆ ಸ್ಥಿತಿ ಅಸ್ತವ್ಯಸ್ತವಾಗಿ ವಸ್ತುಗಳ ಬೆಲೆ, ಧಾರಣೆವಾಸಿ, ಬಡ್ಡಿಯ ದರ, ಪತ್ರಗಳ ಬೆಲೆ, ವಿನಿಮಯ ದರ, ಎಲ್ಲದರಲ್ಲಿಯೂ ಹದ ಕೆಡುವುದು. ಈಗಿನ ಆರ್ಥಿಕ ಪ್ರಪಂಚದಲ್ಲಿ ಇಂಥವರ ಪ್ರಭಾವಕ್ಕೆ ಮೀರಿದ ಶಕ್ತಿ ಇರುವುದಿಲ್ಲವಾಗಿ ಇವರ ಕೈ ತಡೆದ ಹೊರತು ಯಾವ ಉದ್ಯಮಕ್ಕೂ ಸ್ಥಿರತೆ ಬಾರದು. ಆದುದರಿಂದ ಎಲ್ಲ ಸರಕಾರಗಳವರೂ ಪ್ರಧಾನ ಬ್ಯಾಂಕುಗಳವರೂ ಇಂತಹ ಸಂಸ್ಥೆಗಳ ಮೇಲೆ ತೀಕ್ಷ್ಣವಾದ ಕಣ್ಣಿಟ್ಟಿರುತ್ತಾರೆ. ಇದರಿಂದ ದೇಶಕ್ಕೆ ನಷ್ಟವಾಗದಂತೆ—ಕೆಲವು ವೇಳೆ ಬಲವಂತವಾಗಿ—ಇವರ ಕೆಲಸವನ್ನು ತಡೆಯುತ್ತಾರೆ. ಇವರು ಹರಡುವ ನಂಬಿಕೆಯಿಂದ ನಂಬಿಕೆಯೂ, ಭಯದಿಂದ ಭಯವೂ ಹೆಚ್ಚಿ ವರ್ತಕರ, ಉತ್ಪತ್ತಿಕಾರರ ಮತ್ತು ಹಣಗಾರರ ಮನಸ್ಸಿನಲ್ಲಿ ತೀವ್ರವಾದ ಪರಿವರ್ತನೆಗಳುಂಟಾಗಿ ಆ ಮೂಲಕವೇ ಸಂಪದಭಿವೃದ್ಧಿ ಕಾರ್ಯಗಳಿಗೆ ಅನೇಕ ತಡೆಗಳೂ ಹುಸಿ ಉತ್ಸಾಹಗಳೂ ಉಂಟಾಗುವುವೆಂದು ಹಿಂದೆ ಒಂದು ಕಡೆ ಹೇಳಿದೆ.

ಒಳ್ಳೆಯದಕ್ಕೆ ಕೆಟ್ಟದ್ದಕ್ಕೆ ಎರಡಕ್ಕೂ, ಸ್ಟಾಕ್ ಎಕ್ಸ್‌ಛೇಂಜುಗಳೂ ಅಲ್ಲಿನ ಸಾಹಸೀ ವರ್ತಕತನವೂ ಕೈಗಾರಿಕೆ ರಂಗದಲ್ಲಿಯೂ ಅದಕ್ಕೆ ಬೇಕಾಗುವ ಧನ ಚಾಲನೆಯಲ್ಲಿಯೂ ಈಗಿನ ಕಾಲದಲ್ಲಿ ಬಹು ಪ್ರಭಾವಯುತವಾಗಿರುವುದರಿಂದ ಅವು ಪ್ರಪಂಚದ ಸಂಪತ್ ಸ್ಥಿತಿಯನ್ನು ಹೆಚ್ಚು ಕಡಮೆ ಮಾಡಬಲ್ಲುವಾಗುತ್ತವೆ. ಇವರ ಕಾರ್ಯದಿಂದ ನಾಡುಗಳಿಗೆ ಹೊಸ ಋಣಸ್ಥಿತಿಗಳು—ಎಂದರೆ ಸಾಲಗಾರಿಕೆ, ಸಾಹುಕಾರಿಕೆ—ಏರ್ಪಡುತ್ತವೆ. ದೊಡ್ಡ ಬಂಡವಾಳಗಳೂ ಬಂಡವಾಳ ಮತ್ತು ಸಾಲಪತ್ರಗಳ ಒಡೆತನವೂ ಒಂದು ನಿಮಿಷದಲ್ಲಿ ರಾಜಕೀಯ ಎಲ್ಲೆಗಳನ್ನು ದಾಟಿ ಎಲ್ಲೆಲ್ಲಿಯೋ ನಟ್ಟು ನಿಲ್ಲುವಂತಾಗುತ್ತದೆ. ಹಿಂದೆ ಅಸಾಧ್ಯವಾಗಿದ್ದ ಅಂತರ್ ರಾಷ್ಟ್ರೀಯ ಸಂಬಂಧಗಳೂ ಹಾಗು ಅಧೀನತೆಗಳೂ ಸ್ಥಾಪಿತವಾಗುತ್ತವೆ; ಒಂದೇ ರಾಷ್ಟ್ರದಲ್ಲಿ ಹಲವು ಪರಕೀಯ ರಾಷ್ಟ್ರಗಳವರು ಸಂಪದುತ್ಪತ್ತಿಕಾರ್ಯವನ್ನು ತಮ್ಮ ಅಧೀನಕ್ಕೆ ತಂದುಕೊಂಡು ನಾಡಿನ ಮಕ್ಕಳಿಗೆ ಪರದಾಸ್ಯವನ್ನು ಒಡ್ಡುವಂತೆ ಮಾಡುತ್ತದೆ; ಅಥವಾ ಒಂದು ರಾಷ್ಟ್ರ ತನ್ನ ಹಣಬಲದಿಂದ ಹಲವು ನಾಡುಗಳ ಕೈಗಾರಿಕೆ ಮಂಡಲದ ಮೇಲೆ ದಾಳಿ ಹೋಗಿ ಪ್ರತಿಸ್ಪರ್ಧಿಗಳನ್ನು ಮುರಿದು ತನ್ನ ಆಧಿಪತ್ಯವನ್ನು ಅಲ್ಲಿ ಸ್ಥಾಪಿಸುವಂತೆ ಮಾಡುವುದು. ಒಂದು ಕಡೆ ದೊಡ್ಡ ಬಂಡವಾಳಗಳು ಕೂಡುವುದು, ಇನ್ನೊಂದು ಕಡೆ ಆಸ್ತಿಪತ್ರ ಸಾಲಪತ್ರಗಳು ಉತ್ಪತ್ತಿಯಾಗುವುದು, ಬೇರೊಂದು ಕಡೆ ಸ್ಟಾಕ್ ಎಕ್ಸ್‌ಛೇಂಜುಗಳು ಆ ಪತ್ರಗಳ ಸ್ವಚ್ಛಂದ ಸಂಚಾರಕ್ಕೆ ನೆರವಾಗುವುದು, ಸರಕಾರಗಳವರು ಈ ಬಗೆಯ ಕೆಲಸ ಸಂಸ್ಥೆಗಳಿಗೆಲ್ಲ ಅನುಕೂಲವಾದ ಆವರಣವನ್ನು ಕಲ್ಪಿಸಿ ನೆರವಾಗುವುದು—ಇವೇ ಈ ಸ್ಥಿತಿ ಪರಿಣಾಮಗಳಿಗೆ ಮುಖ್ಯ ಕಾರಣವೆನ್ನಬಹುದು.

**ವ್ಯಾಪಾರದಲ್ಲಿ ಗರ್ತ ಆವರ್ತಗಳು.**—ಈ ಬಗೆಯ ನಿತ್ಯ ಸಂಪ್ರದಾಯದಲ್ಲಿ ಬೇರೊಂದು ಬಗೆಯಲ್ಲಿ ಆಗಾಗ್ಗೆ ವಿಷಮತೆ ಬರುವುದುಂಟು. ಉತ್ಪತ್ತಿಕಾರರು ಉತ್ಪತ್ತಿ ಮಾಡುತ್ತ ಮಾಡುತ್ತ, ವ್ಯಾಪಾರದವರು ಕೊಳ್ಳುತ್ತ ಮಾರುತ್ತ ಇರುವಾಗ ಕೆಲವು ಸಮಯದಲ್ಲಿ ವ್ಯಾಪಾರವೂ ಪದಾರ್ಥಗಳಿಗೆ ಗಿರಾಕಿಯೂ ಹೆಚ್ಚುತ್ತಿರುವುದೆಂದು ಭ್ರಮಿಸಿ ಕೈಗಾರಿಕೆಗಳಿಗೆ ಅತಿಯಾಗಿ ಹಣವನ್ನು ಒದಗಿಸಿ, ಷೇರುಪತ್ರಗಳ ಬೆಲೆಯನ್ನು ಹೆಚ್ಚಿಸಿ, ಉತ್ಪತ್ತಿಯ

ಪ್ರಮಾಣವನ್ನು ಹೆಚ್ಚಿಸುವುದುಂಟು. ಇಂಥ ಸಮಯಗಳಲ್ಲಿ ಸಾಹಸಿಗಳೂ ದಲ್ಲಾಳರೂ ಈ ಉತ್ಸಾಹವನ್ನು ಮತ್ತೂ ಕೆರಳಿಸಿ, ಉತ್ಪತ್ತಿಯನ್ನೂ ಉತ್ಪತ್ತಿಪತ್ರಗಳ ಬೆಲೆಯನ್ನೂ ಒಂದು ಹುಚ್ಚಿಗೆ ಎತ್ತುವರು. ಎಷ್ಟು ದೂರವೆಂದರೆ ಅಷ್ಟು ದೂರ ಹೋಗಿ ಬೆಲೆಗಳೂ ಲಾಭವೂ ಹೆಚ್ಚುವಂತೆ ಮಾಡುವರು. ಆದರೆ ಅದಕ್ಕೆ ಒಂದಲ್ಲ ಒಂದು ಕಡೆ ತಡೆಯೊಂದು ಇದ್ದಕ್ಕಿದ್ದ ಹಾಗೆ ನಾನಾ ಕಾರಣಗಳಿಂದ ಬೆಲೆ ಇಳಿದು, ಸಾಮಾನು ಮಾರಾಟವಾಗದೆ ಉಳಿದು, ಗಿರಾಕಿ ಸೊರಗಿ ವಿಮುಖವಾಗಿ, ಪತ್ರಗಳ ಬೆಲೆ ಬಿದ್ದು, ಎಲ್ಲೆಲ್ಲಿಯೂ ಹಾಹಾಕಾರವೂ ನಿಸ್ತೇಜವೂ ಉಂಟಾಗಿ ಕಾರ್ಯ ಮಂದವಾಗುವುದು. ಇದು ಒಂದು ಚಕ್ರದಂತೆ ನಡೆಯುವುದಾದ್ದರಿಂದ ಇದನ್ನು ವ್ಯಾಪಾರಚಕ್ರ ಅಥವಾ ಆವರ್ತ (Trade Cycle) ಎಂದು ಕರೆಯುವುದುಂಟು. ಈಗಿನ ಕಾಲದ ಉತ್ಪತ್ತಿ, ಮಾರುವೆ, ಗಿರಾಕಿಯ ಪರಿಸ್ಥಿತಿಗಳ ಸ್ವಭಾವ ಲಕ್ಷಣದಿಂದಲೇ ಈ ರೀತಿಯಾದ ಅಸ್ಥಿರತನವುಂಟಾಗುವುದು. ಇಂಥ ಸಂದರ್ಭದಲ್ಲಿ ಸ್ಟಾಕ್ ಎಕ್ಸ್‌ಛೇಂಜ್ ದಲ್ಲಾಳರ ನ್ಯಾಸ ಬಹು ಜವಾಬ್ದಾರಿಯದು. ವ್ಯಾಪಾರದ ಈ ವಿಷಮ ಚಕ್ರಗಳು ಕೆಲವು ವೇಳೆ ೧೦–೧೧ ವರ್ಷಗಳ ಕಾಲದವರೆಗೂ ನಡೆದು ದೇಶಗಳಿಗೆ ಅನೇಕ ಅನಿಷ್ಟಗಳನ್ನುಂಟುಮಾಡುವುವು. ಅವು ಅಲ್ಪಕಾಲದವೆ? ಎಂದರೆ, ಯಾವುವೋ ಕೆಲವು ತಕ್ಷಣದ ಕಾರಣಗಳಿಂದ ಉಂಟಾಗಿ ಸ್ವಲ್ಪದರಲ್ಲಿಯೆ ಮುಗಿಯುವಂತವುವೆ? ಅಥವಾ ಉತ್ಪತ್ತಿ ವ್ಯಾಪಾರಗಳ ಮೂಲ ಲಕ್ಷಣಗಳಿಗೆ ಸಂಬಂಧಪಟ್ಟು ತೊಡಕಾದವೆ? ಎಂಬುದನ್ನು ಸ್ಥಿತಿಜ್ಞರೂ ಹಣದ ಪೇಟೆಯವರೂ ದೂರದರ್ಶಿಗಳೂ ವಿಚಾರಮಾಡಿ ಆಯಾ ಸನ್ನಿವೇಶಕ್ಕೆ ತಕ್ಕ ಚಿಕಿತ್ಸೆಯನ್ನು ಆಲೋಚಿಸಬೇಕು; ಜನಜೀವನವನ್ನು ಈ ಬಗೆಯ ಸುಳಿಗಳಿಂದ ಉದ್ಧಾರ ಮಾಡಬೇಕು. ಸೆಂಟ್ರಲ್ ಬ್ಯಾಂಕಿನವರೂ ಸರಕಾರದವರೂ ಸಮಾಜದ ನೆರವಿಗೆ ನಿಲ್ಲಬೇಕು.

ಒಟ್ಟಿನಲ್ಲಿ ಸ್ಟಾಕ್ ಎಕ್ಸ್‌ಛೇಂಜಿನ ಪ್ರಯೋಜನವನ್ನು ಹೀಗೆ ತಿಳಿಸಬಹುದು: ಅದರ ವ್ಯಾಪಾರ ವಿಧಾನದಿಂದ ಬಂಡವಾಳಕ್ಕೆ ಹೆಚ್ಚು ಚಲನೆ, ಚೈತನ್ಯ ಬಂದು ದೇಶದಿಂದ ದೇಶಕ್ಕೆ ಉದ್ಯೋಗದಿಂದ ಉದ್ಯೋಗಕ್ಕೆ ಬಂಡವಾಳ ಸಂಚಾರಮಾಡಿ ಒದಗುವಂತಾಗುವುದು. ಪತ್ರಗಳಿಗೆ ಎಲ್ಲಿ

ಒಳ್ಳೆಯದಕ್ಕೆ ಕೆಟ್ಟದ್ದಕ್ಕೆ ಎರಡಕ್ಕೂ, ಸ್ಟಾಕ್ ಎಕ್ಸ್‌ಛೇಂಜುಗಳೂ ಅಲ್ಲಿನ ಸಾಹಸೀ ವರ್ತಕತನವೂ ಕೈಗಾರಿಕೆ ರಂಗದಲ್ಲಿಯೂ ಅದಕ್ಕೆ ಬೇಕಾಗುವ ಧನ ಚಾಲನೆಯಲ್ಲಿಯೂ ಈಗಿನ ಕಾಲದಲ್ಲಿ ಬಹು ಪ್ರಭಾವಯುತವಾಗಿರುವುದರಿಂದ ಅವು ಪ್ರಪಂಚದ ಸಂಪತ್ ಸ್ಥಿತಿಯನ್ನು ಹೆಚ್ಚು ಕಡಮೆ ಮಾಡಬಲ್ಲುವಾಗುತ್ತವೆ. ಇವರ ಕಾರ್ಯದಿಂದ ನಾಡುಗಳಿಗೆ ಹೊಸ ಋಣಸ್ಥಿತಿಗಳು—ಎಂದರೆ ಸಾಲಗಾರಿಕೆ, ಸಾಹುಕಾರಿಕೆ—ಏರ್ಪಡುತ್ತವೆ. ದೊಡ್ಡ ಬಂಡವಾಳಗಳೂ ಬಂಡವಾಳ ಮತ್ತು ಸಾಲಪತ್ರಗಳ ಒಡೆತನವೂ ಒಂದು ನಿಮಿಷದಲ್ಲಿ ರಾಜಕೀಯ ಎಲ್ಲೆಗಳನ್ನು ದಾಟಿ ಎಲ್ಲೆಲ್ಲಿಯೋ ನಟ್ಟು ನಿಲ್ಲುವಂತಾಗುತ್ತದೆ. ಹಿಂದೆ ಅಸಾಧ್ಯವಾಗಿದ್ದ ಅಂತರ್‌ರಾಷ್ಟ್ರೀಯ ಸಂಬಂಧಗಳೂ ಹಂಗು ಅಧೀನತೆಗಳೂ ಸ್ಥಾಪಿತವಾಗುತ್ತವೆ; ಒಂದೇ ರಾಷ್ಟ್ರದಲ್ಲಿ ಹಲವು ಪರಕೀಯ ರಾಷ್ಟ್ರಗಳವರು ಸಂಪದುತ್ಪತ್ತಿಕಾರ್ಯವನ್ನು ತಮ್ಮ ಅಧೀನಕ್ಕೆ ತಂದುಕೊಂಡು ನಾಡಿನ ಮಕ್ಕಳಿಗೆ ಪರದಾಸ್ಯವನ್ನು ಒಡ್ಡುವಂತೆ ಮಾಡುತ್ತದೆ; ಅಥವಾ ಒಂದು ರಾಷ್ಟ್ರ ತನ್ನ ಹಣಬಲದಿಂದ ಹಲವು ನಾಡುಗಳ ಕೈಗಾರಿಕೆ ಮಂಡಲದ ಮೇಲೆ ದಾಳಿ ಹೋಗಿ ಪ್ರತಿಸ್ಪರ್ಧಿಗಳನ್ನು ಮುರಿದು ತನ್ನ ಆಧಿಪತ್ಯವನ್ನು ಅಲ್ಲಿ ಸ್ಥಾಪಿಸುವಂತೆ ಮಾಡುವುದು. ಒಂದು ಕಡೆ ದೊಡ್ಡ ಬಂಡವಾಳಗಳು ಕೂಡುವುದು, ಇನ್ನೊಂದು ಕಡೆ ಆಸ್ತಿಪತ್ರ ಸಾಲಪತ್ರಗಳು ಉತ್ಪತ್ತಿಯಾಗುವುದು, ಬೇರೊಂದು ಕಡೆ ಸ್ಟಾಕ್ ಎಕ್ಸ್‌ಛೇಂಜುಗಳು ಆ ಪತ್ರಗಳ ಸ್ವಚ್ಛಂದ ಸಂಚಾರಕ್ಕೆ ನೆರವಾಗುವುದು, ಸರಕಾರಗಳವರು ಈ ಬಗೆಯ ಕೆಲಸ ಸಂಸ್ಥೆಗಳಿಗೆಲ್ಲ ಅನುಕೂಲವಾದ ಆವರಣವನ್ನು ಕಲ್ಪಿಸಿ ನೆರವಾಗುವುದು—ಇವೇ ಈ ಸ್ಥಿತಿ ಪರಿಣಾಮಗಳಿಗೆ ಮುಖ್ಯ ಕಾರಣವೆನ್ನಬಹುದು.

**ವ್ಯಾಪಾರದಲ್ಲಿ ಗರ್ತ ಆವರ್ತಗಳು.**—ಈ ಬಗೆಯ ನಿತ್ಯಸಂಭ್ರಮದಲ್ಲಿ ಬೇರೊಂದು ಬಗೆಯಲ್ಲಿ ಆಗಾಗ್ಗೆ ವಿಷಮತೆ ಬರುವುದುಂಟು. ಉತ್ಪತ್ತಿಕಾರರು ಉತ್ಪತ್ತಿ ಮಾಡುತ್ತ ಮಾಡುತ್ತ, ವ್ಯಾಪಾರದವರು ಕೊಳ್ಳುತ್ತ ಮಾರುತ್ತ ಇರುವಾಗ ಕೆಲವು ಸಮಯದಲ್ಲಿ ವ್ಯಾಪಾರವೂ ಪದಾರ್ಥಗಳಿಗೆ ಗಿರಾಕಿಯೂ ಹೆಚ್ಚುತ್ತಿರುವುದೆಂದು ಭ್ರಮಿಸಿ ಕೈಗಾರಿಕೆಗಳಿಗೆ ಅತಿಯಾಗಿ ಹಣವನ್ನು ಒದಗಿಸಿ, ಷೇರುಪತ್ರಗಳ ಬೆಲೆಯನ್ನು ಹೆಚ್ಚಿಸಿ, ಉತ್ಪತ್ತಿಯ

ಪ್ರಮಾಣವನ್ನು ಹೆಚ್ಚಿಸುವುದುಂಟು. ಇಂಥ ಸಮಯಗಳಲ್ಲಿ ಸಾಹಸಿಗಳೂ ದಲ್ಲಾಳರೂ ಈ ಉತ್ಸಾಹವನ್ನು ಮತ್ತೂ ಕೆರಳಿಸಿ, ಉತ್ಪತ್ತಿಯನ್ನೂ ಉತ್ಪತ್ತಿಪತ್ರಗಳ ಬೆಲೆಯನ್ನೂ ಒಂದು ಹುಚ್ಚಿಗೆ ಎತ್ತುವರು. ಎಷ್ಟು ದೂರವೆಂದರೆ ಅಷ್ಟು ದೂರ ಹೋಗಿ ಬೆಲೆಗಳೂ ಲಾಭವೂ ಹೆಚ್ಚುವಂತೆ ಮಾಡುವರು. ಆದರೆ ಅದಕ್ಕೆ ಒಂದಲ್ಲ ಒಂದು ಕಡೆ ತಡೆಬಂದು ಇದ್ದಕ್ಕಿದ್ದ ಹಾಗೆ ನಾಲ್ಕಾರು ಕಾರಣಗಳಿಂದ ಬೆಲೆ ಇಳಿದು, ಸಾಮಾನು ಮಾರಾಟ ವಾಗದೆ ಉಳಿದು, ಗಿರಾಕಿ ಸೊರಗಿ ವಿಮುಖವಾಗಿ, ಪತ್ರಗಳ ಬೆಲೆ ಬಿದ್ದು, ಎಲ್ಲೆಲ್ಲಿಯೂ ಹಾಹಾಕಾರವೂ ನಿಸ್ತೇಜವೂ ಉಂಟಾಗಿ ಕಾರ್ಯ ಮಂದ ವಾಗುವುದು. ಇದು ಒಂದು ಚಕ್ರದಂತೆ ನಡೆಯುವುದಾದ್ದರಿಂದ ಇದನ್ನು ವ್ಯಾಪಾರಚಕ್ರ ಅಥವಾ ಆವರ್ತ (Trade Cycle) ಎಂದು ಕರೆಯು ವುದುಂಟು. ಈಗಿನ ಕಾಲದ ಉತ್ಪತ್ತಿ, ಮಾರಾಟ, ಗಿರಾಕಿಯ ಪರಿಸ್ಥಿತಿಗಳ ಸ್ವಭಾವ ಲಕ್ಷಣದಿಂದಲೇ ಈ ರೀತಿಯಾದ ಅಸ್ಥಿರತ್ವುಂಟಾಗುವುದು. ಇಂಥ ಸಂದರ್ಭದಲ್ಲಿ ಸ್ಟಾಕ್ ಎಕ್ಸ್‌ಚೇಂಜ್ ದಲ್ಲಾಳರ ಸ್ಥಾನ ಬಹು ಜವಾಬ್ದಾರಿಯದು. ವ್ಯಾಪಾರದ ಈ ವಿಷಮ ಚಕ್ರಗಳು ಕೆಲವು ವೇಳೆ ೧೦–೧೧ ವರ್ಷಗಳ ಕಾಲದವರೆಗೂ ನಡೆದು ದೇಶಗಳಿಗೆ ಅನೇಕ ಅನಿಷ್ಟ ಗಳನ್ನುಂಟುಮಾಡುವುವು. ಅವು ಅಲ್ಪಕಾಲದವೆ? ಎಂದರೆ, ಯಾವುವೋ ಕೆಲವು ತಕ್ಷಣದ ಕಾರಣಗಳಿಂದ ಉಂಟಾಗಿ ಸ್ವಲ್ಪದರಲ್ಲಿಯೇ ಮುಗಿಯು ವಂತಹವೆ? ಅಥವಾ ಉತ್ಪತ್ತಿ ವ್ಯಾಪಾರಗಳ ಮೂಲ ಲಕ್ಷಣಗಳಿಗೆ ಸಂಬಂಧ ಪಟ್ಟು ತೊಡಕಾದವೆ? ಎಂಬುದನ್ನು ಸ್ಥಿತಿಜ್ಞರೂ ಹಣದ ನೀತಿಯವರೂ ದೂರದರ್ಶಿಗಳೂ ವಿಚಾರಮಾಡಿ ಆಯಾ ಸನ್ನಿವೇಶಕ್ಕೆ ತಕ್ಕ ಚಿಕಿತ್ಸೆಯನ್ನು ಆಲೋಚಿಸಬೇಕು; ಜನಜೀವನವನ್ನು ಈ ಬಗೆಯ ಸುಳಿಗಳಿಂದ ಉದ್ಧಾರ ಮಾಡಬೇಕು. ಸೆಂಟ್ರಲ್ ಬ್ಯಾಂಕಿನವರೂ ಸರಕಾರದವರೂ ಸಮಾಜದ ನೆರವಿಗೆ ನಿಲ್ಲಬೇಕು.

ಒಟ್ಟಿನಲ್ಲಿ ಸ್ಟಾಕ್ ಎಕ್ಸ್‌ಚೇಂಜಿನ ಪ್ರಯೋಜನವನ್ನು ಹೀಗೆ ತಿಳಿಸ ಬಹುದು: ಅದರ ವ್ಯಾಪಾರ ವಿಧಾನದಿಂದ ಬಂಡವಾಳಕ್ಕೆ ಹೆಚ್ಚು ಚಲನೆ, ಚೈತನ್ಯ. ಒಂದು ದೇಶದಿಂದ ದೇಶಕ್ಕೆ ಉದ್ಯೋಗದಿಂದ ಉದ್ಯೋಗಕ್ಕೆ ಬಂಡವಾಳ ಸಂಚಾರಮಾಡಿ ಒದಗುವಂತಾಗುವುದು. ಪತ್ರಗಳಿಗೆ ಎಲ್ಲ

ಹೆಚ್ಚು ಲಾಭ ದೊರೆಯುವುದೊ ಅಲ್ಲಿಗೆ ಸಾಗಲು ಅವಕಾಶವಾಗುವುದೇ ಇದರ ಕಾರಣ. ವ್ಯಾಪಾರಸ್ಥರಿಗೆ ಇಲ್ಲಿನ ಬೆಲೆಪಟ್ಟಿಗಳು ದಿಕ್ಸೂಚಿಗಳು. ಎರಡನೆಯದಾಗಿ, ಯಾವ ಯಾವ ಕಾರ್ಯಸಾಹಸಗಳ ಯೋಗ್ಯತೆ ಎಷ್ಟು ಎಂಬ ಸಂಗತಿ ಇಲ್ಲಿನ ಬೆಲೆಗಳಿಂದಲೂ ಕೊಳ್ಳಾಟ ಮಾರಾಟಗಳಿಂದಲೂ ಪರೀಕ್ಷಿತವಾಗುವುದು. ಆದುದರಿಂದ ಅವುಗಳ ಪರೀಕ್ಷೆ ಉತ್ಪತ್ತಿ ಪ್ರಪಂಚದ ನಾಡೀ ಪರೀಕ್ಷೆ. ಕೊಳ್ಳುವವರ ಮನಸ್ಸಿಗೆ ಆಕರ್ಷಣೆ ಕಾಣಿಸಿ ಅವರು ತಮ್ಮ ಬಂಡವಾಳವನ್ನು ಬೇಕಾದಲ್ಲಿ ಹೂಡುವಂತಾಗುವುದು. ಈ ವ್ಯಾಪಾರಗಳಲ್ಲಿ ಸಂಪೂರ್ಣ ಅನುಭವವುಳ್ಳವರು ಪತ್ರಗಳಿಗೆ ಹೇಗೆ ಬೆಲೆ ಕಟ್ಟುತ್ತಿದ್ದಾರೆ ಎಂದು ತಿಳಿಯುವುದರಿಂದ ಕೊಳ್ಳುವವರು ಸುಲಭವಾಗಿ ಕೊಂಡು ಮಾರುವವರು ಮಾರಲು ಅವಕಾಶವಾಗುವುದು. ಉದ್ಯೋಗ ಯಾವ ಮುಖಕ್ಕೆ ತಿರುಗಿ ನಡೆಯಬೇಕೆಂದು ನೇರವಾಗಿ ತೋರಿಸುವುದಲ್ಲದೆ ಈ ಸಂಸ್ಥೆ ಎಲ್ಲ ಪತ್ರಗಳ ಎಲ್ಲ ಬೆಲೆಯನ್ನೂ ಆಳುವುದು.

ಬೆಲೆಗಳಲ್ಲಿ ಅತಿಸೂಕ್ಷ್ಮವಾದ ವ್ಯತ್ಯಾಸಗಳಾದರೂ ಇಲ್ಲಿನ ವ್ಯಾಪಾರಗಳು ಅವಕ್ಕೆ ತಕ್ಕಹಾಗೆ ತೂಗಿ ತೊನೆಯುವುದರಿಂದಲೇ ಮುಂದಿನ ಕಷ್ಟನಷ್ಟಗಳು ಬಹುಮಟ್ಟಿಗೆ ನಿವಾರಿತವಾಗಬಲ್ಲುವು. ಹಣದ ಪೇಟೆಗೆ ತಿಳಿದಂತೆ ಉತ್ತಮವಾದ ಪತ್ರಗಳಾವುವು? ಯಾವ ಪತ್ರಕ್ಕೆ ನಗದಿನಷ್ಟೇ ಬೆಲೆಯಿದೆ? ಎಂದು ಸೂಚಿಸಿ ನಿಡುಬಡ್ಡಿಯ ಪೇಟೆಯಲ್ಲಿ ವ್ಯಾಪಾರದ ಬ್ಯಾಂಕುಗಳವರು ಹಣ ಹೂಡುವಂತೆ ಅವರಿಗೆ ಉತ್ತೇಜನಕೊಡುವುದು. ಬಡ್ಡಿಯ ದರಗಳಲ್ಲಿ ಇದ್ದಕ್ಕಿದ್ದಹಾಗೆ ಹೆಚ್ಚು ಕಡಮೆಗಳಾಗದಂತೆ ನೋಡಿಕೊಳ್ಳಲೂ ಈ ಪತ್ರಗಳು ಒದಗುತ್ತವೆ. ಬೇಕಾದಷ್ಟು ಪತ್ರಗಳು ಈ ಪೇಟೆಯಲ್ಲಿ ಸರ್ವದಾ ಅಣಿಯಾಗಿರುವುದರಿಂದ ಬೆಲೆಗಳ ಅತಿಗಳನ್ನು ತಪ್ಪಿಸಿ ವ್ಯಾಪಾರ ಅತ್ಯುತ್ತೇಜಿತವಾಗಿ ಕೆಡದಂತೆಯೂ ಅತಿಮಂದವಾಗದಂತೆಯೂ ಹಿಡಿದಿರಲು ಅವಕಾಶವಾಗುವುದು. ಆದರೆ ಇವುಗಳ ಕಾರ್ಯದ ಸೂಕ್ಷ್ಮತೆ, ತೀವ್ರತೆಗಳಿಂದ ರಾಷ್ಟ್ರದ ಬದುಕಿನ ಹದ ಒಂದು ನಿಮಿಷದಲ್ಲಿ ಕೆಡಬಹುದಾದ್ದರಿಂದ ಈಗಿನ ಎಲ್ಲ ಸರಕಾರಗಳೂ ಇವುಗಳನ್ನು ನಿಷ್ಠುರ ನಿರ್ಬಂಧಗಳಿಗೆ ಒಳಪಡಿಸುತ್ತಿವೆ.

# ಪ್ರಕರಣ ೮

## ಇತರ ಹಣ ಸಂಸ್ಥೆಗಳು

ಹಿಂದಿನ ಎರಡು ಪ್ರಕರಣಗಳಲ್ಲಿ ವಿವರಿಸಿದ ಸಂಸ್ಥೆಗಳ ಜೊತೆಗೆ ಹಣದ ಪೇಟೆಯಲ್ಲಿನ ಇನ್ನು ಕೆಲವು ಸೇರಿ ಕೈಗಾರಿಕೆ ಮಂಡಲಕ್ಕೆ ಹಣವೊದಗಿಸಲು ನೆರವಾಗುತ್ತವೆ. ಬಹುತರವಾಗಿ ಅವು ಸಣ್ಣ ಮೊತ್ತಗಳನ್ನು ಕೂಡಿಸಿ ಅವನ್ನು ಆರ್ಥಿಕ ಮಂಡಲಿಗಳ ಉಪಯೋಗಕ್ಕಾಗಿ ಕೊಡುತ್ತವೆ. ಸೇವಿಂಗ್ಸ್ ಬ್ಯಾಂಕುಗಳು, ವಿಮೆ ಕಂಪನಿಗಳು, ಪ್ರಾವಿಡೆಂಟ್ ಫಂಡುಗಳು, ಸಹಕಾರ ಸಂಘಗಳು, ಟ್ರಸ್ಟು ಕಂಪನಿಗಳು—ಇಂಥವುಗಳಲ್ಲಿ ಮುಖ್ಯವಾದುವು.

**ಸೇವಿಂಗ್ಸ್ ಬ್ಯಾಂಕುಗಳು.**—ಸೇವಿಂಗ್ಸ್ ಬ್ಯಾಂಕುಗಳು ಈಗ ಸಾಮಾನ್ಯವಾಗಿ ಎಲ್ಲ ದೇಶಗಳಲ್ಲಿಯೂ ಬಳಕೆಯಲ್ಲಿವೆ. ಅವು ಸರಕಾರಿ ಯಾಗಿಯೊ ಸಾಹುಕಾರಿಯಾಗಿಯೊ ಇರಬಹುದು. ಗುಣದಲ್ಲಿಯೂ ಕಾರ್ಯ ಸ್ವರೂಪದಲ್ಲಿಯೂ ಇವೆರಡಕ್ಕೂ ಯಾವ ವ್ಯತ್ಯಾಸವೂ ಇಲ್ಲ ದಿದ್ದರೂ ಕೂಡಿಸಿದ ಹಣ ವಿನಿಯೋಗವಾಗುವ ರೀತಿಯಲ್ಲಿ ನಿಜವಾದ ವ್ಯತ್ಯಾಸವಿದೆ.

ಸರಕಾರಿ ಸೇವಿಂಗ್ಸ್ ಬ್ಯಾಂಕುಗಳು ಸಾಧಾರಣವಾಗಿ ಆಯಾ ದೇಶಗಳ ಅಂಚೆ ಇಲಾಖೆಯ ಅಂಗಗಳಾಗಿ ನಡೆಯುವುವು. ಜನರು ಎಷ್ಟೇ ಅಲ್ಪ ಮೊತ್ತವನ್ನು ತಂದುಕೊಟ್ಟರೂ ಈ ಬ್ಯಾಂಕುಗಳವರು ತೆಗೆದು ಕೊಳ್ಳುತ್ತಾರೆ. ಹಣ ಸರಕಾರದ ಆಡಳಿತಕ್ಕೆ ಒಳಪಡುವುದಾದ್ದರಿಂದ ಜೋಪಾನವೆಂದು ಎಲ್ಲರಿಗೂ ನಂಬಿಕೆ. ಕೇಳಿದಾಗ ಹಿಂದಕ್ಕೆ ಬರುವುದ ರಿಂದ ನಂಬಿಕೆ ನಿಲ್ಲುವುದು. ಈ ಹಣದ ಮೇಲೆ ಸಿಕ್ಕುವ ಬಡ್ಡಿ ಬಹು ಸ್ವಲ್ಪ. ಅಂಚೆ ಕಚೇರಿಯ ಮೂಲಕ ನಡೆಯುವ ಕೆಲಸ ದೇಶವ್ಯಾಪಿ ಶಾಲ ವಾಗುವುದರಿಂದ ವ್ಯಕ್ತಿಗಳು ತಲೆಯೊಂದಕ್ಕೆ ಕಡಮೆಯಾಗಿಯೇ ಕೂಡಿಟ್ಟರೂ ಮೊತ್ತದಲ್ಲಿ ಸರಕಾರದ ಕೈಗೆ ಬಹಳ ಹಣ ಬರುತ್ತದೆ. ಜನರು ಈ ಹಣವನ್ನು ಬೇಗನೆ ಹಿಂದಕ್ಕೆ ತೆಗೆದುಕೊಳ್ಳುವ ಸಂಭವ ಕಡಮೆ. ಆದ್ದರಿಂದ ಈ ಮೊತ್ತಕ್ಕೆ ಸರಕಾರದವರು ತಮ್ಮ ಸಾಲಪತ್ರಗಳನ್ನು ಕೊಂಡಿಡುವುದು ರೂಢಿ.

ಸಾಹುಕಾರಿ ಸೇವಿಂಗ್ಸ್ ಬ್ಯಾಂಕುಗಳಲ್ಲಿ ಅನೇಕ ಬಗೆ ಉಂಟು. ಸೇವಿಂಗ್ಸನ್ನು ಕೂಡಿಸುವ ಕೆಲಸವನ್ನು ಎಲ್ಲ ಬ್ಯಾಂಕುಗಳವರೂ ಮಾಡುವರು. ಬ್ಯಾಂಕುಗಳ ಶಾಖೋಪಶಾಖೆಗಳು ದೇಶದಲ್ಲಿ ಹಬ್ಬಿದಷ್ಟೂ ಈ ಕೆಲಸಕ್ಕೆ ಅವಕಾಶ ಹೆಚ್ಚು. ಈ ಹಣದ ಮೇಲೆ ದೊಡ್ಡ ಬ್ಯಾಂಕುಗಳವರು ಹೆಚ್ಚು ಬಡ್ಡಿ ತೆರುವುದಿಲ್ಲವಾದರೂ ಈ ಮೂಲಕ ಹೆಚ್ಚು ಹಣ ಕೂಡಿಸಬಹುದೆಂದು ತಿಳಿದು ತಮ್ಮಲ್ಲಿಗೆ ಬರುವ ಕುಳಗಳಿಗೆ ಇತರರಿಗೆ ಕೊಡುವ ಸೌಕರ್ಯವನ್ನೆಲ್ಲ ಒದಗಿಸಲು ಸಿದ್ಧರಾಗುವರು. ಇವುಗಳಲ್ಲದೆ ಟ್ರಸ್ಟೀ ಸೇವಿಂಗ್ಸ್ ಬ್ಯಾಂಕುಗಳೆಂದೂ, ಸಹಕಾರದ ಸೇವಿಂಗ್ಸ್ ಬ್ಯಾಂಕುಗಳೆಂದೂ, ಸ್ಟ್ಯಾಕ್ ಸೇವಿಂಗ್ಸ್ ಬ್ಯಾಂಕುಗಳೆಂದೂ ಸಂಸ್ಥೆಗಳುಂಟು. ಮೊದಲನೆಯವು ಕೆಲವರ ಪರೋಪಕಾರ ಬುದ್ಧಿಯಿಂದ ಏರ್ಪಟ್ಟು ನಡೆಯುವುವು. ಸಹಕಾರ ಸಂಸ್ಥೆಗಳಲ್ಲಿ ಷೇರುದಾರರೇ ಈ ಕೆಲಸಕ್ಕೆ ಉತ್ತೇಜನವನ್ನು ಕೊಡುವರು. ಹಣವಂತರಲ್ಲದವರಿಗೆ ನೆರವಾಗಬೇಕೆಂದೂ, ಸದಸ್ಯರಲ್ಲಿ ಹಣ ಕೂಡಿಡುವ ಬುದ್ಧಿಯನ್ನು ಬೆಳಸಬೇಕೆಂದೂ ಈ ಬಗೆಯ ಸಂಸ್ಥೆಗಳ ಉದ್ದೇಶ. ಮೂರನೆಯವು ಕೇವಲ ಇತರ ಕಂಪನಿಗಳಂತೆ ಲಾಭಕ್ಕಾಗಿ ಕೆಲಸಮಾಡುವುವು.

ಈ ಎಲ್ಲ ಸಂಸ್ಥೆಗಳ ಮುಖ್ಯಗುರಿ ಜನರಲ್ಲಿ ಮಿತವ್ಯಯ ಬುದ್ಧಿಯನ್ನೂ ಹಣ ಕೂಡಿಟ್ಟು ಬಡ್ಡಿಗೆ ಹಾಕುವ ಅಭ್ಯಾಸವನ್ನೂ ಹೆಚ್ಚಿಸಬೇಕೆಂಬುದು; ತಮ್ಮಲ್ಲಿ ಅವರು ಕೂಡಿಟ್ಟ ಹಣವನ್ನು ಭದ್ರವಾಗಿ ಕಾಪಾಡುವುದು. ವ್ಯಾಪಾರದ ಬ್ಯಾಂಕುಗಳು ಹೇಗೆ ಕಿರುವಾಯಿದೆ ಸಾಲಗಳನ್ನು ಕೊಟ್ಟು ಯಾವಾಗ ಬೇಕೆಂದರೆ ಆಗ ಪೇಟೆಯಲ್ಲಿ ನಗದಿಗೆ ತಿರುಗಬಲ್ಲ (Liquid) ಸಾಲಪತ್ರಗಳನ್ನೇ ಕೊಂಡು ಹಣವನ್ನು ಕೈಯಲ್ಲಿ ಇಟ್ಟುಕೊಳ್ಳುವರೋ ಆ ರೀತಿ ಇದು ಬೇಕಾಗಿರುವುದಿಲ್ಲವಾಗಿ ಈ ಹಣವನ್ನು ನಂಬಿಕೆಯಾದ ನಿಡುಸಾಲದ ಪತ್ರಗಳನ್ನು ಕೊಳ್ಳಲು ವಿನಿಯೋಗಿಸುತ್ತಾರೆ.

**ವಿಮೆ ಕಂಪನಿಗಳು.**—ವಿಮೆ ಕಂಪನಿಗಳೂ, ಪ್ರಾವಿಡೆಂಟ್ ಫಂಡು ಏರ್ಪಾಡೂ ಹೀಗೆಯೇ ಸರಕಾರಿ ಅಥವಾ ಸಾಹುಕಾರಿ ಆಡಳಿತದಲ್ಲಿರಬಹುದು. ಇಲ್ಲಿಯೂ ಅನೇಕ ಜನರಿಂದ ಸಣ್ಣ ಸಣ್ಣದಾಗಿ ಸಂಗ್ರಹಿಸಿದ ಹಣದ ಮೊತ್ತ ದೊಡ್ಡದಾಗಿ, ಈ ಸಂಸ್ಥೆಗಳ ಕೈಗೆ ಬರುವುದು. ಆ ಹಣ

ವನ್ನು ಬಡ್ಡಿಯನ್ನೊ ಲಾಭವನ್ನೊ ಸಂಪಾದಿಸುವ ಕಾರ್ಯಗಳಿಗೆ ಹೂಡುವಂತೆ ಏರ್ಪಾಡಾಗುವುದು. ಸರಕಾರದ ವಿಮೆ ಮತ್ತು ಪ್ರಾವಿಡೆಂಟ್ ಫಂಡುಗಳ ವ್ಯವಸ್ಥೆಯಿಂದ ದೊರೆತ ಹಣವನ್ನು ಸರಕಾರಿ ಸಾಲಪತ್ರಗಳನ್ನು ಕೊಳ್ಳುವುದಕ್ಕೆ—ವಿಶೇಷ ಕಾಲಗಳಲ್ಲಿ ಕೆಲವು ವೇಳೆ ಸಾಮಾನ್ಯ ವೆಚ್ಚಕ್ಕೆ ಕೂಡ—ಹೂಡುವರು.

ಸಾಹುಕಾರಿ ವಿಮೆ ಕಂಪನಿಗಳು ಒಂದು ಕಡೆ ಎಲ್ಲ ಬಗೆಯ ಜನರಿಂದಲೂ ಸುಲಭವಾದ ಕಂತುಗಳ ಮೂಲಕ ಹಣವನ್ನು ಶೇಖರಿಸುತ್ತವೆ. ಹಾಗೆ ಕೂಡಿಸಿದುದನ್ನು ತಮಗೆ ತೋರಿದಂತೆ ಸರಕಾರಿ, ವ್ಯಾಪಾರ, ಕೈಗಾರಿಕೆ ಮುಂತಾದ ಪತ್ರಗಳನ್ನು ಕೊಳ್ಳಲು ಉಪಯೋಗಿಸಿ ಲಾಭವನ್ನು ಸಂಪಾದಿಸುತ್ತವೆ. ಸೇವಿಂಗ್ಸ್ ಬ್ಯಾಂಕುಗಳಲ್ಲಿ ನೇರವಾಗಿ ಜನರಿಂದ ಹಣ ಬರುವುದು. ಅದರಲ್ಲಿ ಸ್ವಲ್ಪವಾದ ಬಡ್ಡಿ ನಿಯತವಾಗಿ ನೇರವಾಗಿ ವರ್ಷೇವರ್ಷೆ ಡಿಪಾಸಿಟ್ ದಾರರಿಗೆ ಸಿಕ್ಕುತ್ತದೆ. ಈ ಹಣ ಹೇಗೆ ವಿನಿಯೋಗವಾಗುವುದೆಂಬ ಚಿಂತೆಯಾಗಲಿ ತಿಳಿವಳಿಕೆಯಾಗಲಿ ಡಿಪಾಸಿಟ್ ದಾರರಿಗಿರುವುದಿಲ್ಲ. ವಿಮೆ ಕಂಪನಿಗಳಲ್ಲಿ ಹಣವನ್ನೊದಗಿಸುವ ರೀತಿಯೂ ವಿನಿಯೋಗವಾಗುವ ರೀತಿಯೂ ಬೇರೆ. ಅಲ್ಲಿನಷ್ಟು ನೇರವಲ್ಲ; ಬಳಸು. ವಿಮೆ ಕಂಪನಿಗಳನ್ನೂ ಹಣವನ್ನು ಬಡ್ಡಿ ಲಾಭಗಳಿಗೆ ಹೂಡುವ ಒಂದು ಬಗೆಯ ಬ್ಯಾಂಕು (Investment Bank) ಎಂದೇ ಹೇಳಬಹುದಾದರೂ ಹೆಸರು ಬೇರೆ; ವ್ಯವಹಾರ ಬೇರೆ.

ತಿಂಗಳು ತಿಂಗಳಿಗೂ ವರ್ಷಕ್ಕೆ ಇಷ್ಟು ಎಂದೂ ಕಿರು ಕಂತು ಕಟ್ಟುತ್ತ ಬಂದರೆ ಸಾಕು; ಇಷ್ಟು ವರ್ಷಕ್ಕೆ ಸರಿಯಾಗಿ, ಅಥವಾ ಅಷ್ಟರೊಳಗೇ ಆತನ ಮರಣ ಉಂಟಾದರೆ, ಇಷ್ಟು ಹಣವನ್ನು ಕಂಪನಿ ಹಿಂತಿರುಗಿಸಲು ಬದ್ಧವಾಗಿದೆ ಎಂದು ಆಸೆ ತೋರಿಸಿ ಜನರಿಂದ ವಿಮೆ ಮಾಡಿಸುವರು. ಕಂತಿನ ಮೂಲಕ ಬಂದ ಹಣವನ್ನೆಲ್ಲಾ ತಮಗೆ ಸೂಕ್ತ ತೋರಿದಂತೆ ಬಡ್ಡಿಗೂ ಬಂಡವಾಳಕ್ಕೂ ಹಾಕುವರು. ಆ ಮೂಲಕ ಎಷ್ಟು ಲಾಭವನ್ನು ಬೇಕಾದರೂ ಪಡೆದುಕೊಳ್ಳುವಂತೆ ಹಣ ಹೂಡುವುದಕ್ಕೆ ಅವರಿಗೆ ಸ್ವಾತಂತ್ರ್ಯವಿರುತ್ತದೆ. ಗೊತ್ತಾದ ಕಾಲದ ಗಡು ಬರುವವರೆಗೂ ವಿಮೆ ಕಂಪನಿಗಳು ಯಾವ ಬಗೆಯಲ್ಲಿಯೂ ವಿಮೆ ಮಾಡಿಕೊಂಡವರಿಗೆ ಹಣವನ್ನು

ಹಿಂದಕ್ಕೆ ಕೊಡಬೇಕಾಗಿಲ್ಲವಾದ್ದರಿಂದ, ಕಂಪನಿಯವರು ತಮ್ಮ ಇಷ್ಟ ಬಂದಂತೆ ಕಿರುಗಾಲದ ಸಾಲಗಳಿಗೂ, ನಿಡುಸಾಲದ ಪೇಟೆಗೊ ಒದಗಿಬಂದು ಹಣ ಹೂಡಬಹುದು — ವ್ಯಾಪಾರ ಕೈಗಾರಿಕೆಗಳ ಚಾಲನೆಗೆ ಪೋಷಣೆ ಕೊಡಬಹುದು.

ವಿಮೆಯ ತತ್ತ್ವವನ್ನು ಸ್ಥೂಲವಾಗಿ ಹೀಗೆ ಹೇಳಬಹುದು: ಸಂಪಾದನೆ ಮಾಡುವ ಜನರು ವರ್ಷಕ್ಕೊಂದುಸಲದಂತೆಯೊ ಅಥವಾ ಇನ್ನೂ ಹಗುರವಾದ ಕಂತುಗಳಲ್ಲಿಯೊ ಗೊತ್ತಾಗಿ ಇಷ್ಟೆಂದು ಪ್ರೀಮಿಯಂ ಎಂಬ ಹೆಸರಿನಲ್ಲಿ ತಮ್ಮ ವಿಮೆ ಲೆಕ್ಕಕ್ಕೆ (Policy) ಕಂಪನಿಗೆ ಕಂತು ಕಟ್ಟುವರು. ಆ ಹಣಕ್ಕೆ ಲಾಭ ಸೇರಿಸಿಯೊ ಇಲ್ಲದೆಯೊ ಗೊತ್ತಾದ ಒಂದು ಕಾಲಕ್ಕೆ ವಿಮೆ ಮಾಡಿರುವ ಹಣವನ್ನು ಕಂಪನಿ ಹಿಂದಕ್ಕೆ ಕೊಡುವುದು. ಅಷ್ಟರೊಳಗೇ ಕಂತು ತೆರುವ ಕುಳ ತೀರಿಕೊಂಡರೆ (ಅವರೆಗೆ ಒಂದೇ ಕಂತು ಕಟ್ಟಿದ್ದರೂ ಅಡ್ಡಿಯಿಲ್ಲ) ಆತನ ಹೆಂಡತಿ ಮಕ್ಕಳಿಗೆ ಅಥವಾ ಹಕ್ಕುದಾರರಿಗೆ ವಿಮೆ ಪತ್ರದಲ್ಲಿ ಒಪ್ಪಂದವಾಗಿರುವ ಒಟ್ಟು ಹಣವನ್ನು ಕಂಪನಿ ಕೊಟ್ಟು ಬಿಡುತ್ತದೆ. ಇಲ್ಲಿ ಎರಡು ಬಗೆಯ ಅನುಕೂಲವಿದೆ: ಸ್ವಲ್ಪ ಸ್ವಲ್ಪ ಕಂತು ಕಟ್ಟಿ ಕಾಲ ಮುಗಿದ ಮೇಲೆ ಒಟ್ಟಾಗಿ ದೊಡ್ಡ ಮೊತ್ತವನ್ನು ಪಾಲಿಸಿ ದಾರನು ವಿಶೇಷ ಸಮಯಕ್ಕೊ ವೃದ್ಧಾಪ್ಯಕ್ಕೊ ಬಡ್ಡಿ ಲಾಭಗಳೊಡನೆ ಹಿಂತಿರುಗಿ ಪಡೆಯಬಹುದು. ಅವರೆಗೂ ಕುಳ ಬದುಕದೆಹೋದರೆ ತನ್ನವರಿಗೆ ಕಂಪನಿಯು — ಎಂದರೆ ಇತರ ವಿಮೆದಾರರ! — ವೆಚ್ಚದಲ್ಲಿ ತಕ್ಕಮಟ್ಟಿನ ಆಸ್ತಿಯನ್ನಿಟ್ಟು ಹೋಗಬಹುದು.* ಇತ್ತ ಕಂಪನಿಗೆ ಅನೇಕರ ಕಂತುಗಳು ಕಾಲಕ್ಕೆ ತಪ್ಪದೆ ಕೈಗೆ ಬರುತ್ತಿರುವುವು. ಅವರು ಆ ಹಣದಿಂದ ವ್ಯಾಪಾರ, ಕೈಗಾರಿಕೆ ಉದ್ಯೋಗಗಳಿಗೂ, ಸರಕಾರಕ್ಕೂ ಸಾಲವನ್ನು ಒದಗಿಸಿ, ಸಂಪಾದನೆ ಮಾಡಿಕೊಳ್ಳುವುದೂ ಸ್ವಂತ ಆಸ್ತಿಯನ್ನು ಬಲಪಡಿಸಿಕೊಳ್ಳು ವುದೂ ಸಾಧ್ಯವಾಗುವುದು. ವಿಮೆಯ ಒಪ್ಪಂದವನ್ನು ಬರೆದುಕೊಡುವ ಮುಂಚೆಯೇ ಕಂಪನಿ ಕುಳದ ಆರೋಗ್ಯಸ್ಥಿತಿಯನ್ನು ತನ್ನ ವೈದ್ಯರ ಮೂಲಕ ಪರೀಕ್ಷೆ ಮಾಡಿಸಿಕೊಂಡು, ಅವನ ಆರೋಗ್ಯದ ಚರಿತ್ರೆ, ಅವನ ವಂಶದಲ್ಲಿ

* ಬದುಕಿ ಕಂತು ಕಟ್ಟುತ್ತಿರುವವರಿಗಿಂತ ಬೇಗನೆ ಸಾಯುವ ಜನರಿಗೆ ವಿಮೆಯ ಪ್ರಯೋಜನ ಹೆಚ್ಚೆಂದು ಹಾಸ್ಯಕ್ಕೆ ಹೇಳುವುದುಂಟು.

ಜನರ ಆಯುರ್ದಾಯ ವಿಶೇಷ ಮುಂತಾದ ಸಂಗತಿಗಳನ್ನು ಗೊತ್ತುಮಾಡಿಕೊಂಡು ಇಂತಹವನು ಇಷ್ಟು ಕಾಲ ಬದುಕಬಲ್ಲನೆಂಬ ಭರವಸೆಯನ್ನಿಟ್ಟುಕೊಂಡೇ ವಿಮೆಯ ಪತ್ರವನ್ನು ಬರೆದುಕೊಡುವರಾದ್ದರಿಂದ, ಅವರಲ್ಲಿ ಬಹುಮಂದಿ ಬಹು ಬೇಗ ಅಥವಾ ಯಾವುದಾದರೂ ಒಂದೇ ಕಾಲದಲ್ಲಿ ಸಾಯುವ ಸಂಭವವಿಲ್ಲ. ಬದುಕಿ ಕಂತು ಕೊಡುತ್ತಿರುವವರ ಸಂಖ್ಯೆಯೇ ಹೆಚ್ಚು. ಎಷ್ಟು ಜನ ಪಾಲಿಸಿದಾರರಿಗೆ ಒಟ್ಟು ಹಣ ತೆರಬೇಕಾಗಿ ಬಂದರೂ ಅದನ್ನು ತೆರಲು ಶಕ್ತರಾಗಿರುವಂತೆ ಕಂಪನಿಯವರು ತಮ್ಮ ಪಾಲಿಸಿದಾರರ ಸಂಖ್ಯೆಯನ್ನೂ, ಅವರು ಕೊಡುವ ಕಂತಿನ ಮೊತ್ತವನ್ನೂ, ತಮ್ಮ ಆಸ್ತಿಯನ್ನೂ ಹೆಚ್ಚು ಮಾಡಿಕೊಳ್ಳಲು ಸಂತತವಾಗಿ ಪ್ರಯತ್ನಿಸುತ್ತಿರುವರು. ಅಲ್ಲದೆ ಎಲ್ಲೆಲ್ಲಿಯೂ ಸರಕಾರಗಳವರು ತಮ್ಮ ನೌಕರರು ಕಡ್ಡಾಯವಾಗಿ ವಿಮೆ ಮಾಡಬೇಕೆಂದು ಸೂಚಿಸಿ ತಾವು ತಿಂಗಳು ತಿಂಗಳಿಗೂ ಕೊಡುವ ಸಂಬಳದಲ್ಲಿಯೇ ಆ ಹಣವನ್ನು ಮುರಿದುಕೊಳ್ಳುವರು. ವರಮಾನದ ತೆರಿಗೆ ಹಾಕುವಾಗ ವಿಮೆ ಕಂತಿಗಾಗಿ ವೆಚ್ಚವಾಗುವ ಹಣವನ್ನು ಕಳೆದು ಉಳಿದ ಮೊತ್ತದ ಮೇಲೆ ಮಾತ್ರ ತೆರಿಗೆ ಎತ್ತಬೇಕೆಂದು ವ್ಯವಸ್ಥೆ ಮಾಡುವುದರಿಂದ ಆ ಮಟ್ಟಿಗೆ ಆ ಕೆಲಸಕ್ಕೆ ಉತ್ತೇಜನ ಕೊಟ್ಟ ಹಾಗೂ ಆಗುವುದು.

ಈಗ ಸಾಧಾರಣವಾಗಿ ಎಲ್ಲ ಬಗೆಯ ನಷ್ಟಗಳನ್ನೂ ವಿಮೆಯ ಮೂಲಕ ತುಂಬಿಕೊಳ್ಳುವ ಏರ್ಪಾಡಿರುವುದು. ಕೊಳ್ಳುವಾಗ, ಮಾರುವಾಗ, ಸಂಪಾದನೆಯಲ್ಲಿ, ನಿರುದ್ಯೋಗದಲ್ಲಿ, ಅನಾರೋಗ್ಯದಲ್ಲಿ, ಅಂಗವಿಕಲತೆಯಲ್ಲಿ, ಆಸ್ತಿಯ ನಷ್ಟದಲ್ಲಿ, ಆಕಸ್ಮಿಕ ಘಟನೆಯಲ್ಲಿ, ಬೆಂಕಿ, ನೀರು, ಬೇನೆ, ವೃದ್ಧಾಪ್ಯ, ಪ್ರಯಾಣ, ಮೋಸ, ತಾಪುರ—ಇವುಗಳಿಂದ ಉಂಟಾಗಬಹುದಾದ ಎಲ್ಲ ನಷ್ಟ ಕೇಡುಗಳನ್ನೂ ತುಂಬಿಕೊಡುವಂತೆ ಮೊದಲಿಂದಲೂ ಕಂತು ಕಟ್ಟಿ ಅದೃಷ್ಟವನ್ನು ತಮ್ಮ ಕಡೆ ತಿರುಗಿಸಿಕೊಳ್ಳುವ ವ್ಯವಸ್ಥೆಗೆ ಅವಕಾಶವುಂಟು. ಬಾಳಿನ ಎಲ್ಲ ರಂಗಗಳಲ್ಲಿಯೂ ವಿಮೆ ಈಗ ವ್ಯಾಪಕವಾಗಿ ಜನರಿಗೆ ನಷ್ಟ ದಾಟುವ ಸೌಲಭ್ಯವನ್ನು ಕಲ್ಪಿಸಿಕೊಟ್ಟಿದೆ. ಮಕ್ಕಳ ಮದುವೆಗೆ, ವಿದ್ಯಾಭ್ಯಾಸಕ್ಕೆ, ಮುಂದಿನ ಬಂಡವಾಳಕ್ಕೆ, ದೇಶವಿದೇಶಗಳಲ್ಲಿ ಸಂಚಾರಕ್ಕೆ, ವಿನೋದ ವಿಹಾರಕ್ಕೆ ಹಣ ಒದಗಲೆಂದು ತಂದೆ ತಾಯಿಯರು ಈ ಮೂಲಕ ಹಣವನ್ನು ಸಂಗ್ರಹಿಸಿಡಲು ಅನುಕೂಲ

ವಿರುವುದು. ವಿಮೆ ಮಾಡಿರುವವರು ಆರೋಗ್ಯವಂತರಾಗಿ ಬದುಕಿ, ಸಂಪಾದಿಸುವರಾಗಿ ಇರುವವರೆಗೂ ಕಂಪನಿಗೆ ಕಂತು ಸಲ್ಲುತ್ತಿರುವುದು; ಲಾಭ ಬರುತ್ತಿರುವುದು. ಆದ್ದರಿಂದ ವಿಮೆ ಕಂಪನಿಗಳವರು ಅನೇಕವೇಳೆ ಜನಗಳ ಆರೋಗ್ಯಕ್ಕೂ ಉದ್ಯೋಗಕ್ಕೂ ಬೇಕಾದ ಸೌಕರ್ಯಗಳನ್ನು ಕಲ್ಪಿಸಿಕೊಡುವುದುಂಟು. ನಾವು ದೃಢವಾಗಿ ಪಟುವಾಗಿ ದೀರ್ಘಾಯು ಗಳಾಗಿರಬೇಕೆಂದು ನಮ್ಮನ್ನು ಹೆತ್ತವರಿಗೂ ಕೈಹಿಡಿದವರಿಗೂ ಎಷ್ಟು ಹಾರೈಕೆಯಿರಬಹುದೊ, ನಮ್ಮ ವಿಮೆ ಕಂಪನಿಯವರಿಗೂ ಇನ್ನೊಂದು ದೃಷ್ಟಿಯಿಂದ ಅಷ್ಟೇ ಹಾರೈಕೆಯಿರುವುದು.

ವಿಮೆ ಕಂಪನಿಗಳಲ್ಲಿ ಹಲವು ಬಹಳ ಪ್ರಬಲವಾಗಿ ಇಡಿಯ ಪ್ರಪಂಚ ದಲ್ಲಿ ತಮ್ಮ ಕಾರ್ಯಕ್ಷೇತ್ರವನ್ನು ಕೃಷಿಮಾಡಿಕೊಂಡಿರುತ್ತವೆ. ಅವುಗಳ ಕೈಗೆ ಬರುವ ಹಣ, ಒಟ್ಟಿನಲ್ಲಿ ನೂರಾರು ಕೋಟಿ ರೂಪಾಯಿಗಳಾಗುವುವು.* ಅವು ಖಾಸಗಿ ಕಂಪನಿಗಳಾದರೆ ಅವರ ಕಾರ್ಯಕಲಾಪ ವ್ಯವಸ್ಥೆಯಲ್ಲಿ ಸರಕಾರದ ಕೈಯೇನೂ ನಡೆಯುವುದಿಲ್ಲ; ಅವರ ಆದಾಯ ವೆಚ್ಚವನ್ನು ಹದ್ದಿನಲ್ಲಿಡಲು ನೇರವಾದ ಅಧಿಕಾರವಿರುವುದಿಲ್ಲ. ಇಂತಹವರ ಕೈಯಲ್ಲಿ ಓಡಿಯಾಡುವ ಹಣದಿಂದ ಹಣದ ಪೇಟೆಗೆ ಅನುಕೂಲ ಪ್ರತಿಕೂಲಗಳೆರಡೂ ಆಗಬಹುದು; ಇವರ ಸಹಕಾರದಿಂದ ಅನೇಕ ಉದ್ಯೋಗಗಳ ಏಳು, ಬೀಳು ನಿರ್ಧರವಾಗಬಲ್ಲವು; ಸಹಕರಿಸದಿದ್ದರೆ ಪುಷ್ಟಿಯಿಲ್ಲದೆ ಬಣಗಿಹೋಗ ಬಹುದು.

ಇವುಗಳಮೇಲೆ ಸರಕಾರದ ಅಂಕೆಯಿರುವುದು ಒಂದು ಸಂದರ್ಭ ದಲ್ಲಿ ಅತ್ಯಗತ್ಯವಾಗುತ್ತದೆ: ಸ್ವದೇಶಿ ಕಂಪನಿಗಳು ಎಷ್ಟೇ ಸಂಖ್ಯೆಯಲ್ಲಿ ಹುಟ್ಟಿ ಎಷ್ಟೇ ಮೊತ್ತದಲ್ಲಿ ಹಣ ಸಂಗ್ರಹಿಸಿ ಪೇಟೆಗೆ ಬಲಕೊಡಲಿ ಅಥವಾ ಖುಷಿ ಬಂದಂತೆ ಹಣವನ್ನು ಬಡ್ಡಿಗೆ ಹೂಡಲಿ ದೇಶಕ್ಕೆ ಪ್ರಯೋಜನವುಂಟು. ಹಾಗಲ್ಲದೆ ವಿದೇಶಿ ಕಂಪನಿಗಳ ಪ್ರಾಬಲ್ಯ ಹೆಚ್ಚಾಗಿ ಇಲ್ಲಿ ಕೈಗೆ ಬಂದುದ ನ್ನೆಲ್ಲಾ ಅವರು ತಮ್ಮ ದೇಶಕ್ಕೆ ಸಾಗಿಸಿ ಅಲ್ಲಿನ ಪತ್ರಗಳಲ್ಲಿ ಹೂಡುತ್ತ

* ಇಂಗ್ಲಂಡಿನಲ್ಲಿ ಕೈಗೆ ಬಂದಿರುವ ಕಂತಿನ ಹಣ ಒಟ್ಟು ಸೇರಿ £ ೧೨೮ ಕೋಟಿ; ಪಾಲಿಸಿಗಳ ಮೊತ್ತ £ ೨೯೦ ಕೋಟಿ. ಸನ್ ಲೈಫ್, ರಿಲೈಯನ್ಸ್, ರಾಯಲ್ ಎಕ್ಸ್‌ಛೇಂಜ್ ಮುಂತಾದ ವಿಮೆ ಕಂಪನಿಗಳಲ್ಲಿ ಒಂದೊಂದರ ಹಣವೂ ೪೦–೫೦ ಕೋಟಿ ರೂಪಾಯಷ್ಟಾಗುವುದು.

ಹೋದರೆ ಮಾತ್ರ ಈ ದೇಶಕ್ಕೆ ಕೇಡು. ತಮ್ಮ ಆಸ್ತಿಯಿಂದ ಒಳದೇಶದ ಕಂಪನಿಗಳೊಡನೆ ಪೈಪೋಟಿಗೆ ನಿಂತು ಇವರ ಕೆಲಸವನ್ನು ಕೆಡಿಸಿ ತಾವು ಹಣವನ್ನು ಆಕರ್ಷಿಸಿಕೊಳ್ಳಲು ಬಹಳ ಅವಕಾಶವಿದೆ. ಇಲ್ಲಿನ ಕೈಗಾರಿಕೆಗಳಿಗೇ ಬಂಡವಾಳವಿಲ್ಲದಿರುವಾಗ ಇದ್ದ ಹಣ ಬೇರೆದೇಶಕ್ಕೆ ಸಾಗುತ್ತಿದ್ದರೆ ಇಲ್ಲಿ ಏಳಿಗೆ ಹೇಗುಂಟಾಗಬೇಕು?

**ಪ್ರಾವಿಡೆಂಟ್ ಫಂಡುಗಳು.** — ವಿಮೆ ಪದ್ಧತಿಯಂತೆಯೇ ಪ್ರಾವಿಡೆಂಟ್ ಫಂಡಿನ ರೀತಿಯೂ: ಮುಂದೆ ಕಷ್ಟಕಾಲಕ್ಕೂ ಇತರ ಸಮಯಗಳಿಗೂ ಸಹಾಯವಾಗಿರಲಿ ಎಂದು ಐಚ್ಛಿಕವಾಗಿಯೋ ಒಡೆಯರ ಬಲಾತ್ಕಾರದಿಂದಲೋ ಸ್ವಲ್ಪ ಸ್ವಲ್ಪವಾಗಿ ಈ ನಿಧಿಗಳಿಗೆ ನೌಕರರ ಅಥವಾ ಸಂಘಗಳ ಹಣ ಕೂಡುವುದು. ಇವು ಕಷ್ಟಕಾಲಕ್ಕೆ ಒದಗುವ ನಿಧಿಗಳು. ಅನೇಕ ವೇಳೆ ನೌಕರನಷ್ಟು, ಒಡೆಯರಷ್ಟು, ಸರಕಾರವಷ್ಟು ತಿಂಗಳು ತಿಂಗಳಿಗೂ ಕಂತು ಕಟ್ಟಿ ನೌಕರನು ಕೆಲಸವನ್ನು ಬಿಟ್ಟು ಹೋಗುವಾಗಲೋ, ಅಥವಾ ಅವನು ವೃದ್ಧನಾದರೂ ಗೊತ್ತಾದ ಕಾಲಕ್ಕೋ ಮೊತ್ತದಲ್ಲಿ ಬಡ್ಡಿ ಸೇರಿಸಿ ಹಣವನ್ನು ಹಿಂತಿರುಗಿ ಕೊಡುವುದು ರೂಢಿ. ಕೆಲವು ಕಡೆ ನೌಕರಿ ಮುಗಿಯುವವರೆಗೂ ಹಣವನ್ನು ಹಿಂತಿರುಗಿ ಕೊಡುವುದಿಲ್ಲವೆಂಬ ಷರತ್ತಿರುತ್ತದೆ. ಹಲವು ಕಡೆ ವಿಮೆಯ ಹಣವನ್ನೂ ಪ್ರಾವಿಡೆಂಟ್ ಫಂಡಿನ ಹಣವನ್ನೂ ಕುಳದ ಸಾಲಗಳ ತೀರಿಕೆಗಾಗಿ ಯಾವ ಸಾಹುಕಾರರೂ ಜಪ್ತಿ ಮಾಡಕೂಡದೆಂಬ ಶಾಸನವಿರುತ್ತದೆ.

ಪ್ರಾವಿಡೆಂಟ್ ಫಂಡನ್ನು ಕೂಡಿಸುವ ನಿರ್ಬಂಧವಿರುವ ಕಡೆ ಪರಿಸ್ಥಿತಿಗೆ ತಕ್ಕಂತೆ ಕಡೆಯಲ್ಲಿ ಸಂಸ್ಥೆಯ ನೌಕರನಿಗೆ ಬರುವ ಪ್ರಯೋಜನ ಹೆಚ್ಚಾಗುವಂತೆ ಏರ್ಪಡಿಸುವುದು ಸರ್ವತ್ರ ಪ್ರಚಾರಕ್ಕೆ ಬರುತ್ತಿದೆ. ಇಲ್ಲಿ ನಮಗೆ ಈ ಎಲ್ಲ ಪದ್ಧತಿಗಳ ಪ್ರಾಮುಖ್ಯತೆಯೇನೆಂದರೆ: ಆ ನಿಧಿಗಳಲ್ಲಿ ಕೂಡುವ ಒಟ್ಟು ಹಣವೂ, ಸೇವಿಂಗ್ಸ್ ಬ್ಯಾಂಕ್ ಮತ್ತು ವಿಮೆ ಕಂಪನಿಗಳ ಹಣದಂತೆಯೇ ಬಂಡವಾಳದ, ಅಥವಾ ಸಾಲದ ಪೇಟೆಯ ಪೋಷಣೆಗೆ ಒದಗುತ್ತದೆ. ಈ ಪ್ರಾವಿಡೆಂಟ್ ಹಣಗಳನ್ನು ಇಂಥ ಪತ್ರಗಳನ್ನು ಕೊಳ್ಳುವುದಕ್ಕೆ ಮಾತ್ರವೇ ಹೂಡತಕ್ಕದ್ದೆಂಬ ನಿಯಮವಿರುವುದರಿಂದ ಗೊತ್ತಾದ ಕ್ಷೇತ್ರಕ್ಕೆ ಹೆಚ್ಚು ಹಣ ತಿರುಗುವಂತಾಗುವುದು.

ಇಂಥ ಹಣಗಳೆಲ್ಲ ಕಂತುಗಳ ರೂಪದಲ್ಲಿ ಸಂತತವಾಗಿ ಹರಿಯುತ್ತಿರುವುದರಿಂದಲೂ, ಹೆಚ್ಚು ಕಾಲ ಕದಲದೆ ಒಡೆಯದೆ ಇರುವುದರಿಂದಲೂ, ಬ್ಯಾಂಕುಗಳವರು ಈ ಹಣಗಳನ್ನು ತಮ್ಮಲ್ಲಿ ಠೇವಣಿ (Deposit) ಇಡುವವರಿಗೆ ಇತರ ಠೇವಣಿದಾರರಿಗೆ ಕೊಡುವುದಕ್ಕಿಂತಲೂ ಹೆಚ್ಚು ಬಡ್ಡಿ ಮುಂತಾದ ಅನುಕೂಲಗಳನ್ನು ಕಲ್ಪಿಸಿ ಆಕರ್ಷಿಸಿಕೊಳ್ಳುವರು. ಅವರ ಇನ್‌ವೆಸ್ಟ್‌ಮೆಂಟ್ ಕೆಲಸಕ್ಕೆ ಈ ಹಣದ ಪ್ರಯೋಜನ ಹೆಚ್ಚು; ಇದನ್ನು ಹೆಚ್ಚು ಧಾರಾಳವಾಗಿ ಸಿಡುವಾಯಿದೆ ಸಾಲಗಳಿಗಾಗಿ ಹೂಡಲು ಅವಕಾಶವಾಗುವುದು.

**ವ್ಯವಸಾಯಕ್ಕೂ ಸಣ್ಣ ಕೈಗಾರಿಕೆಗಳಿಗೂ ಹಣ ಒದಗುವ ರೀತಿ.**— ಇವೆಲ್ಲ ಸುಮಾರು ದೊಡ್ಡ ಪೇಟೆ, ಪಟ್ಟಣ, ಕೈಗಾರಿಕೆ ವ್ಯಾಪಾರಗಳಿಗೆ ಹಣ ಒದಗಿ ಹರಿಯುವ ರೀತಿಗಳು. ಗ್ರಾಮ ಭಾಗಗಳ ಉದ್ಯೋಗ ವ್ಯಾಪಾರಗಳಿಗೆ ಹಣ ಒದಗುವುದು ಹೇಗೆ ಎಂಬುದನ್ನೂ ಸ್ವಲ್ಪ ತಿಳಿಯಬಹುದು. ಅಲ್ಲಿ ಹಣ ಬೇಕಾಗುವುದು ಮುಖ್ಯವಾಗಿ (೧) ವ್ಯವಸಾಯಕ್ಕೆ, (೨) ಇತರ ಸಣ್ಣ ಪುಟ್ಟ ಉದ್ಯೋಗ ಕೈಗಾರಿಕೆಗಳಿಗೆ.

ವ್ಯವಸಾಯಕ್ಕೆ ಮೊತ್ತದಲ್ಲಿ ಬಹಳ ಹಣ ಬೇಕು. ಎಲ್ಲ ದೇಶದ ಎಲ್ಲ ಆಹಾರಸಾಮಗ್ರಿಗಳನ್ನೂ ಅನೇಕ ಬಗೆಯ ಮೂಲಸಾಮಗ್ರಿಗಳನ್ನೂ ಒದಗಿಸುವ ವೃತ್ತಿಯೆಂದರೆ ವ್ಯವಸಾಯ. ಪ್ರತಿ ದೇಶದಲ್ಲಿಯೂ ಅದರ ಅಭಿವೃದ್ಧಿಗೆ ಸರಕಾರಗಳವರು ಬಹಳ ಗಮನಕೊಡುತ್ತಾರೆ. ಆಹಾರ ಪದಾರ್ಥಗಳಿಗಾಗಿ ತಾವು ಇತರರಿಗೆ ಅಧೀನರಾಗಬೇಕಾಗದಂತೆ ಮಾಡಿಕೊಳ್ಳಲು ದೇಶದ ವ್ಯವಸಾಯಕ್ಕೆ ಅನೇಕ ಬಗೆಯ ರಕ್ಷಣೆಯನ್ನೂ ಪ್ರೋತ್ಸಾಹವನ್ನೂ ಕೊಡುತ್ತಾರೆ. ವ್ಯವಸಾಯ ಪ್ರಪಂಚ ಬಹಳ ವಿಸ್ತಾರವಾದದ್ದು. ಅದಕ್ಕೆ ಅಂಗವಾಗಿ, ಪೋಷಕ ಅಥವಾ ಉಪವೃತ್ತಿಯಾಗಿ ಇನ್ನೂ ಅನೇಕ ಪುಡಿ ಕೈಗಾರಿಕೆಗಳೂ ಉದ್ಯೋಗಗಳೂ ಸೇರುವುವಾದರೂ ಇಲ್ಲಿ ವ್ಯವಸಾಯವೆಂದರೆ ಭೂಮಿಯಿಂದ ಬೆಳೆ ತೆಗೆಯುವ ಉದ್ಯೋಗ ಎಂದು ಮಾತ್ರ ಇಟ್ಟುಕೊಂಡು, ಈ ಬೆಳಸು ಪೇಟೆಗೆ ಸೇರಿ ಅಲ್ಲಿ ರೈತನಿಗೂ ಮಾರಾಟಮಾಡುವವರಿಗೂ ಯಾವ ರೀತಿ ಹಣವೊದಗುವುದು ಎಂಬುದನ್ನು ತಿಳಿಸಲಾಗುವುದು.

**ವ್ಯವಸಾಯಕ್ಕೂ ಕೈಗಾರಿಕೆಗೂ ವ್ಯತ್ಯಾಸ.**—ವ್ಯಾಪಾರ ಕೈಗಾರಿಕೆಗಳಿಗೆ ಹಣ ದೊರಕಬೇಕಾದ ರೀತಿಗೂ, ವ್ಯವಸಾಯಕ್ಕೆ ಒದಗಬೇಕಾದ ರೀತಿಗೂ ಬಹಳ ವ್ಯತ್ಯಾಸವಿದೆ. ವ್ಯಾಪಾರದ ಸಾಲ ಕಿರುವಾಯಿದೆ ಸಾಲ; ಕೈಗಾರಿಕೆಯ ಸಾಲ ಅದಕ್ಕಿಂತಲೂ ಹೆಚ್ಚು ಕಾಲದ ಅವಧಿಯನ್ನು ಕೋರುವಂಥಾದ್ದು; ಅದಕ್ಕಿಂತ ಬಲು ಹೆಚ್ಚು ಗಡುವನ್ನು ಕೋರುವಂಥಾದ್ದು ವ್ಯವಸಾಯಗಾರನಿಗೆ ದೊರಕಬೇಕಾದ ಗಟ್ಟಿ ಸಾಲ.

ವ್ಯವಸಾಯಕ್ಕೇ ವಿಶೇಷವಾದ ಇನ್ನೂ ಕೆಲವು ಲಕ್ಷಣಗಳುಂಟು. ಅನೇಕ ಜನರ ಷೇರು ಹಣದ ಮೂಲಕ ಕಂಪನಿಗಳಿಗೆ ಹಣವೊದಗಿಸುವಂತೆ ಇದಕ್ಕೆ ಒದಗಿಸುವ ಪದ್ಧತಿಯಿಲ್ಲ. ಇದಕ್ಕೆ ಬೇಕಾದ ಸಾಲವನ್ನು ಒಬ್ಬ ವ್ಯಕ್ತಿಗೂ ಅವನ ಕುಟುಂಬಕ್ಕೆ ಸಂಬಂಧಪಟ್ಟವರಿಗೆ ಮಾತ್ರವೂ ಒದಗಿಸಬೇಕಾಗುವುದು. ಇತರ ಕೈಗಾರಿಕೆಗಳ ವಿಸ್ತರಣಕ್ಕೆ—ಪೇಟೆ ಗಿರಾಕಿಯ ಹೊರತು—ಮಿತಿಯೇ ಇರುವುದಿಲ್ಲವೆನ್ನಬಹುದು. ಇಲ್ಲಿ ಕೃಷಿಕನ ಭೂಮಿಯ ವಿಸ್ತಾರವೆಷ್ಟೋ ಅಷ್ಟರ ಮಿತಿಗೆ ಅವನ ಕಾರ್ಯ ಬೆಳೆಯುವುದು. ಪಾಶ್ಚಾತ್ಯ ದೇಶಗಳಲ್ಲಿಯೂ ಹೊಸದಾಗಿ ಏರ್ಪಟ್ಟಿರುವ ಭೂಖಂಡಗಳಲ್ಲಿಯೂ ಹೊರತು ಇತರ ದೇಶಗಳಲ್ಲಿ ರೈತನ ಕೈಯಲ್ಲಿನ ಹಿಡುವಳಿ ಜಮೀನು ಅಲ್ಲಲ್ಲಿ ಚೆದರಿರುವುದು ಹೆಚ್ಚು. ಪ್ರತಿ ಹಿಡುವಳಿಯ 'ಆಕಾರ' ಸಣ್ಣದು. ಆದುದರಿಂದ ಯಂತ್ರಚಾಲಿತವಾದ ಕೈಗಾರಿಕೆಗಳಲ್ಲಿ ಹೇಗೆ ದೊಡ್ಡ ಪ್ರಮಾಣದಲ್ಲಿ ಕಾರ್ಯವ್ಯವಸ್ಥೆ ಮಾಡಬಹುದೊ ಹಾಗೆ ಮಾಡುವುದು ಸಾಧ್ಯವಾಗುವುದಿಲ್ಲ. ಇತರ ಕೈಗಾರಿಕೆಗಳಲ್ಲಿ ಇಷ್ಟು ಉತ್ಪತ್ತಿ ಮಾಡಲು ಪ್ರಯತ್ನ ನಡೆಯುತ್ತಿದೆಯೆಂದು ಗೊತ್ತಾಗಿ ಹೇಳಿ ಆ ಆಧಾರದ ಮೇಲೆ ಸಾಲವೆತ್ತಬಹುದಾಗಿರುವುದು. ವ್ಯವಸಾಯದಲ್ಲಿ ಬೆಳಸು ಹೀಗೇ ಆಗುತ್ತದೆಂಬ ನಂಬಿಕೆ ಕಡಮೆ. ಆದುದರಿಂದ ಕಾಲ ಕಾಲಕ್ಕೆ ಗೊತ್ತಾದ ಬಡ್ಡಿಯನ್ನೂ ಲಾಭವನ್ನೂ ಬಯಸುವ ಬಂಡವಾಳಸ್ಥರು ವ್ಯವಸಾಯಕ್ಕೆ ಹಣ ಒದಗಿಸಲು ಆತುರರಾಗಿರುವುದು ವಿರಳ.

ವ್ಯವಸಾಯಗಾರನು ಭೂಮಿಯ ಬಳಿಯೇ ಇರಬೇಕಾಗುವುದರಿಂದ ಪೇಟೆ ಪಟ್ಟಣಗಳ ಸಂಪರ್ಕ ಆತನಿಗೆ ನಿರಂತರವಾಗಿ ಆಪ್ತವಾಗಿರುವುದಿಲ್ಲ.

ಇತರರಿಗೆ ಹಣದ ಪೇಟೆಯವರೊಡನೆ ಇರುವ ಸಂಪರ್ಕದಂತಲ್ಲ ಇವನ ಸಂಪರ್ಕ. ಇತರ ಕೈಗಾರಿಕೆಯಲ್ಲಿ ಪೇಟೆಯ ಧಾರಣೆ, ಹೊರಗಿನವರ ಪೈಪೋಟಿ, ರಾಜಕೀಯ ಪರಿಸ್ಥಿತಿ, ಪ್ರಭಾವ—ಇವುಗಳನ್ನು ಬಿಟ್ಟರೆ ಉಳಿದ ಎಲ್ಲ ಅಂಶಗಳನ್ನೂ ಸಾಮಾನ್ಯವಾಗಿ ಉತ್ಪತ್ತಿಕಾರರು ಸಂಪೂರ್ಣವಾಗಿ ತಮ್ಮ ಅಧೀನಕ್ಕೆ ತಂದುಕೊಳ್ಳಬಹುದು; ವ್ಯವಸಾಯದಲ್ಲಿ ಹಾಗಲ್ಲ: ಕೆಲಸ ಹೆಚ್ಚು ತೊಡಕು; ಪ್ರಕೃತಿ ಅನುಕೂಲವೊದಗಿಸಿ ಸಕಾಲಕ್ಕೆ ಮಳೆ ಆದರೆ ಆಯಿತು, ಇಲ್ಲವಾದರೆ ಬೆಳೆ ಕೆಡುವುದು. ಭೂಗುಣದ ವ್ಯತ್ಯಾಸಗಳು ಬೇರೆ. ಪೀಡೆಗಳಿಗೂ ಜಾಡ್ಯಗಳಿಗೂ ವಾಯುಗುಣಕ್ಕೂ ಬೆಳೆ ಈಡಾಗುವುದು ವಿಶೇಷ. ಬೆಳೆ ಕೈಗೆ ಬರಬೇಕಾದರೂ ಕಾಲವಿಳಂಬವಾಗುತ್ತದೆ. ರೈತನ ಕೈಗೆ ಹಣ ಬೇಕಾದಾಗ ಭೂಮಿಯಿಂದ ಹಿಂದಕ್ಕೆ ತೆಗೆಯಲು ಸಾಧ್ಯವಿರುವುದಿಲ್ಲ. ಗಾಡಿ, ಗೊಬ್ಬರ, ದನ, ಬಾವಿ ಮುಂತಾದ 'ಆಬಾದಿ'ನ ರೂಪದಲ್ಲಿ ಹಾಕಿರುವ ಹಣವನ್ನು ತಕ್ಷಣ ನಗದಿಗೆ ತಿರುಗಿಸಲು ಅವಕಾಶವಿಲ್ಲ. ಋತುಧರ್ಮಕ್ಕೆ ಸಂಪೂರ್ಣವಾಗಿ ಅಧೀನವಾದ ಈ ಉದ್ಯೋಗದಲ್ಲಿ ಎಲ್ಲವೂ ಅನಿಶ್ಚಯ. ನಷ್ಟಸಂಭವದ ಭಯವೇ ಹೆಚ್ಚು. ವ್ಯವಸಾಯದ ಅಂಶಗಳು ವಿವಿಧ; ಅನೇಕ; ಬೆಳಸಿನಲ್ಲಿ ಹಲವು ಜೊತೆಯಲ್ಲಿ ಉತ್ಪತ್ತಿಯಾಗುವುವು (ಉದಾ.—ಹುಲ್ಲು, ಕಾಳು); ಉತ್ಪತ್ತಿಯ ಒಟ್ಟು ವೆಚ್ಚವನ್ನು ನಿರ್ಣಯಮಾಡುವಾಗ ಯಾವ ಅಂಶಕ್ಕೆ ಎಷ್ಟು ತೂಕವೆಂಬುದನ್ನು ಗೊತ್ತುಮಾಡುವುದು ಸುಲಭವಲ್ಲ. ಆದ್ದರಿಂದ ಲೆಕ್ಕವನ್ನು ಸಮರ್ಪಕವಾಗಿ ಇಡುವುದೂ ಕಷ್ಟ. ಭೂಮಿಗೆ ಬೆಲೆ ಕಟ್ಟುವಾಗಲೂ ಕೆಲಸ ಸುಲಭವಲ್ಲ.

ಗಿರಾಕಿ ಹೆಚ್ಚು ಕಡಮೆ ಆದಂತೆಲ್ಲ ವ್ಯವಸಾಯದ ಉತ್ಪತ್ತಿಯನ್ನು ಅದಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವುದು ಶಕ್ಯವಲ್ಲ. ಕೈಗಾರಿಕೆಗಳಲ್ಲಿ ಗಿರಾಕಿಗಿಂತ ಉತ್ಪತ್ತಿ ಹೆಚ್ಚಾಯಿತೆಂದು ತಿಳಿದರೆ, ಹೆಚ್ಚೆಂದು ತೋರಿದ ಭಾಗವನ್ನು ಒಂದು ಕಡೆ ಸಂಗ್ರಹಿಸಿಟ್ಟು ಅಥವಾ—ಯಂತ್ರಕಾರ್ಯವನ್ನು ಅಲ್ಲಿಗೇ ತಡೆದು ನಿಲ್ಲಿಸಿ—ಆಗ್ಗೆ ಬೇಕಾದಷ್ಟು ಮಾತ್ರವನ್ನು ಪೇಟೆಗೆ ಮಾರಾಟಕ್ಕಿಡುವುದು ಸುಲಭ; ಉತ್ಪತ್ತಿಕಾರರಲ್ಲಿ ಸುಲಭವಾಗಿ ಒಡಂಬಡಿಕೆಗಳಾಗಲು ಹೆಚ್ಚು ಸೌಕರ್ಯವುಂಟು. ವ್ಯವಸಾಯಗಾರರು

ದೂರ ದೂರ ಇರುವವರು; ಅವರಲ್ಲಿ ಒಂದು ಮನಸ್ಸಿರುವುದಿಲ್ಲ. ಅವರ ಬೆಳಸನ್ನೆಲ್ಲಾ ಒಂದು ಕಡೆ ಸಂಗ್ರಹಿಸಿಡುವುದು ಕಷ್ಟ. ಇಟ್ಟಾಗ ಸುಲಭವಾಗಿ ಕೆಡುವುದು. ಎಲ್ಲರ ಬೆಳೆಯ ಬೆಲೆಯೂ, ಹಸನೂ, ಗುಣವೂ, ಕಡೆಗೆ ಕಾಳಿನ ಬಣ್ಣ, ಗಾತ್ರ ಒಂದೇ ಬಗೆಯಾಗಿ ಇರವು. ಹವಣವನ್ನು ಬೆರಸಲು ರೈತರಿಗೆ ಇಷ್ಟವಿರುವುದಿಲ್ಲ. ಪೇಟೆಗೆ ಆಗ್ಗ ಬೇಕಾದಷ್ಟು ಒದಗುವಂತೆ ಏರ್ಪಡಿಸಬಲ್ಲ ಸಂಸ್ಥೆಗಳೂ ಸೌಲಭ್ಯಗಳೂ ಎಲ್ಲ ಬೆಳೆಗಳಿಗೂ ಸಿರೆಯವು.

**ಕುದು.** — ಸಾಲ ಕೊಡುವವರು ಯಾವಾಗಲೂ ಎಣಿಸುವುದೇನು? ಸಾಲಕ್ಕೆ ಆಧಾರವಾಗಿ ಇಡುವ ಅಡವಾವುದು? ಸಾಲ ತೀರಲು ಎಷ್ಟು ಕಾಲದ ಗಡು ಬೇಕು? ಗಿಟ್ಟುವ ಬಡ್ಡಿ ನಿವ್ವಳವಾಗಿ ಎಷ್ಟು? ಎಂದು. ಇಲ್ಲಿ ಅಡವೆಂದರೆ ಭೂಮಿ ಅಥವಾ ಬೆಳಸು ಅಥವಾ ಬೇಸಾಯದ ಉಪಕರಣಗಳಾದ ದನಕರು, ನೇಗಿಲು ಮುಂತಾದ ಮುಟ್ಟುಗಳು. ಭೂಮಿಯ ಬೆಲೆಯನ್ನು ಅಳೆಯುವುದಾಗಲಿ ಅದಕ್ಕೆ ಗಿರಾಕಿಯಾಗಲಿ ಸುಲಭ ಶಕ್ಯವಲ್ಲ. ವ್ಯಾಪಾರದ ಬ್ಯಾಂಕುಗಳ ವ್ಯವಹಾರಕ್ಕೆ ವ್ಯವಸಾಯದ ಸಾಲ ಹೊಂದದು. ಭೂಮಿಯನ್ನು ಮಾರಿದ ತಕ್ಷಣ ಕೊಟ್ಟಿರುವ ಸಾಲ ಹಿಂದಕ್ಕೆ ಬರುವುದೆಂಬ ನಂಬಿಕೆ, ನಿಶ್ಚಯ ಇರುವುದಿಲ್ಲ. ಅಲ್ಲದೆ ಭೂಮಿಯ ಒಡೆತನ, ಸಾಗುವಳಿ ಹಕ್ಕು, ವ್ಯವಸಾಯ ಪದ್ಧತಿ, ಬೆಳಸಿನ ಹಂಚಿಕೆ ಪದ್ಧತಿ—ಇವುಗಳಲ್ಲಿ ದೇಶ ದೇಶಕ್ಕೂ ಪ್ರಾಂತ ಪ್ರಾಂತಕ್ಕೂ ವ್ಯತ್ಯಾಸವಿರುವುದುಂಟು. ಯಾವುದೂ ಹೀಗೇ ಎಂಬ ನಿಶ್ಚಯವಿಲ್ಲ. ಪೇಟೆಯಲ್ಲಿ ಸುಲಭವಾಗಿ ಗಿರಾಕಿ ದೊರೆಯಬಲ್ಲ ದನ, ನೇಗಿಲು, ಎತ್ತು, ಹಾಲು ಮೊಸರು—ಇವುಗಳ ಆಧಾರ ದೊಡ್ಡ ಸಾಲಗಳಿಗೆ ಹೊಂದದು. ಅಲ್ಲದೆ ವ್ಯವಸಾಯಗಾರರೆಂದರೆ ಭೂಮಿಯ ಬೇಸಾಯವನ್ನು ಸ್ವಂತವಾಗಿ ಮಾಡುತ್ತಿರುವ ಅತಿ ಸಣ್ಣ ಕೃಷಿಕರಿಂದ ಹಿಡಿದು ನೂರಾರು ಎಕರೆ ಭೂಮಿಯ ಯಜಮಾನರಾಗಿ, ಬಂದ ಗುತ್ತಿಗೆ ಹಣದಿಂದ ಪೇಟೆ ಪಟ್ಟಣಗಳಲ್ಲಿ ವಾಸಮಾಡುತ್ತಿರುವ ಧಣಿಯವರೆಗೂ ಆ ಪಂಗಡ ವ್ಯಾಪಿಸುವುದು. ಬ್ಯಾಂಕುಗಳವರು ಎಲ್ಲ ವ್ಯವಸಾಯಗಾರ ಕುಳಗಳನ್ನೂ ಒಂದೇ ಅಳತೆಯಲ್ಲಿ ತೂಗುವುದೂ ಎಣಿಸುವುದೂ ಸಾಧ್ಯವಿಲ್ಲ. ಸಣ್ಣವರಿಗೆ ಸಣ್ಣ ಸಾಲಗಳನ್ನು ಕೊಡುವು

ದೆಂದರೆ ಸಾಲ ಕೊಡುವ ವೆಚ್ಚ ಬಹಳ: ಶ್ರಮ ಹೆಚ್ಚು; ಪ್ರಯೋಜನ ಕಡಮೆ.

**ವ್ಯವಸಾಯಕ್ಕೆ ಹಣ — ಸಾಲ.** — ವ್ಯವಸಾಯಗಾರರಿಗೆ ಬೇಕಾದ ಸಾಲವನ್ನು ಒದಗಿಸುವ ಸಂಸ್ಥೆಗಳಿಗೂ ಸುವ್ಯವಸ್ಥೆಯಾದ ಹಣದ ಪೇಟೆಗೂ (The Organised Money-Market) ಹತ್ತಿರದ ಸಂಬಂಧವನ್ನು ಏರ್ಪಡಿಸುವುದು ಕಷ್ಟ. ಬೇಸಾಯಗಾರನು ಎಷ್ಟೇ ಪ್ರಾಮಾಣಿಕನಾಗಲಿ ಯೋಗ್ಯನಾಗಲಿ ಕೊಡುತ್ತೇನೆಂದ ಕಾಲಕ್ಕೆ ಸರಿಯಾಗಿ ಸಾಲವನ್ನು ಹಿಂದಕ್ಕೆ ಕೊಡುವುದು ಸಾಧ್ಯವಾಗದೆ ಇರಬಹುದು,—ಅವನ ಕೆಲಸದ ಸ್ವರೂಪ ಹಾಗೆ. ಕಾಲಕ್ಕೆ ಸರಿಯಾದ ಆದಾಯ ವೆಚ್ಚ ಮಾಡುವ ವ್ಯಾಪಾರದ ಬ್ಯಾಂಕುಗಳವರು ಇವರಿಗೆ ಹಣವನ್ನು ಕೊಡಲು ಹೇಗಾದೀತು? ವ್ಯವಸಾಯದ ಈ ವಿಶೇಷ ಲಕ್ಷಣಗಳ ಕಾರಣದಿಂದ ಇದಕ್ಕೇ ಪ್ರತ್ಯೇಕವಾದ ರೀತಿ ಹಣವ್ಯವಸ್ಥೆ ಆಗಬೇಕಾಗುವುದು.

**ವಾಯಿದೆಗಳ ವಿವರ.** — ವ್ಯವಸಾಯಕ್ಕೆ ಕಿರುವಾಯಿದೆ ನಿಡುವಾಯಿದೆ ಸಾಲಗಳೆರಡೂ ಬೇಕು. ಋತುಧರ್ಮಕ್ಕೆ ತಕ್ಕಂತೆ ರೈತನ ವೆಚ್ಚ ಹೆಚ್ಚು ಕಡಮೆಯಾಗುವುದು; ಅವನು ಮಾಡಬೇಕಾದ ಕೆಲಸ ವ್ಯತ್ಯಾಸವಾಗುವುದು. ಆ ವೆಚ್ಚಕ್ಕಾಗಿ ತೆಗೆದುಕೊಂಡ ಸಾಲವನ್ನು ಬೆಳಸು ಕೈಗೆ ಬಂದ ತಕ್ಷಣ ಹಿಂತಿರುಗಿಸುವ ಸಾಲವೆನ್ನಬಹುದು. ಮನೆಯ ಖರ್ಚು, ಕಂದಾಯ ಕಪಳಿಗೆ ತೆರಾಣೆ, ಗುತ್ತಿಗೆ ಮುಂತಾದ ವೆಚ್ಚಗಳು ವರ್ಷದ ಬೇರೆಬೇರೆ ಕಾಲಗಳ ಪೂರ್ತ ಹರಡಬೇಕಾಗುವುವು. ಮೋಡ ಬಿಸಿಲು ಮಳೆಗಳ ಅನುಕೂಲಕ್ಕೆ ತಕ್ಕಂತೆ ಉಳುವುದು, ಪಯಿರು ನೆಡುವುದು, ಕಳೆ ಕೀಳುವುದು, ಬೆಳೆ ಕುಯ್ಯುವುದು ಮುಂತಾದ ಕೆಲಸಗಳಿಗೆ ರೈತನು ಸಿದ್ಧನಿರಬೇಕು. ಕೇಳಿದ ತಕ್ಷಣ ಈ ಕಾರ್ಯಗಳಿಗಾಗಿ ದುಡ್ಡು ಬೇಕಾಗುವುದು. ಒಂದು ಕಡೆ ಕುಟುಂಬಭರಣಕ್ಕೆ ವರ್ಷವೆಲ್ಲ ಹಣ ಬೇಕು. ಇನ್ನೊಂದು ಕಡೆ ಎತ್ತು, ಕರು ಕೊಳ್ಳುವುದು; ವ್ಯವಸಾಯದ ಮುಟ್ಟು, ಗೊಬ್ಬರ, ಬಿತ್ತನೆ ಕಾಳು ಕೊಳ್ಳುವುದು ಮುಂತಾದ ಕೇವಲ ಬೇಸಾಯದ ಕೆಲಸಗಳು, ಎಲ್ಲಕ್ಕೂ ಹಣ ಬೇಕು. ವರ್ಷದ ಬೆಳಸನ್ನು ಹೆಚ್ಚಿಸಿಕೊಳ್ಳಲು ಸ್ವಲ್ಪ ಹೆಚ್ಚು ಹಣವನ್ನು ವೆಚ್ಚ

ಮಾಡಿ ಭೂಮಿಯನ್ನು ಹದಮಾಡಿಕೊಳ್ಳಬೇಕಾಗಬಹುದು. ಈ ಕೆಲಸಗಳಿಗಾಗಿ ತೆಗೆದುಕೊಂಡ ಸಾಲವನ್ನೆಲ್ಲಾ ಆಯಾ ವರ್ಷದ ಉತ್ಪತ್ತಿಯಿಂದಲೇ ತೀರಿಸುವುದು ಸಾಧ್ಯವಾಗದೆ ಹೋದರೆ ರೈತನಿಗೆ ರಿಯಾಯಿತಿ ತೋರಿಸಬೇಕಾಗುವುದು. ಸಾಲ ತೀರಿಸುವ ವಾಯಿದೆಯನ್ನು ಮತ್ತಷ್ಟು ಮುಂದಕ್ಕೆ ಹಾಕಬೇಕಾಗುವುದು. ಹೀಗೆ ಸಾಧಾರಣ ವೆಚ್ಚಗಳಿಗಾಗಿ ಕೊಡುವ ಸಾಲ ಒಂದು ಬಗೆ; ಎತ್ತು, ಬಂಡಿ, ಉಳುಮೆ ಮುಟ್ಟುಗಳನ್ನು ಕೊಳ್ಳುವುದಕ್ಕಾಗಿಯೊ ಸಣ್ಣ ಕಾಮಗಾರಿಗಳಿಗಾಗಿಯೊ ಕೊಡುವ ಸಾಲ ಇನ್ನೊಂದು ಬಗೆ: ಇವು ತೀರಬೇಕಾದರೆ ಸಾಧಾರಣವಾಗಿ ಒಂದರಿಂದ ಹಿಡಿದು ಎರಡು ಮೂರು ವರ್ಷಗಳ ಕಾಲವಾದರೂ ಬೇಕಾದೀತು. ವ್ಯವಸಾಯದ ನಿಜಸಾಲವೆಂದರೆ ನಿಜವಾಗಿ ಬಹಳ ಕಾಲದ ವಾಯಿದೆ ಕೇಳುವಂಥಾದ್ದು. ರೈತನು ಭೂಮಿಯನ್ನು ಹಸನು ಮಾಡಬೇಕೆಂದು ಹೆಚ್ಚು ಬಂಡವಾಳವನ್ನು ಹೂಡಿದ ಹೊರತು ಅವನ ಉತ್ಪತ್ತಿ ಹೆಚ್ಚಲು ಅವಕಾಶವಿರುವುದಿಲ್ಲ; ಅವನ ಆರ್ಥಿಕಸ್ಥಿತಿ ಮೇಲಾಗುವುದಿಲ್ಲ. ಇರುವ ಭೂಮಿಯನ್ನು ವಿಸ್ತರಿಸುವುದು; ವಿಶೇಷ ಸಲಕರಣೆಗಳನ್ನು ಒದಗಿಸಿ ಬೇಸಾಯವನ್ನು ಹೆಚ್ಚು ದಕ್ಷವಾಗಿ, ಫಲಕಾರಿಯಾಗಿ ಮಾಡುವುದು; ಗಾಣ, ಕಬ್ಬಿಣದ ನೇಗಿಲು, ನೀರೆತ್ತುವ ಪಂಪು, ಬಾವಿ, ನಾಲೆ, ಕಾಲುವೆ— ಈ ಬಗೆಯ ಸಾಧನ ಸೌಕರ್ಯಗಳನ್ನು ಉಂಟುಮಾಡಿಕೊಳ್ಳುವುದು; ತನ್ನ ಹೆಸರಿನಲ್ಲಿ ಅಲ್ಲಲ್ಲಿ ಚೆದರಿರುವ ಹಿಡುವಳಿ ಜಮೀನನ್ನು ಒಂದು ಕಡೆ ಆಗುವಂತೆ ಕೂಡಿಸುವುದು; ಹಿಂದಿನ ಸಾಲ ತೀರಿಸಿಕೊಳ್ಳುವುದು ಮುಂತಾದ್ದಕ್ಕೆಲ್ಲ ದೊಡ್ಡ ಸಾಲ ತೆಗೆಯಬೇಕಾದೀತು. ಒಂದು ಮಿತಿಯಲ್ಲಿ ಹಳೆಯ ಸಾಲ ತೀರಿ ಇನ್ನೊಂದು ಮಿತಿಯಲ್ಲಿ ಭೂಮಿಯಿಂದ ಪುಷ್ಕಳ ಬೆಳಸು ಬರಲು ಏನೇನನ್ನು ಮಾಡಬೇಕೊ ಅವೆಲ್ಲವನ್ನೂ ಮಾಡಿದ ಹೊರತು ಅವನು ಏಳಿಗೆಗೆ ಬಾರನು. ಸಾಲವೆಲ್ಲ ತೀರಿ, ಅವನು ಅದೇ ವರ್ಷದ ವೆಚ್ಚಗಳಿಗಾಗಿ ಬೇರೆಯವರಲ್ಲಿಗೆ ಸಾಲವೆತ್ತಲು ಹೋಗದಿರುವಂತೆ ಹಣಸಂಗ್ರಹವಾದ ಹೊರತು ಅವನಿಗೆ ಕೊಟ್ಟ ಸಹಾಯ ಫಲಕಾರಿಯಾಗುವುದೂ ಇಲ್ಲ. ಸಾಲ ತೀರಿಸಲು ತನ್ನ ಹಿಡುವಳಿಯನ್ನೇ ಮಾರಬೇಕಾಗಬಾರದು. ಸಾಲ ಕೊಡುವಾಗ ಸಾಲದ ಉದ್ದೇಶವೇನು? ಸಾಲಗಾರನ ಸಾಲ ತೀರಿಸುವ ಶಕ್ತಿ

ಎಷ್ಟು ಮಟ್ಟಿಗಿದೆ? ಎಂದು ತಿಳಿದುಕೊಂಡು, ಸಾಲದ ಗಡುವನ್ನು ಗೊತ್ತು ಮಾಡಬೇಕಾಗುವುದು.*

**ಹಣ ಒದಗುವ ಬಗೆ.** — ಎಲ್ಲ ದೇಶಗಳಲ್ಲಿಯೂ ಖಾಸಗಿ ವರ್ತಕರೂ, ಜಮೀನುದಾರ ದಣಿಗಳೂ, ಸರಕಾರಿ ಸಾಹುಕಾರಿ ಸಂಘಗಳವರೂ, ಸಹಕಾರ ಶಾಖೆಯವರೂ ರೈತರಿಗೆ ಕಿರುವಾಯಿದೆ ಸಾಲಗಳನ್ನು ಒದಗಿಸುವರು. ಸಾಧಾರಣ ವರ್ತಕರೂ ಧನಿಕರೂ ಕೊಡುವ ಸಾಲಗಳ ಮೇಲೆ ತೆರಬೇಕಾದ ಬಡ್ಡಿಯ ದರ ಹೆಚ್ಚು; ಸಾಲ ತೀರುವ ಅನುಕೂಲವೂ ಸಂಭವವೂ ಕಡಮೆ. ಭೂಮಿ ಹಿಡುವಳಿದಾರನ ಕೈತಪ್ಪಿ ಹೋಗುವುದೂ, ಸಾಲದಿಂದ ಚೇತರಿಸಿಕೊಳ್ಳಲು ಸಾಧ್ಯವಾಗದೆ ರೈತನು ನಾಶವಾಗುವುದೂ ಸಾಮಾನ್ಯ. ಪರಸ್ಪರ ಸಹಾಯ ಸಂಘಗಳು ಕೊಡುವ ನೆರವು ಹೆಚ್ಚು ಪ್ರಯೋಜನಕಾರಿಯಾಗಬಹುದಾದರೂ ನಮ್ಮ ದೇಶದಂತಹ ದೇಶಗಳಲ್ಲಿ ಹಲವು ಕಾರಣಗಳ ಪ್ರಾಬಲ್ಯದಿಂದ ಎಷ್ಟು ಉಪಕಾರ ದೊರೆಯಬಹುದೊ ಅಷ್ಟು ದೊರೆತಿಲ್ಲ. ಸರಕಾರಗಳವರು ಕೊಡುವ (ಉದಾ.—ನಮ್ಮ ದೇಶದಲ್ಲಿ ತಕಾವಿ) ಸಾಲಗಳು ಎಲ್ಲ ಬಗೆಯ ವ್ಯವಸಾಯಗಾರರಿಗೂ ಅವರಿಗೆ ಬೇಕಾದ ಪ್ರಮಾಣದಲ್ಲಿ—ಅವರು ಹೊತ್ತು ಹೋರೆ ಇಳಿಯುವಂತೆ ದೊರಕುವುದು ಕಷ್ಟ. ದೊರಕಿದಾಗಲೂ ಅವನ್ನು ತೀರಿಸುವ ನಿಬಂಧನೆಗಳು ನಿಷ್ಠುರವಾಗಿರುವುದೇ ವಾಡಿಕೆ. ಅಂತೂ ಸಣ್ಣ ರೈತನ ಉಪಯೋಗಕ್ಕೆ ಸಿಕ್ಕುವ ಸಹಾಯ ಬಹು ಸ್ವಲ್ಪ.

**ಜಮೀನು ಅಡಮಾನದ ಸಂಸ್ಥೆಗಳು.** — ವ್ಯವಸಾಯದ ನಿಡುಸಾಲಗಳನ್ನು ತೀರಿಸಲು ಈಗ ಎಲ್ಲೆಲ್ಲಿಯೂ ಜಮೀನು ಅಡಮಾನದ ಬ್ಯಾಂಕುಗಳೆಂಬ (Land-Mortgage Banks) ಒಂದು ಬಗೆಯ ಸಂಸ್ಥೆಯನ್ನು

---

* ಈ ಗಡು ಬಹಳ ನಿಡಿದಾದ್ದರಿಂದ ದೇಶದೇಶಗಳಲ್ಲಿ ಅದಕ್ಕೆ ಅವಕಾಶಗಳನ್ನು ಕಲ್ಪಿಸಿಕೊಟ್ಟಿರುತ್ತಾರೆ:—

| | | | |
|---|---|---|---|
| ಫಿನ್‌ಲಂಡ | .. ೬೦ ವರ್ಷ | ಡೆನ್ಮಾರ್ಕ್ | .. ೬೦ ವರ್ಷ |
| ಚಿಲಿ | .. ೩೩ ,, | ಹಂಗೆರಿ | .. ೬೫ ,, |
| ನ್ಯೂಜೀಲಂಡ್ | .. ೩೬½ ,, | ಐರ್ಲಂಡ್ | .. ೬೮½ ,, |
| ಆಸ್ಟ್ರೇಲಿಯ | .. ೪೨ ,, | ಫ್ರಾನ್ಸ್ | .. ೭೫ ,, |
| ಇಟಲಿ—ಜಪಾನ್ | .. ೫೦ ,, | | |

ಏರ್ಪಡಿಸುವರು. ಈ ಬ್ಯಾಂಕುಗಳ ಮುಖ್ಯ ಉದ್ದೇಶವನ್ನು ಈ ರೀತಿ ತಿಳಿಸಬಹುದು :—

(೧) ಎಷ್ಟು ಅಗ್ಗವಾದ ದರಕ್ಕೆ ಸಾಧ್ಯವಾದರೆ ಅಷ್ಟು ಸುಲಭವಾಗಿ ಸಾಲದ ಹಣ ಕೊಡಿಸುವುದು.

(೨) ತೆರಾಣೆಯಲ್ಲಿ ಹಿಂದಾದ ಅಥವಾ ತಪ್ಪಿದ ಕುಳಗಳಿಗೆ ಎಷ್ಟು ಹೆಚ್ಚು ಕೃಪೆ ತೋರಿಸಬಹುದೊ ಅಷ್ಟನ್ನೂ ತೋರಿಸುವುದು.

(೩) ಈ ವ್ಯವಸಾಯದ ಸಾಲಗಳಿಗೆ ಹಣವೊದಗಿಸುವ ಬಂಡವಾಳಸ್ಥರಿಗೆ ಎಷ್ಟು ನಂಬಿಕೆಯಾದ ಆಸ್ತಿಯು ಗಿರವಿ (Security) ಸಾಧ್ಯವಾದರೆ ಅಷ್ಟು ಗಟ್ಟಿ ಕುದುವನ್ನು ಕೊಟ್ಟು ಅವರು ಹಣ ಹೂಡುವಂತೆ ಮಾಡಿಸುವುದು.—

ಮೊತ್ತದಲ್ಲಿ ವ್ಯವಸಾಯಗಾರರಿಗೂ ಹಣದ ಪೇಟೆಗೂ ಸಂಬಂಧವನ್ನು ಉಂಟುಮಾಡಿಸಿ, ಅವರ ಸಾಲಪತ್ರ ಆಧಾರಪತ್ರಗಳನ್ನು ಅಡಮಾನ ಮಾಡಿಕೊಂಡು ಅವರು ಸುಲಭವಾಗಿ ಸಿಧಾನವಾಗಿ ಇಳಿಸಿಕೊಳ್ಳಬಲ್ಲಂತೆ ಸಾಲ ಏರ್ಪಡಿಸಿಕೊಡುವುದು ಈ ಸಂಸ್ಥೆಗಳ ಕೆಲಸ.

**ಸಾಲ ಹರಿಯುವ ಏರ್ಪಾಡು.**— ಈ ಬಗೆಯ ನಿಡುಸಾಲಗಳನ್ನು ಹರಿಸುವ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ನಾಲ್ಕು ಪದ್ಧತಿಗಳುಂಟು. ಎಲ್ಲ ಸಂಸ್ಥೆಗಳಲ್ಲಿಯೂ ಬಡ್ಡಿಯ ಜೊತೆಗೆ ಅಸಲಿನಲ್ಲಿ ಸ್ವಲ್ಪ ಸ್ವಲ್ಪ ಭಾಗ ಹರಿಯುವಂತೆ ಏರ್ಪಾಡಿರುವುದು :—

(೧) ಅಸಲಿಗಿಷ್ಟು ಬಡ್ಡಿಗಿಷ್ಟು ಎಂದು ಗೊತ್ತಾಗಿ ಸಮವಾದ ಕಂತು ಕಟ್ಟಿ ಹರಿಸುವುದು.

(೨) ಜರ್ಮನಿಯ ಲ್ಯಾಂಡ್ ಷ್ಯಾಫ್ಟುಗಳಂತೆ ಒಟ್ಟು ಅಸಲಿನ ಮೇಲೆ ಬಡ್ಡಿ ತೆತ್ತು, ಜೊತೆಗೆ ½% ನಂತೆಯೊ ಸ್ವಲ್ಪ ಹೆಚ್ಚಾಗಿಯೊ ಸಾಲ ನಡೆಯುವಷ್ಟು ದಿನವೂ ವರ್ಷವರ್ಷವೂ ಕೊಡುತ್ತ ಹೋಗುವುದು. ಹೆಚ್ಚಾಗಿ ಕೊಡುವ ಈ ಹಣದಲ್ಲಿ ವೆಚ್ಚ ಕಳೆದು ಉಳಿತಾಯವಾದ್ದೆಲ್ಲವನ್ನೂ ಸಾಲ ಹರಿಸುವ ನಿಧಿ (Sinking Fund) ಒಂದಕ್ಕೆ ಹಾಕಿ ಆ ಹಣವನ್ನು ಜಾಣತನದಿಂದ ಸಂಪಾದನೆಗೆ ಹೂಡುವುದು. ಸಂಪಾದನೆಯಾದ

ಹಣದಿಂದ ಅಡವಾದ ಭೂಮಿಗಳ ಸಾಲ ಹರಿಸಿ ಆಸ್ತಿಯನ್ನು ಕ್ರೈತರಿಗೆ ಹಿಂತಿರುಗಿಸುವುದು. ಸಾಲಗಾರನು ಕೊಡುವ ಹಣದ ಜೊತೆಗೆ ಬ್ಯಾಂಕು ಸೇರಿಸುವ ಹಣವೂ ಲಾಭವೂ ಸೇರುವುದರಿಂದ ಗೊತ್ತಾದ ಕಾಲಕ್ಕೆ ಮುಂಚೆಯೇ ಸಾಲ ತೀರಿಹೋಗುವ ಅವಕಾಶವುಂಟು.

(೩) ಆಸ್ಟ್ರಿಯಾ ಮತ್ತು ಜರ್ಮನಿ ದೇಶಗಳಲ್ಲಿನ ಸೇವಿಂಗ್ಸ್ ಬ್ಯಾಂಕುಗಳಲ್ಲಿ ಇನ್ನೊಂದು ರೂಢಿಯಿರುವುದು. (೨)ನೆಯ ದರಲ್ಲಿನಂತೆಯೇ ಇಲ್ಲಿಯೂ ಪೂರ್ತಿ ಅಸಲಿನ ಮೇಲೆ ಬಡ್ಡಿ ಯನ್ನೂ ಹೆಚ್ಚಾಗಿ ½%ನ್ನೂ ಕುಳದಿಂದ ತೆಗೆದುಕೊಳ್ಳು ವರು. ಆದರೆ ಈ ಹೆಚ್ಚು ಹಣವನ್ನು ಕುಳ ಬ್ಯಾಂಕಿನಲ್ಲಿಟ್ಟ ಡಿಪಾಸಿಟ್ ಹಣವೆಂಬಂತೆ ಲೆಕ್ಕಮಾಡಿ ಅದು ಬಡ್ಡಿ ಸಂಪಾದಿಸುವಂತೆ ಮಾಡುವರು. ಈ ಲೆಕ್ಕವೂ ಸಾಲದ ಲೆಕ್ಕವೂ ಸಮವಾದಾಗ ಸಾಲ ಹರಿಯಿತೆಂದು ಸಾಲಪತ್ರ ವನ್ನು ರದ್ದುಮಾಡುವರು.

(೪) ಫ್ರೆಂಚ್ ಪದ್ಧತಿಗೆ ಸರಿವಾದ ಇಳಿಮಾನದ ಕಂತು ಪದ್ಧತಿ (True Amortization) ಎಂದು ಹೇಳುವುದುಂಟು. ಸಾಲ ಪಡೆದ ಹಣಕ್ಕೆ ಪ್ರತಿಯಾಗಿ ಸಾಲಗಾರನು ವರ್ಷೇ ವರ್ಷೇ ಇಷ್ಟು ಹಣ ತೆರುವೆನೆಂದು ಒಪ್ಪಂದ ಮಾಡಿಕೊಳ್ಳುವನು; ಆಧಾರಪತ್ರ ಬರೆದುಕೊಡುವನು. ಎಷ್ಟು ಕಾಲದವರೆಗೂ ಸಾಲ ಬೇಕು? ಸಲ್ಲಿಸುವ ಬಡ್ಡಿಯ ದರ ಎಷ್ಟು? ಎಂಬು ದನ್ನು ನೋಡಿಕೊಂಡು ವರ್ಷವೊಂದಕ್ಕೆ ಗೊತ್ತಾಗಿ ಎಷ್ಟು ಮೊತ್ತವನ್ನು ಕೊಡಬೇಕೆಂದು ನಿರ್ಣಯಿಸುವರು. ತೆರಾಣಿ ಒಂದೇ ಮಟ್ಟದಲ್ಲಿರುವುದು. ವರ್ಷದ ಕಂತನ್ನೆಲ್ಲ ಒಟ್ಟಿಗೆ ಒಂದೇ ಗಂಟಿನಲ್ಲಿ ಕೊಡಬೇಕೆಂದು ನಿರ್ಬಂಧಪಡಿಸದೆ ತಿಂಗಳಿಗಷ್ಟಷ್ಟು ಕೊಟ್ಟು ತೀರಿಸುವ ಅನುಕೂಲ ಕಲ್ಪಿಸಿರು ವರು. ಕಂತು ಕೈಗೆ ಬಂದ ತಕ್ಷಣ ಕಂಪನಿ ತನಗೆ ಬರ ಬೇಕಾದ ಬಡ್ಡಿಯನ್ನು ತೆಗೆದುಕೊಂಡು ಉಳಿದುದನ್ನು

ಸಾಲದ ಅಸಲಿಗೆ ಜಮಾಹಾಕಿಕೊಳ್ಳುವುದು. ಕಾಲ ಕಳೆದಂತೆಲ್ಲ ಬಡ್ಡಿಯ ಖರ್ಚು ಇಳಿದು, ಅಸಲಿಗೆ ಸೇರುವ ಮೊತ್ತ ಹೆಚ್ಚಿ, ಸಾಲ ಕರಗಿಹೋಗುವುದು.

ಬೆಳೆ ಬೆಳೆಯುವುದಕ್ಕೂ, ಬೆಳಸನ್ನು ಪೇಟೆಗೆ ಸಾಗಿಸುವುದಕ್ಕೂ ರೈತರೊ ದಣಿಗಳೊ ಸ್ವಂತ ಹಣವನ್ನು ಹೂಡಬಹುದು; ಸ್ವಂತ ಹೊಣೆಯ ಮೇಲೊ, ಚರ ಸ್ಥಿರ ಸ್ವತ್ತುಗಳ ಆಧಾರದ ಮೇಲೊ ವರ್ತಕರಿಂದಲೂ, ಸಹಕಾರ ಸಂಘಗಳಿಂದಲೂ, ಬ್ಯಾಂಕುಗಳಿಂದಲೂ ಸಾಲ ತರಬಹುದು.

**ಮಾರಾಟ ವ್ಯವಸ್ಥೆ — ಹಣ.—**ಕೆಲವು ಕಡೆ ವ್ಯಾಪಾರದ (ಹಣದ) ಬೆಳೆಗಳಾದ ಕಬ್ಬು, ಹತ್ತಿ, ಎಣ್ಣೆಯ ಬಿತ್ತಗಳು, ಉರುಳುಗಡ್ಡೆ, ಹೊಗೆಸೊಪ್ಪು, ಸಣಬು ಮುಂತಾದವು ಉತ್ಪತ್ತಿಯಾಗುವ ಕಾಲಕ್ಕೆ ಮುಂಚಿತವಾಗಿಯೇ ತಾವು ಮುಂದೆ ಕೊಳ್ಳುವೆವೆಂದೂ, ಬೆಳಸನ್ನು ತಮಗೇ ಮಾರತಕ್ಕದ್ದೆಂದೂ, ಗೊತ್ತಾದ ಒಂದು ಬೆಲೆಗೆ ತಾವು ಕೊಳ್ಳದಿದ್ದರೆ ಆಗ ಬೇರೆಯವರಿಗೆ ಮಾರಿಕೊಳ್ಳಬಹುದೆಂದೂ ಮುಂಗಡವಾಗಿ ಒಪ್ಪಂದ ಮಾಡಿಕೊಳ್ಳುವ ತರಗಿಸ ದಲ್ಲಾಳರು ಬೆಳೆಗೆ ಸಂಚಕಾರ ಕೊಡುವುದುಂಟು. ಈ ದಲ್ಲಾಳರು ತರಗಿಸ ಮಂಡಿಯವರಾಗಲಿ ಸಾಹುಕಾರರಾಗಲಿ ಪದಾರ್ಥವನ್ನು ಸುಗ್ಗಿಯ ಹೊತ್ತಿಗೆ ತೆಗೆದುಕೊಂಡು ಮಾರುವ ಏರ್ಪಾಡು ಮಾಡುವರು. ಕೆಲವು ಕಡೆ (ಉದಾ.—ಅಮೇರಿಕಾದ ಹತ್ತಿ ಮತ್ತು ಗೋಧಿಯ ಉತ್ಪತ್ತಿಕಾರರು, ಇಂಡಿಯಾದ ಸಣಬಿನವರು) ಸಂಘಗಳನ್ನು ಏರ್ಪಡಿಸಿಕೊಂಡು ತಮ್ಮ ಸಾಮಾನನ್ನು ಸಯುಕ್ರಮದಲ್ಲಿ ವಿಂಗಡಿಸಿ ಪೇಟೆಗೆ ಒದಗಿಸುವ ಏರ್ಪಾಡುಮಾಡಿಕೊಳ್ಳುವರು. ಕೆಲವು ದಲ್ಲಾಳರು ಈ ಪದಾರ್ಥದ ಬೆಲೆ ಮಾದರಿಗಳನ್ನು ತಿಳಿದುಕೊಂಡು, ಕೊಳ್ಳಬೇಕೆಂದಿರುವವರಿಗೆ ತಿಳಿಸುತ್ತ ವ್ಯಾಪಾರಕ್ಕೆ ನೆರವಾಗುವರು. ವರ್ತಮಾನ ಪತ್ರಿಕೆಗಳಲ್ಲಿ, ಯಾವ ಹಸಿಸಿಸ ದಿನಸಿ, ಬೆಲೆ, ಯಾವ ಪೇಟೆಯಲ್ಲಿ ಹೇಗಿವೆ ಎಂಬುದು ಪ್ರಕಟವಾಗುವುದು. ಹಣದ ಪತ್ರಗಳನ್ನು ಕೊಂಡು ಮಾರುವವರು ಸ್ಟಾಕ್ ಎಕ್ಸ್‌ಛೇಂಜುಗಳಲ್ಲಿ ಹೇಗೆ ಕೂಡುವರೋ ವ್ಯವಹರಿಸುವರೋ ಹಾಗೆಯೇ ಪ್ರಾಡ್ಯೂಸ್ ಎಕ್ಸ್‌ಛೇಂಜುಗಳೆಂಬ ಸಂಸ್ಥೆಗಳು ಈ ಕೆಲಸಕ್ಕೆ ಏರ್ಪಟ್ಟ ಮಧ್ಯಸ್ಥಿಕೆಗೆ ನಿಲ್ಲುವುವು. ಅಲ್ಲಿನಂತೆಯೇ ಇಲ್ಲಿಯೂ ಲಾಭಾಳಿತನದಿಂದ ಸಟ್ಟಾ ವ್ಯಾಪಾರ

ಮಾಡಿ ಸ್ವಂತ ಅನುಕೂಲಕ್ಕೆ ತಕ್ಕಂತೆ ಬೆಲೆಯನ್ನು ಏರಿಸುತ್ತ ಇಳಿಸುತ್ತ ಹೋಗುವ ಜನರುಂಟು. ಎಲ್ಲ ಪದಾರ್ಥಗಳ ವ್ಯಾಪಾರವೂ ಹೀಗೆ ನಡೆಯದೆ ಇದ್ದರೂ ಅಂತರ್ ರಾಷ್ಟ್ರೀಯ ಗಿರಾಕಿಯಿರುವ (ಉದಾ.—ಹತ್ತಿ, ಗೋಧಿ) ಪದಾರ್ಥಗಳ ಪೇಟೆಯಲ್ಲಿ ಹೀಗೆ ಸಂಘಟಿತವಾಗಿರುವುದು.

**ಪೇಟೆಗೆ ಸಾಮಾನು ಸಾಗಲು ಹಣ.**—ಪದಾರ್ಥಗಳನ್ನು ಪೇಟೆಗೆ ಸಾಗಿಸಿ ಮಾರುವ ವಿಧಾನದಲ್ಲಿ ನಾಲ್ಕೈದು ಮಜಲುಗಳುಂಟು. ಆ ಕಾರ್ಯಗಳಿಗೆಲ್ಲ ಹಣ ಒದಗಿಸಬೇಕಾಗುವುದು. ಪದಾರ್ಥಗಳನ್ನು ಬೇರೆಬೇರೆ ಕಡೆಯಿಂದ ಕೂಡಿಸುವುದು; ಪೇಟೆಗೆ ಸಾಗಿಸುವುದು; ಸಗಟಿನಲ್ಲಿ ಹಂಚುವುದು; ಚಿಲ್ಲರೆ ವರ್ತಕರಿಗೆ ಮಾರುವುದು; ನಷ್ಟ ಹೊರಲು ಎಲ್ಲ ಮಜಲಲ್ಲಿಯೂ ಸಿದ್ಧರಿರುವುದು—ಇವೆಲ್ಲವೂ ಎಲ್ಲಿಸಂತೆ ಇಲ್ಲಿಯೂ ಮುಖ್ಯ. ವಸ್ತು ಅಗ್ಗವಾಗಿ ಉತ್ತಮವಾಗಿ ಉತ್ಪತ್ತಿಯಾದರೆ ಮಾತ್ರ ಸಾಲದು; ಇತರ ಉತ್ಪತ್ತಿಕಾರರಿಗಿರುವ ಸೌಕರ್ಯಗಳಷ್ಟು ಸೌಕರ್ಯ ಇವರಿಗೂ ಬೇಕು; ಪೇಟೆ ಹತ್ತಿರವಿರುವುದು; ಅದಕ್ಕೆ ಪದಾರ್ಥವನ್ನು ಸಾಗಿಸುವ ಸೌಲಭ್ಯಗಳ ಏರ್ಪಾಡು; ಕಡಮೆಯಾದ ಉತ್ಪತ್ತಿಯ ವೆಚ್ಚ ಮುಂತಾದವು ಸಹಾಯಗಳು. ಇಲ್ಲವಾದರೆ ಪೇಟೆಯಲ್ಲಿ ಇತರರೊಡನೆ ಸ್ಪರ್ಧಿಸುವುದು ಕಷ್ಟವಾಗುವುದು. ಸಾಮಾನು ಸುಲಭವಾಗಿ ಸಾಗಲು ರಸ್ತೆ, ಗಾಡಿ, ರೈಲು, ಲಾರಿ, ಹಡಗು ಮುಂತಾದ ಸಾಧನ ಸೌಕರ್ಯ ಬೇಕು. ಕೆಲವು ವೇಳೆ ರೈತರೇ ಸ್ವಂತ ಗಾಡಿಗಳಲ್ಲಿಯೊ—ಧನಿಕರಾದರೆ ಲಾರಿಗಳಲ್ಲಿಯೊ—ಸಾಮಾನನ್ನು ತೆಗೆದುಕೊಂಡು ಹೋಗಿ ಹತ್ತಿರದ ಸಂತೆಗಳಿಗೂ, ಪೇಟೆ ಮಳಿಗೆಗಳಿಗೂ ಹಾಕಿ ಬರುವರು. ಇಲ್ಲವಾದರೆ ಬೆಳೆಯುವ ಕಡೆಗೇ ಹೋಗಿ ಪದಾರ್ಥವನ್ನು ಕೂಡಿಸುವ ತರಗಿನ ವರ್ತಕರೂ, ಕಂಪನಿಗಳವರೂ ಇರುವುದುಂಟು. ಕೆಲವು ಕಡೆ ಈ ಕೆಲಸವನ್ನು ಉತ್ಪತ್ತಿಕಾರರು ಸಹಕಾರ ಸಂಘಗಳ ಮೂಲಕ ಮಾಡಿಕೊಳ್ಳುವರು. ದೊಡ್ಡ ಉತ್ಪತ್ತಿಕಾರರಿಗೆ ಯಾವ ಅನುಕೂಲ ಬೇಕಾದರೂ ಸಿಕ್ಕುವುದು; ಎಲ್ಲ ರಿಯಾಯಿತಿಯೂ ಒದಗುವುದು. ಮಂಡಿ ಪೇಟೆಯಲ್ಲಿ; ಸಗಟು ಲೆಕ್ಕದಲ್ಲಿ; ಬೆಲೆ ಗೊತ್ತುಮಾಡುವುದರಲ್ಲಿ; ದರಗಳಲ್ಲಿ; ಪದಾರ್ಥದ ಹದನು ನಿರ್ಧರಿಸುವುದರಲ್ಲಿ; ಅಳತೆ ತೂಕಗಳಲ್ಲಿ ಸಣ್ಣ ರೈತರಿಗೇ ಕಷ್ಟ.

ಈ ಹಾವಳಿಯನ್ನು ಸ್ವಲ್ಪಮಟ್ಟಿಗಾದರೂ ತಪ್ಪಿಸಿಕೊಂಡು ತಾವು ತಯಾರು ಮಾಡಿದ ಪದಾರ್ಥಗಳನ್ನೆಲ್ಲಾ ಕೂಡಿಸಿ ದಲ್ಲಾಳರ ಬಾಯಿಗೆ ಹಾಕದೆ ಸ್ವಂತವಾಗಿಯೊ ತಮ್ಮ ಪ್ರತಿನಿಧಿಗಳ ಮೂಲಕವೊ ಮಾರಿಸಿ, ಬಂದ ಲಾಭ ವನ್ನು ತಾವೇ ಹಂಚಿಕೊಳ್ಳುವುದು ; ತಮಗೆ ಬೇಕಾದ್ದನ್ನೆಲ್ಲಾ ಸಾಧ್ಯವಾದ ಮಟ್ಟಿಗೂ ಉತ್ಪತ್ತಿಕಾರರಿಂದಲೇ ನೇರವಾಗಿ ತರಿಸಿಕೊಳ್ಳುವುದು ; ತಮ್ಮ ಸಾಮಾನನ್ನು ತಾವೇ ಪೇಟೆಗೆ ಸಾಗಿಸುವ ಏರ್ಪಾಟುಮಾಡುವುದು ; ಎಲ್ಲ ಉದ್ಯೋಗಗಳ ಅನುಭವವನ್ನೂ ಪಡೆದು ಒಂದು ಒಗೆಯ ಸ್ವಾವ ಲಂಬನ, ಕಾರ್ಯದಕ್ಷತೆ, ನಿರ್ವಹಣಶಕ್ತಿ, ವಿಚಕ್ಷಣೆ, ಸಂವಿಧಾನ ಕೌಶಲ, ಒಂದು ಬಗೆಯ ಮನಶ್ಶಿಕ್ಷಣ, ಜವಾಬ್ದಾರಿ ಬುದ್ಧಿ—ಇವನ್ನು ಬೆಳಸಲು ಸಾಧಕವಾಗಿ ಸಹಕಾರ ಸಂಘಗಳು ಎಲ್ಲೆಲ್ಲಿಯೂ ಸ್ಥಾಪಿತವಾಗುತ್ತವೆ. ಇವು ಕೇವಲ ಸಾಮಾನ್ಯರ ಪ್ರಯೋಜನಕ್ಕೂ ಉದ್ಧಾರಕ್ಕೂ ಹುಟ್ಟುವುವು.

ಒಬ್ಬರಿಗೊಬ್ಬರು ತಿಳಿದ ನೆರೆಹೊರೆಯವರು, ಪ್ರಜಾಧಿಕಾರವಿದ್ದು ಪ್ರಜಾಯೋಗ್ಯವಾದ ವಯಸ್ಸಿನವರು ಒಂದು ಸಂಘವನ್ನು ಮಾಡಿ ಕೊಂಡು ಯಾವುದಾದರೂ ಉತ್ಪತ್ತಿಕಾರ್ಯಕ್ಕೊ, ವರ್ತಕತನಕ್ಕೊ, ಮನೆ ಮಠ ಕಟ್ಟುವ ಕಾರ್ಯಕ್ಕೊ, ಲೇವಾದೇವಿಗೊ, ಪದಾರ್ಥಗಳನ್ನು ಸಾಗಿಸುವ ಅಥವಾ ಹಂಚುವ ಕಾರ್ಯಕ್ಕೊ, ಏನೆಗೊ ಗೊತ್ತಾಗಿ ನಿಲ್ಲುವರು. ಎಲ್ಲ ಬಗೆಯ ವೃತ್ತಿ ಮತ್ತು ಕಾರ್ಯಕ್ಷೇತ್ರಗಳಲ್ಲಿಯೂ ಹಲವು ಬಗೆಯ ರೀತಿ ನೀತಿ ಉದ್ದೇಶಗಳನ್ನಿಟ್ಟುಕೊಂಡು ಪಟ್ಟಣಗಳಲ್ಲಿಯೂ ಗ್ರಾಮ ಭಾಗಗಳಲ್ಲಿಯೂ ಸಂಘಗಳನ್ನು ಸ್ಥಾಪಿಸುವರು. ಅನೇಕ ವೇಳೆ ಹಳ್ಳಿ, ಪಟ್ಟಣಗಳ ಸಂಘಗಳ ಕಾರ್ಯಕಲಾಪ ರೂಪ, ರೀತಿ, ನೀತಿ ಬೇರೆ ಬೇರೆಯಾಗಿರುವುವು. ಮೊದಲು ಮೂಲ ಸಂಘಗಳು ; ಅವುಗಳನ್ನೊಳ ಗೊಂಡ ಜಿಲ್ಲಾ ಸಂಘಗಳು ; ಅವುಗಳಿಗೆ ಮೇಲ್ಪಟ್ಟ ಪ್ರಾಂತ ಅಥವಾ ಕೇಂದ್ರ ಸಂಘಗಳು — ಹೀಗೆ ಹಂತ ಹಂತದಲ್ಲಿ ಸ್ಥಾಪಿತವಾಗುವುವು. ಕೇಂದ್ರ ಸಂಸ್ಥೆ ಆ ಬಗೆಯ ಸಂಘಗಳ ನಾಯಕ ಸಂಸ್ಥೆಯಾಗಿ ದೇಶದಲ್ಲ ವ್ಯಾಪಕವಾಗುವುದು. ಇವನ್ನು ಕೆಲವು ಕಡೆ ಸರಕಾರಗಳವರೂ ಕೆಲವು ಕಡೆ ಜನರೂ ಸ್ಥಾಪಿಸಿ ಸರಕಾರದ ಬೆಂಬಲ, ಉತ್ತೇಜನ, ಆಶ್ರಯಗಳಲ್ಲಿ ನಡಸಿಕೊಳ್ಳುವರು. ಇವುಗಳೆಲ್ಲ ಸಾಧಾರಣ ಜನರ ಪ್ರಜಾಗುಣವನ್ನೂ

ಕಾರ್ಯಶಕ್ತಿಯನ್ನೂ ಬೆಳಸಲು ಸ್ಥಾಪಿತವಾಗಿ ಸಣ್ಣ ಬಂಡವಾಳವುಳ್ಳವರ ಯೋಗಕ್ಷೇಮಕ್ಕಾಗಿರುವುದರಿಂದ ಸರಕಾರದವರು ಅನೇಕ ರಿಯಾಯಿತಿ ಗಳನ್ನು ತೋರಿಸಿ ಇವಕ್ಕೆ ವಿಶೇಷ ಹಕ್ಕುಗಳನ್ನು ಕೊಟ್ಟಿರುವುದುಂಟು. ಇವುಗಳ ಅಭಿವೃದ್ಧಿಗಾಗಿ ಒಂದು ಇಲಾಖೆಯನ್ನು ಸ್ಥಾಪಿಸಿ ಒಳವ್ಯವಸ್ಥೆಗೆ ನೆರವಾಗಿ ಅಲ್ಲಿನ ವ್ಯಾಜ್ಯ ಅವ್ಯವಸ್ಥೆಗಳನ್ನು ಹರಿಸುವ ವಿಶೇಷವಾದ ಏರ್ಪಾಡುಮಾಡುವುದುಂಟು.

ಇವುಗಳ ಕೆಲಸಕ್ಕೆ ಬೇಕಾದ ಹಣ, ಷೇರುದಾರರು ಕೊಡುವ ಬಂಡವಾಳ; ಮೆಂಬರುಗಳೂ, ಇತರರೂ (ಸಂಘದ ಉಪನಿಯಮ ಆಗಬಹುದೆಂದಿದ್ದರೆ) ಇಡುವ ಠೇವಣಿ ಹಣ; ಜಿಲ್ಲಾ ಅಥವಾ ಕೇಂದ್ರ ಸಂಸ್ಥೆಯಿಂದ ತೆಗೆದುಕೊಂಡ ಸಾಲ, ಇವೇ ಸಂಪಾದಿಸಿ ಕೂಡಿಸಿಟ್ಟಿರುವ ಲಾಭ, ಆಪದ್ಧನ—ಈ ರೂಪಗಳಲ್ಲಿ ಒದಗುತ್ತದೆ. ಈ ಹದಿಯ ಮೇಲೆ ಸಂಘದ ಕಾರ್ಯಮಂದಿರವನ್ನು ಕಟ್ಟಿ ಬೆಳಸುವುದು ವಾಡಿಕೆ. ಸಂಘದ ಸದಸ್ಯರು ಯಾರು ಯಾವಾಗ ಬೇಕಾದರೂ ಸಂಘದ ಸಾಮಾನ್ಯ ಲೆಕ್ಕ ವನ್ನು ವಿಚಾರಿಸುವ ಅಧಿಕಾರವಿರುವುದರಿಂದಲೂ, ಒಂದು ಗುಂಪಿಗೆ ಸೇರಿ ಯೋಗ್ಯರಾದವರು ಯಾರೇ ಆಗಲಿ ಮೆಂಬರಾಗಬಹುದಾದ್ದರಿಂದಲೂ, ಯೋಗ್ಯನಾಗಿ ನಿಪುಣನಾದ ಪ್ರಭಾವಶಾಲಿಯಾದ ಯಾವ ಸದಸ್ಯನೇ ಆಗಲಿ, ಸಂಘದ ಚಾಲಕ ಮಂಡಲಿಗೂ ಕಾರ್ಯದರ್ಶಿಯ ಕೆಲಸಕ್ಕೂ ಬರಬಹು ದಾದ್ದರಿಂದಲೂ, ಮೆಂಬರಿನ ಷೇರುಗಳೆಷ್ಟಿದ್ದರೂ ಎಲ್ಲರಿಗೂ ಒಂದೇ ಗಣನೆ ಒಂದೇ ತೂಕವಿರುವಂತೆ ಒಬ್ಬನಿಗೆ ಒಂದೇ ವೋಟು ಎಂಬ ನಿರ್ಬಂಧವಿರು ವುದರಿಂದಲೂ, ಸಂಘದ ಲಾಭವೆಲ್ಲ ಸದಸ್ಯರಿಗೇ ಡಿವಿಡೆಂಡಿನ ರೂಪದಲ್ಲಿ ಹಂಚಿ ಬರುವುದರಿಂದಲೂ, ಸಾಮಾನ್ಯ ವರ್ಗಗಳಲ್ಲಿರುವ ಜನರಿಗೆ ಕಾರ್ಯ ಪ್ರಪಂಚದ ಶಿಕ್ಷಣವೂ ನಾಯಕ ಶಕ್ತಿಯೂ ಬರುವ ಅವಕಾಶವಿರುವುದ ರಿಂದಲೂ ಸಹಕಾರ ತತ್ವ ಎಲ್ಲ ಕಾರ್ಯರಂಗಗಳಿಗೂ ವ್ಯಾಪಿಸುತ್ತದೆ.

ಸಹಕಾರದ ಬ್ಯಾಂಕುಗಳ ಕೈ ಹಣ ಮಿತವಾಗಿರುವುದು; ಅದು ಎಷ್ಟು ಹೆಚ್ಚು ಮೆಂಬರುಗಳಿಗೆ ಸಾಧ್ಯವಾದರೆ ಅಷ್ಟು ಜನಕ್ಕೆ ಉಪಯೋಗವಾಗ ಬೇಕಾದ್ದು; ಆದುದರಿಂದ ಯಾರೊಬ್ಬರ ಮೇಲಾಗಲಿ ಬಹುಕಾಲ ಸಾಲ ವನ್ನು ಬಿಟ್ಟಿರಲು ಸಾಧ್ಯವಿಲ್ಲ. ಹಣ ಕೈ ಕೈ ಬದಲಾಯಿಸುತ್ತ ಮೆಂಬರು

ಕಾರ್ಯಶಕ್ತಿಯನ್ನೂ ಬೆಳೆಸಲು ಸ್ಥಾಪಿತವಾಗಿ ಸಣ್ಣ ಬಂಡವಾಳವುಳ್ಳವರ ಯೋಗಕ್ಷೇಮಕ್ಕಾಗಿರುವುದರಿಂದ ಸರಕಾರದವರು ಅನೇಕ ರಿಯಾಯಿತಿಗಳನ್ನು ತೋರಿಸಿ ಇವಕ್ಕೆ ವಿಶೇಷ ಹಕ್ಕುಗಳನ್ನು ಕೊಟ್ಟಿರುವುದುಂಟು. ಇವುಗಳ ಅಭಿವೃದ್ಧಿಗಾಗಿ ಒಂದು ಇಲಾಖೆಯನ್ನು ಸ್ಥಾಪಿಸಿ ಒಳವ್ಯವಸ್ಥೆಗೆ ನೆರವಾಗಿ ಅಲ್ಲಿನ ವ್ಯಾಜ್ಯ ಅವ್ಯವಸ್ಥೆಗಳನ್ನು ಹರಿಸುವ ವಿಶೇಷವಾದ ಏರ್ಪಾಡುಮಾಡುವುದುಂಟು.

ಇವುಗಳ ಕೆಲಸಕ್ಕೆ ಬೇಕಾದ ಹಣ, ಷೇರುದಾರರು ಕೊಡುವ ಬಂಡವಾಳ; ಮೆಂಬರುಗಳೂ, ಇತರರೂ (ಸಂಘದ ಉಪನಿಯಮವು ಆಗಬಹುದೆಂದಿದ್ದರೆ) ಇಡುವ ಠೇವಣಿ ಹಣ; ಜಿಲ್ಲಾ ಅಥವಾ ಕೇಂದ್ರ ಸಂಸ್ಥೆಯಿಂದ ತೆಗೆದುಕೊಂಡ ಸಾಲ, ಇವೇ ಸಂಪಾದಿಸಿ ಕೂಡಿಸಿಟ್ಟಿರುವ ಲಾಭ, ಆಪದ್ಧನ—ಈ ರೂಪಗಳಲ್ಲಿ ಒದಗುತ್ತದೆ. ಈ ಹಣದ ಮೇಲೆ ಸಂಘದ ಕಾರ್ಯಮಂದಿರವನ್ನು ಕಟ್ಟಿ ಬೆಳೆಸುವುದು ಸಾಧಕ. ಸಂಘದ ಸದಸ್ಯರು ಯಾರು ಯಾವಾಗ ಬೇಕಾದರೂ ಸಂಘದ ವ್ಯವಹಾರದ ಲೆಕ್ಕವನ್ನು ವಿಚಾರಿಸುವ ಅಧಿಕಾರವಿರುವುದರಿಂದಲೂ, ಒಂದು ಗುಂಪಿಗೆ ಸೇರಿ ಯೋಗ್ಯರಾದವರು ಯಾರೇ ಆಗಲಿ ಮೆಂಬರಾಗಬಹುದಾದ್ದರಿಂದಲೂ, ಯೋಗ್ಯನಾಗಿ ನಿಪುಣನಾದ ಪ್ರಭಾವಶಾಲಿಯಾದ ಯಾವ ಸದಸ್ಯನೇ ಆಗಲಿ, ಸಂಘದ ಚಾಲಕ ಮಂಡಲಿಗೂ ಕಾರ್ಯದರ್ಶಿಯ ಕೆಲಸಕ್ಕೂ ಬರಬಹುದಾದ್ದರಿಂದಲೂ, ಮೆಂಬರಿನ ಷೇರುಗಳೆಷ್ಟೇ ಇದ್ದರೂ ಎಲ್ಲರಿಗೂ ಒಂದೇ ಗಣನೆ ಒಂದೇ ತೂಕವಿರುವಂತೆ ಒಬ್ಬನಿಗೆ ಒಂದೇ ವೋಟು ಎಂಬ ನಿಬಂಧನೆಯಿರುವುದರಿಂದಲೂ, ಸಂಘದ ಲಾಭವೆಲ್ಲ ಸದಸ್ಯರಿಗೇ ಸೇರುತ್ತದೆ. ಊರವರಲ್ಲಿ ಹಂಚಿ ಬರುವುದರಿಂದಲೂ, ಸಾಮಾನ್ಯ ವರ್ಗಗಳಲ್ಲಿರುವ ಜನರಿಗೆ ಕಾರ್ಯ ಪ್ರಪಂಚದ ಶಿಕ್ಷಣವೂ ನಾಯಕ ಶಕ್ತಿಯೂ ಬರುವ ಅವಕಾಶವಿರುವುದರಿಂದಲೂ ಸಹಕಾರ ತತ್ತ್ವ ಎಲ್ಲ ಕಾರ್ಯರಂಗಗಳಿಗೂ ವ್ಯಾಪಿಸುತ್ತದೆ.

ಸಹಕಾರದ ಬ್ಯಾಂಕುಗಳ ಕೈಹಣ ಮಿತವಾಗಿರುವುದು; ಅದು ಎಷ್ಟು ಹೆಚ್ಚು ಮೆಂಬರುಗಳಿಗೆ ಸಾಧ್ಯವಾದರೆ ಅಷ್ಟು ಜನಕ್ಕೆ ಉಪಯೋಗವಾಗಬೇಕಾದ್ದು; ಆದುದರಿಂದ ಯಾರೊಬ್ಬರ ಮೇಲಾಗಲಿ ಬಹುಕಾಲ ಸಾಲವನ್ನು ಬಿಟ್ಟಿರಲು ಸಾಧ್ಯವಿಲ್ಲ. ಹಣ ಕೈ ಕೈ ಬದಲಾಯಿಸುತ್ತ ಮೆಂಬರು

ಗಳಿಗೆ ಸಹಾಯ ಕೊಡುತ್ತ, ವ್ಯಾಪಾರವನ್ನು ವಿಸ್ತರಿಸಿ ಸಂಪಾದನೆಯನ್ನೂ ಉಪಯೋಗವನ್ನೂ ಹೆಚ್ಚಿಸಿಕೊಳ್ಳುತ್ತಿರುವುದು.

ಸಹಕಾರದ ಸಾಲ ಸಂಘಗಳಿಂದ (Credit Societies, Co-operative Banks) ಅನೇಕ ಜನ ಸಾಮಾನ್ಯದ ಜನರಿಗೂ, ಬಡವರಿಗೂ, ಸಣ್ಣ ಕೈಗಾರಿಕೆಗಳವರಿಗೂ ಹಳ್ಳಿ ಪಟ್ಟಣಗಳಲ್ಲಿ ಬಹಳ ಅನುಕೂಲ ದೊರೆತಿದೆ ಎನ್ನಬೇಕು. ದೊಡ್ಡ ಅಥವಾ ನಿಡುಸಾಲಗಳನ್ನು ಕೊಟ್ಟು, ಕೈಗಾರಿಕೆಗಳಿಗಾಗಲಿ, ವ್ಯವಸಾಯಗಾರರಿಗಾಗಲಿ ನೆರವಾಗುವುದು ಎಲ್ಲ ಸಂಘಗಳಿಗೂ ಸಾಧ್ಯವಲ್ಲವಾದರೂ ಆ ಕೆಲಸಕ್ಕಾಗಿಯೇ ಕೆಲವು ಸಂಘಗಳು ಏರ್ಪಡಲು ಅವಕಾಶವುಂಟು. ಮೆಂಬರು ಹಣ ಕೂಡಿಡಲು ಎಲ್ಲ ಸಂಘಗಳವರೂ ಅವಕಾಶ ಕಲ್ಪಿಸುವರು; ಡಿಪಾಸಿಟ್ಟುಗಳಿಗೆ ಉತ್ತೇಜನ ಕೊಡುವರು; ಪ್ರಾವಿಡೆಂಟ್ ಫಂಡು ಮುಂತಾದವನ್ನು ಏರ್ಪಡಿಸಲು ಪ್ರಯತ್ನಿಸುವರು. ಅವರ ಕೆಲಸ ಚೆನ್ನಾಗಿ ನಡೆಯುತ್ತಿರುವಾಗ ಜಿಲ್ಲಾ ಅಥವಾ ಕೇಂದ್ರ ಸಂಘಗಳಿಂದಲೂ, ಅವರ ಮೂಲಕ ಸರಕಾರ ಅಥವಾ ವ್ಯಾಪಾರದ ಬ್ಯಾಂಕುಗಳಿಂದಲೂ ಸಾಲಗಳನ್ನು ತೆಗೆದುಕೊಳ್ಳಲು ಅವಕಾಶ ಉಂಟುಮಾಡಿಕೊಳ್ಳುವರು. ವ್ಯಾಪಾರದ ಬ್ಯಾಂಕುಗಳವರೆಲ್ಲ ದೇಶದ ಸೆಂಟ್ರಲ್ ಬ್ಯಾಂಕಿನಲ್ಲಿ ಹೇಗೆ ತಮ್ಮ ಡಿಪಾಸಿಟ್ಟುಗಳನ್ನಿಡುವರೊ, ಹಾಗೆ ಸ್ಥಳೀಯ ಬ್ಯಾಂಕುಗಳು ತಮ್ಮ ಜಿಲ್ಲೆಯ ಸಂಘಗಳಲ್ಲಿಯೂ, ಅವು ದೇಶದ ಕೇಂದ್ರ ಸಹಕಾರ ಸಂಸ್ಥೆಯಲ್ಲಿಯೂ ಡಿಪಾಸಿಟ್ ಇಡುವುವು; ತಮ್ಮ ಸಮಯಕ್ಕೆ ಅವರಿಂದ ಹಣ ಸಹಾಯ ಪಡೆಯುವುವು. ಮೇಲೆ ಹೇಳಿದಂತೆ ಕೇಂದ್ರ ಸಂಸ್ಥೆಗಳು ವ್ಯಾಪಾರದ ಬ್ಯಾಂಕುಗಳಿಂದಲೂ, ಸರಕಾರದವರಿಂದಲೂ, ಇತರ ಖಾಸಗಿ ಜನರ ಡಿಪಾಸಿಟ್ಟುಗಳನ್ನು ಆಕರ್ಷಿಸುವುದರಿಂದಲೂ ಹಣವನ್ನು ಸಂಗ್ರಹಿಸಿ ಸಹಕಾರ ಮಂಡಲಕ್ಕೆ ಪೋಷಣೆ ತರುವುವು.

ಸರಕಾರದವರು ಸಹಕಾರ ಮಂಡಲಕ್ಕೆ ಹಲವು ಬಗೆಯಲ್ಲಿ ಸಹಾಯ ಕೊಡುವರು. ಕೆಲವು ಕಡೆ ಕೇಂದ್ರ ಸಂಸ್ಥೆಗಳಲ್ಲಿ ತಮ್ಮ ಡಿಪಾಸಿಟ್ಟನ್ನು ಇಟ್ಟು ಜನರಿಗೆ ಆ ಸಂಘಗಳಲ್ಲಿ ವಿಶ್ವಾಸ ಹುಟ್ಟುವಂತೆ ಮಾಡುವರು. ತಾವು ಹೆಚ್ಚು ನೇರವಾಗಿ ಹಣ ಕೊಡುವ ರೂಢಿಯನ್ನು ಸ್ಥಾಪಿಸಿದರೆ ಸಹಕಾರ ಮಂಡಲದ ಸ್ವಾವಲಂಬನಶಕ್ತಿ ಕೆಡುವುದೆಂದು ತಿಳಿದು,

ನೇರವಾಗಿ ಹಣ ಸಹಾಯ ಮಾಡದೆ, ಇಂಥ ಸಂಘಗಳಲ್ಲಿಟ್ಟ ಸಣ್ಣ ಠೇವಣಿದಾರರ ಹಣಕ್ಕೆ (ಒಂದು ಮಿತಿಯನ್ನು ಗೊತ್ತುಮಾಡಿ) ತಾವು ಹೊಣೆಯಾಗಿರುವೆವೆಂದು ನಂಬಿಕೆ ಕೊಡುವರು. ಈ ಮೂಲಕ ಸಣ್ಣವರು ಸ್ವಲ್ಪ ಸ್ವಲ್ಪ ಹಣ ಕೂಡಿಸಿ ಈ ಸಂಘಗಳಿಗೆ ಹಣವೊದಗಿಸುವ ಕೆಲಸಕ್ಕೆ ಉತ್ತೇಜನ ಕೊಟ್ಟಹಾಗಾಗುತ್ತದೆ. ದೇಶದಲ್ಲಿ ಇನ್ನೂ ಹೊಸದಾಗಿ ಈ ಸಂಘಗಳು ಬಳಕೆಗೆ ಬರುತ್ತಿದ್ದರೆ ಮೊದಮೊದಲು ನೇರವಾಗಿ ನಗದು ಸಾಲವನ್ನೇ ಕೊಡುವುದೂ ಉಂಟು.

ಅನೇಕ ವೇಳೆ ಸ್ಟಾಂಪು ತೆರಿಗೆ, ವರಮಾನದ ತೆರಿಗೆ, ರೆಜಿಸ್ಟ್ರೇಷನ್ ಫೀಜು ಮುಂತಾದುವನ್ನು ಸಹಕಾರ ಸಂಘಗಳು ತೆರತಕ್ಕದ್ದಿಲ್ಲವೆಂದು ವಿನಾಯಿಸುವರು. ಸಾಲಗಾರರಿಂದ ಸಂಘಕ್ಕೆ ಹಣ ಬರಬೇಕಾಗಿರುವಾಗ ಇತರ ಸಾಹುಕಾರರಿಗೂ ಸಾಲ ಕೊಟ್ಟವರಿಗೂ ಸಾಲ ತೀರುವ ಮುಂಚೆ ಈ ಸಂಘಗಳ ಹಣ ಸಂದಾಯವಾಗಬೇಕೆಂದು ಶಾಸನಮಾಡುವರು. ಸಂಘಗಳು ಬಡ್ಡಿಯ ದರವನ್ನು ಒಂದು ಮಟ್ಟಕ್ಕಿಂತ ಮೇಲೆ ಏರಿಸಲಾಗದೆಂದೂ, ತಮ್ಮ ಆಪದ್ಧನದ ಮೊತ್ತ ಒಂದು ಪ್ರಮಾಣಕ್ಕೆ ಬೆಳೆಯುವವರೆಗೂ ಸಂಘದ ಲಾಭವನ್ನು ಡಿವಿಡೆಂಡ್ ರೂಪದಲ್ಲಿ ಇಷ್ಟು ದರಕ್ಕೆ ಮೇಲ್ಪಟ್ಟು ಹಂಚಕೂಡದೆಂದೂ ಆಪದ್ಧನಗಳನ್ನು ಕೂಡಿಸುವಾಗ ಇಂಥ ಇಂಥ ನಿಯಮಗಳನ್ನು ಅನುಸರಿಸತಕ್ಕದ್ದೆಂದೂ ಶಾಸನವನ್ನು ವಿಧಾಯಿಸುವರು. ಸಹಕಾರದ ಸೆಂಟ್ರಲ್ ಸಂಘಗಳು ಉಂಟುಮಾಡುವ ಡಿಬೆಂಚರ್ ಪತ್ರಗಳ ಆಧಾರದ ಮೇಲೆ ದೇಶದ ಸೆಂಟ್ರಲ್ ಬ್ಯಾಂಕು ಕೂಡ ಹಣ ಹೂಡುವಂತೆ ಪ್ರೋತ್ಸಾಹ ಕೊಡುವರು.

ಸಹಕಾರ ಸಂಘಗಳ ಕ್ಷೇತ್ರವಿಸ್ತರಣಕ್ಕೂ, ವ್ಯಾಪಕತೆಗೂ ಯಾವ ಎಲ್ಲೆಯೂ ಇಲ್ಲವೆನ್ನಬಹುದು. ಜರ್ಮನಿಯ ಗ್ರಾಮ ಸಹಕಾರ ಸಂಘಗಳೂ, ಡೆನ್ಮಾರ್ಕಿನ ಡೈರಿ ಸಂಘಗಳೂ, ಐರ್ಲೆಂಡಿನ ಉತ್ಪತ್ತಿ ಮತ್ತು ಮಾರಾಟದ ಸಂಘಗಳೂ, ಇಂಗ್ಲೆಂಡಿನ ಸ್ಟೋರ್ಸ್ ಸಂಘಗಳೂ ಲೋಕಪ್ರಖ್ಯಾತವಾಗಿವೆ. ಇಂಗ್ಲೆಂಡಿನ ಕೋ-ಆಪರೇಟಿವ್ ಹೋಲ್‌ಸೇಲ್ ಸ್ಟೋರಿಗೆ (C.W.S.) ಸಾವಿರಾರು ಶಾಖೆಗಳೂ, ಸ್ವಂತವಾದ ಚಹಾ ತೋಟ ಮುಂತಾದ ದೊಡ್ಡ ಆಸ್ತಿಗಳೂ ಇವೆ.

ಈ ತತ್ವದ ಪ್ರಾಬಲ್ಯ ಎಷ್ಟುಮಟ್ಟಿಗೆ ಇದೆಯೆಂದರೆ ಕೂಡು ಬಂಡವಾಳದ ಬ್ಯಾಂಕುಗಳೂ, 'Army & Navy Co-operative Stores Companies' ಎಂಬ ಖಾಸಗಿ ಸಂಸ್ಥೆಗಳೂ ಈ ತತ್ವದ ಅನೇಕ ಲಕ್ಷಣ ಗಳನ್ನು ಸಂಗ್ರಹಿಸಿ 'ನಾವೂ ಅವುಗಳಂತೆಯೇ ಕೆಲಸಮಾಡುತ್ತಿದ್ದೇವೆ; ನಮ್ಮಲ್ಲಿ ಕೂಡುಬಂಡವಾಳ ತತ್ವ, ಸಹಕಾರ ತತ್ವ, ಎರಡರ ಅನುಕೂಲವೂ ಇದೆ' ಎಂದು ವ್ಯಾಪಾರವನ್ನು ಆಕರ್ಷಿಸುವ ಪ್ರಯತ್ನಮಾಡುವವು. ಮುಖ್ಯವಾಗಿ ಸಹಕಾರ ಸಂಘಗಳು ಎಲ್ಲರಿಗೂ ಸುಗಮವಾಗಿರುತ್ತವೆ: ಅಲ್ಲಿನ ಸಾಲಗಾರಿಕೆ ಹೊರಗಿನವರಿಗೆ ತಿಳಿಯಬೇಕಾಗಿರುವುದಿಲ್ಲ; ಸಾಲವನ್ನು ಸಕಾಲಕ್ಕೆ ಕಂತಾಗಿಯೊ ಮೊತ್ತದಲ್ಲಿಯೊ ತೀರಿಸುವುದಕ್ಕೂ, ತೀರಿಸಲು ಒಂದುಸಲ ಅನನುಕೂಲವಾದರೆ, ಹೆಚ್ಚು ತೊಂದರೆ ಸಿಷ್ಟುರತೆ ತೋರದೆ ಮುಂದಿನ ತಿಂಗಳಲ್ಲಿ ಹಿಂತಿರುಗಿಸುವುದಕ್ಕೂ ಅವಕಾಶವಿರುತ್ತದೆ; ಬಡ್ಡಿಯು ದರ ಇತರ ಖಾಸಗಿ ಕಡೆಗಳಿಗಿಂತಲೂ ಕಡಮೆ. ಸುಸ್ತಿ ಬಡ್ಡಿ ತೆರಬೇಕಾಗು ವುದೆಂಬುದೊಂದೇ ಕಷ್ಟ;— ಸಂಜಿಕೆ ಕಳೆದುಕೊಂಡು ಸದಸ್ಯತ್ವವನ್ನು ರದ್ದುಮಾಡಿಸಿಕೊಳ್ಳಬೇಕಾದೀತೆಂಬುದೊಂದೇ ಲಜ್ಜೆ.

ಅವು ಪ್ರಬಲವಾಗಿರುವ ಕಡೆ ಕೊಂಡು ತಿನ್ನುವವರಿಗೆ (Consumers) ಪೇಟೆಯು ಚಿಲ್ಲರೆ ಧಾರಣೆ ಇಳಿಯುವ ಅವಕಾಶವಿರುತ್ತದೆ. ಅಂತು ಒಂದು ಕಡೆ ವ್ಯಾಪಾರ ಕೈಗಾರಿಕೆ ಬ್ಯಾಂಕುಗಳು, ಒಂದು ಕಡೆ ಧನಿಕ ಮಂಡಲಿಗಳು ಮತ್ತೊಂದು ಕಡೆ ಸಹಕಾರ ಸಂಘಗಳು ಕುಳಗಳ ಅಥವಾ ಸೊತ್ತುಗಳ ಆಧಾರದಮೇಲೆ ಸುಲಭ ಬಡ್ಡಿಗೆ ಸಾಲಗಳನ್ನು ಕೊಡಲು ಸಿದ್ಧರಾಗಿ ಖಾಸಗಿ ಸಾಹುಕಾರರ ಲೇವಾದೇವಿಯು ಅನೇಕ ಕಷ್ಟ ಸಿಷ್ಟುರಗಳನ್ನು ಬಹಳಮಟ್ಟಿಗೆ ಕಡಮೆ ಮಾಡಿವೆ ಎನ್ನಬೇಕು.

# ಪ್ರಕರಣ ೯

## ಸೆಂಟ್ರಲ್ ಬ್ಯಾಂಕುಗಳು*

**ಸ್ಥಾನ — ಅಗತ್ಯ.—** ಅನೇಕ ಒಗೆಯ ಲೇವಾದೇವಿ ನಡೆಯುತ್ತಿರುವ ಈ ಕಾಲದಲ್ಲಿ ಅದ್ಭುತ ಪ್ರಮಾಣದಲ್ಲಿ ಕಂಪನಿಗಳೂ, ಬ್ಯಾಂಕುಗಳೂ, ಉತ್ಪತ್ತಿ ಸಂಸ್ಥೆಗಳೂ, ವ್ಯಾಪಾರ ಮಂಡಲವೂ ಲಾಭಕ್ಕಾಗಿ ಸಂತತವಾಗಿ ಪ್ರಯಾಸ ಪಡುತ್ತ, ಹೊಂಚುತ್ತ, ಸರ್ವಥಾ ಅನುಕೂಲಗಳನ್ನು ಸಂಗ್ರಹಿಸುತ್ತಿರುವಲ್ಲಿ ಪೈಪೋಟಿಯಿಂದಲೂ ಲಾಭದ ಆಸೆಯಿಂದಲೂ ಒಟ್ಟು ದೇಶದ ಸಂಪತ್ ಸ್ಥಿತಿಗೇ ಕೇಡು ತಟ್ಟುವ ಸಂಭವವುಂಟೆಂದೂ; ಆರ್ಥಿಕ ಕಾರ್ಯಗಳೆಲ್ಲ ಅವ್ಯವಸ್ಥೆಯಾಗಬಹುದೆಂದೂ; ಆಪತ್ ಅಥವಾ ವಿಷಮ ಸಮಯಗಳಲ್ಲಿ ದೇಶದ ಸ್ಥಿತಿಯನ್ನೆಲ್ಲ ಒಬ್ಬ ಅಧಿಕಾರಿಯ ವಶದಲ್ಲಿಟ್ಟು ದೇಶದ ಹಣಪದ್ಧತಿಯನ್ನೂ ಪೇಟೆ ವ್ಯಾಪಾರಗಳನ್ನೂ ಕಾಪಾಡಬೇಕಾಗುವುದೆಂದೂ; ಸರಕಾರದ ಆದಾಯ ವೆಚ್ಚಗಳಿಂದ ಪೇಟೆಯು ಹದ ಕೆಡುವುದು ಸಾಧ್ಯವಾಗದಂತೆ ವ್ಯವಸ್ಥೆ ಮಾಡಬೇಕೆಂದೂ; ಜನದ ಕ್ಷೇಮ ಸುಭಿಕ್ಷಗಳಿಗಾಗಿ ನಡೆಯಬೇಕಾದ ಯಂತ್ರ ಅದರ ಅಸುಖಕ್ಕೆ ಕಾರಣವಾಗದಂತೆ ನಡೆಯುವ ಆವಶ್ಯಕತೆ ಇದೆಯೆಂದೂ; ಧಾರಣೆಮಾನ, ವಿನಿಮಯದ ದರ, ವಟ್ಟದ ದರ, ಕೈಗಾರಿಕೆಗೆ ಬಂಡವಾಳ ಒದಗುವ ಬಡ್ಡಿಯ ದರ, ಉದ್ಯೋಗದ ಬೆಳವಣಿಗೆ, ಎಲ್ಲವೂ ಸಮರಸವಾಗಿ ಏರ್ಪಡಬೇಕಾಗಿರುವುದೆಂದೂ; ಪರಸ್ಪರ ವಿರೋಧವಾಗಿಯೇ ನಡೆಯಬಹುದಾಗಿರುವ ಉತ್ಪತ್ತಿಯಂತ್ರ, ವ್ಯಾಪಾರ ಮಂಡಲ, ಧನ ಮಂಡಲಗಳನ್ನು ಒಂದು ತಾಣದಲ್ಲಿ ನಡಸಬೇಕಾಗುವುದೆಂದೂ; ಎಲ್ಲ ಆರ್ಥಿಕ ಚಲನವಲನಕ್ಕೂ ಅಗತ್ಯವಾದ ನಗದು ಹಣ, ಬ್ಯಾಂಕಿನ ಉದ್ಧಾರ (Credit) ಹಣ, ಕಿರುವಾಯಿದೆ ನಿಡುವಾಯಿದೆ ಸಾಲಗಳು ಇವನ್ನು ಒಟ್ಟು ದೇಶದ ಪ್ರಯೋಜನಕ್ಕೆ ಹೊಂದುವಂತೆ ಉತ್ಪತ್ತಿಮಾಡಿ, ಹಂಚಿ, ವ್ಯವಸ್ಥೆ ಮಾಡುವ ಮೇಲಧಿಕಾರಿ ಸಂಸ್ಥೆ ಇದ್ದೇ ಇರಬೇಕೆಂದೂ, ದೊಡ್ಡ ಕೈಗಾರಿಕೆ ರಾಷ್ಟ್ರಗಳಲ್ಲೆಲ್ಲ ಸೆಂಟ್ರಲ್ ಬ್ಯಾಂಕುಗಳೆಂಬ ಪ್ರಧಾನ ಸಂಸ್ಥೆಗಳು

* ಈ ಪ್ರಕರಣದಲ್ಲಿನ ವಿವರಣೆ ಕೇನ್ಸ್, ಹಾಟ್ರೆ, ರಾಬರ್ಟ್‌ಸನ್ ಮುಂತಾದವರ ಬರವಣಿಗೆಗಳನ್ನು ಹತ್ತಿರದಲ್ಲಿ ಅನುಸರಿಸಿದೆ.

ನಿರ್ಮಾಣವಾಗುವುವು ಎಂದು ಹಿಂದೆಯೇ ಹೇಳಿತು. ಅಲ್ಲದೆ ಹೊರ ದೇಶಗಳ ರಾಜಕೀಯ ಆರ್ಥಿಕ ರೀತಿನೀತಿಗಳಿಂದ ಒಳಗಿನ ಪರಿಸ್ಥಿತಿ ಕೆಡದಂತೆಯೂ ಏರ್ಪಡಿಸಬೇಕಾಗುತ್ತದೆ. ಈ ಬಗೆಯ ಎಲ್ಲ ವ್ಯವಸ್ಥೆಯನ್ನೂ ಮಾಡಬೇಕಾದರೆ ಸೆಂಟ್ರಲ್ ಬ್ಯಾಂಕಿಗೆ ತನ್ನ ದೇಶದಲ್ಲಿ ಎದುರಿಲ್ಲದ ದರ್ಪವೂ ಪ್ರಭಾವವೂ ಇರಬೇಕು.

ಸೆಂಟ್ರಲ್ ಬ್ಯಾಂಕುಗಳು ಸರಕಾರಿಯಾಗಿರಬಹುದು, ಸಾಹುಕಾರಿಯಾಗಿರಬಹುದು. ಹೇಗೇ ಹುಟ್ಟಿರಲಿ ಅವು ಸರಕಾರದ ವಿಶೇಷ ಅಧಿಕಾರ, ಆಶ್ರಯ ಬೆಂಬಲಗಳನ್ನು ಪಡೆದು ಧನಮಂಡಲದ ರಕ್ಷಕರಾಗಿರುತ್ತವೆ. ಸರಕಾರದ ಹಣವೆಲ್ಲ, ಹಣಕಾರ್ಯವೆಲ್ಲ ಅವುಗಳ ಕೈಯಲ್ಲಿರುವುದರಿಂದ ಅವು ಸರಕಾರದ ಪ್ರತಿನಿಧಿಗಳಂತೆ ಕೆಲಸಮಾಡುತ್ತವೆ. ಒಳದೇಶದಲ್ಲಿ ನಡೆಯುವ ಎಲ್ಲ ವ್ಯಾಪಾರಕ್ಕೂ ಸರಕಾರದವರು ವಿಧಿಸಿರುವ ನಗದು ಹಣದ (Legal Tender Cash) ಮೊತ್ತವೇ ಹದಿಯಾದ್ದರಿಂದ ಆ ನಗದು ಹಣವನ್ನು (ಮುಖ್ಯವಾಗಿ ನೋಟನ್ನು) ಚಲಾವಣೆಗೆ ತರುವ ಸರ್ವಾಧಿಕಾರ ಅವಕ್ಕಿರುವುದು ವಾಡಿಕೆ. ತಮ್ಮ ದೇಶದ ವ್ಯಾಪಾರದ ಬ್ಯಾಂಕುಗಳಿಗೆ ಬ್ಯಾಂಕಾಗಿರುತ್ತವೆ; ಸರಕಾರಕ್ಕೆ ಬ್ಯಾಂಕಾಗಿರುತ್ತವೆ. ಪ್ರತಿದಿನದ ವ್ಯವಹಾರದಲ್ಲಿ ಇತರ ಬ್ಯಾಂಕುಗಳಂತೆ ಡಿಪಾಸಿಟ್ ಕೆಲಸಮಾಡದೆ ಅವುಗಳ ವಿಶ್ವಾಸವನ್ನು ಸಂಪಾದಿಸಿ, ಅವಕ್ಕೆ ಸಹಾಯಕವಾಗಿರುತ್ತವೆ. ವಿಶೇಷ ಸಂದರ್ಭಗಳಲ್ಲಿ ಮಾತ್ರ ಸೆಂಟ್ರಲ್ ಬ್ಯಾಂಕುಗಳು ನೇರವಾಗಿ ಪೇಟೆಯಲ್ಲಿ ವ್ಯವಹರಿಸಿಯಾವು; —ಅದೂ ಸಮಷ್ಟಿ ಹಿತವನ್ನು ಸಾಧಿಸುವುದಕ್ಕಾಗಿ. ಸರಕಾರದವರ ಆಯ ವ್ಯಯದ ಮೊತ್ತವೂ, ಸಾಲವೆತ್ತುವ ಸಾಲ ತೀರಿಸುವ ಕಾರ್ಯಗಳೂ ಧನಮಂಡಲದಲ್ಲಿ ಬಹು ಪರಿಣಾಮಕಾರಿಯಾದ್ದರಿಂದ ಆ ಕೆಲಸಗಳನ್ನೂ ನಡೆಸುವುವು. ಒಟ್ಟು ಧನಮಂಡಲದ ಜೀವಸ್ಥಾನವಾಗಿರಬೇಕಾದ್ದು ಇಂಥ ಬ್ಯಾಂಕುಗಳ ಕೆಲಸ; ಅಧಿಕಾರ; ಜವಾಬ್ದಾರಿ. ಇಂತಹ ಶಕ್ತಿ ಜವಾಬ್ದಾರಿಗಳನ್ನು ಪ್ರಯೋಗಿಸಿ ಹಣ ವ್ಯವಸ್ಥೆ ಮಾಡುವ ಸಂಸ್ಥೆಯಿಲ್ಲದಿರುವ ದೇಶದಲ್ಲಿ ಸಂಪದಭಿವೃದ್ಧಿ ಕಾರ್ಯ ದಕ್ಷವಾಗಿ ನಡೆಯಲಾರದು. ಇತರ ಬ್ಯಾಂಕುಗಳಂತೆ ಸ್ವಂತ ಲಾಭವೊಂದರಮೇಲೆ ಮಾತ್ರ ಗಮನವಿಟ್ಟರೆ ಸಾಲದು; ಹಲವು ವೇಳೆ ಸ್ವಂತ ಲಾಭವನ್ನು ಲೆಕ್ಕಿಸದೆ ಕೆಲಸ ಮಾಡಬೇಕಾಗುವುದು.

**ಸರಕಾರದ ಹಣ ಶಾಸನ.**— ಇಂತಹ ಬ್ಯಾಂಕಿನ ರಚನೆ ಹೇಗೆ? ಅಧಿಕಾರವೆಷ್ಟು? ಹೇಗೆ? ಒಳ ಆಡಳಿತದಲ್ಲಿ ಯಾವ ಯಾವುದರ ತೂಕ ಎಷ್ಟು? ಯಾವ ಬಗೆಯ ಕೆಲಸವನ್ನು ಅದು ಮಾಡಬಹುದು; ಯಾವುದನ್ನು ಮಾಡಬಾರದು? ಸುಭಿಕ್ಷ ಕಾಲದಲ್ಲಿ ಕಾರ್ಯರೀತಿ ಹೇಗೆ? ಯುದ್ಧಕಾಲದಲ್ಲಿಯೂ ವಿಪರೀತ ಪ್ರಸಂಗಗಳಲ್ಲಿಯೂ ಹೇಗೆ? ಗಳಿಸಿದ ಲಾಭದಲ್ಲಿ ಎಷ್ಟೆಷ್ಟನ್ನು ಹೇಗೆ ಹೇಗೆ ಹಂಚಬೇಕು? ತನ್ನ ಲೋಹನಿಧಿಯ ಗಾತ್ರವನ್ನೂ ರಚನೆಯನ್ನೂ ಹೇಗೆ ಕಾಪಾಡಿಕೊಳ್ಳುತ್ತಿರಬೇಕು? ಸರಕಾರದ ಯಾವ ಹಕ್ಕುಗಳನ್ನು ಅನುಭವಿಸಬಹುದು? ಆಡಳಿತ, ಹಣದ ಚಲಾವಣೆ, ಲಾಭ ವಿಭಾಗ ಮುಂತಾದ ಸಂಬಂಧಗಳಲ್ಲಿ ಅದಕ್ಕೂ ಸರಕಾರಕ್ಕೂ ಯಾವ ಬಗೆಯ ನಡವಳಿಕೆ ಇರಬೇಕು? ದೇಶದ ಇತರ ವ್ಯಾಪಾರ ಬ್ಯಾಂಕುಗಳಿಗೂ ಅದಕ್ಕೂ, ಉದ್ಯೋಗ, ಕೈಗಾರಿಕೆ, ವ್ಯವಸಾಯ, ಸಹಕಾರ, ಬಂಡವಾಳ ಪ್ರಪಂಚಗಳಿಗೂ ಅದಕ್ಕೂ ಯಾವ ಬಗೆಯ ಸಂಬಂಧವಿರತಕ್ಕದ್ದು? ಮುಂತಾದ ಅಂಶಗಳಲ್ಲಿ ಸರಕಾರಗಳು ಶಾಸನಮಾಡಿರುತ್ತವೆ. ಅವುಗಳಲ್ಲಿ ಕೆಲವದರ ಸ್ಥೂಲ ಪರಿಚಯವನ್ನು ಮಾತ್ರ ಮಾಡಿಕೊಡುವುದು ಇಲ್ಲಿ ಸಾಧ್ಯ.

**ಬೇರೆ ಬೇರೆ ಸಂಪ್ರದಾಯಗಳು: ಇಂಗ್ಲಿಷ್ ಪದ್ಧತಿ.**— ಈ ಬಗೆಯ ಶಾಸನಗಳಲ್ಲಿ ಇಂಗ್ಲಿಷ್ ಸಂಪ್ರದಾಯ ಬೇರೆ; ಯೂರೋಪಿಯನ್ ಸಂಪ್ರದಾಯ ಬೇರೆ. ಇವೆರಡರ ಲಕ್ಷಣಗಳಿಂದಲೂ ತನಗೆ ಬೇಕಾದುದನ್ನು ಆರಿಸಿಕೊಂಡು ಏರ್ಪಟ್ಟಿರುವುದು ಅಮೇರಿಕನ್ ಸಂಪ್ರದಾಯ. ಇಂಗ್ಲೆಂಡಿನಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡ್ ಪ್ರಧಾನ ಬ್ಯಾಂಕು. ಅದು ಖಾಸಗಿ ಸಂಸ್ಥೆ. ಬಹುತರ ತನ್ನ ಸ್ಥಿತಿಗತಿಗಳಿಗೆ ತಕ್ಕಂತೆ ಅದು ಒಳಗಿನ ಕಾರ್ಯರಚನೆ ಮಾಡಿಕೊಳ್ಳಬಹುದು. ಕೆಲವು ಗೊತ್ತಾದ ಸಂಗತಿಗಳಲ್ಲಿ ಹೊರತು ಬ್ಯಾಂಕಿನ ಆಡಳಿತದಲ್ಲಿ ಸರಕಾರ ಕೈಹಾಕುವುದಿಲ್ಲ. ಸರಕಾರದವರು ಕೊಟ್ಟಿರುವ ಒಂದು ಸನ್ನದಿನ ಮೇರೆಗೆ ಅದು ತನ್ನ ಹಣದ ಕೆಲಸವನ್ನು ಮಾಡುವುದು. ಸಾಧ್ಯವಾದಮಟ್ಟಿಗೆ ಬ್ಯಾಂಕೂ ಸರಕಾರವೂ ಹಣಕಾರ್ಯಗಳಲ್ಲಿ ಒಮ್ಮತದಿಂದ ವ್ಯವಹರಿಸುವುವು. ಆದರೆ ಸ್ವರೂಪತಃ ಬ್ಯಾಂಕೂ, ಬ್ಯಾಂಕ್ ಮಂಡಲವೂ ಸ್ವಾಧೀನ ಸಂಸ್ಥೆಗಳು. ಬಹುಕಾಲದಿಂದಲೂ ಅನೇಕ ರೂಢಿ ಮರ್ಯಾದೆ ಅಲ್ಲಿ ನಡೆದುಕೊಂಡು ಬಂದಿವೆ.

ಅವನ್ನು ಎಲ್ಲರೂ ಗೌರವಿಸುವುದರಿಂದ ಅದೇ ಒಂದು ನಿಯಮವಾಗಿ ಶಿಕ್ಷಣವಾಗಿ ಸಂಪ್ರದಾಯವಾಗಿ ನಿಂತಿದೆ. ಯುರೋಪಿಯನ್ ಬ್ಯಾಂಕುಗಳ ಸ್ಥಿತಿ ಬೇರೆ. ಅಲ್ಲಿ ಬ್ಯಾಂಕಿನ ರಚನೆ, ರೀತಿ, ಕಾರ್ಯವಿಧಾನ ಮುಂತಾದ ಸುಮಾರು ಎಲ್ಲ ವಿಷಯಗಳಲ್ಲಿಯೂ ಸೆಂಟ್ರಲ್ ಬ್ಯಾಂಕುಗಳು ಹೀಗೆ ಹೀಗೆ ನಡೆಯತಕ್ಕದ್ದೆಂದೂ, ಬ್ಯಾಂಕುಗಳು ಸರಕಾರಕ್ಕೆ ಹೊಣೆಯಾಗಿ ಅಧೀನವಾಗಿ ಕೆಲಸ ಮಾಡಬೇಕೆಂದೂ,—ಅವುಗಳ ಕಾರ್ಯದಲ್ಲಿ ಭಾಗಿಯಾದಂತೆ ಸರಕಾರಗಳು ಶಾಸನವನ್ನು ಏರ್ಪಡಿಸಿರುವುವು. ಅಮೇರಿಕನ್ ಪದ್ಧತಿಯಲ್ಲಿ ಫೆಡರಲ್ ರಿಸರ್ವ್ ಬ್ಯಾಂಕುಗಳೆಂಬ ಒಟ್ಟು ಹನ್ನೆರಡು ಬ್ಯಾಂಕುಗಳು ಸೆಂಟ್ರಲ್ ಬ್ಯಾಂಕ್ ಕೆಲಸವನ್ನು ಮಾಡುವುವು.

ಈ ಮೂರು ಬಗೆಯ ಸಂಸ್ಥೆಗಳೂ ನೋಟಿನ ನಿರ್ಮಾಣಕಾರ್ಯವನ್ನು ಹೇಗೆ ಮಾಡುವುವು? ಅವಕ್ಕೂ ತಮ್ಮ ದೇಶದ ಹಣದ ಪೇಟೆಗೂ ಸಂಬಂಧ ಹೇಗೆ ಏರ್ಪಡುವುದು? ಆಯಾ ದೇಶದ ಹಣದ ಪೇಟೆಯ ಮೇಲೆ ಅವಕ್ಕೆ ಯಾವ ಬಗೆಯ ಅಧಿಕಾರ ನಡೆಯುವುದು? ಕಿರುವಾಯಿದೆ ಸಾಲದ ಪೇಟೆಯಲ್ಲಿ ಸರಕಾರದ ಸಂಬಂಧ* ಹೇಗೆ ಸ್ಥಾಪಿತವಾಗುವುದು? ಪೇಟೆಯನ್ನು ತನ್ನ ಅಧೀನದಲ್ಲಿಟ್ಟುಕೊಂಡು ಎಲ್ಲವನ್ನೂ ಮುಂಗಳಕ್ಕೆ ನಡಸುವ ಕಾರ್ಯದಲ್ಲಿ, ಅವುಗಳ ಕೈಯಲ್ಲಿರುವ ಸಾಧನಗಳು ಯಾವುವು? ಯಾವ ನಿಯಮ ವಿಧಾನಗಳನ್ನು ಅವು ಅನುಸರಿಸುವುವು? ಎಂಬ ಸಂಗತಿಗಳು ಈ ಪ್ರಕರಣದ ವಿಷಯು.

**ನೋಟು - ಚಲಾವಣೆಯ ಪದ್ಧತಿ.** — ನೋಟನ್ನು ಚಲಾವಣೆಗೆ ತರುವ ಕಾರ್ಯ ಸೆಂಟ್ರಲ್ ಬ್ಯಾಂಕುಗಳಿಗೆ ಎಲ್ಲೆಲ್ಲಿಯೂ ಆಯಾ ಸರಕಾರಗಳು ಕೊಟ್ಟುದು. ಸರಕಾರಗಳ ಸರ್ವಾಧಿಕಾರವಾಗಿದ್ದುದನ್ನು ಈಗ ಈ ಬ್ಯಾಂಕುಗಳು ವಹಿಸುವುವಾದುದರಿಂದ ತಮ್ಮ ದೇಶದ ಹಣಪದ್ಧತಿ ಹೀಗೇ ಇರಬೇಕೆಂದು ನಿರ್ಧರಿಸಿ, ಬ್ಯಾಂಕುಗಳು ನೋಟನ್ನು ಹೇಗೆ ಚಲಾವಣೆಗೆ ತರಬೇಕು? ಅವುಗಳ ಬೆಂಗಾವಲಾಗಿ ಹೇಗೆ ನಿಧಿಗಳನ್ನಿಟ್ಟು ಕಾಪಾಡಬೇಕು? ಬ್ಯಾಂಕಿನ ಜವಾಬ್ದಾರಿಯ ಸ್ವರೂಪ ಎಂಥದು ಎಂಬ ಅಂಶಗಳಲ್ಲಿ ಸರಕಾರ ಬ್ಯಾಂಕಿನಮೇಲೆ ನಿಷ್ಕೃರ ನಿಯಮಗಳನ್ನು ಹೊರಿಸುವುದು. ನೋಟು ಚಾಲನೆಯನ್ನು ನಿರ್ಧರಿಸುವ ನಿಯಮಗಳು ಹಲವು ಬಗೆ:—

* ಈ ಬಗ್ಗೆ ವಿಶೇಷ ವಿವರಗಳನ್ನು ಮುಂದಿನ ಪ್ರಕರಣಗಳಲ್ಲಿ ಕಾಣಬಹುದು.

I. **ಚಲಾವಣೆಗೆ ಪರಮಾವಧಿ ಮಿತಿ.**—೧೯೨೮ರವರೆಗೂ ಫ್ರಾನ್ಸಿನಂಥ ದೇಶದಲ್ಲಿ ಬ್ಯಾಂಕು ಪ್ರಚಾರಕ್ಕೆ ತಂದ ನೋಟಿನ ಮೊತ್ತಕ್ಕೂ, ಲೋಹ ನಿಧಿಯ ಚಿನ್ನ ಬೆಳ್ಳಿ ಪ್ರಮಾಣಕ್ಕೂ ಗೊತ್ತಾದ ಯಾವ ಸಂಬಂಧವೂ ಇರುತ್ತಿರಲಿಲ್ಲ. ನಿಧಿ ಎಷ್ಟೇ ಇರಲಿ, ಒಂದು ಪರಮಾವಧಿ ಮೊತ್ತಕ್ಕೆ ಮೀರಿ ನೋಟನ್ನು ಚಲಾವಣೆಗೆ ತರಕೂಡದೆಂದು ಅಲ್ಲಿ ನಿಯಮವಿತ್ತು. ಈ ಪರಮಾವಧಿ ಎಷ್ಟೆಂಬುದನ್ನು ಸರಕಾರ ಆಗಿಂದಾಗ್ಗೆ ನಿರ್ಧರಿಸುತ್ತಿತ್ತು. ಮಿತಿಗೆ ಒಳಪಟ್ಟು ಸ್ವಾತಂತ್ರ್ಯ ವಹಿಸಿ ನೋಟನ್ನು ಹೆಚ್ಚು ಕಡಮೆ ಮಾಡುವ ಅವಕಾಶ ಅಲ್ಲಿನ ಸೆಂಟ್ರಲ್ ಬ್ಯಾಂಕಿಗೆ ಇತ್ತು. ಈ ರೀತಿ ಒಂದು ಕಡೆ ನಿಧಿಗಳ ಪರಮ ಪ್ರಯೋಜನ ದೊರೆಯುವಂತಾಗುತ್ತಿತ್ತು; ಇನ್ನೊಂದು ಕಡೆ ಅತಿಯಾಗಿ ನೋಟನ್ನು ಅಚ್ಚುಮಾಡಿ ಬ್ಯಾಂಕು ದೇಶದ ಹಣದ ಬೆಲೆಯನ್ನು ಇಳಿಸದಂತೆ ಸರಕಾರ ನೋಡಿಕೊಳ್ಳುತ್ತಿತ್ತು.

II. **ಇಂಗ್ಲಿಷ್ ಪದ್ಧತಿ.**—ನೋಟಿನ ಒಟ್ಟು ಮೊತ್ತ ಇಷ್ಟಕ್ಕೆ ಮೀರದಿದ್ದರೆ ಅದರ ಹಿಂದೆ ಬ್ಯಾಂಕು ಯಾವ ಲೋಹನಿಧಿಯನ್ನೂ ಇಡತಕ್ಕದ್ದಿಲ್ಲ; ಆ ಮಿತಿ ಮೀರಿದರೆ ಪೌಂಡಿಗೆ ಪೌಂಡು ಚಿನ್ನವನ್ನು ಸಂಗ್ರಹಿಸಿಡಬೇಕು ಎಂಬುದು ಇಂಗ್ಲಂಡಿನಂಥ ಕಡೆಗಳಲ್ಲಿ ವಿಧಿ. ಇಂಗ್ಲಂಡಿನಲ್ಲಿ ಈಗ ಆ ಮಿತಿ ೨೭ ಕೋಟಿ ಪೌಂಡುಗಳು. ದೇಶದಲ್ಲಿ ಸಂಚಾರಕ್ಕೆ ಇಷ್ಟಾದರೂ ಹಣ ಬೇಕು ಎಂದು ಗೊತ್ತಿರುವುದು. ಆ ಹಣದಷ್ಟು ನಾಣ್ಯವನ್ನು ಕೇಳಲು ಯಾರೂ ಬ್ಯಾಂಕಿಗೆ ಬರುವುದಿಲ್ಲವೆಂದು ಗೊತ್ತು. ಆದುದರಿಂದ ಅದಕ್ಕೆ ಮೀರಿದ ಹೆಚ್ಚು ಮೊತ್ತಕ್ಕೆ ಬೆಂಗಾವಲಾಗಿ ಚಿನ್ನವನ್ನಿಡಬೇಕೆಂಬುದು ಶಾಸನ. ಚಿನ್ನದ ನಾಣ್ಯವೂ ನೋಟೂ ಎರಡೂ ಜೊತೆಯಲ್ಲಿ ಪ್ರಚಾರದಲ್ಲಿದ್ದರೆ ಈ ಕೋಶ ದೊಡ್ಡದಾಗಿಯೇ ಇರಬೇಕಾಗುವುದು. ಏಕೆಂದರೆ, ಕೇಳಿದಾಗ ಕೇಳಿದವರಿಗೆ ನೋಟಿಗೆ ಬದಲು ನಾಣ್ಯವನ್ನು ಕೊಡುವ ಹೊಣೆಯನ್ನು ಹಣಪ್ರಚಾರಕರು ಹೊತ್ತಿರುತ್ತಾರೆ. ಚಿನ್ನದ ನಾಣ್ಯದ ಸಂಚಾರ ಬಹಳವಾಗಿಲ್ಲದಿದ್ದರೆ ಹೆಚ್ಚು ಚಿನ್ನದ ನಿಧಿ ವ್ಯರ್ಥವಾಗುತ್ತದೆ. ಈ ಪದ್ಧತಿಯಲ್ಲಿ ಎಲ್ಲವೂ ಸುರಕ್ಷಿತ, ನಿಯತ. ಆದರೆ ಸಮಯಾಸಮಯಗಳಲ್ಲಿ ಬ್ಯಾಂಕಿಗೆ ಸ್ವತಂತ್ರವಿರುವುದಿಲ್ಲ. ಪೌಂಡಿಗೆ ಪೌಂಡು ಚಿನ್ನವನ್ನು ಲೋಹ ಕೋಶದಲ್ಲಿಟ್ಟ ಹೊರತು ಒಂದೇ ಒಂದು ಹೊಸ ನೋಟನ್ನು ಕೂಡ

ಸಂಚಾರಕ್ಕೆ ತರುವುದಕ್ಕಿಲ್ಲವಾದ್ದರಿಂದ ಹಣದ ಆಗತ್ಯ ಹೆಚ್ಚಾಗಿ, ಚಿನ್ನವಿಲ್ಲದೆ ಇರುವಾಗ ಸರಕಾರಕ್ಕೆ ಬ್ಯಾಂಕು ಶರಣಾಗಿ ಶಾಸನವನ್ನು ಸ್ವಲ್ಪ ಕಾಲ ರದ್ದುಮಾಡಿರೆಂದು ಬೇಡಬೇಕಾಗುತ್ತದೆ. ಇಂಗ್ಲೆಂಡ್, ನಾರ್ವೆ, ಜಪಾನ್ ಮುಂತಾದ ದೇಶಗಳಲ್ಲಿಯೂ, ಮೊನ್ನೆಮೊನ್ನೆಯವರೆಗೆ ನಮ್ಮ ದೇಶದಲ್ಲಿಯೂ ಈ ಪದ್ಧತಿ ಬಳಕೆಯಲ್ಲಿದ್ದಿತು.

III. **ಶೇಕಡ ನಿಧಿಯ ಪದ್ಧತಿ.**—ಈಗ ಸುಮಾರು ಎಲ್ಲ ಕಡೆಯಲ್ಲಿಯೂ ಬಹಳ ಮೆಚ್ಚಿಕೆಯಾಗಿ ಬಳಕೆಗೆ ಬರುತ್ತಿರುವುದು ಶೇಕಡ ನಿಧಿಯ ಪದ್ಧತಿ; ಎಂದರೆ ದೇಶದಲ್ಲಿ ಒಟ್ಟು ಎಷ್ಟು ನೋಟು ಸಂಚಾರಕ್ಕೆ ಬರುವುದೋ ಅದರ ಮೊತ್ತದ ಶೇಕಡ ಇಷ್ಟಾದರೂ (ಸಾಮಾನ್ಯವಾಗಿ ೩೦–೪೦%) ಲೋಹದ ನಿಧಿ ಇಡಬೇಕೆಂಬ ನಿಯಮ ನಿರ್ಗಡುವುದು. ಹಣದ ಜೊತೆಗೆ ಬ್ಯಾಂಕಿನ ಚಾಲ್ತು ಡಿಪಾಸಿಟ್ಟುಗಳ ಮೊತ್ತವನ್ನೂ ಈ ಸಂಬಂಧದಲ್ಲಿ ಎಣಿಕೆಗೆ ತೆಗೆದುಕೊಂಡು ಈ ಪ್ರಮಾಣವನ್ನು ಗೊತ್ತುಮಾಡುವರು. ಇದರಲ್ಲಿ ಚಿನ್ನ ವ್ಯರ್ಥವಾಗಿ ಬ್ಯಾಂಕುಗಳ ಭಂಡಾರದಲ್ಲಿ ಹೂತುಹೋಗುವ ಪ್ರಮಾಣಕ್ಕೆ ಮಿತಿಯೇ ಇಲ್ಲವೆನ್ನಬಹುದು. ಹೊಸದಾಗಿ ಚಿನ್ನ ಕೈಗೆ ಬಂದರೆ ಅದರ ಬೆಲೆಯ ಮಿತಿಮೀರಿ ಹೊಸ ಹಣವನ್ನು ಸಂಚಾರಕ್ಕೆ ತರಲು ಅನುಕೂಲವುಂಟು. ಯಾವ ಕಾರಣದಿಂದಾಗಲಿ ದೇಶದ ಕೈಬಿಟ್ಟು ಚಿನ್ನ ಹೋಗಬೇಕಾದರೆ ಅದರ ೨½–೩ರಷ್ಟು ಮೊತ್ತದ ಹಣವನ್ನು ಸಂಚಾರದಿಂದ (ಲೇವಾದೇವಿಯಿಂದಲೂ ಕೈಗಾರಿಕೆ ಮತ್ತು ಉದ್ಯೋಗ ಮಂಡಲದಿಂದಲೂ) ಸೆಳೆದು ಕುಗ್ಗಿಸಬೇಕಾಗುವುದು. ಈ ಬಗೆಯಲ್ಲಿ ಕೇಡು ಹೆಚ್ಚು. ಅಲ್ಲದೆ, ಹಣಕ್ಕೆ ಸಂಬಂಧಿಸಿದ ಅವ್ಯವಸ್ಥೆಗಳು ಹೆಚ್ಚಾಗದಂತೆ ತಡೆದಿಡಬೇಕು ಎಂಬ ಉದ್ದೇಶ ಹುಟ್ಟಿ ಗೊತ್ತಾದ ಪ್ರಮಾಣಕ್ಕಿಂತಲೂ ಅತ್ಯಧಿಕವಾದ ಚಿನ್ನವನ್ನು ಸಂಗ್ರಹಿಸಿ ನಿಷ್ಫಲಗೊಳಿಸುವುದೂ ಇಂಥ ದೇಶಗಳಲ್ಲಿ ವಾಡಿಕೆ. ದೊಡ್ಡ ರಾಷ್ಟ್ರಗಳ ರಾಜಕೀಯ ದುರಾಸೆ, ಸ್ವಾರ್ಥಬುದ್ಧಿ, ಅಭಿಮಾನ, ಪ್ರತಿಷ್ಠಾಕಾಂಕ್ಷೆ—ಇವು ಈ ಪದ್ಧತಿಗೆ ಎಲ್ಲೆಲ್ಲಿಯೂ ಗೌರವ ತಂದು ಚಿನ್ನವನ್ನು ಬಾಚಿಡುವ ಪ್ರವೃತ್ತಿಗೆ ತಡೆಯಿಲ್ಲದಂತೆ ಮಾಡಿವೆ.*

* ಇಂಡಿಯಾ ದೇಶದ ಹಣಪದ್ಧತಿಗೂ ೧೯೩೫ರಿಂದ ಈ ಸಂಪ್ರದಾಯ ಇಳಿದು ಬಂದಿದೆ.

IV. **ನಾರುವೆಯ ಪದ್ಧತಿ.**—ಸ್ವರ್ಣ* ನಿಧಿಯ ಪದ್ಧತಿ ಇರುವ ದೇಶಗಳಲ್ಲಿ ಇನ್ನೊಂದು ಬಗೆಯ ನಾಣಿಕೆ ಉಂಟು : ಒಳದೇಶದಲ್ಲಿ ಚಲಿಸುವ ಹಣವೊಂದು ; ಹೊರಗಿನ ವ್ಯಾಪಾರ ಸಾಲಗಳನ್ನು ಹರಿಸಲು ಉಪಯೋಗವಾಗುವುದು ಬೇರೊಂದು ;—ಚಿನ್ನ, ಬೆಳ್ಳಿ ಅಥವಾ ಇನ್ನೊಂದು ದೇಶದ ಹಣ. ಭಾರತಕ್ಕೂ ಒಂದು ಪ್ರಮಾಣವನ್ನು ಗೊತ್ತುಮಾಡಿರುತ್ತಾರಲ್ಲವೆ? ಅದರ ಹಿಂದೆ ಸರಕಾರ ಹೊರಡಿಸುವ ನಿಧಿಯ ಪ್ರಮಾಣ ಸ್ವಲ್ಪ ಭಾಗ ಅಥವಾ ಪೂರ್ತಿ ಭಾಗ ಚಿನ್ನದಲ್ಲಿಯೋ, ಹುಂಡಿ ಹಣಪತ್ರಗಳ ರೂಪದಲ್ಲಿಯೋ, ಅಥವಾ ಬೇರೊಂದು ಸ್ವರ್ಣ ಪ್ರಮಿತಿಯ ದೇಶದ ಬ್ಯಾಂಕಿನಲ್ಲಿಟ್ಟಿರುವ ನಗದು ರೂಪದಲ್ಲಿಯೋ, ಇರುವ ಏರ್ಪಾಟಿರುತ್ತದೆ. ಜನಾಂಗಗಳ ಸಂಘದ (The League of Nations) ಸಲಹೆಯಲ್ಲಿ ಸ್ವರ್ಣ ಪ್ರಮಿತಿಯನ್ನು ಸ್ಥಾಪಿಸಿಕೊಂಡ ಸುಮಾರು ಎಲ್ಲ ದೇಶಗಳಲ್ಲಿಯೂ ಈ ನಾಣಿಕೆ ಇದೆ. ಚಿನ್ನವನ್ನು ಅಲ್ಲಿ ವ್ಯರ್ಥವಾಗದೆ ಇರಲು ಬೇಕಾದಷ್ಟು ಅವಕಾಶವಿದೆ. ಆದರೆ ಇತರ ಅಂಶಗಳಲ್ಲಿ ಹಿಂದಿನ ಶೀರ್ಷಿಕದ ಪದ್ಧತಿಯ ದೋಷಗಳಿಗೆಲ್ಲ ಇದೂ ಈಡಾಗುವುದು. ಅಲ್ಲದೆ, ನಿಯಮದ ಪ್ರಕಾರ ಮೇಲೆ ಕಾಣಿಸಿದ ಮೂರು ಬಗೆಗಳಲ್ಲಿ ಯಾವುದರಲ್ಲಾಗಲಿ ನಿಧಿಯನ್ನು ಇಡಲು ಅವಕಾಶವಿದ್ದರೂ, ಒಂದು ಗೌರವ ಅಥವಾ ಒಂದು ರಾಷ್ಟ್ರೀಯ ಪ್ರತಿಷ್ಠೆಯಿಂದ ಎಲ್ಲವನ್ನೂ ಚಿನ್ನದ ರೂಪದಲ್ಲಿಯೇ ಇಟ್ಟುಕೊಳ್ಳಬೇಕೆಂಬ ಬುದ್ಧಿ ಪ್ರಬಲವಾಗುವುದೇ ಹೆಚ್ಚು.

**ನಿಧಿಯ ಚಿನ್ನದ ಪ್ರಮಾಣ.**—ಲೋಹ ಪ್ರಮಿತಿಯಿರುವ ಕಡೆ ಚಿನ್ನ ಬೆಳ್ಳಿಗಳೆರಡೂ ನಿಧಿಯಲ್ಲಿ ಒಂದು ಗೊತ್ತಾದ ಪ್ರಮಾಣದಲ್ಲಿರುತ್ತವೆ. ಬ್ಯಾಂಕಿನ ಕೈಯಲ್ಲಿರುವ ಚಿನ್ನ ಎರಡು ಬಗೆಯದು :

(೧) ಶಾಸನ ನಿರ್ಧರಿಸುವ ಒಂದು ಮಿತಿಗೆ ಕಡಮೆಯಾಗದಂತೆ ಬ್ಯಾಂಕು ನೋಟಿನ ಬೆಂಗಾವಲಿಗಾಗಿ ಇಡುವ ಚಿನ್ನ ; (೨) ಬೇರೆ

* ಆದರೆ ಪೌಂಡು ನಿಧಿಯ ಪದ್ಧತಿಯನ್ನು ಅನುಸರಿಸುವ ನಮ್ಮ ದೇಶದಲ್ಲಿ ಸ್ವರ್ಣ ಸಂಗ್ರಹಣೆಯ ಮಟ್ಟಿಗೆ ಆಗುವುದೋ ತಿಳಿಯದು. ನಿಯಮದ ಪ್ರಕಾರ ೪೦ ಕೋಟಿ ರೂಪಾಯನ್ನು ಚಿನ್ನದಲ್ಲಿಡಬೇಕೆಂಬುದಿಲ್ಲದಿದ್ದರೆ ಒಂದೇ ಒಂದು ನಾಣ್ಯವನ್ನು ಚಿನ್ನವನ್ನು ಕೂಡ ನಿಧಿಯಲ್ಲಿ ಇಡದಿದ್ದರೂ ಈ ನಾರುವೆಯ ಯಂತ್ರ ಕೆಲಸ ಮಾಡಬಲ್ಲದು. ಏಕೆಂದರೆ, ನಮ್ಮ ಪ್ರಮಿತಿ ಪೌಂಡು, ಚಿನ್ನವಲ್ಲ.

ಉದ್ದೇಶಗಳಿಗೆ ವಿನಾಸಲಾಗಿ ತನ್ನಲ್ಲಿರುವ ಚಿನ್ನ. ಮೊದಲನೆಯ ಬಗೆಯಲ್ಲಿ ಸಂಗ್ರಹಿಸಿಡುವ ಚಿನ್ನವನ್ನು ಬೇರೆ ಏತಕ್ಕೂ ಉಪಯೋಗಿಸುವ ಹಾಗಿಲ್ಲ. ಗಣಿಗಳಿಂದ ಮೇಲೆತ್ತಿ ತಂದದ್ದನ್ನು ಪುನಃ ಬ್ಯಾಂಕಿನ ಭಂಡಾರದಲ್ಲಿ ಹೂತಿಡುವ ಚಿನ್ನ ಅದು. ಆ ಪಟ್ಟಿಗೆ ಅದು ವ್ಯರ್ಥ. ಯಾವುದೇ ಕಾರಣ ದಿಂದಲಾಗಲಿ ಶಾಸನ ವ್ಯತ್ಯಾಸವಾದರೆ, ಅಥವಾ ಶಾಸನ ಅವಕಾಶ ಕಲ್ಪಿಸಿ ಕೊಟ್ಟರೆ ಮಾತ್ರ ಈ ಚಿನ್ನದ ಪ್ರಮಾಣ ಹೆಚ್ಚು ಕಡಿಮೆಯಾಗಬಲ್ಲದು. ಎರಡನೆಯ ಬಗೆಯಲ್ಲಿ ಸಂಗ್ರಹವಾದ ಚಿನ್ನ ಸೆಂಟ್ರಲ್ ಬ್ಯಾಂಕು ಸ್ವತಃ ತನಗಾಗಿಯೊ, ಸರಕಾರಕ್ಕಾಗಿಯೊ, ತನ್ನ ಕುಳಗಳಿಗಾಗಿಯೊ ಕೊಂಡಿಟ್ಟಿರು ವಂಥದು; ಅಥವಾ, ಬ್ಯಾಂಕುಗಳೂ ಇತರ ಖಾಸಗೀಯವರೂ ತನ್ನಲ್ಲಿ ತಂದಿಟ್ಟಿರುವಂಥದು. ಈಗಿನ ಸೆಂಟ್ರಲ್ ಬ್ಯಾಂಕಿನ ಲೆಕ್ಕಗಳನ್ನು ಪರಿಶೀಲಿಸಿ ದರೆ ಮೊದಲನೆಯ ಬಗೆಯದೇ ಬಹಳ. ಅನೇಕವೇಳೆ ಶಾಸನಗಳು ವಿಧಿಸುವ ಪ್ರಮಾಣಕ್ಕಿಂತ ಬಹು ಹೆಚ್ಚಿನ ಪರಿಮಾಣದ ಚಿನ್ನವನ್ನು ತಮ್ಮ ಕಾವಲುಸ್ಥಿಯಾಗಿ ಮಾಡಿ ವ್ಯರ್ಥಮಾಡುತ್ತಿರುವುದೇ ರೂಢಿ. ಪೇಟೆಯ ವ್ಯಾಪಾರಕ್ಕೆ ಅದು ಒದಗದು. ಪ್ರಪಂಚದ ಹಣಕಾರ್ಯಕ್ಕೆ ನೆರವಾಗುವ ಚಿನ್ನದಲ್ಲಿನ ¾ ಭಾಗದ ಚಿನ್ನ ಸುಮಾರು ೭ ದೇಶಗಳ ಸೆಂಟ್ರಲ್ ಬ್ಯಾಂಕುಗಳ ಕೈಯಲ್ಲಿದೆ. ಪ್ರಪಂಚದ ಚಿನ್ನದಲ್ಲಿ ⅔ ಭಾಗದಷ್ಟು ಇವರ ಪೆಟ್ಟಿಗೆಗಳಲ್ಲಿ ಅಡಗಿ ವ್ಯಾಪಾರ ಪ್ರಪಂಚಕ್ಕೂ ಧನಮಂಡಲಕ್ಕೂ ಒದಗಲು ಅಶಕ್ತವಾಗಿ ನಿಷ್ಪ್ರಯೋಜಕವಾಗಿದೆ ಎಂದೂ ಈ ಸ್ಥಿತಿಯನ್ನು ವರ್ಣಿಸಬಹುದು.

ಹೆಚ್ಚು ರಿಸರ್ವ್ (ಆಪದ್ಧನ) ಇಟ್ಟ ಸೆಂಟ್ರಲ್ ಬ್ಯಾಂಕಿಗೆ ಹೆಚ್ಚು ಶಕ್ತಿ ಇರುವುದು ಎನ್ನಲಾಗದು. ಸರಕಾರ ವಿಧಿಸುವ ಪ್ರಮಾಣಕ್ಕಿಂತ ಹೆಚ್ಚಾಗಿರುವ ಚಿನ್ನದಿಂದ ಮಾತ್ರವೇ ಪೇಟೆಗೆ ಪ್ರಯೋಜನ. ಮೆಂಬರು ಬ್ಯಾಂಕುಗಳಿಗೆ ನಗದು ಸಾಲವನ್ನು ಕೊಡಬೇಕಾದರೆ ತನ್ನ ಕೈಯಲ್ಲಿರುವ ಈ ಹೆಚ್ಚು ಮೊತ್ತದಷ್ಟಕ್ಕೆ ತಾನೇ ಬ್ಯಾಂಕು ಕೊಟ್ಟೀತು? ಬೇರೆ ಚಿನ್ನ ಎಷ್ಟಿದ್ದರೂ ಇಲ್ಲದ ಹಾಗೆಯೇ—ಸಮುದ್ರದ ನೀರು ಎಷ್ಟಿದ್ದರೇನು? ಕುಡಿಯಲು ಬಾರದು. ಆದ್ದರಿಂದ ಮೆಂಬರ್ ಬ್ಯಾಂಕುಗಳೆಲ್ಲ ಸೆಂಟ್ರಲ್ ಬ್ಯಾಂಕಿನಲ್ಲಿ ಇಷ್ಟರಂತೆ ಎಂದು ಗೊತ್ತಾದ ಪ್ರಮಾಣಕ್ಕೆ ನಗದು ರಿಸರ್ವ್ ಇಡಬೇಕೆಂದು ವಿಧಿಸಿ—ಸೆಂಟ್ರಲ್ ಬ್ಯಾಂಕು ತನಗೆ ಸೂಕ್ತ ತೋರಿದಷ್ಟು

ಮಾತ್ರ, ಸಮಯಕ್ಕೆ ತಕ್ಕಂತೆ, ರಿಸರ್ವನ್ನು ಇಟ್ಟುಕೊಂಡು ಅದರ ಪ್ರಮಾಣವನ್ನು ಹೆಚ್ಚು ಕಡಮೆ ಮಾಡಿಕೊಳ್ಳುತ್ತ ಪೇಟೆಗೆ ನೆರವನ್ನು ಕೊಡುವ ಸ್ವತಂತ್ರವನ್ನು ಪಡೆದುಕೊಂಡರೆ ಕ್ಷೇಮ ಲಾಭಗಳುಂಟು. ರಿಸರ್ವ್ ಪ್ರಮಾಣದ ವಜ್ರಮುಷ್ಟಿ ಸಡಿಲವಾಗಿ ಸೆಂಟ್ರಲ್ ಬ್ಯಾಂಕು ಆಯಾ ಸನ್ನಿವೇಶಕ್ಕೆ ತಕ್ಕಂತೆ ಧನವ್ಯವಸ್ಥೆ ಮಾಡಲು ಸುಲಭವಾಗುವುದು. ಆದರೆ ಈ ಬಗೆಯ ಸ್ವತಂತ್ರ ಸದ್ಯಕ್ಕೆ ಬ್ಯಾಂಕುಗಳಿಗೆ ದೊರೆಯುವ ಸಂಭವವಿಲ್ಲ.

**— ಎಷ್ಟಿರಬೇಕು? —** ಚಿನ್ನದ ರಿಸರ್ವಿನ ಪ್ರಮಾಣ ಎಷ್ಟಿರಬೇಕು? ಅದರ ಉದ್ದೇಶವೇನು? (i) ಯುದ್ಧ ಸಮಯಗಳಲ್ಲಿ ಚಿನ್ನವನ್ನು ಕೊಟ್ಟು ತಮಗೆ ಬೇಕಾದ ಪದಾರ್ಥಗಳನ್ನು ಕೊಳ್ಳುವ ಅನುಕೂಲವಿರಬೇಕೆಂದು; (ii) ಕ್ರಾಂತಿಯ ಭಯವಿರುವಾಗಲೋ ಅಥವಾ ಇನ್ನಾವ ಕಾರಣದಿಂದ ಆಗಲಿ ಜನರಿಗೆ ತಮ್ಮ ಹಣಪದ್ಧತಿಯಲ್ಲಿ ಅಪನಂಬಿಕೆ ಬಂದಾಗಲೋ ಅವರು ತಮ್ಮ ನೋಟುಗಳಿಗೆ ಬದಲಾಗಿ ನಾಣ್ಯವನ್ನು ಕೊಡಿ ಎಂದು ಕೇಳಲು ಬಂದಾಗ ಅವರಿಗೆ ನಾಣ್ಯವನ್ನು ಕೊಡಲು ಸೆಂಟ್ರಲ್ ಬ್ಯಾಂಕು ಸಿದ್ಧತೆ ವಹಿಸಿರಬೇಕೆಂದು*; (iii) ಎಲ್ಲಕ್ಕಿಂತಲೂ ಹೆಚ್ಚಾಗಿ, ಮುಖ್ಯ, ಹೊರದೇಶಗಳವರಿಗೆ ತೆರಬೇಕಾಗಿ ಬರುವ ನಿವ್ವಳ ವ್ಯಾಪಾರ ಸಾಲಗಳನ್ನು ಹರಿಸಲು ಬೇಕು ಎಂದು. ಅಲ್ಪಕಾಲಗಳವರೆಗೆ ಬೇಕಾಗುವಷ್ಟು ಚಿನ್ನವನ್ನು ಸೆಂಟ್ರಲ್ ಬ್ಯಾಂಕುಗಳವರು ಇಟ್ಟಿರಬೇಕಾದದ್ದು ಸರಿಯೇ. ಸಂತತವಾಗಿ ಯಾರೂ ಹಾಗೆ ಮಾಡಬೇಕಾಗುವುದಿಲ್ಲ; ಹಾಗೆ ಮಾಡಿದ ಹೊರತು ವಿದೇಶಿ ವ್ಯಾಪಾರ ಸಾಲಗಳು ಯಾವಾಗಲೂ ತೀರವಾದರೆ ದೇಶದ ವ್ಯಾಪಾರದ ಸ್ವರೂಪದಲ್ಲಿಯೇ ಏನೋ ಹುಳುಕಿದೆಯೆಂದು ಅರ್ಥವಾಗುವುದು. ಆಗ ವ್ಯಾಪಾರ ನೀತಿಯನ್ನೂ ಪ್ರಮಾಣಗಳನ್ನೂ ವ್ಯತ್ಯಾಸ ಮಾಡಿಕೊಂಡು ಆ ದುಃಸ್ಥಿತಿಯಿಂದ ಪಾರಾಗಬೇಕಾದೀತು. ಯುದ್ಧಕಾಲಗಳಿಗೆಲ್ಲ ನೆರವಾಗುವಷ್ಟು ಚಿನ್ನವನ್ನು ಶಾಂತಿ ಕಾಲದಲ್ಲಿ ಯಾರು ಶೇಖರಿಸಿಡಬಲ್ಲರು? ಹೇಗೇ ಆಗಲಿ, ವಿಶೇಷ ಸಮಯಗಳಿಗೆ ಬೇಕಾಗ

* ಕೊಡುವ ಸಿದ್ಧತೆ ತೋರಿಸಿದರೆ ಸಾಕು: ಯಾರೂ ಹಣವನ್ನು ಕೇಳುವುದಿಲ್ಲ. ದೇಶದ ಜನರಿಗೆ ತಮ್ಮ ಹಣದಲ್ಲಿ ವಿಶ್ವಾಸ ಕೆಡದಿರುವಂತೆ ಮಾತ್ರ ನೋಡಿಕೊಳ್ಳಬೇಕು. ಜನರಿಗೆ ಹಣದ ಸ್ವರೂಪ ಜ್ಞಾನ ಹೆಚ್ಚಾದಂತೆಲ್ಲ ಈ ಬಾಬಿಗಾಗಿ ಇಟ್ಟುಕೊಳ್ಳಬೇಕಾದ ಚಿನ್ನ ಕಡಮೆಯಾಗುತ್ತ ಬರುವುದು.

ಬಹುದಾದ ಮೊತ್ತವೂ ಕಿರುಗಾಲದ ವಿದೇಶಿ ದೇಣಿಗೆಗಳಿಗೆ ಬೇಕಾಗುವ ಮೊತ್ತವೂ ಸೇರಿ ಚಿನ್ನದ ರಿಸರ್ವ್ ಒಟ್ಟು ಎಷ್ಟಿರಬೇಕೆಂಬುದನ್ನು ನಿರ್ಧರಿಸುವುವು. ಈ ವ್ಯತ್ಯಾಸಗಳಿಗೂ ದೇಶದಲ್ಲಿ ಸಂಚಾರಮಾಡುವ ಹಣದ ಮೊತ್ತಕ್ಕೂ ಸಂಬಂಧವಿಲ್ಲ. ದೇಶದ ವರಮಾನವೇನು? ದಿನಚರಿಯ ವ್ಯಾಪಾರ ವ್ಯವಹಾರಗಳಲ್ಲಿ ಜನರ ಆರ್ಥಿಕ ಅಭ್ಯಾಸಗಳಾವುವು? ಎಂಬ ಸಂಗತಿಗಳಿಂದ ಹಣದ ಮೊತ್ತ ನಿರ್ಧರವಾಗುವುದು. ವಿದೇಶಿ ವ್ಯಾಪಾರ, ಬಂಡವಾಳದ ಓಡಾಟ, ಲೇವಾದೇವಿ ಕಾರ್ಯ ಎಷ್ಟು ಹೆಚ್ಚಾಗಿವೆ? ಅವುಗಳಲ್ಲಿ ಯಾವ ವ್ಯತ್ಯಾಸವಿದೆ ಎಂಬ ಸಂಗತಿಗಳು ಚಿನ್ನದ ಪ್ರಮಾಣವನ್ನು ಗೊತ್ತುಮಾಡುವುದರಲ್ಲಿ ಮುಖ್ಯ.

**ಸ್ವರ್ಣ ನಿಧಿಗೆ ಕೇಂದ್ರ ಸ್ಥಾನ.**— ರಫ್ತು ಕಡಮೆಯಾಗುವುದು; ತಯಾರಾದ ಪದಾರ್ಥಗಳ ಬೆಲೆ ಬಹಳವಾಗಿ ಇಳಿಯುವುದು; ದುರ್ಭಿಕ್ಷದಿಂದಲೊ ಇತರ ಕಾರಣಗಳಿಂದಲೊ ಉತ್ಪತ್ತಿ ಕುಗ್ಗುವುದು; ಇತರರು ಈ ಕಾರ್ಯಗಳಲ್ಲಿ ಹೂಡಿರುವ ತಮ್ಮ ಹಣವನ್ನು ಹಿಂದಕ್ಕೆ ತೆಗೆದುಕೊಳ್ಳುವುದು; ಒಳ, ಹೊರ ಕಾರಣಗಳಿಂದ ಕೈಯಲ್ಲಿದ್ದ ಪೇಟೆ ತೊರೆಯುವುದು — ಮುಂತಾದ ಕಾರಣಗಳಿಂದ ವಿದೇಶಿ ತೆರಾಣೆ ಬರುವುದು. ಯಾವ ದೇಶದ ವಿದೇಶಿ ವ್ಯಾಪಾರದಲ್ಲಿ ಒಂದೆರಡೇ ವಿಶೇಷ ಪದಾರ್ಥಗಳಿಗೆ ಪ್ರಾಧಾನ್ಯವಿದೆಯೋ, ಆ ಪದಾರ್ಥಗಳ ಬೆಲೆಯಲ್ಲಿ ಬಹಳ ವ್ಯತ್ಯಾಸವಾಗುವ ಸಂಭವವಿದೆಯೋ, (ಉದಾ: ಇಂಡಿಯಾದ ಸಣಬು, ಗೋಧಿ, ಹತ್ತಿ) ಅಂತಹ ದೇಶಕ್ಕೆ ಹೆಚ್ಚು ಮೊತ್ತದ ನಿಧಿ ಆವಶ್ಯಕ. ಎಲ್ಲಿಂದ ಅನೇಕ ಬಗೆಯ ಪದಾರ್ಥಗಳು ಸಾಗುವವೊ, ಉತ್ಪತ್ತಿಯೂ ಆ ಪದಾರ್ಥದ ಬೆಲೆಗಳೂ ಸುಮಾರು ಸ್ಥಿರವಾಗಿರಬಹುದೊ ಅಲ್ಲಿ ಆ ಅಗತ್ಯ ಕಡಮೆ. ಪುಷ್ಕಲ ವಿದೇಶಿ ವ್ಯಾಪಾರವುಳ್ಳ ದೇಶಕ್ಕೆ ಇರುವ ಚಿನ್ನದ ಅಗತ್ಯ ಅಂತಹ ವ್ಯಾಪಾರವಿಲ್ಲದ ದೇಶಕ್ಕೆ ಇರಲಾರದು. ಯುದ್ಧಕಾಲಗಳ ಅಗತ್ಯ ಕಂಡ ಹಾಗೆಯೇ ಇದೆ. ಆದರೆ ಒಂದು ಸಂಗತಿ ಮಾತ್ರ ನಿಶ್ಚಯ: ದೇಶದ ಸ್ವರ್ಣನಿಧಿಯೆಲ್ಲ, ಯಾವ ಸಮಯಕ್ಕೆಂದರೆ ಅದಕ್ಕೆ ಒದಗುವಂತೆ ಒಂದು ಕೇಂದ್ರದಲ್ಲಿ ಇರತಕ್ಕದ್ದು ಅತ್ಯಾವಶ್ಯಕ. ಆಯಾ ದೇಶದ ಸೆಂಟ್ರಲ್ ಬ್ಯಾಂಕೇ ಈಗ ಅಂತಹ ಕೇಂದ್ರಸ್ಥಾನ.

**ಸೆಂಟ್ರಲ್ ಬ್ಯಾಂಕಿಗೂ ಮೆಂಬರು ಬ್ಯಾಂಕುಗಳಿಗೂ ಸಂಬಂಧ.—** ಸೆಂಟ್ರಲ್ ಬ್ಯಾಂಕುಗಳು ವ್ಯಾಪಾರದ ಬ್ಯಾಂಕುಗಳನ್ನೂ ಹಣದ ಪೇಟೆಯನ್ನೂ ಹೇಗೆ ತಮ್ಮ ಅಧಿಕಾರದಲ್ಲಿ ಇಟ್ಟುಕೊಂಡು ಧನಮಂಡಲವನ್ನು ಆಳುವುವು? ಎಂಬುದು ಮುಂದಿನ ವಿಚಾರ. ವ್ಯಾಪಾರ ಪ್ರಪಂಚದಲ್ಲಿ ಸೆಂಟ್ರಲ್ ಬ್ಯಾಂಕಿನ ಲೇವಾದೇವಿ ವ್ಯವಹಾರವೆಲ್ಲ ಸಾಮಾನ್ಯವಾಗಿ ಕಿರುಗಾಲದ ಮಾಯಿದೆಯ ಪೇಟೆಗೆ ಸೇರವಾಗುವ ಕೆಲಸ. ಕಿರುಮಾಯಿದೆ ಸಾಲದ ಪೇಟೆಯೆಂದರೆ ಒಳ ಹೊರ ವ್ಯಾಪಾರ ಸಾಲವನ್ನು ಕೊಡುವ ಬ್ಯಾಂಕುಗಳ ಕೆಲಸಕ್ಕೂ, ಹುಂಡಿ ಒಪ್ಪಿಕೆ, ಅಥವಾ ಹುಂಡಿ ದಲ್ಲಾಳರ (ಪಟ್ಟದ ಪೇಟೆ) ಪ್ರಪಂಚಕ್ಕೂ, ಖಜಾನೆ ಹುಂಡಿಗಳಂತಹ ಸರಕಾರದ ಕಿರುಮಾಯಿದೆ ಸಾಲಕ್ಕೂ ಸಂಬಂಧಪಟ್ಟದು. ಆದುದರಿಂದ ವ್ಯಾಪಾರದ ಬ್ಯಾಂಕುಗಳಿಗೂ ಸೆಂಟ್ರಲ್ ಬ್ಯಾಂಕಿಗೂ ಯಾವ ಸಂಬಂಧಗಳು ನಡೆಯುವುವು? ಹುಂಡಿ ದಲ್ಲಾಳರಿಗೂ ಸೆಂಟ್ರಲ್ ಬ್ಯಾಂಕಿಗೂ ಹೇಗೆ ಸಂಬಂಧ ಏರ್ಪಡುವುದು? ಸರಕಾರದ ಕಿರುಮಾಯಿದೆ ಸಾಲಕ್ಕೂ, ಪೇಟೆಗೂ, ಇವೆರಡಕ್ಕೂ ಸೆಂಟ್ರಲ್ ಬ್ಯಾಂಕಿಗೂ ಯಾವ ಸಂಬಂಧಗಳಿವೆ? ಇವುಗಳನ್ನು ಹೊಂದಿಸಿಕೊಂಡು ತನ್ನ ಅಧಿಕಾರವನ್ನೂ ಪ್ರಭಾವವನ್ನೂ ಸೆಂಟ್ರಲ್ ಬ್ಯಾಂಕು ಹೇಗೆ ಹೂಡುತ್ತದೆ ಎಂದು ಕೇಳಿದ ಹಾಗಾಯಿತು.

ಹಣದ ಪೇಟೆಯಲ್ಲಿರುವ ಸಕಲ ವ್ಯಾಪಾರದ ಬ್ಯಾಂಕುಗಳೂ ಸಾಧಾರಣವಾಗಿ ಕಡ್ಡಾಯವಾಗಿಯೋ, ಸ್ವಪ್ರಯೋಜನವನ್ನು ಸಾಧಿಸಲೋ, ರೂಢಿ ಆ ರೀತಿ ನಡೆದುಬಂದಿರುವುದರಿಂದಲೋ, ಸೆಂಟ್ರಲ್ ಬ್ಯಾಂಕಿನ ಕುಳಗಳಾಗಿರುವುವು. ಅಲ್ಲದೆ ತಮ್ಮ ಕೈನಗದಿನಲ್ಲಿ ಒಂದು ಗೊತ್ತಾದ ಪ್ರಮಾಣದಷ್ಟನ್ನು ಸೆಂಟ್ರಲ್ ಬ್ಯಾಂಕಿನಲ್ಲಿ ಡಿಪಾಸಿಟ್ ಇಟ್ಟಿರುವುವು. ಈ ಪ್ರಮಾಣವನ್ನು ಹೆಚ್ಚಿಸಿಕೊಂಡಷ್ಟೂ ತಾವು ತಮ್ಮ ಕುಳಗಳಿಗೆ ಡಿಪಾಸಿಟು ಸಾಲವನ್ನು ಕೊಡಬಹುದು. ಆದರೆ ಆ ಪ್ರಮಾಣ ಹೆಚ್ಚುವುದು ಹೇಗೆ? ತಾವೇ ಹೆಚ್ಚು ನಗದನ್ನು ಅಲ್ಲಿ ಇಡಬೇಕು; ಇತರರಿಂದ ತಮಗೆ ಹಣ ಬರಬೇಕಾಗಿರಬೇಕು; ಇಲ್ಲವಾದರೆ ಸೆಂಟ್ರಲ್ ಬ್ಯಾಂಕಿಂದ ಸಾಲ ತೆಗೆದುಕೊಳ್ಳಬೇಕು. ಯಾವುದಾದರೂ ಕಾರಣದಿಂದ ಬ್ಯಾಂಕುಗಳು ತಮ್ಮ

ಕುಳಗಳಿಗೆ ಎಂದರೆ ವ್ಯಾಪಾರಗಾರರಿಗೆ ಹೆಚ್ಚು ಸಾಲದ ಹಣವೊದಗಿಸ ಬೇಕೆಂದಾಗ ನೇರವಾಗಿಯೊ ಪರೋಕ್ಷವಾಗಿಯೊ ಸೆಂಟ್ರಲ್ ಬ್ಯಾಂಕಿನ ಸಹಾಯವನ್ನು ಪಡೆಯಬೇಕಾಗುತ್ತದೆ. ಕೆಲವು ದೇಶಗಳಲ್ಲಿ ಬ್ಯಾಂಕುಗಳೇ ನೇರವಾಗಿ ಸೆಂಟ್ರಲ್ ಬ್ಯಾಂಕಿನಿಂದ ನೆರವನ್ನು ಪಡೆಯುವುವು; ಕೆಲವು ಕಡೆ ಪರೋಕ್ಷವಾಗಿಯೇ ಅದನ್ನು ದೊರಕಿಸಿಕೊಳ್ಳಬೇಕಾಗುವುದು. ಸೆಂಟ್ರಲ್ ಬ್ಯಾಂಕು ಪೇಟೆಯ ಹದವನ್ನೂ ಕಾರ್ಯಗತಿಗಳನ್ನೂ ನೋಡು ತ್ತಿದ್ದು ಈ ನೆರವನ್ನು ಕೊಡುವುದೆ? ಬೇಡವೆ? ಎಷ್ಟು ಕೊಡುವುದು? ಎಷ್ಟು ಬಿಡುವುದು? ಅಥವಾ ಕೆಲವು ಕಾಲ ತಟಸ್ಥವಾಗಿ ಸುಮ್ಮನಿರುವುದೆ ಎಂದು ಗೊತ್ತುಮಾಡಿಕೊಳ್ಳುತ್ತದೆ. ಯಾವ ಸಾಧನಗಳನ್ನು ಪ್ರಯೋಗಿಸಿ ನೆರವು ಕೊಡಬೇಕು, ಬಿಡಬೇಕು ಎಂಬುದನ್ನೂ ಬ್ಯಾಂಕೇ ನಿರ್ಧರಿಸುತ್ತದೆ. ಬ್ಯಾಂಕಿನ ಮೇಲಧಿಕಾರಕ್ಕೆ ಒಳಪಟ್ಟಲ್ಲದೆ ಪೇಟೆಗೆ ಅನೇಕವೇಳೆ ಕೆಲಸ ನಡೆಸುದಾಗುವುದು. ಕೆಲವು ದೇಶಗಳಲ್ಲಿ ಹಣದ ಪೇಟೆ ಪೂರ್ತ ಸುವ್ಯಸ್ಥ ವಾಗಿರುವುದು. ಅಲ್ಲಿ ಸೆಂಟ್ರಲ್ ಬ್ಯಾಂಕಿನ ಅಧಿಕಾರ ಚೆನ್ನಾಗಿ ನಡೆಯು ವುದು; ಇನ್ನು ಕೆಲವು ಕಡೆ ಅದರ ಬಿಗುವು ಅಷ್ಟಾಗಿ ಇಲ್ಲದಿರುವುದು. ಆ ವಿವರಗಳನ್ನು ತಿಳಿಯುವುದು ಅಗತ್ಯ.

**ಬ್ರಿಟಿಷ್ ಪದ್ಧತಿ.**—(೧) ವ್ಯಾಪಾರದ ಬ್ಯಾಂಕುಗಳು ತಾವು ವಟ್ಟಕ್ಕೆ ಕೊಂಡಿರುವ ಹುಂಡಿಗಳನ್ನು ಬ್ಯಾಂಕ್ ಅಫ್ ಇಂಗ್ಲಂಡಿಗೆ ನೇರವಾಗಿ ಮಾರುವುದಿಲ್ಲ. ಇದೊಂದು ಬಗೆಯ ಸಂಪ್ರದಾಯವಾಗಿ ನಡೆದುಬಂದಿರು ತ್ತದೆ. (೨) ವ್ಯಾಪಾರದ ಬ್ಯಾಂಕುಗಳು ಹುಂಡಿ ವರ್ತಕರಿಂದ ಕೇಳುವ ವಟ್ಟದ ದರಕ್ಕಿಂತ ಬ್ಯಾಂಕ್ ಅಫ್ ಇಂಗ್ಲಂಡಿನ ಬ್ಯಾಂಕ್-ರೇಟು (ಬ್ಯಾಂಕಿನ ಎರಡನೆಯ ವಟ್ಟದ ದರ) ಹೆಚ್ಚು. ವರ್ತಕರೆಲ್ಲರಿಗೂ ಈ ಸಂಗತಿ ಗೊತ್ತು. ಆದ್ದರಿಂದ ಹುಂಡಿಗಳನ್ನು ಬ್ಯಾಂಕ್ ಅಫ್ ಇಂಗ್ಲಂಡಿಗೆ ವಟ್ಟಕ್ಕೆ ಕೊಂಡು ಹೋದರೆ ಬೇಕಾದಷ್ಟು ಹಣ ಹುಟ್ಟುವುದಾದರೂ ಅದರ ಪ್ರಯೋಜನ ಕಡಮೆ; ನಷ್ಟ ಹೆಚ್ಚು. ಕೈಮೀರಿ ಬಂದ ಹೊರತು ಹುಂಡಿವರ್ತಕರು ಆ ಬ್ಯಾಂಕಿನಲ್ಲಿ ಸಾಲವನ್ನು ಕೇಳುವುದಿಲ್ಲ.

ವ್ಯಾಪಾರದ ಬ್ಯಾಂಕುಗಳಿಗೆ ತಮ್ಮ ಕೈನಗದು ಹಣವನ್ನು ಹೆಚ್ಚಿಸಿ ಕೊಳ್ಳಲು ಸಾಧಾರಣವಾಗಿ ಮೂರು ದಾರಿಗಳುಂಟು:

(i) ತಮ್ಮಲ್ಲಿರುವ ಆಸ್ತಿಪತ್ರ ಬಡ್ತಿಪತ್ರಗಳನ್ನು (Investments) ಇತರ ಬ್ಯಾಂಕುಗಳ ಗಿರಾಕಿಗಳಿಗೆ ಮಾರಿ ಆ ಬ್ಯಾಂಕುಗಳ ಕೈಯಲ್ಲಿರುವ ನಗದನ್ನು ಸಂಗ್ರಹಿಸಬಹುದು. ಆದರೆ ಇದರಿಂದ ಒಬ್ಬರ ಕೈಯಲ್ಲಿದ್ದದ್ದು ಇನ್ನೊಬ್ಬರಿಗೆ ಹೋಗುವುದೇ ಹೊರತು ಒಟ್ಟು ಬ್ಯಾಂಕು ಮಂಡಲದಲ್ಲಿರುವ ನಗದಿನ ಮೊತ್ತ ಹೆಚ್ಚುವುದಿಲ್ಲ.

(ii) ತಾವು ಕೊಂಡಿಟ್ಟಿರುವ ಖಜಾನೆ ಹುಂಡಿಯನ್ನು (ಸರಕಾರದವರು ಎತ್ತಿದ ಕೈಸಾಲದ ಪತ್ರ) ಪೇಟೆಯಲ್ಲಿ ಮಾರಿ ನಗದು ಮಾಡಿಕೊಳ್ಳಬಹುದು. ಆಗ ಸರಕಾರದ ಲೆಕ್ಕದಲ್ಲಿ ಹೆಚ್ಚು ಹಣವಿದ್ದರೆ ಆ ಹಣ ಬ್ಯಾಂಕುಗಳ ಲೆಕ್ಕಕ್ಕೆ ಇಳಿಯುವುದು. ಅವರ ಲೆಕ್ಕದಲ್ಲಿ ಹಣವಿಲ್ಲದಿದ್ದರೆ ಅವರು ಬ್ಯಾಂಕ್ ಆಫ್ ಇಂಗ್ಲೆಂಡಿನ ಮರೆಹೊಕ್ಕು ಅದರಿಂದ (Ways and Means Advances) ಎಂಬ ಮುಂಗಡದ ಸಾಲವನ್ನು (ಇದನ್ನು ಸರಕಾರದವರು ಬ್ಯಾಂಕಿನಿಂದ ತೆಗೆದುಕೊಂಡ ಓವರ್‌ಡ್ರಾಫ್ಟ್ ಎಂದು ಕರೆಯಬಹುದು) ತೆಗೆಯಬೇಕಾಗುವುದು. ಆಗ ಬ್ಯಾಂಕು ಅಷ್ಟು ಮಟ್ಟಿನ ನಗದು ಹಣವನ್ನು ಒದಗಿಸಬೇಕಾಗುವುದು.

(iii) ತಾವು ಹುಂಡಿ ದಲ್ಲಾಳರಿಗೆ ಕೊಟ್ಟಿರುವ ದಿನಸಾಲ ವಾರ ಸಾಲಗಳ ಹಣವನ್ನು ಹಿಂದಕ್ಕೆ ಕೇಳಿ ತೆಗೆದುಕೊಳ್ಳಬಹುದು; ಹೊಸದಾಗಿ ಯಾವ ಹುಂಡಿಗಳನ್ನೂ ವಟ್ಟಕ್ಕೆ ಕೊಳ್ಳದೆ ಹೋಗಬಹುದು. ಆಗ ಆವರ್ತಕರ ಗತಿ ಏನು? ಅವರು ವ್ಯಾಪಾರದ ಹುಂಡಿಗಳನ್ನು ಕೊಳ್ಳದೆ ಕೈ ಬಿಗಿಹಿಡಿಯಬೇಕು ತಾನೆ! ಅಥವಾ ಬ್ಯಾಂಕ್ ಆಫ್ ಇಂಗ್ಲೆಂಡಿಗೆ ಶರಣಾಗಿ ಆ ಬ್ಯಾಂಕಿನಲ್ಲಿ ಎರಡನೆಯ ವಟ್ಟಕ್ಕೆ (Re-discount) ತಾವು ಮೊದಲನೆಯ ವಟ್ಟಕ್ಕೆ ಕೊಂಡಿರುವ ಹುಂಡಿಗಳನ್ನು ಅಡವಿಟ್ಟು ನಗದು ಹಣ ಪಡೆಯಬೇಕಾಗುವುದು. ಹಾಗೆ ಮಾಡಿದರೆ ಪೇಟೆಯಲ್ಲಿ ಸಂಚಾರ ಮಾಡುವ ನಗದಿನ ಮೊತ್ತ ಹೆಚ್ಚುವುದು.

ಸರಕಾರದವರಿಗೆ ಹಣದ ಮುಗ್ಗಟ್ಟಾಗಿ ವರಮಾನಗಳು ಸಕಾಲಕ್ಕೆ ಸಾಕಾದಷ್ಟು ಬಾರದೆ ಪೇಟೆಯಲ್ಲಿ ಹೊಸ ಖಜಾನೆ ಹುಂಡಿಗಳಿಗೆ ಗಿರಾಕಿಯಿಲ್ಲದೆ ಮೊದಲಿನ ಖಜಾನೆ ಹುಂಡಿಗಳೇ ಖಾಸಗಿಯವರಿಂದ ಮಾರಾಟಕ್ಕೆ ಬರುತ್ತಿದ್ದರೆ ಬ್ಯಾಂಕ್ ಆಫ್ ಇಂಗ್ಲೆಂಡಿನ ಸಹಾಯವೇ ಗತಿಯಾಗುವುದು.

ವರ್ತಕರು ಎರಡನೆಯ ವರ್ಗಕ್ಕೆ ಹುಂಡಿ ಮಾರಬೇಕಾದರೂ ಹೀಗೇ—ಅವರಿಗೆ ನಷ್ಟ ಬಹಳ. ಪೇಟೆಯ ಸಂಪ್ರದಾಯಗಳೂ ವ್ಯವಸ್ಥೆಯೂ ಚೆನ್ನಾಗಿದ್ದು, ಸೆಂಟ್ರಲ್ ಬ್ಯಾಂಕಿನ ಅಧಿಕಾರ ನಡೆಯುತ್ತಿದ್ದರೆ ಮಾತ್ರ ಈ ರೀತಿ ಒಂದು ಹದ್ದು ಏರ್ಪಡುವುದು;—ಎಲ್ಲಿಯವರೆಗೆ ಸೆಂಟ್ರಲ್ ಬ್ಯಾಂಕಿನ ಪಟ್ಟದ ದರ ಪೇಟೆಯ ದರಕ್ಕಿಂತ ಮೇಲ್ಗಡೆ ಬಡ್ಡಿ ನಿಂತಿರುವುದೋ—ಕಾರ್ಯಕಾರಿಯಾಗುವುದೋ, ಬ್ಯಾಂಕು ದೇಶದ ವ್ಯಾಪಾರದ ಬ್ಯಾಂಕುಗಳ ನಗದಿನ ಪ್ರಮಾಣವನ್ನು ಆಳುವುದೋ, ಅಲ್ಲಿಯವರೆಗೂ ಪೇಟೆ ಅದರ ಹಿಡಿತದಲ್ಲಿರುವುದು. ಇಂಗ್ಲಂಡಿನಲ್ಲಿ ಈ ಪ್ರಭಾವವಿದೆ; ಜೊತೆಗೆ ಬ್ಯಾಂಕ್ ಅಫ್ ಇಂಗ್ಲಂಡಿಗೆ ಇತರ ಕುಳಗಳೊಡನೆ ಲೇವಾದೇವಿ ವ್ಯವಹಾರವಿದೆ; ಸರಕಾರದ ಡಿಪಾಸಿಟ್ಟು ಮತ್ತು ನಿಧಿಗಳ ಬಲವಿದೆ; ಇತರ ಅನೇಕ ವಿದೇಶಿ ಸರಕಾರಗಳಿಗೂ ಪ್ರಧಾನ ಬ್ಯಾಂಕುಗಳಿಗೂ ಹಲವು ಬಗೆಯ ಕೆಲಸವನ್ನೂ ಸಹಾಯವನ್ನೂ ಮಾಡಿಕೊಡುವ ಅವಕಾಶವಿದೆ; ನೋಟನ್ನು ತಯಾರಿಸುವ ಶಕ್ತಿಯಿದೆ; ಸರ್ವಾಧಿಕಾರವಿದೆ; ಒಂದು ಸಂಪ್ರದಾಯಕ್ಕೆ ಒಳಪಟ್ಟು ನಡೆಯುವ ವ್ಯಾಪಾರದ ಬ್ಯಾಂಕುಗಳ ಸಹಕಾರವಿದೆ; ಅಲ್ಲದೆ ಯಾವಾಗ ಪೇಟೆಗಿಳಿದು ಬಡ್ಡಿಯ ಪತ್ರಗಳನ್ನು ಅದು ಕೊಂಡೀತು, ಯಾವಾಗ ಮಾರೀತು ಎಂಬ ಸಂಗತಿ ಗುಟ್ಟಾಗಿರುತ್ತದೆ; ಆದ್ದರಿಂದ ಅದು ಹಣದ ಪೇಟೆಯ ಮೇಲೆ ಉತ್ತಮವಾದ ಅಂಕೆಯನ್ನಿಡ ಬಲ್ಲದು.

**ಯೂರೋಪಿನ ಸಂಪ್ರದಾಯ.**— ಇಂಗ್ಲಿಷ್ ಸಂಪ್ರದಾಯಕ್ಕೂ ಫ್ರಾನ್ಸ್, ಜರ್ಮನಿಗಳಲ್ಲಿನವಕ್ಕೂ ಮೊದಲಿಂದಲೂ ವ್ಯತ್ಯಾಸವುಂಟು; ಇಂಗ್ಲಂಡಿನಲ್ಲಿ ಬ್ಯಾಂಕು ನೋಟಿನ ಸಂಚಾರಕ್ಕಿಂತಲೂ ಚೆಕ್ಕುಗಳ ಚಲಾವಣೆ ಹೆಚ್ಚು. ಅಲ್ಲಿ ಹಾಗಿಲ್ಲ; ಅಲ್ಲಿನ ಸೆಂಟ್ರಲ್ ಬ್ಯಾಂಕುಗಳಿಗೆ ಸದಸ್ಯ ಬ್ಯಾಂಕುಗಳವರಿಗಿಂತ ಉಪಪತ್ತಿ ಹೆಚ್ಚಾಗಿರುವುದು. ಗಿರಾಕಿಗಳಿಗೆ ಮುಂಗಡಗಳನ್ನು ಕೊಡುವುದರಲ್ಲಿಯೂ ತಡೆಗಳಿಲ್ಲ. ಗೊತ್ತಾದ ಯಾವ ಪ್ರಮಾಣದಲ್ಲಿಯೇ ಆಗಲಿ ಸದಸ್ಯ ಬ್ಯಾಂಕುಗಳು ರಿಸರ್ವ್ ಇಟ್ಟಿರಬೇಕೆಂಬ ನಿಷ್ಠುರ ನಿಯಮವೂ ಇಲ್ಲ. ಜೊತೆಗೆ ತಾವು ಕೊಂಡಿಟ್ಟಿರುವ ವ್ಯಾಪಾರದ ಹುಂಡಿಗಳನ್ನೂ ಬಡ್ಡಿಯ ಪತ್ರಗಳನ್ನೂ ಈ ಬ್ಯಾಂಕುಗಳೇ ಸೆಂಟ್ರಲ್

ಬ್ಯಾಂಕಿಗೆ ತೆಗೆದುಕೊಂಡುಹೋಗಿ ಎರಡನೆಯ ಪಟ್ಟಕ್ಕೆ ಮಾರುವ ಅವಕಾಶವುಂಟು. ಆದ್ದರಿಂದ ಸದಸ್ಯ ಬ್ಯಾಂಕುಗಳ ಮೇಲೆ ಅದಕ್ಕೆ ಸಮರ್ಪಕವಾದ ಅಧಿಕಾರವಿಲ್ಲವಾಗುವುದು. ಮೆಂಬರು ಬ್ಯಾಂಕು ಹುಂಡಿಗಳನ್ನು ಕೊಂಡು ಸೆಂಟ್ರಲ್ ಬ್ಯಾಂಕಿಗೆ ತಂದರೆ ನೋಟನ್ನು ಒದಗಿಸಿದ ಹೊರತು ಮಾರ್ಗವಿಲ್ಲವಾಗುವುದು. ಎಂದರೆ ಅವರ ಡಿಪಾಸಿಟ್ ವ್ಯಾಪಾರ ಹೆಚ್ಚಿದಂತೆಲ್ಲ ದೇಶದಲ್ಲಿ ಸಂಚಾರಕ್ಕೆ ಬರುವ ನೋಟಿನ ಮೊತ್ತ ಹೆಚ್ಚಾಗುವುದು.

ಅಲ್ಲಿನ ಬ್ಯಾಂಕ್ ರೇಟಿನ ಚಾಲನೆಯಲ್ಲಿಯೂ ದೌರ್ಬಲ್ಯವಿದೆ. ದೇಶದೊಳಕ್ಕೆ ಹಣವನ್ನು ಆಕರ್ಷಿಸಬೇಕು ಎಂದೋ ಒಳವ್ಯಾಪಾರಕ್ಕೆ ಒದಗುವ ಸಾಲದ ಹಣದ ಮೊತ್ತವನ್ನು ಕಡಮೆ ಮಾಡಬೇಕು ಎಂದೋ ಆ ದೇಶಗಳ ಸೆಂಟ್ರಲ್ ಬ್ಯಾಂಕುಗಳು ತಮ್ಮ ದರವನ್ನು ಏರಿಸಿದುವೆನ್ನೋಣ. ಆಗ ಆ ಪೇಟೆಗಳಲ್ಲಿ ಹಣಕ್ಕೆ ಹೆಚ್ಚು ಬೆಲೆ ಇದೆ, ಹೆಚ್ಚು ಬಡ್ಡಿ ಸಿಕ್ಕುತ್ತದೆ ಎಂದು ಅರಿತು ಹೊರದೇಶಗಳವರು ತಮ್ಮ ಹಣವನ್ನು ಅಲ್ಲಿಗೆ ಸಾಗಿಸಿ ಸಾಲಕ್ಕೆ ಹಾಕಿ, ಅಲ್ಲಿನ ಬ್ಯಾಂಕ್ ರೇಟಿನ ಬಿಗುವನ್ನು ಸಡಲಿಸಬಹುದು, ಮುರಿಯಬಹುದು ; ಸೆಂಟ್ರಲ್ ಬ್ಯಾಂಕಿನ ಉದ್ದೇಶವನ್ನು ವಿಫಲಗೊಳಿಸಬಹುದು.

**ಅಮೇರಿಕದ ಪದ್ಧತಿ.**—ಅಮೇರಿಕದ ಸಮ್ಮಿಳಿತ ನಿಧಿ ಪದ್ಧತಿಯಲ್ಲಿ (Federal Reserve System) ಇಂಗ್ಲಿಷ್ ಪದ್ಧತಿಯಲ್ಲಿನ ಕೆಲವು ಲಕ್ಷಣಗಳೂ ಯೂರೋಪಿಯನ್ ಪದ್ಧತಿಯ ಕೆಲವೂ ಸೇರಿಕೊಂಡಿವೆ. ಇಂಗ್ಲಂಡಿನಂತೆ ಅಲ್ಲಿಯೂ ಚೆಕ್ಕುಗಳ ಓಡಾಟ ಹೆಚ್ಚು. ಜೊತೆಗೆ ಸದಸ್ಯ ಬ್ಯಾಂಕುಗಳವರು ಕಡ್ಡಾಯವಾಗಿ ಇಷ್ಟಕ್ಕೆ ಕಡಮೆಯಿಲ್ಲದಂತೆ ಆ ಬ್ಯಾಂಕುಗಳಲ್ಲಿ ನಗದು ರಿಸರ್ವ್ ಇಡಬೇಕೆಂಬ ನಿಯಮವಿದೆ. ಆದರೆ ಜರ್ಮನ್ ಮತ್ತು ಫ್ರೆಂಚ್ ಬ್ಯಾಂಕುಗಳಲ್ಲಿನಂತೆ ಸೆಂಟ್ರಲ್ ಬ್ಯಾಂಕಿಗೆ ಹುಂಡಿಗಳನ್ನು ಎರಡನೆಯ ಪಟ್ಟಕ್ಕೆ ಮಾರಲು ಅವಕಾಶವುಂಟು : ಅಲ್ಲದೆ ಬ್ಯಾಂಕುಗಳೇ ಒಪ್ಪಿಕೆ ಕೊಟ್ಟು ಹೊತ್ತುಕೊಂಡಿಟ್ಟಿರುವ ಮೂರು ತಿಂಗಳ ವಾಯಿದೆಯ ಹುಂಡಿಗಳನ್ನು ಕೊಳ್ಳಲು ಕೂಡ ಅಲ್ಲಿನ ಪ್ರಧಾನ ಬ್ಯಾಂಕು ಒಂದು ದರ ಪ್ರಕಟಿಸುವುದು. ಆದುದರಿಂದ ಕೆಲವು ಹುಂಡಿಗಳನ್ನು ಫೆಡರಲ್ ರಿಸರ್ವ್

ಬ್ಯಾಂಕುಗಳಿಗೆ ಮಾರುವುದೇ ಹೆಚ್ಚು ಲಾಭಕರವಾಗಬಲ್ಲದು. ಹೀಗಾಗಿ ಅನೇಕ ವೇಳೆ ಬ್ಯಾಂಕುಗಳು ದೇಶದ ಸೆಂಟ್ರಲ್ ಬ್ಯಾಂಕಿನ ಆಶ್ರಯದಲ್ಲಿಯೇ ಇದ್ದು ಪುಷ್ಟಿಕೊಳ್ಳುತ್ತಿರುವುದುಂಟು. ಇಂಗ್ಲಂಡಿನಲ್ಲಿ ಪೇಟೆಯವರಿಗೆ ಸೆಂಟ್ರಲ್ ಬ್ಯಾಂಕಿನ ಆಶ್ರಯ ದೊರೆಯುವುದು ಅಸಾಧಾರಣ ಕಾಲಗಳಲ್ಲಿ; ಆಗಲೂ ಬಹು ಸ್ವಲ್ಪ ಕಾಲಗಳಿಗೆ ಮಾತ್ರ; ಕಡೆಯ ಗತಿಯಾಗಿ.—ಹೀಗೆ ಅಮೇರಿಕನ್ ಸಂಪ್ರದಾಯದಲ್ಲಿ, ಬ್ಯಾಂಕುಗಳು ನೇರವಾಗಿ ತಾವು ಪೇಟೆಯಲ್ಲಿ ಕೊಂಡ ಹುಂಡಿಗಳನ್ನು ರಿಸರ್ವ್ ಬ್ಯಾಂಕುಗಳಿಗೆ ಎರಡನೆಯ ಪಟ್ಟಕ್ಕೆ ಮಾರುವ ಸೌಕರ್ಯ ಇರುವುದು ಒಂದು,—ದಿನ ಲೆಕ್ಕ ಅಥವಾ ವಾರ ಲೆಕ್ಕದಲ್ಲಿ ಪೇಟೆಗೆ ಬ್ಯಾಂಕುಗಳು ಕೊಡುವ ಸಾಲದ ಬಡ್ಡಿಯ ದರಕ್ಕೂ, ಉತ್ತಮವಾದ ಹುಂಡಿಗಳ ಮೇಲೆ ಕೇಳುವ ಪಟ್ಟದ ದರಕ್ಕೂ, ರಿಸರ್ವ್ ಬ್ಯಾಂಕುಗಳ ಅಧಿಕಾರದ ದರಕ್ಕೂ (Official Discount Rate) ವ್ಯತ್ಯಾಸವಿರುವುದು ಇನ್ನೊಂದು, ಮುಖ್ಯ ಲಕ್ಷಣಗಳು.

**ಬ್ಯಾಂಕಿನ ಅಧಿಕಾರ ಸಾಧನಗಳು.**—ಮೇಲೆ ವರ್ಣಿಸಿರುವ ಕೆಲವು ಅಂಶಗಳಿಂದ ಒಂದು ಸಂಗತಿ ಹೊರಪಟ್ಟಿರಬಹುದು: ಸೆಂಟ್ರಲ್ ಬ್ಯಾಂಕುಗಳು ತಮ್ಮ ದೇಶದ ಹಣದ ಪೇಟೆಯನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳಲು ಕೆಲವು ಆಯುಧಗಳನ್ನು ಪ್ರಯೋಗಿಸುವುವು ಎಂಬುದು. ಅವು ಮುಖ್ಯವಾಗಿ ಎರಡು:—

(೧) ತಮ್ಮ ಬ್ಯಾಂಕ್ ರೇಟು (The Official Bank-Rate);

(೨) ತಾವೇ ಪೇಟೆಯಲ್ಲಿ ನೇರವಾಗಿ ಪತ್ರಗಳನ್ನು ಕೊಳ್ಳುವ ಮಾರುವ ಕಾರ್ಯಗಳು (Open-Market Operations)*.—ಇವುಗಳ ಸ್ವರೂಪವೇನು? ಇವುಗಳ ಕಾರ್ಯರೀತಿ ಹೇಗೆ ಎಂಬುದನ್ನು ಸ್ಥೂಲವಾಗಿ ಈವರೆಗೇ ವಿವರಿಸಿ ಆಗಿದೆ. ಯಾವ ಯಾವ ಪ್ರಸಂಗಗಳಲ್ಲಿ ಯಾವ ರೀತಿ ಈ ಸಾಧನಗಳನ್ನು ಎಷ್ಟುಮಟ್ಟಿಗೆ ಹೇಗೆ ಉಪಯೋಗಿಸಿಕೊಳ್ಳುವರು ಎಂಬುದು ಬಹು ತೊಡಕಾದ, ಬಹು ಚಮತ್ಕಾರಕ್ಕೂ ಅನುಭವಕ್ಕೂ ಒಳಪಟ್ಟು ನಡೆಯುವ ಸಂಗತಿ. ಸೂಕ್ಷ್ಮವಾಗಿ ಪರಿಸ್ಥಿತಿಯನ್ನು ಕಣ್ಣಿಟ್ಟು

* ಈ ಎರಡರ ಪ್ರಯೋಗವೂ ಹೊಂದಿಕೊಂಡೇ ಹೋಗಬೇಕಾದರೂ ಇವುಗಳ ದಾರಿ ಬೇರೆ; ಪರಿಣಾಮಗಳು ಬೇರೆ ಬೇರೆ. ಒಂದಕ್ಕೆ ಇನ್ನೊಂದರಿಂದ ತಡೆಕಟ್ಟಲೂಬಹುದು.

ನೋಡಿದ ಹೊರತು ಅದರ ಮರ್ಮ ಗೊತ್ತಾಗುವುದಿಲ್ಲ. ಆದರೂ ಒಟ್ಟಿನಲ್ಲಿ ಕೆಲವು ವಿಶೇಷಗಳನ್ನು ಸೂಚಿಸಿ ಈ ಎರಡು ಸಾಧನಗಳ ಪ್ರಯೋಗದಿಂದಲೂ ಉಂಟಾಗುವ ಸ್ವದೇಶಿ ವಿದೇಶಿ ಪರಿಣಾಮಗಳಲ್ಲಿ ಕೆಲವನ್ನು ಮುಂದೆ ಹೇಳಲಾಗುವುದು.

**ಲಕ್ಷಣ, ವಿಧಾನ.**—ಪೇಟೆಯಲ್ಲಿ ಸಂಬಂಧಸ್ಥರಾದ ವರ್ತಕರು ತಾವು ಕೊಂಡಿರುವ ಹುಂಡಿಗಳನ್ನು ಸೆಂಟ್ರಲ್ ಬ್ಯಾಂಕಿಗೆ ಎರಡನೆಯ ವಟ್ಟಕ್ಕೆ ತಂದರೆ ಅದಕ್ಕೆ ಬ್ಯಾಂಕು ಕೇಳುವ ವಟ್ಟದ ದರ ಬ್ಯಾಂಕ್ ರೇಟು. ಬ್ಯಾಂಕು ಹೊಸ ಆಸ್ತಿಗಳ (Assets) ಆಧಾರದಮೇಲೆ ಸಾಲಕೊಡುವ ದರ ಅದು. ಎರಡನೆಯ ಬಗೆಯ ಕಾರ್ಯಗಳು ಬ್ಯಾಂಕು ತಾನಾಗಿ ಪೇಟೆಯಲ್ಲಿ ನೇರವಾಗಿ ಕೊಂಡು ಮಾರುವ ಬಡ್ಡಿಯ ಪತ್ರಗಳಿಗೆ ಸಂಬಂಧಪಟ್ಟದ್ದು. ಬ್ಯಾಂಕ್ ರೇಟಿನ ವ್ಯತ್ಯಾಸದಿಂದ ಬಡ್ಡಿಯ ಕಿರುವಾಯಿದೆ ದರಗಳು ಏರುಪೇರಾಗುವುವು; ವಿದೇಶಿ ವ್ಯಾಪಾರದ ಋಣಸ್ಥಿತಿ ಹೆಚ್ಚುಕಡಮೆಯಾಗುವುದು. ಪೇಟೆಯ ನೇರ ವ್ಯವಹಾರದಿಂದ ಬಡ್ಡಿಯ ನಿಡುವಾಯಿದೆ ದರಗಳು ಪರಿಣಮಿಸುವುವು; ಬ್ಯಾಂಕುಗಳ ರಿಸರ್ವ್ ಮೊತ್ತ ಹೆಚ್ಚುಕಡಮೆಯಾಗಿ ಆ ಮೂಲಕ ಬ್ಯಾಂಕುಗಳು ತಮ್ಮ ಕುಳಕ್ಕೆ ಕೊಡಬಹುದಾದ ಲೆಕ್ಕದ ಸಾಲ ಹೆಚ್ಚು ಕಡಮೆಯಾಗುವುದು. ಆದುದರಿಂದ, ಮುಖ್ಯವಾಗಿ ರಾಷ್ಟ್ರಗಳ ಅನ್ಯೋನ್ಯ ವ್ಯಾಪಾರದಲ್ಲಿ ಹೊಂದಿಕೆಯನ್ನು ತಂದುಕೊಳ್ಳಬೇಕಾಗಿರುವಾಗ ಬ್ಯಾಂಕ್ ರೇಟಿನ ಪ್ರಯೋಗ ಬಹಳ; ಬಂಡವಾಳ ಮುಂತಾದುವನ್ನು ಬಡ್ಡಿಗೆ ಹೂಡುವ ದರವನ್ನು ವ್ಯತ್ಯಾಸಮಾಡಬೇಕೆನ್ನಿಸಿದಾಗ ಪೇಟೆಯ ವ್ಯವಹಾರ ಸಹಾಯಕಾರಿ. ಬ್ಯಾಂಕ್ ರೇಟು ಏರಿದ್ದರೆ ಮತ್ತು ಬ್ಯಾಂಕು ಪೇಟೆಯಲ್ಲಿ ಪತ್ರಗಳನ್ನು ಮಾರುತ್ತಿದ್ದರೆ, ಬ್ಯಾಂಕು ಚಲಾವಣೆಯಿಂದ ಹಣವನ್ನು ಹೀರುತ್ತಿದೆ, ಪೇಟೆಯ ಕೈಯಲ್ಲಿ ಹೆಚ್ಚು ಹಣ ಉಳಿಯದಂತೆ ಮಾಡುವುದು ಬ್ಯಾಂಕಿನ ಉದ್ದೇಶ ಎಂದು ಅರ್ಥ. ಅದರ ಫಲವಾಗಿ ಎಲ್ಲರ ಕೈ ಬಿಗಿಹಿಡಿದಹಾಗಾಗುತ್ತದೆ. ಬ್ಯಾಂಕ್ ರೇಟು ಇಳಿಯುತ್ತಿದ್ದರೆ, ಬ್ಯಾಂಕು ಪತ್ರಗಳನ್ನು ಕೊಳ್ಳುತ್ತಿದ್ದರೆ, ಪೇಟೆಯಲ್ಲಿ ವಿಪುಲವಾಗಿ ಹಣ ಓಡಾಡುವುದಕ್ಕಿದೆ, ಬ್ಯಾಂಕಿಗೆ ಪೇಟೆಯ ವಿಚಾರದಲ್ಲಿ ನೆರವೀಯುವ ಬುದ್ಧಿ ಇದೆ ಎಂದು ಅರ್ಥ.

**ಫಲಗಳು — ಬ್ಯಾಂಕ್ ರೇಟ್ ಏರಿದರೆ?**— ಇನ್ನು ಇವುಗಳ ಫಲಗಳನ್ನು ಸ್ವಲ್ಪಮಟ್ಟಿಗೆ ಸೂಚಿಸಬಹುದು. ಬ್ಯಾಂಕ್ ರೇಟು ಏರಿದರೆ:— ಇಲ್ಲಿ ಹೆಚ್ಚು ದರದ ಬಡ್ಡಿ ಸಂಪಾದನೆ ಆಗುವುದೆಂದು ಹೊರಗಿನವರು ಇಲ್ಲಿಗೆ ತಮ್ಮ ಹಣವನ್ನು ತರುವರು; ಒಳಗಿನವರು ಹೊರಕ್ಕೆ ಹಣ ಸಾಲ ಹಾಕುವುದು ನಿಲ್ಲುವುದು; ಹೀಗಾಗಿ ತಕ್ಷಣಕ್ಕೆ ಒಳದೇಶದ ಸಾಲಗಾರಿಕೆ ಹೆಚ್ಚಾಗುವುದು. ಇಲ್ಲಿಗೆ ಹಣವನ್ನು ತರುವವರು ಹೆಚ್ಚು ಮಂದಿಯಾಗುವುದರಿಂದ ಈ ಹಣದ ಬೆಲೆ ಹೆಚ್ಚಾಗಿ ದೇಶದ ಮಾರುವೆ ಏರುವುದು. ನಿವ್ವಳವಾಗಿ ಹಣದ ಆಮದು ಹೆಚ್ಚಾಗುವುದರಿಂದ ದೇಶದಲ್ಲಿ ಚಿನ್ನದ ಪ್ರಮಾಣ ವೃದ್ಧಿಹೊಂದುವಂತಾಗುವುದು*. ಈ ಪೇಟೆಯ ಕಿರುವಾಯಿದೆಯ ಬಡ್ಡಿಯ ದರ ವ್ಯತ್ಯಾಸವೊಂದುವುದು; ಯಾವಾಗ ಬಡ್ಡಿಯ ದರ ಏರಿತೋ ಆಗ ಉತ್ಪತ್ತಿಕಾರರು ಸಾಲಕ್ಕೆ ಹಣ ತೆಗೆಯುವುದು ಕಷ್ಟವಾಗುವುದು, ಕಡಮೆಯಾಗುವುದು; ಇದರಿಂದ ಒಳದೇಶದಲ್ಲಿ ಉದ್ಯೋಗ ಸಾಹಸ ಕುಗ್ಗುವುದು. ಆ ಮಟ್ಟಿಗೆ ದೇಶದ ಕೂಲಿ ಸಂಬಳಗಳು ಕಡಮೆಯಾಗಲೂ ಬಹುದು; ಹಲವರಿಗೆ ನಿರುದ್ಯೋಗ ಉಂಟಾಗುವುದು; ಜನರ ಕೈಯಲ್ಲಿ ಹೆಚ್ಚು ಹಣ ಓಡಿಯಾಡುತ್ತಿದ್ದರೆ ಅವರು ದೇಶದೊಳಕ್ಕೆ ತಮಗೆ ಬೇಕಾದ ಸಾಮಾನುಗಳನ್ನು ತರಿಸಿಕೊಳ್ಳಲು ಅನುವಾಗುತ್ತಿತ್ತು; ಅಥವಾ ಒಳಗೆ ತಯಾರಾದ ಪದಾರ್ಥಗಳನ್ನೇ ಬಹಳವಾಗಿ ಕೊಳ್ಳುತ್ತಿದ್ದರು; ಈಗ ಆ ಪದಾರ್ಥಗಳು ರಫ್ತಾಗುವುವು. ರಫ್ತು ವ್ಯಾಪಾರದಿಂದ ದೇಶದೊಳಕ್ಕೆ ಹೆಚ್ಚು ನಿವ್ವಳ ಹಣ ಬರುವುದು. ಇದರ ಪರಿಣಾಮವಾಗಿಯೂ ಮಾರುಮೆಯ ದರವೂ ದೇಶದ ಸ್ವರ್ಣಕೋಶವೂ ವೃದ್ಧಿಯಾಗುವುವು.

ಉದ್ಯೋಗವನ್ನು ಪಡೆದೆ ಅಲ್ಲಿಗೂ ಕೆಲಸಮಾಡುತ್ತಿರುವವರಿಗೆ ಈ ಸ್ಥಿತಿಯಿಂದ ವರಮಾನ ಕಡಮೆಯಾಗುವುದು. ಕೊಳ್ಳುವವರ ಸಂಖ್ಯೆ ಕಡಮೆ. ಪದಾರ್ಥಗಳಿಗೆ ಅವರು ಕೊಡುವ ಬೆಲೆಯೂ ಕಡಮೆ. ಒಂದು ಕಡೆ ಸಾಲ ದೊರಕುವುದು ಕಷ್ಟ; ಇನ್ನೊಂದು ಕಡೆ ಹೆಚ್ಚು

* ಬೇರೆ ಕಡೆಗಳಿಗಿಂತ ಹೆಚ್ಚಾಗಿ ಇಲ್ಲಿನ ದರ ಏರುತ್ತಿದ್ದರೆ ಎಂಬುದು ಅಧ್ಯಾಹಾರ. ಎಲ್ಲ ಕಡೆಯೂ ಏರುತ್ತಿದ್ದರೆ ಈ ಪ್ರಯೋಜನ ದೊರಕದು.

ಒಪ್ಪಿ ಕೊಡೋಣವೆಂದರೆ 'ಗಟ್ಟು'ವುದಿಲ್ಲ. ಕೆಲವು ಉದ್ಯೋಗಗಳನ್ನು ತಟ್ಟನೆ ನಿಲ್ಲಿಸುವುದು ಕಷ್ಟ. ಕೆಲವು ವೇಳೆ 'ಈ ಸ್ಥಿತಿ ಬಹುಕಾಲ ನಡೆಯಲಾರದು; ನಾಳೆ ಮೇಲಾದೀತು' ಎಂಬ ನಿರೀಕ್ಷೆ ಇರುವುದರಿಂದ ತಕ್ಷಣದ ಕಡಮೆ ಬೆಲೆಗೇ ಪದಾರ್ಥಗಳನ್ನು ಮಾಡಿ ಮಾರುತ್ತ ಹೋಗುವುದುಂಟು. ಕಣ್ಣಿಗೆ ಕಾಣಿಸುವ ವಿದೇಶಿ ವ್ಯಾಪಾರದ ನಿವ್ವಳ ಪ್ರಯೋಜನ ಹೆಚ್ಚುವ ಸಂಭವವುಂಟು. ಬಂಡವಾಳ ಪತ್ರಗಳ ಬೆಲೆ ಇಳಿಯುವುದು. ಇಳಿದ ಧಾರಣೆವಾಸಿಗಳ ಲಾಭ ನಷ್ಟಗಳೆಲ್ಲ ಒದಗುವುವು.

ದುಡ್ಡಿರುವ ಜನರು ಬಂಡವಾಳದ ಪೇಟೆಯಲ್ಲಿ ನಿಡುವಾಯಿದೆಯ ಅಥವಾ ಗಟ್ಟಿ ಒಡ್ಡಿಯ ಸಾಲಗಳಿಗೆ ಹಣ ಹೂಡುವುದನ್ನು ಬಿಟ್ಟು ಕಿರುವಾಯಿದೆ ಸಾಲಗಳಿಗೆ ಹಾಕಬೇಕೆಂದೂ ಬಯಸುವರು. ಉತ್ಪತ್ತಿಕಾರರಿಗೆ ಎಷ್ಟು ನಷ್ಟವಾದರೂ, ಕೈಗಾರಿಕೆ ಪ್ರಪಂಚದಲ್ಲಿ ಓಡಿಯಾಡುವ ಹಣ ಎಷ್ಟು ಕಡಮೆಯಾದರೂ ವಿದೇಶಿ ವ್ಯಾಪಾರದ ಲಾಭ—(ಕಿರುವಾಯಿದೆ ಹಣದ ಸಂಚಾರ Short Term Funds)—ತತ್ಕಾಲಕ್ಕೆ ಹೆಚ್ಚಿರುವುದು. ಆದರೂ ಇದು ಋಣಸ್ಥಿತಿ. ಈ ಸ್ಥಿತಿ ಬಲಿತಂತೆಲ್ಲ ಬ್ಯಾಂಕ್ ರೇಟನ್ನು ಇಳಿಸಬೇಕಾದ ಅಗತ್ಯ ಹೆಚ್ಚಾಗುವುದರಿಂದ ಸಮಯ ಪಕ್ವವಾಗುವುದನ್ನು ನೋಡಿಕೊಂಡಿದ್ದು ಬ್ಯಾಂಕ್ ರೇಟನ್ನು ವ್ಯತ್ಯಾಸಮಾಡುವುದು ವಾಡಿಕೆ. ಒಳದೇಶದ ಅವ್ಯವಸ್ಥೆಗಳು ವ್ಯಾಪಾರದ ಪರಿಮಾಣದಲ್ಲಿಯೂ ಮಾರುಪೇಟೆಯ ದರದಲ್ಲಿಯೂ ಸೂಚಿತವಾಗುವುವು. ಬ್ಯಾಂಕ್ ರೇಟಿನ ವ್ಯತ್ಯಾಸದ ಮೂಲಕ ಅವನ್ನೂ ಒಳಗಿನ ಸ್ಥಿತಿಯನ್ನೂ ಹೊಂದಿಕೆಗೆ ತಂದುಕೊಳ್ಳಲು ಅವಕಾಶವಿದೆ. ಒಂದು ಸಂಗತಿ ಮಾತ್ರ ಈ ಸಂಬಂಧದಲ್ಲಿ ಮುಖ್ಯವಾಗಿ ಗೊತ್ತಾಗಬೇಕು: ಸ್ಥಿತಿ ಹೀಗಿರುವುದರಿಂದ ಬ್ಯಾಂಕು ಪಟ್ಟದ ದರವನ್ನು ಏರಿಸುತ್ತಿದೆ; ಈ ಕಾರಣದ ಪ್ರಾಬಲ್ಯವಿರುವುದರಿಂದ ಇಳಿಸುತ್ತಿದೆ; ಇಂಥ ಸ್ಥಿತಿಯನ್ನು ಉಂಟುಮಾಡಲು ಅಥವಾ ನಿವಾರಿಸಲು ಬ್ಯಾಂಕು ಈ ಈ ರೀತಿ ಕೆಲಸಮಾಡುತ್ತಿದೆ ಎಂದು ಪೇಟೆಯವರಿಗೆ ಸ್ಪಷ್ಟ ತಿಳಿವಳಿಕೆ ಉಂಟಾಗುವಂತಿದ್ದರೆ ಮಾತ್ರ ಪ್ರಯೋಜನ ಬಹಳ. ದೇಶದ ಹಣ ವ್ಯವಸ್ಥೆಯೂ ಮೇಲಾಗಿ ನಡೆಯುವುದು. ಇಲ್ಲಿ ಎಚ್ಚರವಾಗಿರಬೇಕಾದ ಸಂದರ್ಭವೂ ಒಂದುಂಟು. ವಿದೇಶಿ ವ್ಯಾಪಾರ ಮತ್ತು

ಮಾರುಪೇಯ ತಾಳಕ್ಕೆ ಸರಿಯಾಗಿ ಕುಣಿಯುತ್ತಹೋಗಿ ಒಳಗಿನ ಉದ್ಯೋಗ ಕೈಗಾರಿಕೆಗಳ ಹದ ಕೆಡದಂತೆ ನೋಡಿಕೊಳ್ಳಬೇಕು. ಹೊರಗಿನ ಕ್ಲೇಶಗಳು ಒಳವ್ಯಾಪಾರ ಮಂಡಲದಲ್ಲಿ ಪ್ರತಿಫಲಿಸದಂತೆ ನೋಡಿಕೊಳ್ಳಬೇಕು.

**ಬ್ಯಾಂಕ್ ರೇಟ್ ಇಳಿದರೆ?**—ಬ್ಯಾಂಕ್ ರೇಟ್ ಇಳಿದರೆ: ಹೊಸ ಕೈಗಾರಿಕೆಗಳ ಬಂಡವಾಳಕ್ಕಾಗಿ ಹಣವನ್ನು ಹೂಡುವ ಉತ್ತೇಜನ ದೊರಕುತ್ತದೆ. ಮೊದಲು ಕಿರುವಾಯಿದೆಯ ಸಾಲಗಳು ಹೆಚ್ಚಾಗಿ ಸಿಕ್ಕುವುವು. ನಡೆಯುತ್ತಿರುವ ಕಂಪನಿ ಬಂಡವಾಳ ಮತ್ತು ಆಸ್ತಿಪತ್ರಗಳ ಬೆಲೆ ಏರುವುದು. ಜನರ ಕೈಯಲ್ಲಿ ಓಡಿಯಾಡುವ ಹಣ ಹೆಚ್ಚುವುದು. ಎಲ್ಲರೂ ಪದಾರ್ಥಗಳನ್ನೂ ಬಡ್ಡಿಯ ಪತ್ರಗಳನ್ನೂ ಕೈಗಾರಿಕೆ ಪತ್ರಗಳನ್ನೂ ಕೊಳ್ಳುವರಾಗುವರು. ಉದ್ಯೋಗ ಏರುವುದು. ಆದರೆ ವಿದೇಶಿ ವ್ಯಾಪಾರದ ಲಾಭ ಅನುಕೂಲವಾಗುವುದಿಲ್ಲ. ಇಲ್ಲಿ ಬಡ್ಡಿ ಅಲ್ಪವೆಂದು ಇಲ್ಲಿನವರು ತಮ್ಮ ಹಣವನ್ನು ಹೊರಗಿನವರಿಗೆ ಸಾಲಹಾಕುವ ಸಂಭವ ಹೆಚ್ಚು; ಈವರೆಗೂ ಇಲ್ಲ ಬಡ್ಡಿಗೆ ಹೂಡಿದ್ದ ಹೊರಗಿನವರು ಹಣವನ್ನು ಹೆಚ್ಚು ಬಡ್ಡಿ ದುಡಿಯುವಲ್ಲಿಗೆ ಸಾಗಿಸುವ ಸಂಭವ ಹೆಚ್ಚು. ಆದುದರಿಂದ ದೇಶದಿಂದ ಸಿಧ ರಫ್ತಾಗಲು ಅವಕಾಶ ಬಹಳ. ದೇಶದೊಳಗೆ ಸಂಗ್ರಹವಾಗಿರುವ ಚಿನ್ನದ ಕೋಶ ಕ್ಷೀಣಿಸುವುದು. ಮಾರುಪೇ ಸೊರಗಿ ಬೀಳುವುದು. ಇದೇ ರೀತಿ ಇನ್ನೂ ಸ್ವಲ್ಪಕಾಲ ನಡೆಯಿತೆಂದರೆ ಸೆಂಟ್ರಲ್ ಬ್ಯಾಂಕು ಪುನಃ ಕೈ ಬಿಗಿಹಿಡಿದು ದರಗಳನ್ನು ಏರಿಸಿ ಇತರ ಬಗೆಯ ಪೇಟೆಯ ವ್ಯವಸ್ಥೆ ಮಾಡಿ, ಎಲ್ಲವನ್ನೂ ಸ್ತಿಮಿತಕ್ಕೆ ತರಬೇಕಾಗುವುದು.

**ಅಂಕೆಯ ಗುರಿ ಯಾವುದಿರಬೇಕು?**— ಮಾರುಪೇಯ ದರದಲ್ಲಿ ಸ್ಥೈರ್ಯವನ್ನು ಕಾಪಾಡುವುದು ಮುಖ್ಯವೆ? ಒಳದೇಶದ ಸ್ಥಿತಿಯನ್ನು ಕಾಪಾಡುವುದು ಮುಖ್ಯವೆ? ಒಂದಕ್ಕೊಂದು ವಿರೋಧವಾದಾಗ ಹೇಗೆ ಮಾಡುವುದು? ಹಣದ ಪೇಟೆಯ ಅಧಿಕಾರಿಯ ಗುರಿ ಯಾವುದಿರಬೇಕು?— ಎಂಬ ವಿಷಯದಲ್ಲಿ ಮೊನ್ನೆ ಮೊನ್ನೆಯವರೆಗೂ ನಾನಾ ಅಭಿಪ್ರಾಯಗಳಿರುತ್ತಿದ್ದುವು. ಈಚೆಗೆ ಒಂದು ತತ್ವ ಸಿದ್ಧವಾಗಿ, ಒಳದೇಶದ ಉತ್ಪತ್ತಿಸ್ಥಿತಿಯನ್ನೂ ಪದಾರ್ಥಗಳ ಧಾರಣೆವಾಸಿಯನ್ನೂ ಬಡ್ಡಿಯ ದರಗಳನ್ನೂ ಕೂಲಿ ಸಂಬಳಗಳ ಮಟ್ಟವನ್ನೂ ಉದ್ಯೋಗವನ್ನೂ (Employment)

ಕಾಪಾಡುವುದು ಮೊದಲ ಕರ್ತವ್ಯ; ಅವನ್ನು ಸಾಧಿಸಿದರೆ ಮಾರುವೆ ತಾನೇ ದಾರಿಗೆ ಬರುವುದು; ಪ್ರಯೋಜನಕಾರಿಯಾಗುವುದು. ಕಡೆಗೆ ಮಾರುವೆಯ ದರ ಏರಲಿ ಇಳಿಯಲಿ ಅದರ ಕೇಡು ಒಳದೇಶಕ್ಕೆ ತಟ್ಟದಂತೆ ಅದನ್ನು ಆಳಿಕೊಂಡು ಬರುವುದು ಮೇಲು. ಕೇವಲ ಮಾರುವೆಯ ದರವನ್ನು ಒಂದು ಮಟ್ಟಿನಲ್ಲಿಡಬೇಕೆಂದು ಹಟಮಾಡಿದರೆ ಅವಿವೇಕವಾದೀತು; ಸಮಯಕ್ಕೆ ತಕ್ಕಂತೆ ಅದನ್ನು ಹೆಚ್ಚು ಕಡಮೆ ಮಾಡಿಕೊಂಡಾದರೂ ಒಳದೇಶದ ಮಂಗಳವನ್ನು ಸಾಧಿಸಬೇಕು ಎಂಬ ಅಭಿಪ್ರಾಯ ಮುಂದಕ್ಕೆ ಬಂದಿದೆ.

ವಿಷಮತೆಗಳನ್ನು ನಿವಾರಿಸುವ ಅವಶ್ಯಕತೆ ಇರುವಾಗ ಪೇಟೆಯ ಕೈ ಬಿಗಿಹಿಡಿಯತಕ್ಕದ್ದೆಂದು ಸೆಂಟ್ರಲ್ ಬ್ಯಾಂಕಿಗೆ ಗೊತ್ತಿರುವುದರಿಂದ ಅಂತಹ ಸಮಯಗಳಲ್ಲಿ ಮಾತ್ರ ಅದು ಪೇಟೆಯ ದರಗಳನ್ನು ಏರಿಸಿ ಕಷ್ಟವನ್ನು ಉಂಟುಮಾಡೀತೇ ಹೊರತು, ಸಾಮಾನ್ಯವಾಗಿ ಎಂದಿಗೂ ಆ ರೀತಿ ಉಗ್ರವಾಗಿ ವ್ಯವಹರಿಸದು. ಅದರ ಕೆಲಸ, ಪೇಟೆಗೆ ಎಲ್ಲ ಬಗೆಯಲ್ಲಿಯೂ ನೆರವು ಕೊಡುವುದು. ಸಾಧಾರಣವಾಗಿ ಸದಸ್ಯ ಬ್ಯಾಂಕುಗಳಿಗೆ ತಿಳಿವಳಿಕೆ ಕೊಟ್ಟು, ಆಗಿಂದಾಗ್ಗೆ, ದೇಶದ ಹಣಸ್ಥಿತಿಯಲ್ಲಿಯೂ, ವ್ಯಾಪಾರ ಸಾಲದ ನಿರ್ಮಾಣದಲ್ಲಿಯೂ ಅವರಿಗೆ ಅನುಕೂಲಗಳನ್ನು ಕಲ್ಪಿಸಿಕೊಡುವುದೇ ರೂಢಿ. ಬ್ಯಾಂಕು ತನ್ನಲ್ಲಿಡಬೇಕಾದ ಹೆಚ್ಚು ನಗದಿನ ಪ್ರಮಾಣದ ಸಂಬಂಧದಲ್ಲಿಯೂ ಅನುಕೂಲವನ್ನು ಉಂಟುಮಾಡುವುದು. ತನಗೆ ಸ್ವತಂತ್ರವಿರುವ ಕಡೆ, ಆ ರೀತಿ ಶಾಸನದ ಬಲವಿರುವ ಕಡೆ ತನ್ನಲ್ಲಿರುವ ಸ್ವಲ್ಪ ಚಿನ್ನದ ಪ್ರಮಾಣಕ್ಕೇ ಹೆಚ್ಚು ನೋಟನ್ನು ತಯಾರಿಸಿ ಪೇಟೆಗೆ ಸಾಲದ ನೆರವು ಕೊಡಬಹುದು. ತಾನು ಇಟ್ಟಿರಬೇಕಾದ ಚಿನ್ನದ ಪ್ರಮಾಣಕ್ಕಿಂತ ಹೆಚ್ಚು ಚಿನ್ನ ಕೈಗೆ ಬಂದರೆ ಅದಕ್ಕೆ ತಕ್ಕಂತೆ ಹೆಚ್ಚು ಹಣವನ್ನು ನಿರ್ಮಾಣಮಾಡದೆ ಸುಮ್ಮನೆ ಅದನ್ನು ತನ್ನ ನಿಧಿಗೆ ಸೇರಿಸಿಕೊಂಡು ಪೇಟೆಯಲ್ಲಿನ ಹಣ ಸಂಚಾರಕ್ಕೆ ಯಾವ ವ್ಯತ್ಯಾಸವೂ ತೋರದಂತೆ ನಡೆಸಬಹುದು: ವ್ಯಾಪಾರದ ಬ್ಯಾಂಕುಗಳು, ತನ್ನಲ್ಲಿಟ್ಟಿರುವ ನಗದಿನ ಪ್ರಮಾಣಕ್ಕೆ ಹೆಚ್ಚು ಡಿಪಾಸಿಟ್ ಸಾಲವನ್ನು ಕೊಡುವಂತೆ ಅಪ್ಪಣೆ ಮಾಡಬಹುದು; ಎಂದರೆ ಅವರಿಟ್ಟಿರುತ್ತಿದ್ದ ಪ್ರಮಾಣಕ್ಕಿಂತ ಕಡಮೆ

ಪ್ರಮಾಣಕ್ಕೇ ಮೊದಲಿನಷ್ಟು ಕೆಲಸವನ್ನೇ ಇನ್ನೂ ಹೆಚ್ಚು ಕೆಲಸವನ್ನೇ ಮಾಡಲು ಅವರಿಗೆ ಸಹಾಯ ಮಾಡಬಹುದು. ಇವೆಲ್ಲ ಸೆಂಟ್ರಲ್ ಬ್ಯಾಂಕಿನ ನೀತಿಯ ವ್ಯವಹಾರಕ್ಕೂ ಧನನೀತಿಗೂ ಸಂಬಂಧಪಟ್ಟ ಸಂಗತಿಗಳು. ಆ ನೀತಿ ಸಮಯಕ್ಕೆ ತಕ್ಕಂತೆ, ಪರಿಸ್ಥಿತಿಗೆ ತಕ್ಕಂತೆ ರೂಪುಗೊಳ್ಳುವುದು. — ಆದರೆ, ಖಾಸಗಿ ಬಂಡವಾಳಸ್ಥರ ಮತ್ತು ಕೈಗಾರಿಕೆಗಳವರ ಹಿತದಿಂದ ದೇಶದ ಉತ್ಪತ್ತಿ ಸರ್ವಥಾ ಕುಂದದಂತೆಯೂ, ಉದ್ಯೋಗಹೀನವರ ಸಂಖ್ಯೆ ಬೆಳೆಯದಂತೆಯೂ, ಪರಮಾವಧಿ ಉದ್ಯೋಗವನ್ನು ಸಾಧಿಸುವಂತೆಯೂ ಎಲ್ಲ ಸಮಯದಲ್ಲಿಯೂ ನೋಡಿಕೊಳ್ಳಬೇಕು. ಇದಕ್ಕೂ ಮೀರಿ ಹೇಳಬೇಕಾದ ಸಂಗತಿ ಒಂದಿದೆ: ಹಣದ ಪೇಟೆಯಲ್ಲಿನ ಕಾರ್ಯವೆಲ್ಲವೂ ಸಮಾಜದ ಮಂಗಳಕ್ಕೆ ಸಾಧನ ಮಾತ್ರವಾದ್ದರಿಂದ ದೇಶದಲ್ಲಿರಬಹುದಾದ ಎಲ್ಲ ಉದ್ಯೋಗಿಗಳಿಗೂ ಕೆಲಸವೂ ಸಂಪಾದನೆಯೂ ಏನೇ ಆಗಲಿ ದೊರೆಯುವ ಹಾಗೆ ಹಣ ಸಂಚಾರ ಮತ್ತು ಹಣ ಕಾರ್ಯ ನಡೆಯುತ್ತಿರುವಂತೆಯೂ ಮಾತ್ರ ಸೆಂಟ್ರಲ್ ಬ್ಯಾಂಕೂ ಸರಕಾರವೂ ವ್ಯವಸ್ಥೆ ಮಾಡುತ್ತಿರಬೇಕು. ಖಾಸಗಿ ಸಾಹುಕಾರರ ಲಾಭಕ್ಕಾಗಿ ಸರ್ವಸಾಧಾರಣರ ಬದುಕು ಬಲಿಯಾಗದಂತೆ ವರ್ತಿಸಬೇಕು.

**ಸೆಂಟ್ರಲ್ ಬ್ಯಾಂಕುಗಳ ಪರಸ್ಪರ ಸಹಕಾರ.**—ಮುಂದೆ ದೇಶದೇಶದ ಸೆಂಟ್ರಲ್ ಬ್ಯಾಂಕುಗಳು ತಮ್ಮ ಧನಮಂಡಲದ ಕ್ಷೇಮವನ್ನೂ ಆರೋಗ್ಯವನ್ನೂ ಸುವ್ಯವಸ್ಥೆಯನ್ನೂ ಕಾಪಾಡುವ ಅವಸರದಲ್ಲಿ ಪರಸ್ಪರವಾಗಿ ಕೇಡಾಗದಂತೆ ಹೇಗೆ ಸಹಕರಿಸಬೇಕು ಎಂಬ ವಿಚಾರ. ಇಂತಹ ಸಹಕಾರವಿಲ್ಲದಿದ್ದರೆ ಅಂತರಾ ರಾಷ್ಟ್ರೀಯ ಧಾರಣೆವಾಸಿ, ಬಡ್ಡಿಯ ದರ, ಉದ್ಯೋಗ ಮುಂತಾದುವು ಒಂದೇ ಹದದಲ್ಲಿ, ಸಮರಸವಾಗಿ ನಡೆಯುವುದು ಸಾಧ್ಯವಾಗದು. ವ್ಯಾಪಾರವ್ಯವಹಾರಗಳಲ್ಲಿ ಸಂಧಿಸಿ ಸಂಬಂಧಪಡುವ ರಾಷ್ಟ್ರಗಳಲ್ಲಿ ಒಂದರ ಅನಾರೋಗ್ಯದ ಪರಿಣಾಮ ಇನ್ನೊಂದಕ್ಕೆ ಮತ್ತೊಂದಕ್ಕೆ ತಪ್ಪದೆ ಹಬ್ಬುವುದು. ಒಂದು ಕೆಟ್ಟು—ಅಥವಾ ಒಂದನ್ನು ಕೆಡಿಸಿ ಇನ್ನೊಂದು ಸುಖವಾಗಿರಲು ಖಂಡಿತವಾಗಿ ಈಗ ಸಾಧ್ಯವಿಲ್ಲ. ಆದುದರಿಂದ ಈ ಬ್ಯಾಂಕುಗಳು ಆಗಾಗ್ಗೆ ಒಟ್ಟಿಗೆ ಕಲೆತು ಯೋಚನೆಮಾಡಿ ಧಾರಣೆವಾಸಿಗಳೂ, ಉದ್ಯೋಗ ಉತ್ಪತ್ತಿಸ್ಥಿತಿಗಳೂ ಅತಿಯಾಗಿ ಏರಿಳಿದು

ಸುತ್ತಲೂ ಕೆಡುಕಾಗದಂತೆ ಒಪ್ಪಂದಗಳನ್ನೂ ಏರ್ಪಾಡುಗಳನ್ನೂ ಮಾಡಿ, ಒಳಗೆ ತಮ್ಮ ಧನಮಂಡಲದಲ್ಲಿಯೂ, ಹೊರಗೆ ಪರಸ್ಪರ ಸಹಾನುಭೂತಿಯಿಂದಲೂ ನಡೆಯಬೇಕಾಗುವುದು.

ಮುಖ್ಯವಾಗಿ ಒಂದು ಸಂಗತಿಯನ್ನು ತಿಳಿದುಕೊಳ್ಳೋಣ: ಪ್ರತಿಯೊಂದು ದೇಶದ ಸೆಂಟ್ರಲ್ ಬ್ಯಾಂಕೂ ತನ್ನ ಹಣಪದ್ಧತಿಯ ಕಾವಲಿಗಾಗಿ ಚಿನ್ನದ ನಿಧಿಯನ್ನು ಏರ್ಪಡಿಸಿಕೊಳ್ಳಲು ತವಕಪಡುವುದು. ಎಲ್ಲರಿಗೂ ಬೇಕಾಗುವಷ್ಟು ಚಿನ್ನ ದೊರೆತರಂತೂ ಸರಿಯೆ. ಹಾಗಿಲ್ಲದೆ ಚಿನ್ನದ ಉತ್ಪತ್ತಿ ಕಡಿಮೆಯಾಗಿರುವುದರಿಂದಲೋ; ಕೈಗಾರಿಕೆ ಕಾರ್ಯಗಳಿಗೆ (For Indsutrial Purposes ಉದಾ.— ಒಡವೆಗಳು, ಮುಲಾಮು ಕೆಲಸ ಇತ್ಯಾದಿ) ಹೆಚ್ಚು ಚಿನ್ನ ಬೇಕಾಗುವುದರಿಂದಲೋ; ಅದನ್ನು ಒಂದು ಕಡೆ ಕುಪ್ಪೆ ಹಾಕಿ ಅರ್ಥಿಕ ಪ್ರಯೋಜನಕ್ಕೆ ಸೇರದಂತೆ ಮಾಡುವ ವ್ಯಕ್ತಿ ಮತ್ತು ಸರಕಾರಗಳವರ ಕಾರ್ಯದಿಂದಲೋ; ಯಾವ ಸಂದರ್ಭದಲ್ಲಿಯೇ ಆಗಲಿ ದೇಶಗಳಿಂದ ಚಿನ್ನ ಹೊರಕ್ಕೆ ಸಾಗದಂತೆ ಶಾಸನ ಏರ್ಪಟ್ಟು, ಸಾಲಗಾರರು ತಮ್ಮ ಮೇಲೆ ನಿಷ್ಕಳವಾಗಿ ಹೊತ್ತ ಸಾಲವನ್ನು ಚಿನ್ನ ತೆತ್ತು ಹರಿಸದೆ — ಚಿನ್ನವಿರುವವರು ಬೇಕಾದವರಿಗೆ ಸಾಲಕೊಡದೆ ಹೋಗುವುದರಿಂದಲೋ; ಸಾಕಾದಷ್ಟು ಚಿನ್ನ ಧಾರಾಳವಾಗಿ ದೊರೆಯದಾದರೆ, ಅದೇ ಒಂದು ಅಡ್ಡಿಯಾಗದಂತೆ ಸೆಂಟ್ರಲ್ ಬ್ಯಾಂಕುಗಳವರು ತಮ್ಮತಮ್ಮೊಳಗೂ, ಸರಕಾರಗಳೊಡನೆಯೂ ಒಡಂಬಡಿಕೆಗೆ ಬಂದು, ಧಾರಾಳವಾಗಿ ಸಹಕರಿಸಿ ಒಬ್ಬರೊಬ್ಬರಿಗೆ ನೆರವೀಯುತ್ತ, ತಮ್ಮ ಕೈಯಲ್ಲಿ ಕಡಮೆ ಪ್ರಮಾಣದ ರಿಸರ್ವ್ ಇದ್ದಾಗ್ಯೂ, ಅಗತ್ಯ ತೋರದಂತೆ ಧನಮಂಡಲಕ್ಕೆ ಬೇಕಾಗುವ ಎಲ್ಲ ನಗದು ಮತ್ತು ಉದ್ರಿ ಹಣದ ಪುಷ್ಟಿಯನ್ನೂ ಕೊಟ್ಟು ಜನ ಜನಾಂಗಗಳಲ್ಲಿ ಸುಭಿಕ್ಷವನ್ನು ಉಂಟುಮಾಡುವ ಶಕ್ತಿ ಅವರ ಕೈಯಲ್ಲಿದೆ.

* ಪ್ರಪಂಚದ ಧನಮಂಡಲದಲ್ಲಿ ಕೂಡಿರುವ ಚಿನ್ನ.

(£ ೧೦ ಲಕ್ಷ)

| | | | | |
|---|---|---|---|---|
| ೧೮೬೬ | ೫೧೯ | | | % |
| ೧೮೯೩ | ೭೭೪ | ೨೭ | ವರ್ಷಗಳಲ್ಲಿ | ೨೫೫ = ೧.೫ |
| ೧೯೧೮ | ೧,೯೦೯ | ೨೫ | ,, | ೧,೧೩೫ = ೫.೭ |
| ೧೯೨೮ | ೨,೨೮೨ | ೧೦ | ,, | ೩೭೩ = ೧.೮ |
| ೧೯೩೪ | ೨,೫೭೨ | ೬ | ,, | ೨೯೦ = ೭.೦ |

ಸಂಚಾರಕ್ಕೆ ತಂದು ಕೆಲಸಮಾಡಿಸುವ ಹಣದ ಮೊತ್ತದಿಂದ ಮೊದಲು ಒಳ ಧಾರಣೆವಾಸಿಗಳನ್ನು ಅಂಕೆಯಲ್ಲಿಟ್ಟುಕೊಳ್ಳುವುದು; ಒಳ ಧಾರಣೆವಾಸಿ, ಬಡ್ಡಿಯ ದರ, ರಾಜಕೀಯ ಕಾರಣಗಳು, ಋತುಫಲ, ಲಾಭಾಳಿ ವ್ಯಾಪಾರಸ್ಥರ ದುಸ್ಸಾಹಸ ಮುಂತಾದುವು ನಾಣ್ಯದ ದರವನ್ನು ಕೆಡಿಸದಂತೆ ದಕ್ಷತೆಯಿಂದ ಬ್ಯಾಂಕ್ ರೇಟ್ ಪ್ರಯೋಗದ ಮೂಲಕವೂ ಪೇಟೆಯ ವ್ಯವಹಾರದ ಮೂಲಕವೂ ಏರ್ಪಡಿಸಿ ತೊಡಕುಗಳನ್ನು ನಿವಾರಿಸುವುದು; ವಿದೇಶಿ ವ್ಯಾಪಾರಗಳು ಹೊಂದಿಕೊಳ್ಳುವಂತೆ ಪೇಟೆಗೆ ನೆರವೀಯುವುದು ಮುಂತಾದ ಎಲ್ಲ ಸಂಬಂಧಗಳಲ್ಲಿಯೂ ಆಗಾಗ್ಗೆ ಕೂಡಿ ತೀರ್ಮಾನಕ್ಕೆ ಬಂದು, ಒದಗಿದ ಸನ್ನಿವೇಶಕ್ಕೆ ತಕ್ಕಂತೆ ತಮ್ಮ ಕಾರ್ಯ ಕಲಾಪಗಳನ್ನು ಹೊಂದಿಸಿಕೊಳ್ಳಬೇಕು. ಕೇಡು ಒದಗಿದ ಮೇಲೆ ನಿವಾರಣೋಪಾಯವನ್ನು ಹುಡುಕತೊಡಗುವುದಕ್ಕಿಂತ ಕೇಡಿನ ಸೂಚನೆ ಹೊಳೆದ ಕೂಡಲೆ ಮಾಡಬೇಕಾದ್ದನ್ನು ಮಾಡಿದರೆ ಅದಕ್ಕೆ ಮೊಳೆಯಲು ಆಸ್ಪದವಿಲ್ಲವಾಗುತ್ತದೆ. ಮುಖ್ಯವಾಗಿ ಎಲ್ಲಿಸಂತೆಯೇ ಇಲ್ಲಿಯೂ ಪರಸ್ಪರ ವಿಶ್ವಾಸ ಲೋಕವಿಸ್ತಾರವಾಗಿ ಹರಡಬೇಕು; ಕೈಯ ಮತ್ತು ಮನಸ್ಸಿನ ಧಾರಾಳ ಬೇಕು; ಸ್ವಂತಲಾಭವನ್ನೇ ಅಲ್ಲದೆ ಇತರ ಧನಮಂಡಲ ಉತ್ಪತ್ತಿ ಮಂಡಲಗಳ ಕ್ಷೇಮವನ್ನೂ ಸಾಧಿಸುವ ಪ್ರವೃತ್ತಿ ಹುಟ್ಟಿ ಬಲಿಯಬೇಕು. ಅಲ್ಲಿಯವರೆಗೂ ಆರ್ಥಿಕ ಪ್ರಪಂಚದ ತೊಡಕುಗಳೂ ಜಾಡ್ಯಗಳೂ ಹರಿಯುವ ಉಪಾಯವೂ ಭರವಸೆಯೂ ಇಲ್ಲ.

**ಅಂತರ್ ರಾಷ್ಟ್ರೀಯ ಸೆಂಟ್ರಲ್ ಬ್ಯಾಂಕು.** — ಒಳಪೇಟೆಯಲ್ಲಿ ಒಡೆಯನಂತೆ ಆಳುವ ಸೆಂಟ್ರಲ್ ಬ್ಯಾಂಕಿರುವ ಹಾಗೆ ಎಲ್ಲ ಸೆಂಟ್ರಲ್ ಬ್ಯಾಂಕುಗಳನ್ನೂ ಸದಸ್ಯರನ್ನಾಗಿ ಮಾಡಿಕೊಂಡು ಅಂತರ್ ರಾಷ್ಟ್ರೀಯ ಸೆಂಟ್ರಲ್ ಬ್ಯಾಂಕೊಂದು ಏರ್ಪಟ್ಟರೆ ಲೋಕವಿಸ್ತಾರವಾದ ಪ್ರಯೋಜನವಾಗುವುದು. ಅದೂ ಬ್ಯಾಂಕ್ ರೇಟು ಮತ್ತು ಪೇಟೆಯ ವ್ಯವಹಾರವನ್ನು ಹೂಡುತ್ತ, ಆಯಾ ದೇಶದ ಸೆಂಟ್ರಲ್ ಬ್ಯಾಂಕಿನ ಸಹಾಯದಿಂದ ಆಯಾ ದೇಶದ ಧನ ಮಂಡಲಕ್ಕೆ ನೆರವಾಗುತ್ತ, ಸ್ವಂತ ಲಾಭಕ್ಕೆ ಅವುಗಳೊಡನೆ ಸ್ಪರ್ಧೆಮಾಡದೆ, ಒಟ್ಟು ಪ್ರಪಂಚದ ಚಿನ್ನದ ನಿಧಿಯನ್ನು ಆಳುವ ಅಧಿಕಾರ ಪಡೆಯುವಂತಾದರೆ, ಅವರೆಲ್ಲರ ಸಾಲಗಳಿಗೂ ವಿಮೋಚನೆ ತರುವ ಏರ್ಪಾಡು

ಮಾಡುತ್ತ ವ್ಯವಹರಿಸಿದರೆ ಹಣಪ್ರಪಂಚಕ್ಕೆ ಸಂಬಂಧಿಸಿದ ಅನೇಕ ತೊಡಕು ತೊಂದರೆಗಳು ನಿವಾರಣೆಯಾಗುವುವು.*

* ಈಗ ಕೆಲವು ವರ್ಷಗಳಿಂದ (೧೯೩೦) ಬೇಸಲ್ ಎಂಬ ಪ್ರದೇಶದಲ್ಲಿ ಬ್ಯಾಂಕ್ ಆಫ್ ಇಂಟರ್‌ನ್ಯಾಷನಲ್ ಸೆಟ್ಲ್‌ಮೆಂಟ್ಸ್ (B I.S) ಎಂಬ ಒಂದು ಸಂಸ್ಥೆ ಏರ್ಪಟ್ಟು ಯೂರೋಪಿನ ರಾಷ್ಟ್ರಗಳವರು ಪರಸ್ಪರವಾಗಿ ತೆರಬೇಕಾಗಿರುವ ಯುದ್ಧದ ಸಾಲ, ಯುದ್ಧದ ದಂಡಗಳನ್ನು ಹರಿಸಿಕೊಡುತ್ತಲೂ ಇವರೆಲ್ಲರೂ ಅಮೇರಿಕದವರಿಗೆ ಸಲ್ಲಿಸಬೇಕಾಗಿರುವ ಸಾಲಗಳನ್ನು ಸಲ್ಲಿಸುತ್ತಲೂ ಇದೆ. ಇದರ ಸ್ವರೂಪವನ್ನೂ ರಚನೆಯನ್ನೂ ಇನ್ನಷ್ಟು ಚೆನ್ನಾಗಿ ತಿದ್ದಿ ಇದರ ಪ್ರಭಾವವನ್ನು ಒಟ್ಟು ಧನಮಂಡಲದ ಸರ್ವಸ್ವಕ್ಕೂ ಹರಡುವಂತೆ ಮಾಡಿದರೆ ಜಗತ್ತಿನ ಋಣಗಳನ್ನು ಸಾಧಿಸುವುದು ಮತ್ತಷ್ಟು ಸುಲಭವಾದೀತು.

# ಪ್ರಕರಣ ೧೦

## ಸರಕಾರದ ಹಣಕಾರ್ಯಗಳು

ಪ್ರತಿಯೊಂದು ದೇಶದ ಅರ್ಥಮಂಡಲವನ್ನೂ ರಾಜಕೀಯ ಸಾಮಾಜಿಕ ಜೀವನವನ್ನೂ ಕಾಪಾಡಿ ಜನದ ಕ್ಷೇಮವನ್ನು ಸಾಧಿಸುವ ಕೆಲಸ ಆ ದೇಶದ ಸರಕಾರದ ಮೇಲೆ ಬಿದ್ದಿರುತ್ತದೆ. ಅದನ್ನು ಸಾಧಿಸಲು ಅಶಕ್ತವಾದ ಸರಕಾರ ವ್ಯರ್ಥ. ದೇಶವನ್ನು ಆಳುವವರು ರಾಜರಾಗಲಿ, ಒಂದು ಶ್ರೀಮಂತ ಮಂಡಲಿಯವರಾಗಲಿ, ಪ್ರಜಾಪ್ರತಿನಿಧಿ ವರ್ಗದವರಾಗಲಿ ಚಿಂತೆಯಿಲ್ಲ. ರಾಜ್ಯ ಕೇಂದ್ರಾಧಿಕಾರಕ್ಕೆ ಒಳಪಟ್ಟಿರಲಿ, ಸಮ್ಮೇಳನ ಪದ್ಧತಿಗೆ ಒಳಪಟ್ಟಿರಲಿ ಚಿಂತೆಯಿಲ್ಲ. ಎಲ್ಲ ಸರಕಾರದ ಉದ್ದೇಶವೂ ಕರ್ತವ್ಯವೂ ಕರ್ಮವೂ ಪ್ರಜಾಸಂರಕ್ಷಣೆ;— ಪ್ರಜಾಹಿತ ಸಾಧನೆ. ಸರಕಾರ ಸಮಾಜದ ಕೈ; ರಾಷ್ಟ್ರದ ಕಣ್ಣು; ಪ್ರಜೆಗಳ ಪ್ರತಿನಿಧಿ; ಪ್ರಜಾಸೇವೆಗಾಗಿ ಪ್ರಜೆಗಳಿಂದ ಏರ್ಪಟ್ಟಿರುವ ಅಧಿಕಾರಿ ಮಂಡಲ; ಯಂತ್ರ.

**ಜನಜೀವನದಲ್ಲಿ ಸರಕಾರದ ಸ್ಥಾನ.** — ಆದ್ದರಿಂದಲೇ ಪ್ರಜೆಗಳು ಸರಕಾರಕ್ಕೆ ವಿಧೇಯರಾಗಿರುವುದು; ಅದರ ನ್ಯಾಯಕ್ಕೂ ಶಿಕ್ಷೆಗೂ ತಲೆಬಾಗುವುದು; ಅದರ ವೆಚ್ಚಕ್ಕೆ ಹಣ ಒದಗಿಸುವುದು; ಅದಕ್ಕೆ ತಮ್ಮ ಮೇಲೇ ಬದುಕಿಸುವ ಸಾಯಿಸುವ ಅಧಿಕಾರವನ್ನು ಕೊಟ್ಟಿರುವುದು; ಅದರ ತೀರ್ಮಾನದಂತೆ ಯುದ್ಧ ಶಾಂತಿಗಳನ್ನು ಸಾಧಿಸುವುದು. ಹೀಗೆ ಒಂದು ದೇಶದ ಅಖಂಡ ಹಿತಸಾಧನೆಗಾಗಿ ಏರ್ಪಟ್ಟಿರುವ ಸರಕಾರದ ಕಾರ್ಯರಂಗ ಜನಜೀವನದ ಎಲ್ಲ ಭಾಗಕ್ಕೂ ಸಂಬಂಧಿಸಿ ಪ್ರಭಾವಯುತವಾಗಿರುತ್ತದೆ. ಮೊತ್ತದಲ್ಲಿ ಈಗ ಎಲ್ಲೆಲ್ಲಿ ನೋಡಿದರೂ ಜನಸಾಮಾನ್ಯದ ಒಪ್ಪಿಗೆಗೆ ಅಧೀನವಾದ ರಾಷ್ಟ್ರಗಳೇ ಏರ್ಪಡುತ್ತಿರುವುದರಿಂದ ಸರಕಾರಕ್ಕೂ ಪ್ರಜೆಗಳಿಗೂ ಹಿತವಾದುದು ಒಂದೇ ಎಂದೂ ಅವುಗಳ ಹಿತ ಪರಸ್ಪರ ವಿರೋಧವಲ್ಲವೆಂದೂ ರಾಜ್ಯದ ಮುಖ್ಯಾಧಿಕಾರಿಯ ಆಯವ್ಯಯಗಳು ಬೇರೆ, ರಾಜ್ಯದ ಆಯವ್ಯಯ ವ್ಯವಸ್ಥೆ ಬೇರೆ

ಆಗಿದೆಯೆಂದೂ ಯಾವ ಕಾರ್ಯದ ಆವರಣವನ್ನು ಕಲ್ಪಿಸಿಕೊಟ್ಟರೆ ಪ್ರಜೆಯ ಅತ್ಯುತ್ತಮ ಶಕ್ತಿ ಬೆಳೆದು ಫಲಕಾರಿಯಾಗುವುದೋ—ದೇಹಶಕ್ತಿ ಮನಶ್ಶಕ್ತಿ ಕಾರ್ಯಶಕ್ತಿಗಳು ಪುಷ್ಟವಾಗಿ ಸರ್ವತೋಮುಖವಾಗಿ ಬೆಳೆಯ ಬಲ್ಲವೋ—ದೇಶದಲ್ಲಿ ಎಲ್ಲ ವರ್ಗದವರಿಗೂ ಸಮನಾದ ಅನುಕೂಲವೂ, ಸ್ವತಂತ್ರವೂ, ಅಧಿಕಾರವೂ, ನ್ಯಾಯವೂ ದೊರಕುವಂತೆ ಆಗುವುದೋ ಅಂತಹ ಗುರಿಯನ್ನಿಟ್ಟುಕೊಂಡು ನಡೆಯುತ್ತಿವೆಯೆಂದೂ ಎಣಿಸಿ ಮುಂದಿನ ಕೆಲವು ಸಂಗತಿಗಳನ್ನು ವಿವರಿಸಿದೆ.

**ಅಗತ್ಯವಾಗಿ ಮಾಡಬೇಕಾಗಿರುವ ಕೆಲಸ — ಹಣಕಾರ್ಯಗಳು. —** ಅತಿ ಕಡಮೆಯೆಂದರೆ ಸರಕಾರ ಪ್ರಜೆಗಳನ್ನು ಒಳಗಿನ ದಂಗೆ ಅವ್ಯವಸ್ಥೆಗಳಿಂದ ಪಾರುಮಾಡಿ ಜನರಿಗೆ ಸುರಕ್ಷಣೆ ಕೊಡಬೇಕು; ಹೊರಗಿನವರ ಉಪಟಳ ದಾಳಿಗಳ ಭಯವಿಲ್ಲದಂತೆ ಕಾಪಾಡಬೇಕು; ಅದಕ್ಕಾಗಿ ಪೊಲೀಸ್ ಶಾಖೆ, ಸೈನ್ಯ ಶಾಖೆ ಮತ್ತು ಆಡಳಿತ ವರ್ಗಗಳು ಏರ್ಪಡಬೇಕು. ಈಗಿನ ಜೀವನ ದಲ್ಲಿ ವರ್ಷ ವರ್ಷಕ್ಕೂ ಪ್ರಜಾಹಿತ ಕಾರ್ಯಗಳನ್ನು ಸರಕಾರದವರು ಹೆಚ್ಚು ಹೆಚ್ಚಾಗಿ ಕೈಕೊಳ್ಳಬೇಕಾಗಿ ಬರುತ್ತದೆಯಾದ್ದರಿಂದ ಇದು ಸರಕಾರದ ಕೆಲಸ, ಇದು ಅಲ್ಲ ಎಂದು ಹೇಳುವುದು ಕಷ್ಟವಾಗುತ್ತದೆ. ಈ ಎಲ್ಲ ಕಾರ್ಯಕ್ಕೂ ಹಣ ಬೇಕು. ಅದನ್ನು ಅವರಿಗೆ ಕೊಡಬೇಕಾ ದವರು ಯಾರು? ಜನ. ಅವರು ಕೊಡದಿದ್ದರೆ ಸರಕಾರಕ್ಕೆ ಹಣವೆಲ್ಲಿಂದ ಬಂದೀತು? ತನ್ನ ವೆಚ್ಚಕ್ಕೆ ಹಣ ಬೇಕು; ದೇಶದ ಸುರಕ್ಷಣೆಯನ್ನು ಸಾಧಿಸಲು ಹಣ ಬೇಕು; ಯುದ್ಧಾದಿ ಪ್ರಸಂಗಗಳು ಒದಗಿದರೆ ಅವನ್ನು ನಿರ್ವಹಿಸಲು ಹಣ ಬೇಕು; ಹಿತಕಾರ್ಯಗಳ ವಿಸ್ತರಣಕ್ಕೆ ಹಣ ಬೇಕು; ಕಾರ್ಯರಂಗ ಎಷ್ಟು ದೊಡ್ಡದಾದರೆ ಅಷ್ಟು ಹೆಚ್ಚು ಹಣ ಬೇಕಾಗುವುದು. ಅದರ ಹಣ ಸಂಗ್ರಹ ಮತ್ತು ವೆಚ್ಚಗಳು ದೊಡ್ಡ ಪರಿಣಾಮದವಾಗುವವು; ಆ ಕಾರ್ಯದಿಂದ ಅನೇಕ ಬಗೆಯ ಆರ್ಥಿಕ, ರಾಜಕೀಯ, ಸಾಮಾಜಿಕ, ಪರಿಣಾಮಗಳುಂಟಾಗುವವು. ಅವುಗಳೊಂದೊಂದಕ್ಕೂ ಹತ್ತಿರದ ಸಂಬಂಧ ಇದೆ. ಖಾಸಗಿ ವ್ಯಾಪಾರ, ಕೈಗಾರಿಕೆ, ಲೇವಾದೇವಿ ಪ್ರಪಂಚಕ್ಕೂ ಉತ್ಪತ್ತಿ ಮಂಡಲಕ್ಕೂ ಜನವರ್ಗದ ಹಿತಕ್ಕೂ ಸರಕಾರದ ಧನಕಾರ್ಯ ಗಳಿಗೂ ಬಹಳ ಹತ್ತಿರ ಸಂಬಂಧ ಏರ್ಪಡುತ್ತದೆ. ಆದ್ದರಿಂದ ಮುಂದುವರಿದ

ರಾಷ್ಟ್ರಗಳಲ್ಲಿ ಸರಕಾರಿ ವೆಚ್ಚಗಳು ಯಾವ ಮುಖವಾಗಿರುತ್ತವೆ? ಆ ವೆಚ್ಚಗಳಿಗೆ ಬೇಕಾಗುವ ಹಣವನ್ನು ಸರಕಾರ ಹೇಗೆ ಪಡೆಯುತ್ತದೆ? ನೇರವಾಗಿ ತಾನೇ ಸಂಗ್ರಹಿಸುತ್ತದೆಯೆ? ಯಾವುದಾದರೂ ಸಂಸ್ಥೆಯ ಮೂಲಕ ಸಂಗ್ರಹಿಸುವುದೆ? ಯಾವ ಯಾವ ವೆಚ್ಚಗಳ ಅಳತೆ ಎಷ್ಟಿರುವುದು ಸರಿ? ಅವುಗಳ ಪರಿಣಾಮಗಳು ಯಾವುವು? ಸರಕಾರದ ವರಮಾನದ ಬಾಬುಗಳು ಯಾವುವು? ವರಮಾನವನ್ನು ಕೂಡಿಸುವ ರೀತಿ ಹೇಗೆ? ಬೇರೆ ಬೇರೆ ರೂಪಗಳಲ್ಲಿ ಬರಮಾಡಿಕೊಳ್ಳಬೇಕಾಗಿರುವಾಗ ಗುರಿಯೂ ಸಾಧನವೂ ಯಾವ ಮುಖವಾಗಿರಬೇಕು? ಸರ್ವಸಮೃದ್ಧಿಯೆ? ಜನರ ತೆರಿಗೆ ತೆರುವ ಶಕ್ತಿ ಎಷ್ಟು ಎಂಬ ಲೆಕ್ಕವೆ? ಸರಕಾರದ ಕಾರ್ಯದಿಂದ ಯಾವ ಜನರಿಗೆ ಯಾವ ಪ್ರಯೋಜನ ದೊರೆಯುವುದು ಎಂಬ ಎಣಿಕೆಯ ಮೇಲೆಯೆ? ಸರಕಾರದ ಧನಕಾರ್ಯದಿಂದ ದೇಶದ ಉತ್ಪತ್ತಿ, ವಿನಿಮಯ, ವ್ಯಾಪಾರ, ಸಂಪತ್ತಿನ ಹಂಚಿಕೆ, ಫಲಭೋಗ ಇವಕ್ಕೆ ಯಾವ ಉತ್ತೇಜನ, ತಡೆ, ನಷ್ಟ ಉಂಟಾಗುವುವು?—ಎಂದು ಮುಂತಾಗಿ ವಿಚಾರ ನಡೆಯಬೇಕು. ಈ ಕಾರ್ಯಗಳಿಗೆ ಯಾವ ಅನುಕೂಲ ಹೆಚ್ಚಿಸುವಂತೆಯೂ, ಯಾವ ತೊಂದರೆ ಕಡಮೆಯಾಗುವಂತೆಯೂ, ವೆಚ್ಚ ಪದ್ಧತಿ — ವರಮಾನ ಪದ್ಧತಿ ಏರ್ಪಡಬೇಕು? ಇತರ ದೇಶಗಳ ವರ್ತನದಿಂದ ದೇಶದ ಒಳಗಿನ ಕೈಗಾರಿಕೆ, ಸರಕಾರದ ಹಣಕಾಸಿನ ಸ್ಥಿತಿ ಮತ್ತು ರಾಜಕೀಯ ವ್ಯವಸ್ಥೆ ಕೆಡದಂತೆಯೂ, ಎಲ್ಲ ಕಾರ್ಯಗಳ ಪರಮಾವಧಿ ಪ್ರಯೋಜನ ದೇಶಕ್ಕೆ ಒದಗುವಂತೆಯೂ ಹೇಗೆ ರಚಿಸಬೇಕು — ಎಂಬವು ಈ ಪ್ರಕರಣಕ್ಕೆ ಸಂಬಂಧಿಸಿದ ವಿಷಯಗಳು.

**ವೆಚ್ಚದ ತತ್ವ.** — ಈಗ ಯಾವ ದೇಶದಲ್ಲಿ ನೋಡಿದರೂ ಸರಕಾರಗಳ ವೆಚ್ಚ ಅನೇಕ ಕಾರಣಗಳಿಂದ ವರ್ಷೇ ವರ್ಷೇ ಹೆಚ್ಚುತ್ತಿದೆ. ವೆಚ್ಚ ಕಡಮೆ ಮಾಡಿಕೊಂಡು ರಾಷ್ಟ್ರಹಿತ ಕಾರ್ಯಗಳನ್ನು ಮಾಡದಿರುವುದಕ್ಕಿಂತ, ವೆಚ್ಚ ಏರಿದರೂ ಚಿಂತೆಯಿಲ್ಲ — ಆ ಕಾರ್ಯಗಳನ್ನು ಮಾಡಲೇಬೇಕು ಎಂಬ ಉದ್ದೇಶದಿಂದ ಬಹು ವೇಳೆ ವ್ಯಯವ್ಯವಸ್ಥೆ ಆಗುವುದು. ಕೆಲವು ಸಂಬಂಧಗಳಲ್ಲಿ ಸರಕಾರ ತಟಸ್ಥವಾಗಿರಲು ಸಾಧ್ಯವಿಲ್ಲ. ಅಸಾಮಾಜಿಕ ವ್ಯವಹಾರಗಳನ್ನು ನಿವಾರಿಸಿ, ದೀನದುರ್ಬಲರ ಉದ್ಧಾರಕ್ಕೆ

ನೆರೆಯಬೇಕಾಗುವದು. ಇತರ ರಾಜ್ಯಗಳವರೊಡನೆ ತಮಗೂ ತಮ್ಮ ದೇಶಸ್ಥರಿಗೂ ನಡೆಯುವ ಪೈಪೋಟಿಯಿಂದ ತಮ್ಮ ಬಲ ಕೀಳಾಗದಂತೆ ನೋಡಿಕೊಳ್ಳಬೇಕಾಗುವದು. ಸೊತ್ತದಲ್ಲಿ ಈಗಿನ ಆರ್ಥಿಕ ಮತ್ತು ರಾಜಕೀಯ ಜೀವನ ರಾಷ್ಟ್ರರಾಷ್ಟ್ರಗಳ ಸ್ಪರ್ಧೆಗೆ ಒಳಪಟ್ಟಿರುವದರಿಂದ ಆ ಪೈಪೋಟಿಯಲ್ಲಿ ತೇರ್ಗಡೆಯಾದ ಹೊರತು ನಿಸ್ತಾರವಿಲ್ಲವಾಗುವದು.

**ವೆಚ್ಚದ ವಿವರ– ಬಾಬುಗಳು.**—ರಾಜ್ಯ ಸಂರಕ್ಷಣಾ ಕಾರ್ಯಕ್ಕೆ; ಸುಖ ಸಂತೋಷ ಪುರೋಭಿವೃದ್ಧಿಗಳನ್ನು ಸಾಧಿಸುವ ಕಾರ್ಯಕ್ಕೆ ಎಂದು ವೆಚ್ಚವನ್ನು ಎರಡು ವಿಧವಾಗಿ ವಿಭಾಗಿಸುವರು.

**ಒಂದೊಂದು ಬಗೆಯ ವೆಚ್ಚದ ಫಲ ಒಂದೊಂದು ಬಗೆ.**—ಸೈನ್ಯದ ಸಜ್ಜು; ಪೋಲೀಸ್ ವ್ಯವಸ್ಥೆ ಇವು ಒಳದೇಶದ ಸಂರಕ್ಷಣೆಯ ಮಾರ್ಗ. ನ್ಯಾಯದ ಆಡಳಿತ ಏರ್ಪಟ್ಟ ಹೊರತು ಶಿಸ್ತು ಅಭ್ಯುದಯಗಳ ಹಾನಿ ಕಡಮೆಯಾಗುವ ಮಾರ್ಗವಿಲ್ಲದ್ದರಿಂದ ನ್ಯಾಯಶಾಖೆ ಏರ್ಪಡಬೇಕು. ದೇಶದ ಶ್ರೇಷ್ಠಾಧಿಕಾರಿ ಮತ್ತು ಇತರ ಸಿಬ್ಬಂದಿ, ಪರಿವಾರದ ವೆಚ್ಚ; ರಾಯಭಾರಿಗಳ ವೆಚ್ಚ; ಮುಲ್ಕಿ ನೌಕರವರ್ಗ; ಮಂತ್ರಿಮಂಡಲ, ಶಾಸನ ಶಾಖೆಗಳು;—ಸರಕಾರಿ ನೌಕರರ ಸಂಬಳ ಸಾರಿಗೆ, ಭತ್ಯ; ದೇಶದ ಸಾಲಗಳ ಅಸಲು ಬಡ್ಡಿಗಳ ತೆರಾಣಿ; ಸಾಲದ ಆಡಳಿತ ವೆಚ್ಚ; ವ್ಯಾಪಾರ ಉದ್ಯೋಗಗಳ ಉತ್ತೇಜನಕ್ಕೆ ನೇರವಾಗಿ ಮಾಡುವ ವೆಚ್ಚ; ನಾಣ್ಯದ ಚಲಾವಣೆ; ಕೈಗಾರಿಕೆ ಇಲಾಖೆ; ಅಂಚೆ, ಮುಂತಾದ ಇಲಾಖೆಗಳು — ಇವೆಲ್ಲಕ್ಕೂ ಸರಕಾರ ಹಣವನ್ನು ವೆಚ್ಚಮಾಡಬೇಕು. ಇನ್ನೊಂದುಕಡೆ ಜನಾರೋಗ್ಯ, ವಿದ್ಯಾಪ್ರಚಾರ, ನೌಕರರ ವಿಶ್ರಾಂತಿವೇತನ ವ್ಯವಸ್ಥೆ, ಬಡತನದ ನಿವಾರಣೆ, ನಿರುದ್ಯೋಗಿಗಳಿಗೆ ನೆರವು ಮುಂತಾಗಿ ವಿಚಾರ ಬಾಬುಗಳಿರುವವು. ಇವೆಲ್ಲದರ ಜೊತೆಗೆ ಜನವರ್ಗದಲ್ಲಿ ವಿಷಮತೆಗಳಾಗಲಿ ಅನ್ಯಾಯಗಳಾಗಲಿ ಮೊಳೆತು ಬೆಳೆಯದಂತೆ ಕಾರ್ಯ ಕೈಕೊಳ್ಳಬೇಕಾಗಿ ಬರುವದು. ಇವುಗಳಲ್ಲಿ ಒಂದೊಂದು ಬಗೆಯ ವೆಚ್ಚದ ಫಲ ಒಂದೊಂದು ರೀತಿಯಾಗಿರುತ್ತದೆ. ಉದಾ:—ಸಾಲದ ಅಸಲನ್ನೂ ಬಡ್ಡಿಯನ್ನೂ ಸರಕಾರ ಹಂಚುವದೆಂದರೆ, ಜನರು ತೆರಿಗೆಯ ಮೂಲಕ ತೆತ್ತ ಹಣ ಜನಕ್ಕೆ ಹಿಂದಿರುಗಿ ಬರುತ್ತದೆ. ಕೊಟ್ಟವರಿಗೇ ಅಲ್ಲದೆ ಇರಬಹುದು; ಆದರೆ ದೇಶದಲ್ಲಿ ಬೇರೊಂದು

ವರ್ಗದವರ ಕೈಗೆ ಸೇರಿ ದೇಶದಲ್ಲಿಯೇ ಉಳಿದೀತು. ಅದನ್ನು ಅವರು ಪುನಃ ವ್ಯಾಪಾರ ಕೈಗಾರಿಕೆಗಳಿಗೆ ಹೂಡುವಂತಾಗಬಹುದು. ರೈಲ್ವೆ, ನೀರಾವರಿ ಕೆಲಸ ಮುಂತಾದುವಕ್ಕಾಗಿ ವೆಚ್ಚಮಾಡಿದರೆ ಉತ್ತರೋತ್ತರ ಸಮಾಜದ ಸಂಪತ್ತು ಹೆಚ್ಚುವುದು. ಶಾಸ್ತ್ರಸಂಶೋಧನೆಗೂ, ಹೊಸ ಯಂತ್ರ ನಿರ್ಮಾಣಕ್ಕೂ ವಿದ್ಯಾಶಾಲೆಗೂ ವಿನಿಯೋಗವಾದರೆ ಜನರಿಗೆ ಬೇಕಾದ ತಿಳಿವಳಿಕೆಗೂ ಯಂತ್ರೋಪಕರಣ ನಿರ್ಮಾಣಕ್ಕೂ ಸಾಧನವಾಗುವುದು. ಪ್ರಜಾರೋಗ್ಯ, ಶಾಸ್ತ್ರ ಶಿಕ್ಷಣ, ನಿರುದ್ಯೋಗ ನಿವಾರಣೆ, ಕಾಯಿಲೆ ಮುಪ್ಪುಗಳ ವಿಮೆ, ಮುಂತಾದುವಕ್ಕೆ ವೆಚ್ಚವಾದರೆ ಪ್ರಜೆಗಳ ಜೀವನ ಸೌಕರ್ಯವೂ ಕ್ಷೇಮವೂ ಹೆಚ್ಚುವುವು. ಹಾಗಲ್ಲದೆ ಕೇವಲ ಆಡಳಿತದ ನಿಬ್ಬಂದಿ, ಸೈನ್ಯರಚನೆ, ಯುದ್ಧದ ಸಜ್ಜು, ಮುಂತಾದುವಕ್ಕೇ ವೆಚ್ಚದ ಬಹು ಭಾಗ ಹೋದರೆ ಅದರ ಪ್ರಯೋಜನ ಅಷ್ಟು ಸಫಲವಾಗುವುದಿಲ್ಲ.*

**ಇದಕ್ಕೆಲ್ಲ ವರಮಾನ ಎಲ್ಲಿಂದ ಬರಬೇಕು? — ಧನಾಧಿಕಾರಿಯ ಕಣ್ಣು.** — ಇಷ್ಟಕ್ಕೆಲ್ಲ ಹಣ ಸಂಗ್ರಹಿಸಬೇಕಾಗಿರುವಾಗ ಗೊತ್ತಾಗಿ ಎಷ್ಟನ್ನು ಬರಮಾಡಿಕೊಳ್ಳಬೇಕು? ಯಾವ ರೀತಿ ಕೂಡಿಸಬೇಕು? — ಎಂಬುದು ಮುಖ್ಯವಾಗುವುದು. ಕೆಲವರಿಗಾಗಿ ಸಂಪಾದನೆ; ಕೆಲವರಿಗಾಗಿ ವಿನಿಯೋಗ. ಯಾರಿಂದ ಎಷ್ಟು ತೆಗೆದುಕೊಳ್ಳುವುದು? ಯಾರಿಗಾಗಿ ಎಷ್ಟು ವೆಚ್ಚಮಾಡುವುದು? ವೆಚ್ಚದಿಂದ ಜನಸಾಮಾನ್ಯಕ್ಕೆಲ್ಲ ಪ್ರಯೋಜನ ಉಂಟೆ? ಬಡವರ ಪ್ರಯೋಜನದ ಕಡೆ ಹೆಚ್ಚು ಗಮನವೋ ಭಾಗ್ಯವಂತರ ಯೋಚನೆ ಮುಖ್ಯವೋ? ಎಂಬ ಯೋಚನೆ ಹಾಯುವಾಗ ಯಾವ ಸಹಾಯಕ್ಕಾಗಿ ವಿಶೇಷವಾಗಿ ಸರಕಾರ ಏರ್ಪಟ್ಟಿದೆಯೋ ಅವರ ಅನುಕೂಲ ಮುಖ್ಯ ಗುರಿಯಾಗುವುದು ಸಹಜವೇ. ಬಡವರಿಂದ ತೆಗೆದು ಧನಿಕರ ಧನಿಕತೆಯನ್ನು ಹೆಚ್ಚು ಮಾಡುವುದು ಅನ್ಯಾಯವೆಂದೂ, ಭಾಗ್ಯವಂತರಿಂದ ತೆಗೆದು ಬಡವರ ಬಡತನದ ಕಷ್ಟಗಳನ್ನು ನೀಗುವುದು ಅಧರ್ಮವಲ್ಲವೆಂದೂ ಎಣಿಕೆ ಬರುವುದೂ ಸಹಜವೇ. ಇಬ್ಬರಿಂದಲೂ ಹಣ ಎತ್ತುವಾಗ ಯಾರ ಕಷ್ಟ ಎಷ್ಟು ಎಂಬ ದೃಷ್ಟಿ ಇರಬೇಕಾಗುವುದು. ಏಕೆಂದರೆ ೫–೧೦ ರೂ. ಬೆಲೆ ಧನಿಕರಿಗೆ ಕಡಮೆ. ಬಡವನಿಗೆ ೫ ರೂಪಾಯೆಂದರೆ ಬಹಳ ದೊಡ್ಡ

* H. Dalton. Public Finance.

ಹೊತ್ತು. ಆದ್ದರಿಂದ ಹಣವನ್ನು ಕೂಡಿಸುವಾಗ ಅನೇಕ ಕಡೆ ಕಣ್ಣಿಡಬೇಕಾಗುತ್ತದೆ. ಅಂತು ಜನವರ್ಗದಲ್ಲಿನ ಸಕಲರ ಯೋಗಕ್ಷೇಮವನ್ನೂ ಸಾಧಿಸಬೇಕಾದುದು ಸರಕಾರಕ್ಕೆ ಮಾತ್ರ ಸುಲಭವಾದ್ದರಿಂದ ಆ ಕಾರ್ಯವನ್ನು ಅದರು ಅಗತ್ಯವಾಗಿ ಮಾಡಬೇಕಾಗಿರುವಾಗ, ವ್ಯಯ ಕೇವಲ ಸಂರಕ್ಷಣೆಗಾಗಿ ಆಗುತ್ತಿದೆಯೆ? ಜನರ ಉತ್ಪತ್ತಿಶಕ್ತಿ ಹೆಚ್ಚಲು ಸಹಕಾರಿಯಾಗಿದೆಯೆ? ಜನಸಾಮಾನ್ಯದಲ್ಲಿ ಸಂಪತ್ತು ಚೆನ್ನಾಗಿ ಹರಡುತ್ತಿದೆಯೆ? ಅಥವಾ ಅಂತಸ್ತು ಅಂತಸ್ತುಗಳ ಪ್ರಜಾವರ್ಗಕ್ಕಿರುವ ಅಂತರವನ್ನು ಕಡಮೆ ಮಾಡುತ್ತಿದೆಯೆ? ಎಂದು ಪರೀಕ್ಷಿಸಿ ಇಂದಿನ ಸುಖವನ್ನೂ ಅನುಕೂಲವನ್ನೂ ಮಾತ್ರವೇ ನೋಡದೆ ಮುಂದಾಲೋಚನೆಯಿಂದ ಮುಂದಿನ ತಲೆಗಳವರಿಗೂ ಅನುಕೂಲ ದೊರೆಯಲೆಂದು ಧನಾಧಿಕಾರಿ ಆಯವ್ಯಯ ವ್ಯವಸ್ಥೆ ಮಾಡಬೇಕಾಗುವುದು. ವ್ಯಯದಿಂದಲೂ ತೆರಿಗೆ ಪದ್ಧತಿಯಿಂದಲೂ ಒಂದು ಬಗೆಯ ಸಮಾಜದ ಸಮತೆಯನ್ನು ಸಾಧಿಸುವ ಪ್ರಯತ್ನ ಮಾಡುವುದು ಈಗಿನ ಪ್ರಜಾಪ್ರಭುತ್ವಗಳಲ್ಲಿ ನಡವಳಿಕೆ. ಹೀಗೆ ಸರಕಾರದ ಆಯವ್ಯಯ ವ್ಯವಸ್ಥೆಯಲ್ಲಿ ಕೇವಲ ಎಷ್ಟು ಕಡಮೆ ಖರ್ಚು ಮಾಡುವುದಕ್ಕಾಗಿ ಎಷ್ಟು ಕಡಮೆ ಜನರಿಂದ ಎಷ್ಟು ಕಡಮೆ ತೆರಿಗೆ ಸಂಗ್ರಹಿಸತಕ್ಕದ್ದು ಎಂಬುದಕ್ಕಿಂತಲೂ, ಎಷ್ಟು ಹೆಚ್ಚು ಜನರಿಗೆ ಎಷ್ಟು ಹೆಚ್ಚು ಉಪಯೋಗವನ್ನು ದೊರಕಿಸಬಹುದು, ಎಷ್ಟು ಕಡಮೆ ಜನರಿಗೆ ಎಷ್ಟು ಸ್ವಲ್ಪ ಕಷ್ಟನಷ್ಟಗಳಾಗುವಂತೆ ಏರ್ಪಡಿಸಬಹುದು ಎಂಬ ಗಮನ ಇರುತ್ತದೆ. ಅನೇಕ ವೇಳೆ ಧನಾಧಿಕಾರಿ ಆಯವ್ಯಯ ಪಟ್ಟಿಯ ವಿನ್ಯಾಸದ ಮೂಲಕ ಸಮಾಜ ಸಂಸ್ಕರಣಕ್ಕೆ ಕಾರಣನಾಗುವನು. ಆಗುವನೇನು?—ಆಗಬೇಕಾಗುವುದು. ಜನಜೀವನದಲ್ಲಿ ಈ ಎಲ್ಲ ಕಾರ್ಯಗಳ ಪ್ರಭಾವವೂ ಪರಿಣಾಮವೂ ಎಷ್ಟು ವ್ಯಾಪ್ತಿಯುಳ್ಳವೆಂದು ಈಗ ಅರ್ಥಮಾಡಿಕೊಳ್ಳಬಹುದು.

**ಆದಾಯದ ಮೂಲಗಳು — ಮುಖ್ಯ ವಿಭಾಗಗಳು.** — ಸರಕಾರದ ಆದಾಯ ಒಂದೇ ಬಗೆಯಲ್ಲಿ ಬರುವುದಿಲ್ಲ; ಒಂದೇ ರೂಪದಲ್ಲಿ ಸಂಗ್ರಹಿಸಲು ಶಕ್ಯವಾಗುವುದೂ ಇಲ್ಲ. (೧) ಸರಕಾರದ ಸ್ವಂತ ಆಸ್ತಿ (ಉದಾ:—ಭೂಮಿಕಾಣಿ, ಕಾಡು, ನದಿ, ನಾಲೆ, ಗಣಿ, ಇತ್ಯಾದಿ); ರೈತಾಪಿ ಜನರಿಗೆ ಕೊಟ್ಟ ಜಮೀನುಗಳ ಗುತ್ತಿಗೆ; ಕೊಂಡಿಟ್ಟಿರುವ ಆಸ್ತಿಪತ್ರಗಳು;

(೨) ವಿಶೇಷವಾಗಿ ಸರಕಾರದವರು ಕೈಕೊಂಡು ನಡಸುತ್ತಿರುವ ಕೆಲಸಗಳ ಆದಾಯ (ಉದಾ:—ರೈಲ್ವೆ, ದೀಪ, ನೀರು, ಅಂಚೆ, ಮುಂತಾದ ಸೌಕರ್ಯಗಳನ್ನು ಕಲ್ಪಿಸಿದ್ದರೆ ಅವುಗಳಿಂದ ಬರುವ ಆದಾಯ); (೩) ಅವರು ಮಾಡಿಕೊಡುವ ವಿಶೇಷ ಕೆಲಸಗಳಿಗೆ ಪ್ರತಿಯಾಗಿ ಜನರು ತೆರುವ ಹಣ (ಉದಾ:—ಸ್ಟಾಂಪು, ರೆಜಿಸ್ಟ್ರೇಷನ್ ವರಮಾನ); (೪) ತೆರಿಗೆ ತೆರಾಣೆ, ಸುಂಕ ಮುಂತಾದ ಕರಗಳ ಆದಾಯ; (೫) ಸಾಮಂತರೂ ಇತರರೂ ತೆರುವ ಕಪ್ಪಕಾಣಿಕೆ; ಯುದ್ಧ-ಜಯಗಳಲ್ಲಿ ಶತ್ರುಗಳಿಂದ ಬರುವ ದಂಡಗಳು; ಅಪರಾಧಿಗಳ ಮೇಲೆ ನ್ಯಾಯಾಧೀಶರು ಹೊರಿಸುವ ದಂಡಗಳು; (೬) ಹಣವನ್ನು ಚಲಾವಣೆಗೆ ತರುವುದರಿಂದ ಕೈಗೆ ಬರುವ ಹಣ; (೭) ಬಲಾತ್ಕಾರದಿಂದಲೊ ಒಪ್ಪಿಕೆಯಿಂದಲೊ ಜನರಿಂದ ತೆಗೆದುಕೊಂಡ ಸಾಲಗಳು; (೮) ಧನಿಕರ ಮರಣಶಾಸನ ಅಥವಾ ದಾನಗಳ ಮೂಲಕ ಖಜಾನೆಗೆ ಬರುವ ಹಣ, ಈ ಮುಖಗಳಲ್ಲಿ ಆದಾಯ ಕೈಗೆ ಬರುವುದು. ಎಂದರೆ, ಸ್ವಂತ ಆಸ್ತಿ ಉದ್ಯೋಗಗಳಿಂದ ಬರುವ ಹಣ; ತೆರಿಗೆ ಸುಂಕಗಳಿಂದ ಎತ್ತುವ ಹಣ; ಸಾಲಗಳಿಂದ ತೆಗೆಯುವ ಹಣ; ಇತರ ಬಾಬುಗಳವು ಎಂದು ವರಮಾನಗಳನ್ನು ವಿಂಗಡಿಸಬಹುದು.*

ಸ್ವಂತ ಆಸ್ತಿಗಳಿಂದ ಬರುವ ಹಣ ಸ್ವಲ್ಪ; ಯಾವ ವೆಚ್ಚಕ್ಕೆ ಬೇಕಾದರೂ ಸಾಲಗಳನ್ನೆತ್ತಿಯೇ ತೆಗೆದುಕೊಳ್ಳುವುದೂ ಯುಕ್ತವಾಗುವುದಿಲ್ಲ. ಚಲಾವಣೆಗೆ ತರುವ ಹಣದ ಮೊತ್ತವನ್ನು ಹೆಚ್ಚಿಸಿ ವೆಚ್ಚವನ್ನು ನಡಸಿಕೊಳ್ಳುವುದು (ಮುಂದೆ ವರ್ಣಿಸುವಂತೆ) ಧರ್ಮವಾಗುವುದಿಲ್ಲ. ಆದುದರಿಂದ ಸಾಧಾರಣವಾಗಿ ತೆರಿಗೆ ಸುಂಕಗಳ ಮೂಲಕವೇ ಬಹುತರವಾಗಿ ಆದಾಯವನ್ನು ಕೂಡಿಸುವುದು ವಾಡಿಕೆ.

**ತೆರಿಗೆಗಳು.**—ಎಷ್ಟು ಮೊತ್ತವನ್ನು ತೆರಿಗೆಯೆತ್ತಬಹುದು ಎಂಬಂಶದಲ್ಲಿ ಅಭಿಪ್ರಾಯ ಭೇದವಿರುತ್ತದೆ. ಜನರಿಗೆ ಸಂಪಾದನೆ ಎಷ್ಟಿದೆ? ಅವರ ವೆಚ್ಚಗಳ ಅಗತ್ಯ ಹೇಗೆ? ಎಂದರೆ ಅವರ ತೆರಿಗೆ ತೆರುವ ಶಕ್ತಿ ಎಷ್ಟು? ಯಾವ ತೆರಿಗೆಗಳಿಂದ ಜನರ ಮನಸ್ಸಿಗೆ ಹಿಂಸೆಯೂ ಅವರ ಸಂಪ್ರದಾಯಗಳಿಗೆ

* ಅವುಗಳನ್ನು ಜನರಿಂದ ಸಂಗ್ರಹಿಸುವುದಕ್ಕೆ ಎಷ್ಟು ವೆಚ್ಚವಾಗುವುದೋ ಆ ವೆಚ್ಚ ಕಳೆದಮೇಲೆ ಉಳಿಯುವ ಹಣವೇ ನಿವ್ವಳ ವರಮಾನ. ಯಾವ ಆದಾಯವನ್ನು ಕೂಡಿಸುವುದಕ್ಕೆ ಬಹಳ ಖರ್ಚಾಗುವುದೋ ಅಂಥದನ್ನು ಸರಕಾರಗಳವರು ದೊಡ್ಡದಾಗಿ ಎಣಿಸುವುದಿಲ್ಲ.

ವಿರೋಧವೂ ಆಗುವುವು? ಯಾವುದರಿಂದ ಹೆಚ್ಚು ಅನ್ಯಾಯವಾಗುವುದಿಲ್ಲ? —ಯಾವುದನ್ನು ನೇರವಾಗಿ ಜನರಿಂದ ಎತ್ತಬೇಕು? ಯಾವುದನ್ನು ಪರೋಕ್ಷವಾಗಿ ಎತ್ತಬೇಕು? ಯಾವುದರಿಂದ ಹೆಚ್ಚು ಉತ್ಪನ್ನದ ಹಣವನ್ನು ಕೂಡಿಸಬಹುದು? ಯಾವ ಪದಾರ್ಥಗಳ ಮೇಲೆ ಹೆಚ್ಚು ತೆರಿಗೆ ಹಾಕಿದಾಗ್ಯೂ ಜನರಿಗೆ ಬಹು ತೊಂದರೆಯಿಲ್ಲ, ಎಂಬ ಸಂಗತಿಗಳನ್ನು ಪರಿಶೀಲಿಸಿ ಅನ್ಯಾಯವೂ ಕೇಡೂ ಕಡಿಮೆಯಾಗುವಂತೆಯೂ, ಪ್ರಯೋಜನವೂ ಸಮತೆಯೂ ಹೆಚ್ಚಾಗುವಂತೆಯೂ ಏರ್ಪಡಿಸುವದು ರೂಢಿ. ಹೀಗೆ ಆರ್ಥಿಕ ದೃಷ್ಟಿಯಿಂದಲೂ, ಸಾಮಾಜಿಕ ದೃಷ್ಟಿಯಿಂದಲೂ ಸರಕಾರಗಳವರು ವರಮಾನವನ್ನು ಕೂಡಿಸುವರು.

**ತೆರಿಗೆಯ ಭಾರದ ಹಂಚಿಕೆ.**— ಅಲ್ಲದೆ ಒಬ್ಬನಲ್ಲಿ ತೆರಿಗೆಯ ಭಾರ ಬಹಳವಾಗಿ ಕಾಣದಂತೆ ಮಾಡಬೇಕಾದುದು ಅಗತ್ಯ. ಏಕೆಂದರೆ, ಅದರ ಹೊರೆ ಎಲ್ಲರ ಮೇಲೂ ದುರ್ಭರವಾಗಿ ಹೊತ್ತರೆ ಕ್ರಾಂತಿಗೆ ಕಾರಣವಾಗುವದು. ಇದನ್ನು ಎರಡು ರೀತಿ ಮಾಡಬಹುದು. ಅತಿ ಕಡಿಮೆ ಸಂಖ್ಯೆಯ ಜನರಿಗೆ ಅತಿ ಹೆಚ್ಚು ದರದ ತೆರಿಗೆ ಹಾಕುವದು; ಅಥವಾ ಅತಿ ಕಡಿಮೆ ದರದ ತೆರಿಗೆಯನ್ನು ಅತಿ ಹೆಚ್ಚು ಮಂದಿಯ ಮೇಲೆ ಹೊರಿಸಿ ಆ ಉತ್ಪನ್ನವನ್ನು ಸಂಪಾದಿಸುವದು. ಕಡಮೆ ಜನರಿಂದ ಹೆಚ್ಚು ದರದಲ್ಲಿ ಎತ್ತುವ ತೆರಿಗೆಗಳು ನೇರವಾದ ವರಮಾನದ ತೆರಿಗೆಗಳು ಮತ್ತು ಆಸ್ತಿಗಳ ಮೇಲೆ ಹೊರಿಸುವ ತೆರಿಗೆಗಳು. ಹೆಚ್ಚು ಜನರಿಂದ ಎತ್ತುವವು ಸಾಮಾನ್ಯವಾಗಿ ಪದಾರ್ಥಗಳ ಮೇಲಿಟ್ಟು ಪರೋಕ್ಷವಾಗಿ ತೆಗೆಯುವಂಥವು ಎನ್ನಬಹುದು. ಜನಗಳಿಂದ ನೇರವಾಗಿ ಎತ್ತುವಾಗ ವರಮಾನ ಸ್ವಯಾರ್ಜಿತವೆ, ಇತರರಿಂದ ಬಂದದ್ದೆ, ಕುಟುಂಬಿಯ ಸಂಪಾದನೆಯೆ, ಅವಿವಾಹಿತನ ಅಥವಾ ಕುಟುಂಬವುಳ್ಳವನ ವರಮಾನವೆ ಎಂಬ ಸಂಗತಿ ಮುಖ್ಯವಾಗುತ್ತದೆ. ಬಡವರನ್ನು ಹೆಚ್ಚು ಪೀಡಿಸದೆ ಸಾಹುಕಾರರನ್ನು ಸುಲಿಯದೆ ಎಲ್ಲರೂ ಅವರವರ ಯೋಗ್ಯತೆಗೂ ಶಕ್ತಿಗೂ ತಕ್ಕಂತೆ ತೆರುವ ವ್ಯವಸ್ಥೆ ಮಾಡಬೇಕು. ಅಲ್ಲಿಯೂ ತೆರಿಗೆ ಬದ್ಧ ಜನರೇ ನೇರವಾಗಿ ತೆರುವ ತೆರಿಗೆ ಕೆಲವು; ಇತರರ ತಲೆಯ ಮೇಲೆ ಬಿದ್ದು ಬರುವುವು ಕೆಲವು. ಹೀಗೆ ಒಂದು ದೇಶದಲ್ಲಿನ ತೆರಿಗೆಯ ಪದ್ಧತಿಯನ್ನು ಸಮಷ್ಟಿಯಲ್ಲಿ ನೋಡಿದರೆ

(ಉತ್ತಮವಾದ ಪದ್ಧತಿಯಲ್ಲಿ) ಎಲ್ಲ ಒಗೆಯವೂ ಇರುವುವು; ಒಂದರ ಕಷ್ಟನಿಷ್ಠುರ ಅನ್ಯಾಯಗಳನ್ನು ಇನ್ನೊಂದರ ಅನುಕೂಲ ಮೃದು ಮಾಡುವುದು. ವ್ಯಕ್ತಿಗಳಲ್ಲಿ ಆಢ್ಯರಾದ ಕೆಲವರಿಗೆ ಅನನುಕೂಲವಾದರೂ ಒಟ್ಟು ಸಮಾಜಕ್ಕೆ ಅನುಕೂಲ ದೊರೆತರೆ ಸರಿ ಎಂಬ ಭಾವ ಈ ಕಾಲದಲ್ಲಿ ಎಲ್ಲ ಕೋಶಾಧಿಕಾರಿಗಳಿಗೂ ಒಪ್ಪಿಗೆಯಾಗಿದೆ.

**ವರಮಾನದ ತೆರಿಗೆಗಳ ಸೌಲಭ್ಯ.**—ಪದಾರ್ಥಗಳ ಮೇಲೆಯೇ ಹಾಕಲಿ, ಜನರ ವರಮಾನದ ಮೇಲೆಯೇ ಹಾಕಲಿ, ನಿಜವಾಗಿ ತೆರಿಗೆಯನ್ನು ತೆರುವವರು ಮನುಷ್ಯರು. ಇಂಗ್ಲಂಡಿನಂಥ ದೊಡ್ಡ ಕೈಗಾರಿಕೆ ದೇಶಗಳಲ್ಲಿ ನೇರವಾಗಿ ಜನರಿಂದ ಎತ್ತುವ ತೆರಿಗೆಗಳೇ ಬಹಳ: ವರಮಾನದ ತೆರಿಗೆ, ಸಂಪತ್ತಿನಮೇಲೆ ಹಾಕಿದ ತೆರಿಗೆ, ಆಸ್ತಿಯ ಹಂಚಿಕೆ ಮಾಡುವಾಗಲೂ ಮರಣ ಶಾಸನಗಳ ಮೂಲಕವೂ ಬಂದ ಹಣದ ಮೇಲೆ ಎತ್ತುವ ತೆರಿಗೆ, ಹೆಚ್ಚು ಲಾಭದ ತೆರಿಗೆ, ಇವೇ ವಿಶೇಷ. ಇವನ್ನು ಎತ್ತುವುದು ಸುಲಭ. ಯಾರಿಗೆ ಎಷ್ಟು ಕಡಮೆ ಹಾಕಬೇಕು? ಯಾವ ರಿಯಾಯಿತಿ ತೋರಿಸಬೇಕು? ಯಾವ ಪ್ರಮಾಣದಲ್ಲಿ ತೆರಿಗೆ ಹೆಚ್ಚಿಸಬೇಕು? ಯಾವ ವ್ಯಕ್ತಿ-ವಿವೇಚನೆ ತೋರಬೇಕು? ಎಂಬುದು ಈ ಒಗೆಯ ತೆರಿಗೆಗಳಲ್ಲಿ ಸುಲಭ. ಕುಳದ ಶಕ್ತಿಗೆ ತಕ್ಕಂತೆ ತೆರಿಗೆ ಹಾಕುವುದೂ ಸಾಧ್ಯ. ತೆರುವವನ ಆಸ್ತಿ ಮೊತ್ತದಲ್ಲಿ, ಕಡಮೆಯಾದರೂ, ಆತನು ತನ್ನ ಕಿರುವೆಚ್ಚಗಳನ್ನು ಕಡಮೆಮಾಡಿ ಅಗತ್ಯವಾದುವನ್ನು ನೇರವಾಗಿ ಮಾಡಿಕೊಳ್ಳುವ ಅನುಕೂಲ ಒದಗುವುದು.*

**ತೆರಿಗೆಯನ್ನು ನಿಜವಾಗಿ ಹೊರುವವರು ಯಾರು?**—ತೆರಿಗೆಗಳು ಕಡೆಗೆ ಯಾರ ತಲೆಯಮೇಲೆ ಹೊರುವುವು (Incidence) ಎಂಬುದೂ ವಿಚಾರಿಸಬೇಕಾದ್ದು. ವರಮಾನದ ತೆರಿಗೆ ಮುಂತಾದ ನೇರವಾದ ತೆರಿಗೆಗಳು

---

* ಆದರೆ ಇಂತಹ ಕಾರ್ಯದಿಂದ ಉತ್ಪತ್ತಿ ಸಂಪದಕ್ಕೆ ಒದಗುವ ಬಂಡವಾಳ ಕಡಮೆಯಾಗದಂತೆ ಮಾತ್ರ ನೋಡಿಕೊಳ್ಳಬೇಕು. ಸಂಪಾದಿಸಿದ್ದರಲ್ಲಿ ದೊಡ್ಡ ಭಾಗವನ್ನು ಸರಕಾರಕ್ಕೆ ತೆರಿಗೆಯಾಗಿ ಅರ್ಪಿಸಬೇಕೆಂದು ತಿಳಿದರೆ ಸಂಪಾದನೆಯ ಇಚ್ಛೆ ಕಡಮೆಯಾದೀತು, ಕೆಲಸ ಮಾಡುವ ಮತ್ತು ಹಣ ಕೂಡಿಸುವ ಬುದ್ಧಿಯೂ ಶಕ್ತಿಯೂ ಎರಡೂ ಕಡಮೆಯಾದಾವು. ದೇಶದ ಎಲ್ಲ ಉತ್ಪತ್ತಿ ಕಾರ್ಯವನ್ನೂ ಆಸ್ತಿಗಳನ್ನೂ ಸರಕಾರದ ಆಡಳಿತಕ್ಕೇ ತೆಗೆದುಕೊಂಡು ಸಮಾಜ ಸಮತೆಯನ್ನು ಸಾಧಿಸುವ ರಷ್ಯಾ ಅಂಥ ರಾಷ್ಟ್ರಗಳ ಮಾತು ಬೇರೆ.

ದೇಶದ ಉತ್ಪತ್ತಿಕರಣಗಳನ್ನೆಲ್ಲ ಸರಕಾರದವರೇ ಇಟ್ಟುಕೊಂಡು ಎಲ್ಲ ಲಾಭಗಳನ್ನೂ ತಾವೇ ಉಪಯೋಗಿಸುವ ರಾಜ್ಯವ್ಯವಸ್ಥೆಯನ್ನು ಇಲ್ಲಿ ಕುರಿತಿಲ್ಲ.

ಸಾಧಾರಣವಾಗಿ ಯಜಮಾನನ ತಲೆಯಮೇಲೆಯೆ ಬೀಳುವುವು; ಪದಾರ್ಥಗಳ ಮೇಲೆ ಎತ್ತುವ ಕರಗಳು ಬಹುವಾಗಿ ಇತರರ ಮೇಲೆ—ಅವನ್ನು ಕೊಂಡು ತಿನ್ನುವವರ ಮೇಲೆ ಹೊರುವುವು. [ಉದಾ.—ಹೊಗೆಸೊಪ್ಪಿನ ಮೇಲೆ, ಹೆಂಡದ ಮೇಲೆ ತೆರಿಗೆ ಹಾಕಿದರೆ ತೆರಿಗೆಯ ಉತ್ಪತ್ತಿ ಕಡಮೆಯಾಗಬಹುದು, ಅಥವಾ ಅವುಗಳ ಸೇವನೆ ಕಡಮೆಯಾಗಬಹುದು; ನಿಷ್ಕರ್ಷೆಯಾಗಿ ಇಂಥವರ ತಲೆಯ ಮೇಲೆಯೆ ಬೀಳುವುದೆಂಬುದನ್ನು ವಿಷಯದ ಒಳಹೊಕ್ಕು ತಿಳಿಯಬೇಕಾಗುವುದು. ಉತ್ಪತ್ತಿಕಾರರೂ ಸೇವಿಸುವವರೂ ಇಬ್ಬರೂ ಅಷ್ಟಷ್ಟು ಹೊರಬಹುದು. ಉತ್ಪತ್ತಿಕಾರರು ಬೇರೆ ಉದ್ಯೋಗಕ್ಕೆ ಹೋಗಿ, ಇವರು ಸೇವನೆಯನ್ನು ಬಿಟ್ಟರೆ ತೆರಿಗೆಗೆ ವರಮಾನವಿಲ್ಲವಾಗಿ ತೆರಿಗೆಯನ್ನು ಹಾಕಿದ ಸರಕಾರ ಬೋಲುಮುಖ ಹಾಕಬೇಕಾಗುವುದು. ಸೇವಿಸುವವನಿಗೆ ಬೇರೆ ಪದಾರ್ಥ—ಸಾರಾಯಿ, ಅಫೀಮು, ಇತ್ಯಾದಿ—ಸಿಕ್ಕದಿರುವಾಗ ತೆರಿಗೆ ಸಾಧಾರಣವಾಗಿ ಅವನ ಮೇಲೆ ಬೀಳುವುದು.] ದಿನಚರಿಯ ಆವಶ್ಯಕ ಪದಾರ್ಥಗಳ ಮೇಲೆ ಎತ್ತುವ ತೆರಿಗೆಯನ್ನು ತಿನ್ನುವ ಜನರು ತೆರುವರು. ಯಾವ ಪದಾರ್ಥದ ಉತ್ಪತ್ತಿಯೂ ಭೋಗವೂ ಅದರ ಬೆಲೆ ಏರಿದಂತೆ ಏರಿ ಇಳಿದಂತೆ ಇಳಿಯುವುವೊ ಅಲ್ಲಿ ತೆರಿಗೆ ಉತ್ಪತ್ತಿಕಾರರ ಮೇಲೂ ಸೇವಿಸುವವರ ಮೇಲೂ ಹಂಚಿ ಬೀಳುವುದು.

ತೆರಿಗೆ ಬಿದ್ದ ಪದಾರ್ಥವನ್ನು ಅನೇಕರು ಉತ್ಪತ್ತಿಮಾಡುತ್ತ ಅವರವರಲ್ಲಿಯೇ ವ್ಯಾಪಾರದ ಸ್ಪರ್ಧೆ ಬಹಳವಿದ್ದರೆ, ತೆರಿಗೆಯಲ್ಲಿ ಬಹು ಭಾಗವನ್ನು ಉತ್ಪತ್ತಿಕಾರರೂ ವ್ಯಾಪಾರಗಾರರೂ ಹೊರುವಂತಾಗುವುದು. ದೇಶಿ ವಿದೇಶಿ ವ್ಯಾಪಾರಗಾರರು ಸ್ಪರ್ಧಿಸುವಾಗ ತೆರಿಗೆಯ ಬಹು ಭಾಗವನ್ನು ಹೊರಗಿನವರೇ ಹೊರುವಂತೆ ಏರ್ಪಡಿಸುವುದೂ ಉಂಟು. ಉತ್ಪತ್ತಿಯ ಅಥವಾ ವ್ಯಾಪಾರದ ಸರ್ವಾಧಿಕಾರವಿರುವಲ್ಲಿ ಸಾಧಾರಣವಾಗಿ —ಪದಾರ್ಥದ ಬಳಕೆಯೇ ಕಡಮೆಯಾದ ಹೊರತು ಅಥವಾ ಬದಲು ಪದಾರ್ಥ ಸಿಕ್ಕುವವರೆಗೂ—ಉಪಯೋಗಿಸುವವರೇ ಹೆಚ್ಚಾಗಿ ಹೊರಬೇಕಾಗುವುದು.

ಸಾಮಾನುಗಳ ಮೇಲೆ ಎತ್ತುವ ತೆರಿಗೆಗಳು ಬಡವರ ಮೇಲೆ ಅವರ ಶಕ್ತಿಗೆ ಮೀರಿ ಬೀಳುವುವೆನ್ನಬಹುದು. ಯಾವ ದೇಶದಲ್ಲಿ ಪದಾರ್ಥಗಳ

ಮೇಲಿನ ತೆರಿಗೆಗಳೇ ವಿಶೇಷವಾಗಿ ಕಂಡುಬರುವುವೋ ಅಲ್ಲಿನ ಹೊರೆ ಸಾಧಾರಣರ ಮೇಲೆ ಹೆಚ್ಚಾಗಿ ಬೀಳುವುದು.* ಆದರೆ ಅಂಥವರೂ ಸರಕಾರದ ಖಜಾನೆಗೆ ಸ್ವಲ್ಪ ಸಂಪಾಯವನ್ನು ಮಾಡಬೇಕಾದುದು ಯುಕ್ತವೆಂದು ತೋರಿದಾಗ ಈ ರೀತಿ ವಿಶೇಷವಾಗಿ ಸಲ್ಲಿಸಿಕೊಳ್ಳುವುದು ಮೇಲು. ಅದು ತೆರಿಗೆಯಂತೆ ಕಾಣುವುದೂ ಇಲ್ಲ. ಕೊಳ್ಳುವ ಪದಾರ್ಥದ ಬೆಲೆ ಮೊದಲಿಗಿಂತಲೂ ಸ್ವಲ್ಪ ಹೆಚ್ಚಾಗುವುದು. ಅತಿ ಹೆಚ್ಚಾಗದಿರುವವರೆಗೂ ಅವರೂ ಅದಕ್ಕೆ ಹೊಂದಿಕೊಳ್ಳುವರು. ಈ ಸಂಬಂಧದಲ್ಲಿ ಯಾವ ಯಾವ ಪದಾರ್ಥದ ಸೇವನೆ ಯಾವ ಯಾವ ಜನ ವರ್ಗಕ್ಕೆ ತೊಂದರೆ ಉಂಟುಮಾಡುವುದು ಎಂಬುದನ್ನು ಸರಕಾರದವರು ನೋಡಬೇಕು. ಒಟ್ಟಿನಲ್ಲಿ ವರಮಾನದ ತೆರಿಗೆ, ಆಸ್ತಿಗಳ ತೆರಿಗೆ, ಸಾಮಾನುಗಳ ಮೇಲಿನ ತೆರಿಗೆ ಮುಂತಾದುವೆಲ್ಲ, ಕರಪದ್ಧತಿಯಲ್ಲಿರುತ್ತವೆ. ತೆರಿಗೆಯ ಭಾರವನ್ನು ಲೆಕ್ಕಮಾಡುವಾಗ ಸ್ಥೂಲವಾಗಿ ಕಾಣಿಸದ ಅನೇಕ ಸಂಗತಿಗಳು ಗಣನೆಗೆ ಬರುವುವು ಎಂಬುದನ್ನೂ ನೆನಪಿನಲ್ಲಿಡಬೇಕು.

ಪ್ರಜಾಪ್ರಭುತ್ವವಿರುವ ಕಡೆ ನೇರವಾಗಿ ಧನಿಕರ ಮೇಲೆ ಬೀಳುವ ತೆರಿಗೆಗಳು ಅನೇಕ. ಆ ಹಣ ಬಡವರ ಪುರೋಭಿವೃದ್ಧಿಗಾಗಿ ವಿನಿಯೋಗವಾಗುವುದು. ಇದನ್ನು ಕಂಡು ಕೆಲವರು ಅಗಸನ ಕತ್ತೆಯನ್ನು ದೊಂಬನ ಉಪಯೋಗಕ್ಕೇಕೆ ಕೊಡಬೇಕು? ಇವರು ಸಂಪಾದಿಸಿದ ಹಣದಿಂದ ಅಲಸರೂ ಅಯೋಗ್ಯರೂ ಏಕೆ ಪ್ರಯೋಜನ ಹೊಂದಬೇಕು?—ಅದೂ ಹೆಚ್ಚು ಪ್ರಮಾಣದಲ್ಲಿ ತೆರಿಗೆಯನ್ನು ತೆತ್ತು? ಎಂದು ಕೇಳುವುದುಂಟು. ಧನಿಕರು ಸರಕಾರದ ಸಾಲಪತ್ರಗಳನ್ನು ಕೊಂಡಿಟ್ಟುಕೊಂಡಿರುವುದರಿಂದ ಸರಕಾರದಿಂದ ಬಡ್ಡಿ ಸಲ್ಲಿಸಿಕೊಳ್ಳುವವರು. ಜನರಿಗೆ ಖಾಸಗಿ ಆಸ್ತಿ, ಆಸ್ತಿ ವಿಭಾಗ, ಒಪ್ಪಂದ ಸ್ವಾತಂತ್ರ್ಯ, ಮರಣ ಶಾಸನಗಳ ಹಕ್ಕು, ಮುಂತಾದುವನ್ನು ಏರ್ಪಡಿಸಿರುವವರು ಸರಕಾರದವರು. ತಂದೆಯೋ ತಾತನೋ ದೂರದ ಬಂಧುವೋ ಬಿಟ್ಟುಹೋದ ಆಸ್ತಿಯನ್ನು ಸುಮ್ಮನೆ

* ಅವು ಜನಸಾಮಾನ್ಯರ ದಿನಚರಿ ಸಾಮಗ್ರಿಗಳಾಗಿದ್ದರೆ. ಕೇವಲ ಭೋಗಸಾಮಗ್ರಿಗಳಾಗಿಯೋ (Luxuries) ಭಾಗ್ಯವಂತರು ಲಾಲಸತೆಗೆ ಬಳಸುವ ಪದಾರ್ಥಗಳೋ ಆದರೆ, ಎಣಿಕೆ ಬೇರೆ.

ಒಂದು ಕಡೆ ಸುಖವಾಗಿ ಕುಳಿತು ತಿನ್ನುವವರಿಗೂ ದುಂದುಮಾಡುವವರಿಗೂ, ದೇಶದ ಉದ್ಯೋಗಗಳಿಂದ ಎತ್ತಿ, ಕೆಲಸ ಮಾಡುವವರ ನೆತ್ತರಂತಿರುವ ಹಣವನ್ನು ಸಲ್ಲಿಸುತ್ತ ಹೋಗುವುದು ಧರ್ಮವಲ್ಲ ಎಂಬುದು ಸಮಾಜವಾದಿಗಳ, ಮತ್ತು ಬಹುತರ ಈಗಿನ ಎಲ್ಲ ಧನಶಾಸ್ತ್ರಜ್ಞರ ಮತ. ಅವಸರದ ಒತ್ತಿನಲ್ಲಿಯೂ ರಾಷ್ಟ್ರದ ಕಷ್ಟ ಸಮಯದಲ್ಲಿಯೂ ಹೊರಗೆ ಯುವಕಜನ ಪ್ರಾಣಗಳನ್ನು ಬಲಿಕೊಡುತ್ತಿರುವಾಗ ಹಣವಿದ್ದವರು ಸರಕಾರಕ್ಕೆ ಹೆಚ್ಚು ಬಡ್ಡಿಗೆ ಸಾಲಕೊಟ್ಟಿದ್ದರು. ಅವಾಂತರ ಕಳೆದು ದೇಶ ಚೇತರಿಸಿಕೊಳ್ಳಲು ತೊಳಲುತ್ತಿರುವಾಗಲೂ ಇತರರು ಹಿಂದಿನಂತೆ ಸಂಪದಾರ್ಜನೆಯಲ್ಲಿ ಮೈಮುರಿದು ಕೆಲಸಮಾಡುತ್ತಿರುವಾಗಲೂ ಸಾಲಪತ್ರಗಳ ಒಡೆತನದಿಂದ ಇಂಥ ಜನ ಆಲಸರಾಗಲು ಅಧಿಕಾರ ಪಡೆದಿರುತ್ತಾರೆ. ದುಡಿಯುವವರಿಂದಲೂ, ಮುಂದೆ ದೇಶದಲ್ಲಿ ಹುಟ್ಟುವ ಮಕ್ಕಳಿಂದಲೂ ಇಂಥವರ ಪ್ರಯೋಜನಕ್ಕಾಗಿ ತೆರಿಗೆ ತೆಗೆಸುವುದು ಹೇಗೆ ನ್ಯಾಯ? —ಎನ್ನುವರು. ಅದು ಹೇಗಾದರೂ ಇರಲಿ; ಈ ಬಡ್ಡಿಯ ವರಮಾನ ಸಾಮಾನ್ಯವಾಗಿ ಧನಿಕರಿಗೇ ಹೋಗುವುದರಿಂದಲೂ ಆ ವರಮಾನದ ಮೇಲೆ ಹಲವು ವೇಳೆ ಸರಕಾರ ತೆರಿಗೆಯೆತ್ತುವುದಿಲ್ಲವೆಂದು ಕರಾರುವಾಗ್ದಾನ ಮಾಡುವುದರಿಂದಲೂ ಧನಿಕರ ಮೇಲೆ ನೇರವಾಗಿ ಎತ್ತುವ ತೆರಿಗೆಯ ಭಾರ ಒಟ್ಟಿನಲ್ಲಿ ಅತಿಯಾಗದು.

## ಸರಕಾರಗಳ ಸಾಲ

**ಸರಕಾರಕ್ಕೇಕೆ ಸಾಲ?** — ಜನರ ಹಾಗೆಯೇ ಸರಕಾರಗಳೂ — ಕೈಗೆ ಬರುವ ಆದಾಯ ವೆಚ್ಚಕ್ಕೆ ಸಾಲದಾಗ, ವೆಚ್ಚವನ್ನು ಕಡಮೆ ಮಾಡುವುದು ಶಕ್ಯವಲ್ಲದಿರುವಾಗ ಸಾಲವೆತ್ತುವ ಪ್ರಯತ್ನ ಮಾಡುವುವು. ಬ್ಯಾಂಕುಗಳ ಪ್ರಾಬಲ್ಯವೂ ಅವು ಉತ್ಪತ್ತಿಮಾಡುವ ಲೆಕ್ಕದ ಸಾಲದ ಏರ್ಪಾಡೂ ಹಣದ ಪೇಟೆಯ ವ್ಯವಸ್ಥೆಯೂ ಈಗಿನಂತಿಲ್ಲದಿರುತ್ತಿದ್ದ ಕಾಲದಲ್ಲಿ ಸರಕಾರಗಳಿಗೆ ಸಾಲವಿರುತ್ತಿರಲಿಲ್ಲ. ಯುದ್ಧ ಸಮಯಕ್ಕೊ, ರಾಜರ ವೆಚ್ಚಗಳಿಗೊ ಬಹಳವಾಗಿ ಹಣ ಬೇಕಾಗಿದ್ದರೆ ಧನಿಕರಿಂದ ಒಂದು ವಿಶೇಷ ಬಗೆಯ ತೆರಿಗೆಯನ್ನೆತ್ತುತ್ತಿದ್ದರು; ಬಲಾತ್ಕಾರದಿಂದ ಸಾಲವನ್ನು

ತೆಗೆಯುತ್ತಿದ್ದರು; ಮೇಸ್ತ್ರಿಗಳಿಂದ ಕೆಲಸ ಮಾಡಿಸಿಕೊಂಡು ಹಣವನ್ನು ಆಮೇಲೆ ಕೊಡುವೆವೆನ್ನುತ್ತಿದ್ದರು; ಅಥವಾ ಅರಮನೆಯ ಜವಾಹಿರಿಯನ್ನೂ ರಾಜನ ಆಸ್ತಿಪಾಸ್ತಿಗಳನ್ನೂ ಅಡವಿಟ್ಟೋ ಇಲ್ಲವಾದರೆ ಅರಸನ ಸ್ವಂತ ನಂಬಿಕೆಯ ಮೇಲೊ ಸಾಲವೆತ್ತುತ್ತಿದ್ದರು; ಸಾಹುಕಾರರು ಶೆಟ್ಟಿ ವರ್ತಕರು ಮುಂತಾದವರನ್ನು ಸುಲಿದು ದುಡ್ಡನ್ನು ಸಂಗ್ರಹಿಸುವ ವಾಡಿಕೆಯಿತ್ತು. ಬ್ಯಾಂಕುಗಳ ಕಾರ್ಯರಂಗ ವಿಸ್ತಾರವಾಗಿ ಸರಕಾರದ ಆಡಳಿತಕ್ಕೂ ಅರಸರ ಆಯವ್ಯಯ ವ್ಯವಹಾರಕ್ಕೂ ಪ್ರತ್ಯೇಕವಾದ ಏರ್ಪಾಡು ಉಂಟಾಗಿ ಸರಕಾರದ ಸ್ವಾಸ್ಥ್ಯ ಸ್ವಾಧೀನತೆಗಳಿಗೆ ಪ್ರಭಾವ ಹೆಚ್ಚಿದಂದಿನಿಂದ ಈ ಸಾಲದ ವ್ಯವಹಾರ ಬೇರೆ ರೂಪಕ್ಕೆ ತಿರುಗಿತೆನ್ನಬೇಕು. ಈಗ ಸಾಲವಿಲ್ಲದ ಸರಕಾರವೇ ಇಲ್ಲ; ಸರಕಾರದ ಸಾಲಗಳು ವರ್ಷೇ ವರ್ಷೇ ಮೊತ್ತದಲ್ಲಿ ಹೆಚ್ಚುತ್ತಿರುವುವು. ಆ ಮೊತ್ತ ಎಷ್ಟು? ಯಾವ ರೂಪದಲ್ಲಿದೆ? ಅದರಲ್ಲಿ ಆರ್ಥಿಕ ಮಂಡಲಕ್ಕೆ ಪ್ರಯೋಜನಕರವಾದ ಭಾಗ ಯಾವುದು? ಅಲ್ಲದ್ದು ಯಾವುದು? ಸಾಲವನ್ನು ಶಾಂತಿಕಾಲಗಳಲ್ಲಿಯಾಗಲಿ ಯುದ್ಧಕಾಲಗಳಲ್ಲಿಯಾಗಲಿ ಯಾವ ಉದ್ದೇಶದಿಂದ ಹೇಗೆ ಎತ್ತುವರು? ಸಾಲಕ್ಕೆ ವರ್ಷಂಪ್ರತಿ ವೆಚ್ಚ ಎಷ್ಟು? ಅಸಲನ್ನೂ ಬಡ್ಡಿಯನ್ನೂ ತೀರಿಸಲು ಸರಕಾರದವರು ಯಾವ ಏರ್ಪಾಡುಗಳನ್ನು ಮಾಡುವರು? ಸರಕಾರದ ಸಾಲಗಳಿಂದಲೂ ಅವನ್ನು ಹರಿಸುವ ಕ್ರಮದಿಂದಲೂ ನೀತಿಯಿಂದಲೂ ದೇಶದ ಉದ್ಯೋಗ, ಉತ್ಪತ್ತಿಕಾರ್ಯ, ಸಮಾಜದಲ್ಲಿ ಸಂಪತ್ತಿನ ಹಂಚಿಕೆ, ವ್ಯಾಪಾರ ಕೈಗಾರಿಕೆಗಳಿಗೆ ಹಣ ಒದಗುವ ಸೌಲಭ್ಯ— ಇವುಗಳ ಮೇಲೆ ಯಾವ ಯಾವ ಪರಿಣಾಮ ಉಂಟಾಗುವುದು? ಬಡ್ಡಿಯ ದರ, ಧಾರಣೆವಾಸಿ, ವಿದೇಶಿ ವ್ಯಾಪಾರ—ಇವುಗಳಲ್ಲಿ ಯಾವ ವ್ಯತ್ಯಾಸಗಳುಂಟಾಗುವುವು? ಎಂಬ ಸಂಗತಿಗಳಲ್ಲಿ ಕೆಲವನ್ನು ಇಲ್ಲಿ ಹೇಳಲಾಗುವುದು.

**ಅಗತ್ಯ.**—ವೆಚ್ಚವನ್ನು ಒಂದು ಹದದಲ್ಲಿ ಇಟ್ಟುಕೊಳ್ಳುವುದು ಅಗತ್ಯವಾದರೂ, ಅತ್ಯಗತ್ಯ ವೆಚ್ಚಗಳಿಗೇ ಸಾಧಾರಣ ವರಮಾನ ಯಾವೊಂದು ಕಾಲದಲ್ಲಾಗಲಿ ಸಾಲದೆ ಹೋಗಬಹುದು.* ಸರಕಾರದ ಆಸ್ತಿಗಳಿಂದಲೂ ತೆರಿಗೆಗಳಿಂದಲೂ ಬರುವ ಆದಾಯದಲ್ಲಿ ಕೊರತೆ ಬಂದು ವೆಚ್ಚವನ್ನು

* ಅಂತಹ ಸಮಯಗಳಲ್ಲಿಯೇ ಬೇರೆ ಉಪಾಯವಿಲ್ಲದೆ ಸಾಲ ಮೊದಲಾಗುವುದು.

ಕಡ್ಡಾಯವಾಗಿ ಮಾಡಲೇಬೇಕಾದರೆ ಅದಕ್ಕೆ ಹೇಗಾದರೂ ಹಣ ಹುಟ್ಟಿಸ
ಬೇಕು. ಮಳೆಬೆಳೆ ಸರಿಯಾಗದಿರುವುದು; ಎಲ್ಲೆಲ್ಲೂ ರಾಜಕೀಯ ಕ್ರಾಂತಿ
ಗಳಾಗಿ ವ್ಯಾಪಾರ ಕೈಗಾರಿಕೆಗಳಿಗೆ ನಷ್ಟವೂ ತಡೆಯೂ ಬರುವುದು;
ಎಣಿಕೆಗಿಂತಲೂ ತೆರಿಗೆಯ ಉತ್ಪತ್ತಿ ಕಡಮೆಯಾಗುವುದು; ಧಾರಣೆವಾಸಿ
ಅತಿಯಾಗಿ ಇಳಿಯುವುದು ಅಥವಾ ಏರುವುದು; ವಿದೇಶಿ ವ್ಯಾಪಾರದಲ್ಲಿ
ಇತರರ ಪೈಪೋಟಿಯಿಂದಲೊ, ಮೊದಲಿದ್ದ ಪೇಟೆಗಳು ಸ್ವತಂತ್ರವಾಗು
ವುದರಿಂದಲೊ, ಹೊರಗಿನವರ ಧನನೀತಿ ರಾಜನೀತಿಗಳಲ್ಲಿ ವ್ಯತ್ಯಾಸವಾಗು
ವುದರಿಂದಲೊ ನಷ್ಟ ಸಂಭವಿಸುವುದು; ಕ್ಷಾಮ ಪೀಡೆಗಳಿಂದಲೂ, ಕಾಮ
ಗಾರರ ಮುಷ್ಕರಗಳಿಂದಲೂ ಅನಿರೀಕ್ಷಿತವಾಗಿ ಬೆಳೆಯೂ ಉತ್ಪತ್ತಿಯೂ
ಕಡಮೆಯಾಗುವುದು; ಅನಿರೀಕ್ಷಿತವಾಗಿ ವೆಚ್ಚ ಹೆಚ್ಚುವುದು; ಯುದ್ಧ,
ಕ್ರಾಂತಿ, ಉಂಟಾಗುವುದು; ಹೊಸದಾಗಿ ಸಾಮಾಜಿಕ ಅಥವಾ ಆರ್ಥಿಕ
ಸ್ಥಿತಿಗತಿಗಳನ್ನು ಸಂಸ್ಕರಣ ಮಾಡಬೇಕಾಗುವುದು; ಸ್ವದೇಶದವರ
ಸ್ಪರ್ಧೋಟಿ ಶಕ್ತಿ ತಗ್ಗದಂತೆ ಅವರಿಗೆ ವ್ಯಾಪಾರದಲ್ಲಿ ನೇರವಾಗಿ ಉತ್ತೇಜನ
ವನ್ನೂ ಸಹಾಯವನ್ನೂ ಒದಗಿಸಬೇಕಾಗುವುದು; ಕೆಲಸಗಾರರಿಗೆ ಕೆಲಸದ
ಆವರಣವನ್ನು ಹಸನುಮಾಡಿಕೊಟ್ಟು ಅವರ ದೇಹಶಕ್ತಿ ಮನಶ್ಶಕ್ತಿಗಳನ್ನು
ಹೆಚ್ಚಿಸಬೇಕಾಗುವುದು; ಸಾರ್ವಜನಿಕ ಕ್ಷೇಮಲಾಭಗಳಿಗೆ ಅತ್ಯಾವಶ್ಯಕ
ವಾದ ಕಾರ್ಯಗಳೂ ಉತ್ಪತ್ತಿ ಯಂತ್ರವೂ ಲಾಭಕೋರರ ಕೈಗೆ ಸಿಕ್ಕಿ
ಜನರು ಪೀಡಾಟಕ್ಕೂ ತೊಂದರೆಗೂ ಈಡಾಗದಂತೆ ಜನರ ಬಾಳನ್ನು ಎತ್ತ
ಬೇಕಾಗುವುದು— ಮುಂತಾದ ಎಷ್ಟೋ ವಿಧದಲ್ಲಿ ಸರಕಾರದ ವೆಚ್ಚಗಳು
ಹೆಚ್ಚಬೇಕಾಗುವುದುಂಟು. ಅತಿ ಅವಸರವಿದ್ದಾಗ ಹೊಸದಾಗಿ ತೆರಿಗೆ
ಹಾಕಲು ಸಾಧ್ಯವಿರುವುದಿಲ್ಲ. ತೆರಿಗೆಗಳಿಂದ ಬರುವ ಹಣಕ್ಕೆ ಕಾಯುತ್ತ
ಕುಳಿತುಕೊಳ್ಳುವುದರಿಂದ ಅನರ್ಥವೂ ಸರ್ವನಾಶವೂ ಆಗುವ ಹಾಗಿರ
ಬಹುದು. ಅದೂ ಅಲ್ಲದೆ ಈಗಿನ ಉಪದ್ರವದ ನಿವಾರಣೆಯಿಂದ ಮುಂದಿನ
ತಲೆಮಾರಿನವರಿಗೂ ಉಪಕಾರವೂ ಶಾಂತಿ ಸುರಕ್ಷಣೆಗಳೂ ದೊರೆಯು
ವುದರಿಂದ ಅವರೂ ಅದಕ್ಕೆ ಸ್ವಲ್ಪ ಹಣವನ್ನು ತೆರಲಿ; ಈಗಿನವರ ತಲೆಯ
ಮೇಲೆಯೇ ತೆರಿಗೆಗಳ ಎಲ್ಲ ಭಾರವನ್ನೂ ಹೊರಿಸಿ ಅವರ ರಕ್ತವನ್ನೇ
ಹೀರುವುದು ಸರಿಯಲ್ಲ ಎಂದೂ ಮಂತ್ರಿವರ್ಗದವರು ಯೋಚಿಸಬಹುದು.

ಆದುದರಿಂದ ಅಂತಹ ಸಂದರ್ಭಗಳಲ್ಲೆಲ್ಲ ಸರಕಾರಗಳವರು ಸಾರ್ವಜನಿಕ ಹಿತಸಾಧನೆಗಾಗಿ ಸಾಲವೆತ್ತುತ್ತಾರೆ. ಒಟ್ಟಿನಲ್ಲಿ (೧) ವರಮಾನದ ಕೊರತೆಗಳನ್ನು ತುಂಬಿಕೊಳ್ಳುವುದಕ್ಕೂ, (೨) ದೇಶ ಇತರರ ಮೇಲೆ ಯುದ್ಧಕ್ಕೆ ಹೋಗಬೇಕಾದಾಗಲೂ ಅಥವಾ ಪರರ ದಾಳಿಯನ್ನು ತಡೆದು ದೇಶದ ಬದುಕನ್ನು ಉಳಿಸಬೇಕಾದಾಗಲೊ, (೩) ಸಾರ್ವಜನಿಕ ಕ್ಷೇಮಸಾಧಕವಾದ ಉತ್ಪತ್ತಿಕಾರ್ಯಗಳನ್ನೂ ಸೌಕರ್ಯಗಳನ್ನೂ ಕಲ್ಪಿಸಬೇಕಾದಾಗಲೊ ಸಾಲವೆತ್ತುವರು ಎನ್ನಬಹುದು.

ಮೇಲೆ ಕಂಡ ಸಾಲಗಳಲ್ಲಿ (೧) ಮೊದಲನೆಯ ಬಾಬಿನಲ್ಲಿ ಎತ್ತಿದ ಸಾಲ ಅಲ್ಪಾವಧಿಯದು; ತೆರಿಗೆಯ ಮೂಲಕ ಹಣ (ಖಜಾನೆಗೆ) ಬಂದ ತಕ್ಷಣ ತೀರಿಹೋಗುವುದು. (೨) ಹಿಂದಿನ ಕಾಲಗಳಲ್ಲಿ ಯುದ್ಧ ಸಮಯಕ್ಕೂ ಕಾರ್ಯಗಳಿಗೂ ಕೈಯಲ್ಲಿ ಹಣವಿರಲೆಂದು ಚಿನ್ನದ ನಿಧಿಗಳನ್ನು ಕೂಡಿಡುತ್ತಿದ್ದರು. ನಿಧಿಗಳನ್ನು ಏರ್ಪಡಿಸುವ ಅನನುಕೂಲಗಳೂ ನ್ಯೂನತೆಯೂ ತಿಳಿದು ಆ ಪದ್ಧತಿ ನಿಂತಿದೆ. ಯುದ್ಧದಲ್ಲಿ, ಅಗತ್ಯವಾಗುವ ವೆಚ್ಚಗಳಿಗೆ ತಕ್ಷಣ ಹಣ ಒದಗಬೇಕು. ಯಾವ ಕೆಲಸವೂ ತಡೆಯುವಹಾಗಿರುವುದಿಲ್ಲ. ಅಷ್ಟು ಹೆಚ್ಚು ನೋಟನ್ನು ಅಚ್ಚುಮಾಡಿಕೊಂಡಾದರೂ ಸಮಯವನ್ನು ತೂಗಬೇಕಾಗಿರುತ್ತದೆ. ಸೈನಿಕರಿಗೆ ಆಹಾರ, ಬಟ್ಟೆಬರೆ, ಔಷಧಿ ಸೌಕರ್ಯ, ಮದ್ದುಗುಂಡು ಫಿರಂಗಿ ಮುಂತಾದ ಜೀವನಾಶಕ ಯಂತ್ರಗಳು, ಯಾನವಾಹನ ಸಾಮಗ್ರಿ, ಆಡಳಿತ ವೆಚ್ಚ—ಎಲ್ಲ ರಣಸಜ್ಜೂ ತಕ್ಷಣಕ್ಕೆ ಒದಗಬೇಕು; ಬಂದಕ್ಕೆ ಹತ್ತರಷ್ಟು ಮುಂದಾಗಿಯೇ ಸಿದ್ಧವಿರಬೇಕು. ಅಗ್ಗ ತೆರಿಗೆಗಳು ಸಾಲವು. ಈಗಿನ ಯುದ್ಧಗಳ ವೆಚ್ಚಕ್ಕಾಗಿ ಎಷ್ಟು ನಿಧಿಯನ್ನು ಕೂಡಿಸಿಟ್ಟರೆ ತಾನೇ ಸಾಕು? ಆದ್ದರಿಂದ ಕಡಮೆಯೆಂದರೆ ಸಾಲವೇ ಗತಿಯಾಗುವುದು. (೩) ಸಾರ್ವಜನಿಕ ಪ್ರಯೋಜನಕ್ಕಾಗಿ ಸರಕಾರ ಕೈಕೊಳ್ಳುವ ವ್ಯಾಪಾರ, ಕೈಗಾರಿಕೆ, ಉತ್ಪತ್ತಿ, ಯಾನವಾಹನ ನಿರ್ಮಾಣ ಕಾರ್ಯಗಳಿಗಾಗಿ ಎತ್ತುವ ಸಾಲಗಳಿಂದ ಸರ್ವಥಾ ಪ್ರಯೋಜನವುಂಟು. ಅಂತಹ ಕೆಲಸಗಳನ್ನು ಖಾಸಗಿ ಸಾಹುಕಾರರು ಕೈಕೊಂಡರೆ ಯಾವ ಪ್ರಯೋಜನವೊ, ಸರಕಾರ ಕೈಕೊಂಡರೂ ಅದೆಲ್ಲ ದೊರೆಯುವುದು. ಎಲ್ಲಿನವರೆಗೆ ಖರ್ಚು ಕಳೆದು

ಆದಾಯ ಬರುವುದೊ ಅಷ್ಟು ಬಂದರಂತೂ ಚಿಂತೆಯಿಲ್ಲ. ಇಲ್ಲವಾದರೆ ಅದರಮೇಲೆ ಬಡ್ಡಿ, ಕೆಲಸದ ಸಿಬ್ಬಂದಿಯ ವೆಚ್ಚ, ವಿಮೋಚನೆಯ ಹಣ, ಮುಂತಾದುವಕ್ಕೆ ಪುನಃ ಜನರಮೇಲೆ ತೆರಿಗೆ ಬಿದ್ದಂತಾಗುವುದು. ಕಡಮೆಯೆಂದರೆ ಸಾಲ ತನ್ನ ವೆಚ್ಚವನ್ನು ತಾನು ಗಳಿಸಿ ತರುವಂತಾಗಬೇಕು. ಅಥವಾ ಒಟ್ಟಿನಲ್ಲಿ ಯಾವೊಂದು ಕೆಲಸದ ನಷ್ಟ ಅಥವಾ ಕೊರತೆಯನ್ನಾಗಲಿ ಇನ್ನೊಂದರ ಲಾಭ ತುಂಬಿಕೊಟ್ಟು ಇಂತಹ ಕಾರ್ಯಗಳಿಂದ ಸರಕಾರದ ಧನಸ್ಥಿತಿ ಕೆಡದಂತಾದರೂ ಆಗಬೇಕು. ಎಷ್ಟು ಬೇಕಾದರೂ ಸಾಲವೆತ್ತಿ (ಯುದ್ಧಾದಿ ನಾಶ ಪ್ರಸಂಗಗಳಲ್ಲಿ ಮಾಡುವುದಕ್ಕಿಂತ ಕೇಡೆ?) ಎಲ್ಲರಿಗೂ ಉದ್ಯೋಗ ನಿರ್ಮಾಣ, ಜನದ ಆರೋಗ್ಯಸಾಧನೆ, ವಿದ್ಯಾಭಿವೃದ್ಧಿ, ಸಮಾಜ ಸೇವೆ, ವಿನೋದವಿಹಾರ ಕಲ್ಪನೆ, ರಸ್ತೆ ರೈಲು ಮುಂತಾದವುಗಳ ಏರ್ಪಾಡು, ಬಡಬಗ್ಗರಿಗೆ ಮನೆ ಕಟ್ಟಿಕೊಡುವುದು, ಮುಂತಾದ ಬಾಬುಗಳಿಗಾಗಿ ವೆಚ್ಚಮಾಡಬೇಕು, ಎಂಬುದು ಈಗ ಹಲವರ ಮತ.

**ಸಾಲ ತೀರಿಸುವ ಏರ್ಪಾಡುಗಳು.**— ಬಡ್ಡಿ ಕೊಡುತ್ತೇವೆ; ಅಸಲು ಹಿಂದಕ್ಕೆ ಕೊಡುತ್ತೇವೆ ಎಂದು ಮಾತುಕೊಟ್ಟು ಸರಕಾರದವರು ಸಾಲ ಎತ್ತಬಹುದು; ಅಥವಾ, ಎತ್ತಿದ ಹಣವನ್ನು ತೀರಿಸದೆಯೇ ಹೋಗಬಹುದು. ಸಾಲವನ್ನು ತೀರಿಸಲು ಯಾವ ಬಗೆಯ ಏರ್ಪಾಡನ್ನೂ ಮಾಡದೆ ಎತ್ತುವ ಸಾಲ ಈ ಎರಡನೆಯ ಜಾತಿಗೆ ಸೇರಿದುದು. ಸರಕಾರದವರು ಆ ಪತ್ರಕ್ಕೆ ಅಸಲು ಬೆಲೆ ಇಷ್ಟು ಎಂದು ಹೇಳಿ ಗೊತ್ತುಮಾಡಿರುವುದರಿಂದ ಅದನ್ನು ಜನರು ಕೈಯಿಂದ ಕೈಗೆ ಸಾಗಿಸುವರು, ಮಾರುವರು, ಅಷ್ಟೇ. ಅವು ಒಂದು ಬಗೆಯ ತೆರಿಗೆಗಳೇ ಎನ್ನಬಹುದು.

ಬಡ್ಡಿ ಅಸಲುಗಳ ವಿಷಯದಲ್ಲಿ ಹಿಂದಿರುಗಿಸುವ ಮಾತುಕೊಟ್ಟು ಎತ್ತುವ ಸಾಲಗಳಲ್ಲಿ ಜನರ ನಂಬಿಕೆಗೆ ಪದಿಂಬಿರುತ್ತದೆ. ಕೆಲವು ಸಾಲಗಳ ಅಸಲನ್ನೂ ಬಡ್ಡಿಯನ್ನೂ ತೀರಿಸಲು ಗೊತ್ತಾದ ರಾಜಾದಾಯ ಮೀಸಲಾಗುವುದು ಎಂದೋ; ಒಂದು ನಿಧಿಯನ್ನು ಏರ್ಪಡಿಸಲಾಗುವುದು ಎಂದೋ; ಗೊತ್ತಾದ ಒಂದು ಕಾಲದಲ್ಲಿ ಬರುವ ಹಣವನ್ನು ಉಪಯೋಗಿಸಲಾಗುವುದು ಎಂದೋ; ಸರಕಾರದ ಸಾಧಾರಣ ವರಮಾನದಿಂದಲೇ ಗೊತ್ತಾಗಿ ಇಷ್ಟು ಭಾಗವನ್ನು ತೆಗೆದು ಸಾಲದ ವೆಚ್ಚವನ್ನು ನೀಗುವ

ರಂದೋ ಮಾತಿರುವುದುಂಟು. ಈ ಒಪ್ಪಂದಗಳಲ್ಲಿ ಸಾಲದ ಗಡು ಮುಖ್ಯ. ಇಂತಹ ಕಾಲದ ಒಳಗಾಗಿ ವರ್ಷ ವರ್ಷವೂ ಅಷ್ಟಷ್ಟು ಕೊಟ್ಟು ತೀರಿಸುವೆ ವೆಂದು ಹೇಳಿ ತೆಗೆದ ಸಾಲಗಳಲ್ಲಿಯೂ (Terminable Annuities) ಉಪ ಜಾತಿಗಳಿರುವುವು. ಇಂತಹ ಸಾಲಗಳು ಗೊತ್ತಾಗಿ ಹರಿದರೂ ಅವಕ್ಕಾಗಿ ಜನರ ಮೇಲೆ ಬೀಳುವ ತೆರಿಗೆಯು ಭಾರ ಬಹಳ.

**ಸಾಲ — ತೆರಿಗೆ.** — ಸಾಲ ಯಾವುದೇ ಆಗಲಿ ಸಾಲಕ್ಕೂ ತೆರಿಗೆಗೂ ಒಂದು ವ್ಯತ್ಯಾಸ ಉಂಟು. ಸಾಲದಲ್ಲಿ ನೇರವಾಗಿ ಬಲಾತ್ಕಾರವಿಲ್ಲ. ಹಣಗಾರರು ಮಾತ್ರ, ಇಷ್ಟ ಬಂದರೆ ಸಾಲಕೊಡುವರು. ತೆರಿಗೆ ಹಾಗಲ್ಲ. ಎಲ್ಲರೂ ತೆರಲೇಬೇಕಾದ್ದು ಅದು ; ವ್ಯಕ್ತಿಗಳಿಗೆ ಪ್ರಯೋಜನವಿರಲಿ ಇಲ್ಲದಿರಲಿ ಅದನ್ನು ತೆತ್ತೇ ತೀರಬೇಕು. ಸಾಲಕ್ಕೆ ಇನ್ನೊಂದು ಲಕ್ಷಣವುಂಟು: ಅದರಿಂದ ಜನತೆಯ ಸಂಪತ್ತಿನ ಹಂಚಿಕೆಯಲ್ಲಿ ವ್ಯತ್ಯಾಸವಾಗುವುದು ; ಒಂದು ವರ್ಗದವರ ಕೈಯಲ್ಲಿರುವ ಹಣ ಇನ್ನೊಂದು ವರ್ಗದವರ ಕೈಗೆ ಸಾಗುವುದು. ಸಾಲವನ್ನು ಧನಿಕರ ಖುಷಿಯಿಂದ ತೆಗೆದುಕೊಳ್ಳುವರು ; ತೆರಿಗೆಯಿಂದ ಎತ್ತಿದ ಹಣವನ್ನು ಉಪಯೋಗಿಸಿ ಸಾಹುಕಾರರಿಗೆ ಹಣ ಸಲ್ಲಿಸುವರು. ಪುನಃ ಸಾಲವೆತ್ತುವರು. ಹೀಗೆ ಜನಸಾಮಾನ್ಯದಿಂದ ಎತ್ತಿದ ಹಣವನ್ನು ಈ ಧನಿಕರ ಕೈಗೆ ಸಾಗಿಸಿದಂತಾಗುವುದು. ಅವರ ಸಾಲ ತೀರುವುದಕ್ಕಾಗಿ ರಾಜ್ಯದ ಸಂಪತ್ತೆಲ್ಲ, ಉತ್ಪತ್ತಿ ಶ್ರಮವೆಲ್ಲ, ಸಂಪಾದನೆಯೆಲ್ಲ ಧನಿಕರಿಗೆ ಅಡವು, ಈಡು, ಆಗುವುದು.

ಕಾಲದ ದೃಷ್ಟಿಯಿಂದ ಕಿರುವಾಯಿದೆಯ ಸಾಲ ನಿಡುವಾಯಿದೆಯ ಸಾಲ ಎಂದು ವಿಂಗಡಿಸಿದ ಈ ಸಾಲಗಳ ಫಲವಾಗಿ ಹಣದ ಪೇಟೆಯಲ್ಲಿ ಅನೇಕ ಹೆಚ್ಚು ಕಡಮೆ ಆಗುವುವು.

(೧) ಸರಕಾರದ ಕೈಗೆ ಯಾವುದಾದರೊಂದು ಕಾಲದಲ್ಲಿ ವೆಚ್ಚ ಕ್ಕಿಂತಲೂ ಆದಾಯ ಹೆಚ್ಚಾಗಿ ಬಂದರೆ ಆಗ ಪೇಟೆಯಲ್ಲಿರುತ್ತಿದ್ದ ಹಣ ಸರಕಾರದ ಕೈಗೆ ಬಂದು ಹಣದ ಪೇಟೆಗೆ ಆ ಮಟ್ಟಿಗೆ ಹಣದ ಕ್ಷಾಮ ಉಂಟಾಗುವುದು. ವೆಚ್ಚ ಹೆಚ್ಚಾದರೆ ಪೇಟೆಯ ಕೈಗೆ ಹೆಚ್ಚು ಹಣ ಬರುವುದು. ಏಕೆಂದರೆ, ಸರಕಾರ ಹಣವನ್ನು ಸುಮ್ಮನೆ ತನ್ನ ಕೈಯಲ್ಲಿಟ್ಟು ಕೊಳ್ಳುವುದಿಲ್ಲ. ಬಟವಾಡೆ ಮಾಡಬೇಕಾದವರಿಗೆ ಮಾಡಿಕೊಡುವುದು ;

ಆಗ ನೌಕರರ, ವರ್ತಕರ, ಸೈನ್ಯದ, ಸಾಲಕೊಟ್ಟ ಸಾಹುಕಾರರ, ಮೇಸ್ತ್ರಿಗಳ ಲೆಕ್ಕಕ್ಕೆ ಆ ಹಣ ಹರಿದು ಅವರ (ಖಾಸಗಿ ಜನರ) ಬ್ಯಾಂಕ್ ಲೆಕ್ಕಗಳು ಎಲ್ಲೆಲ್ಲಿಯೂ ತುಂಬುವುವು. ಜನರು ಸರಕಾರಕ್ಕೆ ತೆರಿಗೆ ತೆರುತ್ತಿರುವಾಗ ಅವರ ಲೆಕ್ಕಗಳು ಒಣವಾಗಿ ಸರಕಾರದ ಹೆಸರಲ್ಲಿರುವ ಹಣ ಹೆಚ್ಚಾಗುವುದು.

**ಖಜಾನೆ ಹುಂಡಿ — ಈ ಕೆಲಸದಲ್ಲಿ ಸೆಂಟ್ರಲ್ ಬ್ಯಾಂಕಿನ ಸ್ಥಾನ.**— ಅಲ್ಪಾವಧಿಯ ಸಾಲಪತ್ರಗಳಲ್ಲಿ ಖಜಾನೆ ಹುಂಡಿಯು (Treasury Bill) ರೂಪದಲ್ಲಿರುವ ಸಾಲ ಮುಖ್ಯವಾದದ್ದು. ಅದನ್ನು ಪ್ರಚಾರಕ್ಕೆ ತರುವ ಉದ್ದೇಶ ಅನೇಕ ವೇಳೆ ಪೇಟೆಯವರಿಗೂ ಖಾಸಗಿ ಜನರಿಗೂ ತಿಳಿಯುವುದಿಲ್ಲ. ಖಜಾನೆ ಹುಂಡಿಗಳ ಪ್ರಭಾವ ಸಣ್ಣ ವಾಯಿದೆ ಹಣದ ಪೇಟೆಯಲ್ಲಿ ಬಹಳ ಹೆಚ್ಚು. ಯಾವ ದೇಶದಲ್ಲಿ ಸರಕಾರವೇ ಹಣವನ್ನು ನಿರ್ಮಾಣ ಮಾಡಿ ಚಲಾವಣೆಗೆ ತರುವ ಅಧಿಕಾರವನ್ನು ಇಟ್ಟುಕೊಂಡಿದೆಯೋ* ಅದು ಪೇಟೆಯ ಹಣಸ್ಥಿತಿಯನ್ನು ಹೆಚ್ಚು ಕಡಮೆ ಮಾಡುವುದರ ಮೂಲಕ ಧಾರಣೆವಾಸಿಯನ್ನೂ ವಿನಿಮಯ ದರವನ್ನೂ ಅಳತೆ ಮತ್ತು ಸ್ಥೈರ್ಯಕ್ಕೆ ತರುವ ಉದ್ದೇಶದಿಂದಲೂ ಈ ಹುಂಡಿಗಳನ್ನು ಮಾರುವುದುಂಟು, ಹರಿಸುವುದುಂಟು ಎಂದಮೇಲೆ ಧನಮಂಡಲದಲ್ಲಿ ಅವುಗಳ ವ್ಯಾಪಕತೆ ಎಷ್ಟು ಮುಟ್ಟಿಸದಾಗ

---

* ಈಗ ಸೆಂಟ್ರಲ್ ಬ್ಯಾಂಕುಗಳೇ ಸರಕಾರದ ಎಲ್ಲ ಸಾಲದ ಆಡಳಿತವನ್ನು ಮಾಡುವುವೆಂದು ಹಿಂದೆ ಹೇಳಿತು. ಹಾಗಲ್ಲದೆ ಸರಕಾರದವರೇ ಸ್ವತಂತ್ರವಾಗಿ ಖಜಾನೆಗಳನ್ನಿಟ್ಟುಕೊಂಡು ಕೆಲಸಮಾಡಿಕೊಳ್ಳುತ್ತಿದ್ದರೆ ಪೇಟೆಗೆ ಬಹಳ ತೊಂದರೆಯುಂಟು. ಸರಕಾರಕ್ಕೆ ವೆಚ್ಚದ ಅಗತ್ಯ ಬಹಳವಾಗಿಲ್ಲದಿರುವ ದಿನಗಳಲ್ಲಿಯೂ ಕಂದಾಯದ ದಿನಗಳಲ್ಲಿಯೂ ಖಜಾನೆಯಲ್ಲಿರುವಷ್ಟು ಹಣ ನಿಷ್ಫಲವಾಗಿ ಒಂದು ಕಡೆ ಇರಬೇಕಾಗುತ್ತದೆ. ಹಣದ ಪೇಟೆಗೆ ಇದರ ಪ್ರಯೋಗಕ್ಕೆ ಬರುವಾಗಿದ್ದುದು ಪ್ರಯೋಜನವಿಲ್ಲದ್ದಾಗುತ್ತದೆ. ಅಂತಹ ದಿನಗಳಲ್ಲ ಸಮಯಗಳಲ್ಲಿ ವ್ಯಾಪಾರ ವ್ಯವಸಾಯಗಳಿಗೆ ಹಣ ಬೇಕಾಗಿದ್ದು, ಅದೇ ಅಗತ್ಯ ಸರಕಾರದವರೂ ತೆರಿಗೆ ಎತ್ತುತ್ತಿದ್ದರೆ ತೊಂದರೆಯಾಗುವುದು. ಬ್ಯಾಂಕುಗಳಿಗೆ ಕೊಡಗಗೆ ಲೆಕ್ಕದ ಸಾಲ ಒದಗಿಸಲು ಹೆಚ್ಚು ಶಕ್ತಿಯಿಲ್ಲವಾಗುವುದು. ಅದಕ್ಕೆ ಹಣದ ಅಗತ್ಯವಿಲ್ಲದಿರುವಾಗ ಸರಕಾರ ವೆಚ್ಚ (ಆ ಮೂಲಕ ಜನರ ಕೈಗೆ ಬರುವ ಹಣ) ಹೆಚ್ಚಿದರೆ ಬ್ಯಾಂಕುಗಳಿಗೆ ಪುಷ್ಕಳ ಹಣ ಕೈಗೆ ಬರುವಂತಾಗುವುದು. ಹೀಗೆ ಪೇಟೆಯಲ್ಲಿ ಹಣದ ಬೆಲೆಯಲ್ಲಿ ಉಗ್ರವಾದ ಏರಿಳಿತಗಳು ಉಂಟಾಗಲು ಬಹಳ ಅವಕಾಶವುಂಟು. ಒಳಗಿನ ಧಾರಣೆವಾಸಿಯನ್ನು ಬಡ್ಡಿ ಮತ್ತು ವಟ್ಟದ ದರಗಳನ್ನು ಮಿತದಲ್ಲಿರಿಸಿ ಹಣದ ಬೆಲೆಯನ್ನು ಒಳಗ ಕಾಪಾಡುವ ಹೊರತು ಹಣದ ಹೊರಗಿನ ಬೆಲೆಯನ್ನು (ವಿನಿಮಯ ದರವನ್ನು) ಕೈಯಲ್ಲಿಟ್ಟುಕೊಳ್ಳುವುದು ಸಾಧ್ಯವಿಲ್ಲ. ಆದ್ದರಿಂದ—ಅದ್ಭುತ ಪರಿಮಾಣದಲ್ಲಿ ನಡೆಯುವ ಸರಕಾರದ ಧನಕಾರ್ಯಗಳಿಂದ ಪೇಟೆಗೆ ಯಾವ ಅಸ್ಥಿರತೆಯೂ ಅವ್ಯವಸ್ಥೆಯೂ ಬಾರದಂತೆ ನೋಡಿಕೊಳ್ಳುವುದು ಅತ್ಯಾವಶ್ಯಕವಾಗುವುದು.

ಬಹುದೆಂಬುದನ್ನು ಊಹಿಸಬಹುದು. ಸಾಮಾನ್ಯ ವೆಚ್ಚಕ್ಕೆ ಹಣ ಬಹಳ ಬೇಕಾಗಿ ಅದೇ ಕಾಲದಲ್ಲಿಯೇ ಇನ್ನೆರಡು ಮೂರು ತಿಂಗಳವರೆಗೂ ಆದಾಯ ಸಾಲದಾಗುವುದೆಂದು ಗೊತ್ತಾದರಾಗಲಿ, ಅಥವಾ ಅದೇ ಕಾಲದಲ್ಲಿ ಸಾಲದ ಬಡ್ಡಿ ಮುಂತಾದುವುಗಳನ್ನು ಹೆಚ್ಚಾಗಿ ತೆರಬೇಕಾದ ರಾಗಲಿ, ವಿಶೇಷ ಸಮಯ ಒದಗಿದರಾಗಲಿ ಆ ಸಮಯವನ್ನು ದಾಟಲು ಈ ಬಗೆಯ ಹುಂಡಿಗಳನ್ನು ಹೊರಡಿಸುವರು. ಇವುಗಳ ಜೊತೆಗೆ ಆಗಾಗ್ಗೆ ಸ್ವಲ್ಪ ಕಾಲದವರೆಗೆ ಬೇಕಾಗುವ ಸಣ್ಣ ಮೊತ್ತಗಳನ್ನು ತಮ್ಮ ಬ್ಯಾಂಕಾಗಿ ರುವ ಸೆಂಟ್ರಲ್ ಬ್ಯಾಂಕಿನಿಂದ — ಹಿಂದೆ ವಿವರಿಸಿರುವಂತೆ (Ways and Means Advances) ಕೈಗಡ ತೆಗೆದುಕೊಳ್ಳುವರು. ಇವೆರಡೂ ಸೇರಿ ಸರಕಾರದ ಕಿರುವಾಯಿದೆಯ ಅಥವಾ ಬಿಡಿ ಸಾಲವಾಗುವುದು. ವೆಚ್ಚ ಕಡಮೆಯಾಗಿಯೊ, ವರಮಾನ ಹೆಚ್ಚಾಗಿಯೊ ಇರುವಾಗ ಈ ಬಗೆಯ ಸಾಲ ಇಳಿದಿರುವುದು. ಎಂದರೆ, ಖಜಾನೆ ಹುಂಡಿಗಳ ಪ್ರಮಾಣ ಕುಗ್ಗುವುದು. ಅತಿ ಸ್ವಲ್ಪ ಕಾಲಗಳಿಗೆ ಮಾತ್ರ ಹಣ ಬೇಕಾಗಿರುವಾಗ ಬ್ಯಾಂಕಿನಿಂದ ತೆಗೆಯುವ ಕೈಗಡ ಹೆಚ್ಚುವುದು.

ಬ್ಯಾಂಕಿನವರು ಮಾಡುವ ವ್ಯವಸ್ಥೆ ಹೀಗೆ: ತೆರಿಗೆ ಕಂದಾಯ ಕವಳಿಗೆಗಳ ಮೂಲಕ ಬಹುವಾಗಿ ಹಣ ಬಂದು ಸರಕಾರದ ಲೆಕ್ಕಕ್ಕೆ ಹೆಚ್ಚು ಹಣ ಸೇರುತ್ತಿದ್ದರೆ ಪೇಟೆ ಬಡವಾಗುವುದು ಎಂದು ಅರಿತು ಈ ಖಜಾನೆ ಹುಂಡಿಗಳ ಸಾಲವನ್ನು ಹರಿಸುವರು. ಒಂದು ಕಡೆ ಸಾಲ ಹರಿದ ಹಾಗಾಯಿತು; ಇನ್ನೊಂದು ಕಡೆ ಅವನ್ನು ಕೊಂಡಿದ್ದ ಪೇಟೆಯವರ ಕೈಗೆ ನಗದು ಹಣ ಬಂದಹಾಗಾಯಿತು. ಸರಕಾರ ಬಹಳ ವೆಚ್ಚಮಾಡಿ ವರ್ತಕರ ಕೈಗೆ ಹೆಚ್ಚು ಹಣ ಬರುತ್ತಿರುವುದನ್ನು ಕಂಡರೆ ಈ ಬಿಡಿ ಸಾಲದ ಪರಿಮಾಣವನ್ನು ಹೆಚ್ಚಿಸುವ ಪ್ರಯತ್ನಮಾಡುವರು. ಪೇಟೆಯಲ್ಲಿ ಹಣ ವಿಲ್ಲದಾಗ ತಮ್ಮ ಹಣವನ್ನು ಒದಗಿಸುವರು. ಅಲ್ಲಿ ಹಣ ಹೆಚ್ಚಿದಾಗ ತಾವು ಸಾಲವನ್ನು ಕೊಡದೆ ಪೇಟೆಯಲ್ಲಿ ಹುಟ್ಟುವ ಲೆಕ್ಕದ ಸಾಲ ಉಡುಗುವಂತೆ ಮಾಡುವರು. ಹಳೆ ಖಜಾನೆ ಹುಂಡಿಗಳ ಸಾಲವನ್ನು ತೀರಿಸುತ್ತಿರುವ ಪ್ರಮಾಣಕ್ಕಿಂತಲೂ ಸರಕಾರದ ಕೈಗೆ ಬರುತ್ತಿರುವ ಆದಾಯ ಹೆಚ್ಚಾಯಿತೆನ್ನಿ: ಆಗ ಬ್ಯಾಂಕು ಮೊದಲಿಗಿಂತ ಧಾರಾಳವಾಗಿ

ಪೇಟೆಗೆ ಸಾಲ ಕೊಡಲು ಸಿದ್ಧವಾಗುವುದು. ಸರಕಾರದ ಕಿರುವಾಯಿದೆಯ ಸಾಲ ಎಷ್ಟು ಹೆಚ್ಚಾದರೂ ಪೇಟೆಯಲ್ಲಿ ಹಣ ಪುಷ್ಕಲವಾಗಿದೆಯೆಂದು ಕಂಡರೆ ಬ್ಯಾಂಕು ತನ್ನ ಕೈ ಬಿಗಿಹಿಡಿಯುವುದು. ಹೀಗೆ ಮಾಡುವುದರಿಂದ ಹಣದ ಬೆಲೆ ಸ್ಥಿರವಾಗುವುದು.*

ಖಜಾನೆ ಹುಂಡಿಗಳನ್ನು (Treasury Bills) ಹೇಗೆ ಮಾರುವರು? ಏಕೆ? ಎಷ್ಟು ಮೊತ್ತದಲ್ಲಿ? ತೆಗೆದುಕೊಂಡ ಈ ಸಾಲವನ್ನು ಯಾವಾಗ ಹಿಂದಕ್ಕೆ ಕೊಡುವರು? ಎಂಬುದು ತೊಡಕಾದ ಸಂಗತಿ.—ಸರಕಾರದ ಹಣಸ್ಥಿತಿ ಹೇಗಿದೆ? ಯಾವ ವರಮಾನ ಹೇಗೆ ಕಾಣುತ್ತದೆ? ಯಾವ ಸಾಲಗಳನ್ನು ಹರಿಸಬೇಕಾಗಿದೆ? ಪೇಟೆಯಲ್ಲಿನ ಉಪಪತ್ತಿ ಹೇಗಿದೆ? ಬಡ್ಡಿಯ ದರದ ಲಕ್ಷಣವೇನು? ಏರುತ್ತಿದೆಯೆ ಇಳಿಯುತ್ತಿದೆಯೆ ಎಂದು ಧನಾಧಿಕಾರಿಯೂ ಸೆಂಟ್ರಲ್ ಬ್ಯಾಂಕಿನ ಅಧಿಕಾರಿಯೂ ಯೋಚಿಸುತ್ತಿರುತ್ತಾರೆ. ಬಡ್ಡಿಯ ದರ ಇಳಿದಿರುವಾಗ ಹಿಂದೆ ಹೆಚ್ಚಿನ ದರಕ್ಕೆ ತೆಗೆದುಕೊಂಡಿದ್ದ ಸಾಲವನ್ನು ಹರಿಸಿ ಕಡಮೆಯ ದರಕ್ಕೆ ತಿರುಗಿಸಿ ಸಾಲದ ಭಾರವನ್ನು ಇಳಿಸುವರು; ಅತ್ತ, ಪೇಟೆಯಲ್ಲಿ ಅಧಿಕವಾಗಿದ್ದ ಹಣಕ್ಕೆ ತಕ್ಷಣ ಉಪಯೋಗ ಉಂಟುಮಾಡಿ ಅದನ್ನು ಒಂದು ತಹಕಕ್ಕೆ ತಂದ ಹಾಗಾಯಿತು. ಈ ಹುಂಡಿಗಳನ್ನು ಸಾವಿರಾರು ಪೌಂಡು ಸಾವಿರಾರು ರೂಪಾಯಿಯ ಮೊತ್ತಗಳಿಗೆ ಕಡಮೆಯಿಲ್ಲದೆ ಕೊಳ್ಳುವವರಿಗೆ ಮಾತ್ರ ಮಾರುತ್ತಾರೆ. ಆದ್ದರಿಂದ ಅವುಗಳನ್ನು ಕೊಳ್ಳುವವರು ಹಣದ ಪೇಟೆಯಲ್ಲಿರುವ ವರ್ತಕರು, ಬ್ಯಾಂಕುಗಳು. ಹಲವು ವೇಳೆ — ಸಾಧಾರಣವಾಗಿ — ಈ ದರದಲ್ಲಿ ಬಡ್ಡಿ ಕೊಡುತ್ತೇವೆ ಎಂಬ ಮಾತೂ ಕೇಳುವುದಿಲ್ಲ; ಇಷ್ಟು ಮೊತ್ತದ ಖಜಾನೆ ಹುಂಡಿಗಳನ್ನು ಮಾರಲಿದೆಯೆಂದು ಹೇಳಿ ಅವನ್ನು ಕೊಳ್ಳುವವರೇ ಪೈಪೋಟಿಯಲ್ಲಿ ಎಷ್ಟು ಅಗ್ಗವಾದ ಬಡ್ಡಿಯ

* ಈ ರೀತಿ ಇಂಗ್ಲೆಂಡಿನ ಪದ್ಧತಿಗೆ ಸೇರಿದ್ದು. ಈಗ ಸಾಮಾನ್ಯವಾಗಿ ಎಲ್ಲೆಲ್ಲಿಯೂ ಇದು ಬಳಕೆಗೆ ಬರುತ್ತಿದೆ.

ಹಣದ ಪೇಟೆಯಲ್ಲಿ ಕಿರುವಾಯಿದೆ ಬಡ್ಡಿಗೆ ಕೊಡಲು ಅನೇಕ ವೇಳೆ ಬೇಕಾದಷ್ಟು ಹಣವಿರುತ್ತದೆ. ಖಜಾನೆ ಹುಂಡಿಗಳ ಬದಲಾಗಿ ಸರಕಾರದವರು ಅದನ್ನು ತೆಗೆದುಕೊಳ್ಳದಿದ್ದರೆ ಅದು ಆಲಸವಾಗಿಯೇ ಇರಬೇಕಾಗುವುದೂ ಉಂಟು.

ದರಕ್ಕೆ ಸಾಲ ಕೊಡಬಲ್ಲರೋ ಅಂಥವರಿಂದ ತೆಗೆದುಕೊಳ್ಳುವರು.* ಎಂದರೆ, ಪ್ರತಿಯೊಬ್ಬರೂ ತಮ್ಮ ಹಣಸ್ಥಿತಿಯನ್ನು ನೋಡಿಕೊಂಡು ಇಷ್ಟು ದರವಾದರೆ ತಾವು ಇಷ್ಟು ಹಣಕ್ಕೆ ಹುಂಡಿ ಕೊಳ್ಳುವೆವೆಂದೂ, ಅದಕ್ಕಿಂತ ಕಡಮೆಯಾದರೆ ತಮ್ಮಿಂದ ಆಗುವುದಿಲ್ಲವೆಂದೂ ಈ ಈ ದರಕ್ಕೆ ಇಷ್ಟಿಷ್ಟು ಹಣ ಒದಗಿಸಬಲ್ಲೆವೆಂದೂ ತಮ್ಮ ಸಮ್ಮತಿ ಪತ್ರಗಳನ್ನು ಬರೆದು ಗೊತ್ತಾದ ತಾರೀಖಿನ ದಿನ ಒಬ್ಬರ ದರ ಇನ್ನೊಬ್ಬರಿಗೆ ಗೊತ್ತಾಗದಂತೆ ಧನಾಧಿಕಾರಿಗಳಿಗೆ ದರಖಾಸ್ತು ತಿಳಿಸುತ್ತಾರೆ. ಸರಕಾರದವರು ತಮಗೆ ಯಾವ ದರ ಎಲ್ಲಕ್ಕಿಂತ ಅನುಕೂಲವೋ ಆ ದರದ ಮೇರೆಗೆ ಹುಂಡಿಗಳನ್ನು ಮಾರಿ ಹಂಚುತ್ತಾರೆ. ಈ ದರ ಸಾಮಾನ್ಯವಾಗಿ (Money at Call and Short Notice) ಎಂಬ ಬಾಬಿನಲ್ಲಿರುವ ದಿನದ—ವಾರದ—ಕಡಗಳಿಗೂ, ಉತ್ತಮ ವ್ಯಾಪಾರದ ಹುಂಡಿಗಳ ಮೇಲೆ ಪೇಟೆಯಲ್ಲಿ ಸಿಕ್ಕುವ ಸಾಲದ ದರಕ್ಕೂ ಸುಮಾರು ಲಾಭಕರವಾಗಿರುವುದು. ಆದ್ದರಿಂದ ತಮ್ಮಲ್ಲಿರುವ ಹೆಚ್ಚು ಹಣವನ್ನೆಲ್ಲ ೩, ೬, ೯ ತಿಂಗಳ ಮಾಯಿದೆಗಳನ್ನು ಮಾತ್ರ ಹಾಕಿ ಮಾರುವ ಈ ಹುಂಡಿಗಳನ್ನು ಕೊಳ್ಳಲು ಉಪಯೋಗಿಸುತ್ತಾರೆ. ಪೇಟೆಯಲ್ಲಿ ಇವು ಧಾರಾಳವಾಗಿ ಸಂಚರಿಸುತ್ತವೆ, ನಗದಿಗೆ ಮುರಿಯುತ್ತವೆ. ಆದ್ದರಿಂದ ಇವನ್ನು ವರ್ತಕರೂ ಬ್ಯಾಂಕುಗಳವರೂ ವ್ಯಾಪಾರದ ಹುಂಡಿಗಳಿಗಿಂತ ಹೆಚ್ಚು ವಿಶ್ವಾಸದಿಂದ ಕೊಂಡಿಟ್ಟುಕೊಳ್ಳುವರು. ಪೇಟೆಯ ಶಕ್ತಿಯನ್ನು ಅಳೆಯುವುದಕ್ಕೆ ಇವು ಬಹುಮೇಲೆ ಸಾಧಕವೆಂದು ಹೇಳುವರು. ಮೇಲಾಗಿ ಪೇಟೆಯ ಕಿರುಮಾಯಿದೆಯ ಬಡ್ಡಿಯ ದರ ಇವುಗಳಿಂದ ಒಂದು ಹದಕ್ಕೆ ಬರಲು ಅವಕಾಶವಾಗುವುದು.

(೨) ನಿಡುಸಾಲಗಳು.—ಒಂದು ಕಡೆ ವೆಚ್ಚದ ಪೂರ್ತಿ ಆದಾಯ ದೊರಕದೆ ಇರುವುದರಿಂದಲೋ (ಮೊನ್ನೆ ಮೊನ್ನೆಯವರೆಗೂ ಜರ್ಮನಿ, ಆಸ್ಟ್ರಿಯಾ ದೇಶಗಳಲ್ಲಿದ್ದಂತೆ) ಯುದ್ಧದ ದಂಡಗಳನ್ನು ತೆರುವುದಕ್ಕಾಗಿಯೋ, ನಾಣ್ಯಪದ್ಧತಿ ನಿಯಮಗಳ ಅವ್ಯವಸ್ಥೆಗಳನ್ನು ನಿವಾರಿಸಿ ಚೇತರಿಸಿಕೊಳ್ಳುವುದಕ್ಕಾಗಿಯೋ, ಯುದ್ಧಗಳಿಗಾಗಿ ಮಾಡಿದ ವೆಚ್ಚಗಳಿಗಾಗಿಯೋ,—ದೊಡ್ಡ

* ಇನ್ನು ಕೆಲವು ವೇಳೆ ಇಷ್ಟು ದರವೆಂದು ಹೇಳದೆ ಹುಂಡಿಗಳ ಒಟ್ಟು ಮೊಬಲಗನ್ನು ಗೊತ್ತುಮಾಡದೆ ಪೇಟೆಯವರು ಕೊಳ್ಳುವಷ್ಟನ್ನೂ ಮಾರಲು ಸಿದ್ಧರಾಗುತ್ತಾರೆ. ಪೇಟೆಯವರ ಪೈಪೋಟಿಯಿಂದ ದರ ತೇಲಿಬರುತ್ತದೆ (Tap Rate).

ಸಂಪದಭಿವೃದ್ಧಿ ಕಾರ್ಯಗಳಿಗಾಗಿಯೊ ನಿಡುವಾಯಿದೆಯ ಸಾಲಗಳ ನ್ನೆತ್ತುವರು.

ಸಂಪದಭಿವೃದ್ಧಿಕಾರ್ಯಕ್ಕೆ ಬಂಡವಾಳವನ್ನು ಒದಗಿಸಲು ನಿಡು ಸಾಲಗಳನ್ನೆತ್ತಿದರೆ ಇವರಿಗೂ ಇತರ ಕಂಪನಿಗಳಿಗೂ ವಸ್ತುತಃ ವ್ಯತ್ಯಾಸ ವಿಲ್ಲವೆಂದು ಈ ಮುಂಚೆಯೇ ಹೇಳಿದೆ. ಎಲ್ಲಿಯವರೆಗೂ ವರಮಾನದಿಂದ ಆ ಕಾರ್ಯಗಳ ವೆಚ್ಚಗಳು ಕಳೆಯುವುವೊ ಅಲ್ಲಿಯವರೆಗೂ ಸರಕಾರಕ್ಕೆ ತೊಂದರೆಯಿಲ್ಲ. ಪಲವು ವೇಳೆ ವೆಚ್ಚವೆಲ್ಲ ನೀಗಿದಮೇಲೂ ಋಣ ವಿಮೋಚನೆಯ ನಿಧಿಗೆ ಹಣವನ್ನು ತೆಗೆದಿಟ್ಟಮೇಲೂ ಲಾಭ ಉಳಿದು ಆ ಲಾಭ ದಿಂದ ಸರಕಾರದ ಸಾಧಾರಣ ವೆಚ್ಚಗಳಿಗೆ ಆದಾಯ ಬರುವುದುಂಟು ; ತದ್ವಿಪ ರೀತವಾಗಿ ಸಾಲದ ಹೊರೆಯೆಲ್ಲ ತಲೆಯಮೇಲೆ ಬೀಳುವುದೂ ಉಂಟು.

**ಬ್ಯಾಂಕ್ ಸಾಲಗಳ ಮೂಲಕ ಸರಕಾರದ ಸಾಲಪತ್ರಗಳನ್ನು ಕೊಳ್ಳು ವುದು.**—ಯುದ್ಧ ಕಾಲಗಳಲ್ಲಿ ಸಾಲವನ್ನು ನೇರವಾಗಿ ಸೆಂಟ್ರಲ್ ಬ್ಯಾಂಕಿನ ಮೂಲಕವೊ, ಪರೋಕ್ಷವಾಗಿ ಬ್ಯಾಂಕುಗಳ ಮೂಲಕವೊ ತೆಗೆಯ ಬಹುದು. ಒಂದು ಕೋಟಿ ಪೌಂಡು ಸಾಲವನ್ನು ಬ್ಯಾಂಕ್ ಅಫ್ ಇಂಗ್ಲೆಂಡಿನಿಂದ ತೆಗೆದುಕೊಂಡರೆ ಅವರು ಇತರ ಬ್ಯಾಂಕುಗಳವರಿಗೆ ಕೊಡುವ ನಗದು ಸೌಕರ್ಯ ಹೆಚ್ಚಾಗುವುದು. ಹೀಗೆ ಅವರು ಈ ಸಾಲ ದಲ್ಲಿ ಸ್ವಲ್ಪ ಭಾಗವನ್ನು ಬ್ಯಾಂಕುಗಳವರು ಹಂಚಿಕೊಳ್ಳುವಂತೆ ಮಾಡ ಬಹುದು. ಇಲ್ಲವಾದರೆ ಬ್ಯಾಂಕುಗಳವರೆಲ್ಲರಿಂದಲೂ ಹಣ ತೆಗೆಯುವುದು ಕಷ್ಟವೆಂದು ತಿಳಿದುಬಂದಾಗ ಸರಕಾರದವರು ಆ ಮೊತ್ತದಷ್ಟು ಟ್ರೆಷರಿ ನೋಟನ್ನು ತಯಾರಿಸಿ ಬ್ಯಾಂಕಿಗೆ ಚಲಾವಣೆಗಾಗಿ ಕಳುಹಿಸಬಹುದು. ಇಲ್ಲಿಯೂ ಪರಿಣಾಮ ಒಂದೇ ; ಇತರ ಬ್ಯಾಂಕುಗಳಿಗೆ ಸೆಂಟ್ರಲ್ ಬ್ಯಾಂಕು ಕೊಡುವ ಸಾಲದ ಸರವು ಹೆಚ್ಚಾಗಿ ಆ ಹಣ ಪೇಟೆಗೆ ಹೋಗಿ ಬೆಲೆ ಧಾರಣೆ ಗಳನ್ನು ವ್ಯತ್ಯಾಸಗೊಳಿಸುವಂತಾಗುತ್ತದೆ. ತೆಗೆದುಕೊಂಡ ಸಾಲವನ್ನು ಸರಕಾರದವರು ಕಂಟ್ರಾಕ್ಟರುಗಳಿಗೂ ವರ್ತಕರಿಗೂ ಪದಾರ್ಥಗಳ ಉತ್ಪತ್ತಿ ಕಾರರಿಗೂ ಕೊಡುತ್ತಾರೆ. ಸರಕಾರದ ಲೆಕ್ಕಗಳಿಂದ ಹಣ ಇತರರ ಲೆಕ್ಕಕ್ಕೆ ಕೂಡುತ್ತದೆ. ಕೈಗೆ ಅತಿಯಾದ ಹಣ ಬಂದ ಕೂಡಲೆ ಈ ಜನರು ಸರಕಾರ ಸಾಲಪತ್ರಗಳನ್ನು ಕೊಳ್ಳಲು ಅವಕಾಶವಾಗುತ್ತದೆ. ಖಾಸಗಿ ವರ್ತಕರು

ಇಂಥ ಸಾಲಗಳನ್ನು ಕೊಡಲು ಬ್ಯಾಂಕುಗಳು ಅವರಿಗೆ ಲೆಕ್ಕದ ಸಾಲಗಳನ್ನು ಒದಗಿಸುವುದುಂಟು. ಅಥವಾ ಮೊದಲೇ ತಾವು ಕೊಂಡು ಅವನ್ನು ಆಮೇಲೆ ಕುಳಗಳಿಗೆ ಹಂಚುವುದೂ ಉಂಟು. ರೀತಿ ಯಾವುದೇ ಆಗಲಿ, ಬ್ಯಾಂಕುಗಳ ಮೂಲಕ ನೇರವಾಗಿಯೂ ಬಳಸಾಗಿಯೂ ಯುದ್ಧಕಾಲಗಳಲ್ಲಿ ಸರಕಾರ ಸಾಲವೆತ್ತುವುದು.*

**ಬಗೆಗಳು- ಆಕರ್ಷಣೆ ನಿರೋಧಗಳು.** — ಯುದ್ಧಸಮಯದಲ್ಲಿ ಜನರ ಚಿತ್ತಾಕರ್ಷಣೆಮಾಡಿ ಎಲ್ಲ ವಿಧದಲ್ಲಿಯೂ ಹಣ ಹುಟ್ಟಿಸುವ ಏರ್ಪಾಡು ಮಾಡುವರು. ಯಾರೇ ಆಗಲಿ ಯುದ್ಧಕಾಲದಲ್ಲಿ ತಮ್ಮ ದೇಶಕ್ಕೆ ವಿರೋಧವಾದ ಹಣ ಕಾರ್ಯಗಳಲ್ಲಿ ತೊಡಗಕೂಡದೆಂದು ನಿರೋಧಮಾಡುವರು :—

(i) ಸಾಲ ಕೊಟ್ಟರೆ ಹೆಚ್ಚು ಬಡ್ಡಿ ಕೊಡುವೆವೆಂಬ ಆಶೆ ತೋರಿಸುವುದೊಂದು ದಾರಿ:—ಆದರೆ ಇದರಿಂದ ಮುಂದಿನ ವರ್ಷದ ಆಯವ್ಯಯ ವ್ಯವಸ್ಥೆ ಕೆಡುವ ಸಂಭವವುಂಟು. ಅದೂ ಅಲ್ಲದೆ ಯುದ್ಧದಲ್ಲಿ ತೊಡಗಿರುವ ಇತರ ದೇಶಗಳವರು ಇದೇ ಬಗೆಯ ಸಾಲಗಳಿಗೆ ಕೊಡುತ್ತಿರುವ ದರಕ್ಕಿಂತ ಹೆಚ್ಚು ದರವನ್ನು ಈ ದೇಶದವರು ಕೊಡುತ್ತೇವೆಂದು ಪ್ರಕಟಿಸಿದರೆ ಯುದ್ಧದಲ್ಲಿ ತಟಸ್ಥರಾಗಿರುವ ರಾಷ್ಟ್ರಗಳವರಿಗೆ ಸಂಶಯ ಬರುವುದು. ಅವರ ಸಹಾಯವಿಲ್ಲದಾಗುವುದು. ಆದುದರಿಂದ ಬೇರೆಯ ಆಕರ್ಷಣೆಗಳನ್ನು ಹೂಡುವರು. ಬಡ್ಡಿಯ ದರವನ್ನು ಏರಿಸದಿದ್ದರೂ ಅಸಲು ಹಣಕ್ಕಿಂತಲೂ ಕಡಮೆಯ ಬೆಲೆಗೆ ಪತ್ರಗಳನ್ನು ಮಾರುವರು. ಅಥವಾ ಸಾಲವನ್ನು ತೀರಿಸುವಾಗ ಪತ್ರದಲ್ಲಿ ಕಾಣಿಸುವ ಮೊಬಲಗಿಗಿಂತಲೂ ಹೆಚ್ಚು ಹಣ ಸಲ್ಲಿಸುತ್ತೇವೆಂದು ಹೇಳಬಹುದು. ಅಥವಾ ಅಂತಹ ಪತ್ರಗಳನ್ನು ಕೊಂಡವರಿಗೆ ಇಂಥ ಇಂಥ ತೆರಿಗೆಯ ಬಾಧೆ ಇಲ್ಲವೆಂದು ಧೈರ್ಯಕೊಟ್ಟು ರಿಯಾಯಿತಿ ತೋರಿಸುವರು.

* ಅಷ್ಟು ಹೆಚ್ಚು ದುಡ್ಡನ್ನು ಪ್ರಚಾರಕ್ಕೆ ತಂದಿದ್ದರೆ ಯಾವ ಯಾವ ಫಲಗಳುಂಟಾಗಿ ಹಣದ ಬೆಲೆ ಕಡಮೆಯಾಗಿ ಧಾರಣೆಮಾಳಿ ಏರಿ, ಖರ್ಚುಗಳೂ ಏರುತ್ತಿದ್ದವೊ ಅವೆಲ್ಲ ಈಗಲೂ ಉಂಟಾಗುತ್ತವೆ.

(ii) ಸಾಲಗಳನ್ನು ಎಷ್ಟು ರೂಪಗಳಲ್ಲಿ ಎಷ್ಟು ಬಗೆಯ ಜನರಿಂದ ತೆಗೆಯಬಹುದೊ ಅಷ್ಟೆಲ್ಲ ಮಾಡುವಂತೆ ವಿಧವಿಧವಾದ ಸಾಲಪತ್ರಗಳನ್ನು ನಿರ್ಮಾಣ ಮಾಡುವರು. ಎಲ್ಲ ಬಗೆಯ ಜನರ ಮನಸ್ಸೂ ಆ ಕಡೆ ಹೋಗುವಂತೆ ಮಾಡುವುದು ಈ ಕೆಲಸದ ಗುರಿ. (ಉದಾ.—ಯುದ್ಧದ ಸೇವಿಂಗ್ಸ್ ಸರ್ಟಿಫಿಕೇಟುಗಳು, ನಿಡುವಾಯಿದೆಯ ಯುದ್ಧದ ಸಾಲ ಪತ್ರಗಳು, ಖಜಾನೆ ನೋಟು, ಹುಂಡಿಗಳು, ಇತ್ಯಾದಿ) ಇಂತಹ ತಾರೀಖಿನೊಳಗಾಗಿ ಇಷ್ಟು ಹಣ ವಸೂಲಾಗ ಬೇಕು ಎಂದು ಎಲ್ಲರಿಗೂ ಸಾರಿ ಸಾಲವೆತ್ತುವರು.

(iii) ಜನರ ಸ್ವದೇಶಾಭಿಮಾನವನ್ನು ಕೆರಳಿಸಿ,—ಇಂತಹ ಸಾಲ ಗಳನ್ನು ಕೊಡುವುದು ರಾಷ್ಟ್ರದವರ ಕರ್ತವ್ಯ, ದೇಶಸೇವೆ, ಧರ್ಮ ಎಂದು ಸಭೆಗಳನ್ನು ಕೂಡಿಸಿ, ಪ್ರಕಟನೆಗಳನ್ನು ಮಾಡಿ, ಸ್ವದೇಶಿಯರ ವೀರವರ್ತನೆಯನ್ನೂ ತ್ಯಾಗವನ್ನೂ ಹಿಗ್ಗಿಸಿ, ಬಣ್ಣ ಕಟ್ಟಿ ತೋರಿಸಿ, ಶತ್ರುಗಳ ಕ್ರೌರ್ಯವನ್ನೂ ಹಿಂಸಾವೃತ್ತಿ ದುರಾಸೆಗಳನ್ನೂ ದ್ವೇಷ ಉಂಟಾಗುವಂತೆ ವರ್ಣಿಸಿ, ಅಗ್ಗ ಬೇಕಾದ ಹಣವನ್ನು ಒದಗಿಸಿ ಯುದ್ಧದ ಜಯಕ್ಕೆ ನೆರವಾಗದಿದ್ದರೆ, ದೇಶ ಅನ್ಯಾಕ್ರಾಂತವಾಗಿ ರಾಜಕೀಯ ದಾಸ್ಯವುಂಟಾಗುವುದೆಂದು ಒತ್ತಿಹೇಳಿ ಹಣ ವನ್ನು ತೆಗೆದುಕೊಳ್ಳುವರು.

ನಿರೋಧ ಮಾರ್ಗದ ಗುರಿಯೂ ಇದೇ ಆದರೂ ಅದರ ರೀತಿ ಬೇರೆ. ಜನರು ತಮ್ಮ ಕೈಯಲ್ಲಿನ ಹಣವನ್ನು ಬೇರೆ ಯಾವ ವಿಧದಲ್ಲಿಯೂ ಉಪ ಯೋಗಿಸಲು ಸಾಧ್ಯವಾಗದಂತೆ ಮಾಡುವುದು ಈ ವಿಧಾನ. ಯುದ್ಧ ಸಮಯದಲ್ಲಿ ಆರ್ಥಿಕ ಯಂತ್ರವೆಲ್ಲ ಸರಕಾರದ ಆಳಿಕೆಗೂ ಸರ್ವಾಧಿ ಕಾರಕ್ಕೂ ಒಳಪಟ್ಟು ನಡೆಯುವುದು. ಯಾರೇ ಆಗಲಿ ಅದಕ್ಕೆ ವಿರೋಧ ವಾಗುವ ಸೂಚನೆ ತೋರಿದರೆ ಅವರಿಗೆ ದ್ರೋಹದ ದಂಡನೆಯಾಗುವುದೆಂಬ ಹೆದರಿಕೆಯಿಡುವರು. ಯಾರ ಕೈಯಲ್ಲಿಯಾದರೂ ಹೆಚ್ಚು ಹಣವಿದೆಯೆಂದು ಸರಕಾರಕ್ಕೆ ತಿಳಿದರೆ ಅವರ ಮೇಲೆ ಬಲವಾಗಿ ತೆರಿಗೆ ಬೀಳುವುದು. ಆಹಾರ

ಪದಾರ್ಥಗಳನ್ನೊ, ಭೋಗಾದಿಗಳನ್ನೊ, ಅವರು ಕೊಳ್ಳಬೇಕೆಂದರೆ ಅವುಗಳ ಮೇಲೆ ತೆರಿಗೆ ಬಿದ್ದು ಬೆಲೆ ಏರಿರುವುದಲ್ಲದೆ ಇಂಥ ಇಂಥ ಪದಾರ್ಥಗಳು ಸೈನ್ಯಕ್ಕೆ ಮಾತ್ರ ಒದಗಬೇಕು; ಈ ಈ ಪದಾರ್ಥಗಳನ್ನು ಊರಲ್ಲಿ ಸುಖವಾಗಿರುವವರು ಇಷ್ಟಕ್ಕಿಂತ ಹೆಚ್ಚಾಗಿ ಕೊಳ್ಳಕೂಡದು, ಅವರಿಗೆ ಮಾರಕೂಡದು ಎಂಬ ಶಾಸನವಾಗುತ್ತದೆ. ತಮಗೆ ಸಂತೋಷವುಂಟಾಗುವ ಕಡೆಗೆ ಪ್ರಯಾಣಮಾಡಲಿಚ್ಛಿಸಿದರೆ ಯುದ್ಧಕಾಲದಲ್ಲಿ ಇಂತಹ ಪ್ರಯಾಣಗಳು ಸಾಗವು. ಅಲ್ಲದೆ ಆ ಬಗೆಯ ವೆಚ್ಚಗಳಿಗೆ ಜನರು ಹಣ ಹಾಕದಂತೆಯೂ ಏರ್ಪಡಿಸುವರು. ಪದಾರ್ಥಗಳನ್ನು ಮಾರುವವರು ಈ ಬೆಲೆಯ ಕಡಮೆಗೆ ಊರಲ್ಲಿರುವವರಿಗೆ ಮಾರಕೂಡದು; ಸರಕಾರಕ್ಕೆ ಈ ಬೆಲೆಗೇ ಮಾರಬೇಕು ಎಂದು ನಿಷ್ಠುರ ನಿರ್ಬಂಧಗಳನ್ನು ಏರ್ಪಡಿಸುವರು. ಜನರು ತಮ್ಮ ಹಣವನ್ನು ಉದ್ಯೋಗ ಕೈಗಾರಿಕೆಗಳಿಗೆ ಬಂಡವಾಳವಾಗಿಯೊ ಸಾಲವಾಗಿಯೊ ಒದಗಿಸಿ ಸರಕಾರದ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನಪಡಬಹುದಲ್ಲ! ಆಗ ಆ ಉದ್ಯೋಗಗಳೆಲ್ಲ ಪರೋಕ್ಷವಾಗಿ ಯುದ್ಧಕ್ಕೆ ನೆರವಾಗುವಂತೆ ವ್ಯವಸ್ಥೆಮಾಡುವರು; ಅಥವಾ ಪ್ರಾಣಾಪಾಯವಿರುವ ಈ ಸಮಯದಲ್ಲಿ ಇಂತಹ ಉದ್ಯೋಗಗಳ ಮೇಲೆ ಸರಕಾರದವರಿಗೆ ಪ್ರೀತಿಯಿಲ್ಲವೆಂದು ಸೂಚಿಸಬಹುದು. ಸಾಹುಕಾರರು ವಿದೇಶಗಳಿಗೆ ತಮ್ಮ ಹಣವನ್ನು ಸಾಗಿಸುವ ಪ್ರಯತ್ನಮಾಡಿ ಆ ಹೊರದೇಶದ ಬ್ಯಾಂಕುಗಳಲ್ಲಿ ಡಿಪಾಸಿಟ್ ಇಡುತ್ತಿದ್ದರೆ, ಆಸ್ತಿಗಳನ್ನು ಕೊಳ್ಳುತ್ತಿದ್ದರೆ, ಆ ಪತ್ರಗಳನ್ನು ಸಂಪಾದಿಸುತ್ತಿದ್ದಾರೆ ಎಂದು ತಿಳಿದ ಕೂಡಲೆ ಅಂತಹ ಕೆಲಸ ದ್ರೋಹವೆಂದು ತಡೆಯಲು ಪ್ರಯತ್ನಿಸುವರು. ತಮ್ಮ ದೇಶದಿಂದ ಚಿನ್ನವಾಗಲಿ ಆಸ್ತಿಪತ್ರಗಳಾಗಲಿ ಯಾವುದೂ ಹೊರಕ್ಕೆ ಹೋಗಕೂಡದೆಂದು ನಿರ್ಬಂಧ ರಚಿಸಿ ಆ ದಾರಿಯನ್ನೂ ಮುಚ್ಚುವರು.

ಹಣವನ್ನು ಒದಗಿಸಿಕೊಳ್ಳಲು ಹೇಗೆಯೇ ಪ್ರಯತ್ನಿಸಲಿ ಉತ್ಪತ್ತಿಕಾರ್ಯ, ಮಾರುವೆಯ ಕಾರ್ಯ, ಸಂಪತ್ತಿನ ಹಂಚಿಕೆ, ವ್ಯಾಪಾರ—ಎಲ್ಲವೂ ಸರಕಾರದ ಸಾಲ ವ್ಯವಹಾರದಿಂದ ಮೊಟಕಾಗುವುದು.

ಯುದ್ಧ ಮುಗಿದ ಮೇಲೆ ಪುನಃ ದೊಡ್ಡ ಕ್ಲೇಶಕ್ಕೆ ಆರಂಭ. ಸರಕಾರಕ್ಕೆ ಸಾಲವನ್ನು ಕೊಟ್ಟಿರುವವರಿಗೆ ಹಬ್ಬ. ಮುಂದಿನ ವರ್ಷಗಳ

ರಾಜಾದಾಯದಲ್ಲಿ ಬಹು ಭಾಗವನ್ನು ಸಾಲಕ್ಕೆ ಬಡ್ಡಿ ತೆರಲು ವಿನಿಯೋಗಿಸ ಬೇಕಾಗುವುದು. ಯುದ್ಧದಲ್ಲಿ ಆಸ್ತಿ, ಬಂಡವಾಳ, ಕೈಗಾರಿಕೆ, ದೇಶ, ಪ್ರಾಣ ಎಲ್ಲವೂ ನಾಶವಾಗಿರುವುದರ ಜೊತೆಗೆ — ಕಷ್ಟದಿಂದ ಕೆಲಸಮಾಡು ವವರು ತಾವು ದುಡಿದು ಸಾಲಪತ್ರಗಳ ಯಜಮಾನರಿಗೆ ಬಡ್ಡಿ ತೀರಿಸುತ್ತಿರ ಬೇಕಾಗುವುದು. ಸರ್ವತೋಮುಖವಾಗಿ ಜನರಿಗೂ ಸರಕಾರಗಳಿಗೂ ಕಷ್ಟ — ಎಲ್ಲೆಲ್ಲಿಯೂ ಅವ್ಯವಸ್ಥೆ, ಹೆಚ್ಚು ತೆರಿಗೆಗಳು.

**ಸಾಲಗಳನ್ನು ತೀರಿಸುವ ರೀತಿ.** — ಸಾಲಗಳನ್ನು ತೀರಿಸುವ ವಿಧಾನ ಗಳಿಂದಲೂ ದೇಶದ ಸಂಪತ್ ಸ್ಥಿತಿಯಲ್ಲಿ ವ್ಯತ್ಯಾಸಗಳುಂಟಾಗುವುವು. ಹಳೆಯ ಸಾಲಗಳನ್ನು ಮುಖ್ಯವಾಗಿ ಎರಡು ಬಗೆಯಲ್ಲಿ ನೀಗಬಹುದು :—

(೧) ಹಿಂದಿನ ಸಾಲವನ್ನು ತೀರಿಸಲು ಹೊಸದಾಗಿ ಸಾಲವೆತ್ತಿ ಹಳೆಯ ಪತ್ರಗಳಿಗೆ ಬದಲು ಹೊಸ ಪತ್ರಗಳನ್ನು ಅವರಿಗೆ ಕೊಡುವುದು (Conversion).

(೨) ಸಾಲದ ಅಸಲನ್ನು ಹಿಂದಕ್ಕೆ ಕೊಟ್ಟು ಪತ್ರವನ್ನು ರದ್ದು ಮಾಡುವುದು (Paying off).

(೧) **Conversion.** — ಈ ರೀತಿಯಲ್ಲಿ ಸಾಲ ಹರಿಯುವುದಿಲ್ಲ. ಹಿಂದಿನ ಸಾಹುಕಾರರಿಗೆ ಹಣವನ್ನು ಕೊಟ್ಟುಬಿಡುವೆವೆಂದು ಪ್ರಕಟನೆ ಮಾಡುವರಾದರೂ—ಆಗಿನ ಪರಿಸ್ಥಿತಿಯ ದೃಷ್ಟಿಯಿಂದ—ಹೆಚ್ಚು ಲಾಭಕರ ವಾಗುವ ಷರತ್ತುಗಳನ್ನೊಳಗೊಂಡ ಹೊಸ ಸಾಲಪತ್ರಗಳನ್ನು ಹೊರಡಿಸು ತ್ತಾರೆ. ಪೇಟೆಯಲ್ಲಿ ಹಣವನ್ನು ಬೇರೆ ಕಡೆ ಹೂಡಿದರೂ ಇದಕ್ಕಿಂತ ಅನುಕೂಲವಾದ ದರ ಸಿಕ್ಕಲಾರದೆ ಹೋಗಬಹುದಾದ್ದರಿಂದ ಪ್ರಾಯಿಕ ವಾಗಿ ಹಳೆಯ ಪತ್ರಗಳನ್ನು ಹಿಂದಕ್ಕೆ ಕೊಟ್ಟು ಜನರು ಆ ಬೆಲೆಯ ಹೊಸ ಪತ್ರವನ್ನು ತೆಗೆದುಕೊಳ್ಳುತ್ತಾರೆ. ಯಾವುದಾದರೂ ಕಾರಣದಿಂದ ಹೊರಗಿನ ಪೇಟೆಯಲ್ಲಿ ಬಡ್ಡಿಯ ದರ ಇಳಿಯುತ್ತಿದ್ದರೆ ಹೆಚ್ಚು ಬಡ್ಡಿ ತೆರ ಬೇಕಾಗಿದ್ದ ಹಳೆಯ ಸಾಲದ ಹೊರೆಯನ್ನು ಇಳಿಸಿಕೊಳ್ಳುವುದಕ್ಕೋಸ್ಕರ ಕಡಮೆ ಬೆಲೆಯ ಹೊಸದನ್ನು ಚಲಾವಣೆಗೆ ತರುವುದು ವಾಡಿಕೆ. ಈ ಹೊಸ ಸಾಲದ ದರವೂ ಪೇಟೆಯ ದರದಂತೆಯೇ—ಅದಕ್ಕಿಂತಲೂ

೧/೪% – ೧/೨%* ಹೆಚ್ಚಾಗಿಯೇ—ಇರಬಹುದಾದ್ದರಿಂದ ಅನೇಕರು ಇದನ್ನು ಕೊಳ್ಳುತ್ತಾರೆ. ಬಂದ ಹಣದಿಂದ ಹಳೆಯ ಸಾಲವನ್ನು ಬೇಕಾದರೆ ನಗದು ಕೊಟ್ಟು ಹರಿಸಿಕೊಳ್ಳಲೂ ಅನುಕೂಲವಾಗುತ್ತದೆ. ಈ ಪ್ರಯತ್ನದ ಫಲವಾಗಿ ಮುಂದಿನ ವರ್ಷದ ಸಾಲದ ಭಾರ ಹಿಂದಿಗಿಂತಲೂ ಕಡಮೆಯಾಗುವುದರಿಂದ ತೆರಿಗೆಯ ಭಾರ ಇಳಿಯುವ ಸಂಭವವುಂಟು. ಅಥವಾ ವಸೂಲುಮಾಡಿದ ತೆರಿಗೆಯನ್ನು ಬೇರೆಯ ಹೆಚ್ಚು ಪ್ರಜೋಪಯೋಗಕ್ಕೆ ವಿನಿಯೋಗಿಸಿಕೊಳ್ಳಬಹುದು.

(೨) **ಸಾಲ ತೀರಿಸಬೇಕೆ ಬೇಡವೆ?**—ಸರಕಾರದವರು ತೆಗೆದುಕೊಂಡ ಸಾಲವನ್ನು ಹಿಂದಿರುಗಿಸುವುದೆ, ಕೂಡದೆ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಸಾಲದ ಭಾರವನ್ನು ಇಳಿಸಬೇಕಾದರೆ ಸಾಲದ ಮೊತ್ತವನ್ನು ತಗ್ಗಿಸುವುದು ಒಂದು ರೀತಿ. ಸರಕಾರದ ಉಪಪತ್ತಿಯನ್ನು ಹೆಚ್ಚಿಸಿಕೊಳ್ಳುವುದು ಇನ್ನೊಂದು ರೀತಿ. ಸಾಲದ ಅಸಲನ್ನು ಕೊಟ್ಟು ಹರಿಸಿಕೊಳ್ಳುವುದಕ್ಕಿಂತಲೂ ವರ್ಷದ ವರಮಾನವನ್ನು ಹೆಚ್ಚಿಸುವ ಆಸ್ತಿಗಳನ್ನೂ ಸಂಪದಭಿವೃದ್ಧಿ ಕಾರ್ಯಗಳನ್ನೂ ಹೆಚ್ಚಿಸಿಕೊಳ್ಳುವುದು ಮೇಲೆಂದು ಕೆಲವರ ಅಭಿಪ್ರಾಯ.† ಇನ್ನೂ ಕೆಲವರು ಹಿಂದಿರುಗಿ ಕೊಟ್ಟರೂ ಕೇಡಿಲ್ಲ. ಸರಕಾರದವರು ಸಾಲ ತೀರಿಸಿದರೆ ಬಡ್ಡಿಯ ರುಚಿಯನ್ನು ಕಂಡ ಹಣವೇನೂ ಪುನಃ ಏತಕ್ಕಾದರೂ ಹೂಡಿ ಸಂಪದಭಿವೃದ್ಧಿಗೆ ಒದಗಿಯೇ ಒದಗುವುದು. ತಮ್ಮ ಕೈಯಲ್ಲಿರಬೇಕಾದ ಹಣವನ್ನು ಇತರರ ಕೈಗೆ ಸಾಗಿಸಿದಂತಾಯಿತು ಅಷ್ಟೇ;—ತೀರಿಸಬೇಕು; ಎನ್ನುವರು. ಹಿಂದಕ್ಕೆ ತೆರದೆ ಹೋದರೆ ಯುದ್ಧಕಾಲದಲ್ಲಿ—ಎಂದರೆ ಆಪತ್ ಸಮಯದಲ್ಲಿ—ಸಹಾಯಮಾಡಿದವರಿಗೆ ಹಣ ಹಿಂತಿರುಗದುದು ಒಂದು; ಎರಡನೆಯದಾಗಿ ಈಗ ಕೇವಲ ಕುಳಿತು ತಿನ್ನುವವರಿಗೆ ಬಡ್ಡಿಯ ಹಣ ಸಂದಾಯ

---

* ಈ ಮೂಲಕ ಒಡುಬಡ್ಡಿಯ ದರವನ್ನು ಇಳಿಸಲೂ ಸಹಾಯವಾಗುವುದು. ಮೊನ್ನೆ ಇಂಗ್ಲಂಡಿನಲ್ಲಿ ಸುಮಾರು ೨೦೦ ಕೋಟಿ ಪೌಂಡು ಮೊತ್ತ ಸಾಲವನ್ನು ಶೇಕಡ ೫–ರಿಂದ ೩½ಗೆ ಇಳಿಸಿ ಈ ರೀತಿ ಮಾಡಿದರು.

† ಆದರೆ ಅದು ಸರಕಾರದ ಕಡೆಗೆ ಮಾತ್ರ ದೊರೆಯುವ ಅನುಕೂಲ. ಹಣ ಕೊಟ್ಟವರಿಗೆ ಹೆಚ್ಚು ಪ್ರಯೋಜನವಿಲ್ಲ. ತೆಗೆದುಕೊಂಡ ಸಾಲವನ್ನು ಹಿಂದಿರುಗಿಸದಿರುವುದು ಅಧರ್ಮವೆಂಬುದು ಪ್ರಬಲವಾದ ಯುಕ್ತಿ.

ವಾಗುವಂತೆ ಈಗಿನವರ ಮೇಲೆ ಭಾರಬಿದ್ದು ಉತ್ಪತ್ತಿ ವೃದ್ಧಿಗೆ ಪೆಟ್ಟು ಬೀಳು ವಂತೆಯೂ ಆಗುತ್ತದೆ. ಎರಡು ಕಾರಣಗಳಿಂದಲೂ ಯಾವುದಾದರೊಂದು ರೀತಿ ಸಾಲವನ್ನು ಹರಿಸುವುದೇ ಮೇಲೆನ್ನುವರು. ಇನ್ನು ಕೆಲವರು ಇನ್ನೂ ಮುಂದೆ ಹೋಗಿ ಇಂಥಾ ಸಾಲಗಳಿಂದ ಸರಕಾರಕ್ಕೆ ಹೆಚ್ಚು ತೊಂದರೆಯಾಗದಂತೆ ಈ ಯುದ್ಧದ ಬಂಡವಾಳಗಾರರಿಂದ ಬಂಡವಾಳದ ತೆರಿಗೆಯನ್ನೆತ್ತಿ (A Tax on Capital) ಆ ಸಾಲದ ಭಾರವನ್ನು ಕಡಮೆ ಮಾಡಿಕೊಳ್ಳುವುದು ಯೋಗ್ಯವೆಂದು ಹೇಳುವರು. ಒಟ್ಟಿನಲ್ಲಿ ಸಾಲ ವನ್ನು ತೀರಿಸುವುದರಿಂದ ಸರಕಾರದ ನಂಬಿಕೆಯೂ ಕೀರ್ತಿಯೂ ಉಳಿಯುವುವು. ಮುಂದೆ ಸಾಲವನ್ನು ಬೇರೆ ವಿಧಕ್ಕೆ ತಿರುಗಿಸಬೇಕಾದರೆ ಈಗಿನ ಕೀರ್ತಿ ಉಳಿಯಬೇಕು; ಈಗ ಸಾಲ ಹರಿಸಿಕೊಳ್ಳದಿದ್ದರೆ ಮುಂದೆ ಯುದ್ಧಾದಿ ಪ್ರಸಂಗಗಳು ಉಂಟಾದಾಗ ಪುನಃ ಸಾಲ ಹುಟ್ಟುವ ಹಾಗಿರ ಬೇಕು. ಅಲ್ಲದೆ ಈ ನಡುವೆ ಧಾರಣೆವಾಸಿಯೇನಾದರೂ ಇಳಿದರೆ ಸಾಲದ ಹೊರೆ ಹೆಚ್ಚುವ ಸಂಭವ ಉಂಟು, ಎಂದರಿತು ಅದನ್ನು ತೀರಿಸುವ ಉದ್ಯೋಗದಲ್ಲಿಯೇ ತೊಡಗುವರು. ಇಂಥ ವರ್ಷದಲ್ಲಿ ತೀರಿಸುವೆನೆಂದು ಹೇಳದಿದ್ದರೂ ಅನುಕೂಲವಾದಾಗ ಬ್ಯಾಂಕಿನವರ ಮೂಲಕ, ಯಾರು ಯಾರು ತಮ್ಮ ಸಾಲಪತ್ರಗಳನ್ನು ಮಾರಲು ಇಷ್ಟಪಡುವರೋ ಅಂಥವ ರಿಂದ ಕೊಂಡು ಆ ಮೂಲಕ ಅಸಲನ್ನು ಕರಗಿಸುವುದಾದರೂ ಒಳ್ಳೆಯ ದೆಂದು ತಿಳಿದಿರುವರು.

**ಋಣ ವಿಮೋಚಕ ನಿಧಿ.**— ಸಾಲದ ಇಳಿತಾಯಕ್ಕಾಗಿ ಒಂದು ನಿಧಿ ಯನ್ನು ಏರ್ಪಡಿಸಬೇಕೆನ್ನುವುದುಂಟು. ಅದು ಶಿಷ್ಟಸಂಪ್ರದಾಯವೂ ಹೌದು. ಅದಕ್ಕಾಗಿ ವರ್ಷೇ ವರ್ಷೇ ವರಮಾನದಿಂದ ಸ್ವಲ್ಪ ಭಾಗವನ್ನು ತೆಗೆದಿಡುವರು. ಆದರೆ ಈ ನಿಧಿಯ ಹಣ ಬೇರೆ ಆಗತ್ಯವಾದ ಸಫಲ ಕಾರ್ಯಕ್ಕೆ ಉಪಯೋಗವಿಲ್ಲದಾಗುವುದು. ಕಡೆಯಲ್ಲಿ ಸಾಲ ತೀರುವು ದಾದರೂ, ಅದು ನಡೆಯುವವರೆಗೂ ತೆರಿಗೆಯ ಭಾರವೇನೂ ಜನರಿಗೆ ಕಡಮೆಯಾಗುವುದಿಲ್ಲ; ತೆರಿಗೆ ಹೆಚ್ಚಿದಂತೆಲ್ಲ ತೆರಿಗೆ ತೆರುವ ಜನರ ಕಷ್ಟವೂ ಅಸಮಾಧಾನವೂ ಹೆಚ್ಚುವುವು; ವರ್ಷೇ ವರ್ಷೇ ಸರಕಾರದವರು ಮಾಡ ಬೇಕಾದ ಸಾಲದ ವೆಚ್ಚ ಕುಂದುವುದಿಲ್ಲವಾಗಿ ಆ ಪದ್ಧತಿಯನ್ನು ಕಂಡರೆ

ಅನೇಕ ಸರಕಾರಗಳವರಿಗೂ ಧನಶಾಸ್ತ್ರಜ್ಞರಿಗೂ ಪ್ರಸನ್ನತೆಯಿಲ್ಲ. ತೆರಿಗೆಯ ಮೂಲಕವಾಗಿ ತೆಗೆಯಲಿ, ಸಾಲದ ಮೂಲಕವಾಗಿ ತೆಗೆದುಕೊಳ್ಳಲಿ ಹಣವನ್ನು ಸರಕಾರಕ್ಕೆ ಕೊಡುವ ಹೊರೆ ಜನರ ತಲೆಯಮೇಲೆ ಹೊತ್ತಿರುತ್ತದೆ ಎಂಬ ಅಂಶ ಈವರೆಗೆ ತಿಳಿದಿರಬಹುದು. ಆದ್ದರಿಂದ ಯಾವ ದೇಶದ ತೆರಿಗೆ ಪದ್ಧತಿಯ ಫಲಾಫಲಗಳನ್ನು ಗುಣಿಸಬೇಕಾದರೂ ಸಂಗತಿಗಳು ಎಲ್ಲವನ್ನೂ ಸೇರಿಸಿ ಒಟ್ಟಿನಲ್ಲಿ ತೆಗೆದುಕೊಳ್ಳಬೇಕು. ಇಂಗ್ಲಂಡಿನ ಕಾಲ್ವಿನ್ ಕಮಿಟಿಯವರು ಹೇಳಿರುವಂತೆ:—

(೧) ತೆರಿಗೆಯ ಪದ್ಧತಿಯಲ್ಲಿ, ಅವುಗಳನ್ನು ಎತ್ತುವ ರೀತಿಯಿಂದ ದೇಶದಲ್ಲಿ ಉದ್ಯೋಗಕ್ಕೆ (Employment) ಯಾವ ಅನುಕೂಲ ಪ್ರತಿಕೂಲ ಉಂಟಾಗುವುವು?

(೨) ಸಾಲಗಳನ್ನು ಹರಿಸುವ ಪ್ರಯತ್ನದಿಂದಲೂ ವಿಧಾನದಿಂದಲೂ ಯಾವುವು ಉಂಟಾಗುವುವು?

(೩) ಸಾಲದ ಹಣವನ್ನು ಉಪಯೋಗಿಸಿಕೊಂಡು ಸಾರ್ವಜನಿಕ ಹಿತಕ್ಕೆ ಬೇಕಾಗುವ ವೆಚ್ಚಗಳನ್ನು ಮಾಡುವುದರಿಂದ ಯಾವ ಪ್ರಯೋಜನ ದೊರೆಯುವುವು?

ಎಂದಾದರೂ ಆಲೋಚಿಸಿ ತೀರ್ಮಾನಿಸಬೇಕಾಗುವುದು.

**ಒಟ್ಟಿನಲ್ಲಿ ಹೊರೆಯ ಅಳತೆ ಹೇಗೆ?**—ದೇಶದಲ್ಲಿನ ಬಂಡವಾಳದಿಂದ ಒಟ್ಟು ಇಷ್ಟು ಪ್ರಮಾಣದಂತೆ ಎಂದು ಗೊತ್ತುಮಾಡಿ ಆ ಹಣವನ್ನು ತೆರಿಗೆಯ ಮೂಲಕ ಎತ್ತಿ ಸಾಲ ಹರಿಸುವುದೆ? ದೇಶದ ಸಂಪದುತ್ಪತ್ತಿಯ ಪರಿಮಾಣದ ಮೇಲೆ ಒಂದು ಸಮತೆರಿಗೆ (Flat Rate) ಹಾಕುವುದೆ? ವರಮಾನದ ತೆರಿಗೆಗಳಲ್ಲ ಹೆಚ್ಚು ಕಡಮೆ ಮಾಡುವುದೆ? ಸಾಲದ ಅಸಲನ್ನು ವರ್ಷೇ ವರ್ಷೇ ಕರಗಿಸಿಕೊಳ್ಳುವುದೆ? ಅಥವಾ ಪೇಟೆಯ ಬಡ್ಡಿಯ ನಡಗೆಯನ್ನು ನೋಡುತ್ತಿದ್ದು ಸಮಯವೂ ಅನುಕೂಲವೂ ಆದಂತೆಲ್ಲ ಕಡಮೆಯ ದರದ ಬಡ್ಡಿಗೆ ಸಾಲವನ್ನು ಇಳಿಸಿಕೊಳ್ಳುವಂತೆ ತಿರುಗಿಸುವುದೆ? ಸಾಲವನ್ನು ತೀರಿಸಬೇಕಾದಾಗ ಸಾಲದ ಇಳಿಮಾನದ ನಿಧಿಯನ್ನು (Sinking Fund) ಸ್ಥಾಪಿಸುವುದೆ? ಅದಕ್ಕಾಗಿ ಹಣವನ್ನು ಕೂಡಿಟ್ಟರೆ ಯಾವ ಬಗೆಯಲ್ಲಿ ಆದಾಯವಾಗಿ ಬಂದ ಸರಕಾರದ ಹಣವನ್ನು ಯಾವ ಪ್ರಮಾಣದಲ್ಲಿ

ಸಂಗ್ರಹಿಸುವುದು? ಅಥವಾ ಇಂಥ ಸ್ಥಿತಿಯ ಜೊತೆಗೆ ಸಾರ್ವಜನಿಕ ಕಾರ್ಯಗಳನ್ನು ಕೈಕೊಂಡು ಸರಕಾರದ ಆಸ್ತಿಯನ್ನೂ ವರಮಾನವನ್ನೂ ಹೊರೆ ಹಗುರವಾಗುವಂತೆ ಅವರ ಬಿಲ್ಲನ್ನು ಅದೇ 'ಏಜೆನ್ಸಿ' ಕೊಳ್ಳುವಂತೆ ಮಾಡುವುದೆ? ಎಂಬ ಅನೇಕ ಪ್ರಶ್ನೆಗಳು ಒಂದು ಆಯಾ ದೇಶದ ಆರ್ಥಿಕಸ್ಥಿತಿ, ಜನರ ಮನಸ್ಸು, ಅವರ ಅಭ್ಯಾಸ, ಸಂಪ್ರದಾಯ, ಸರಕಾರದಲ್ಲಿ ಅವರಿಗಿರುವ ನಂಬಿಕೆ, ತಲೆಯೊಂದಕ್ಕೆ ಈಗಾಗಲೆ ತೆರಿಗೆ ಹೆಚ್ಚಿಸಿಕೊಂಡು ಸಾಲದ ಹೊರೆ ಹೇಗೆ ಬಿದ್ದಿದೆ? ಒಟ್ಟು ದೇಶದಮೇಲೆ ತೆರಿಗೆಯ ಭಾರ ಎಷ್ಟಿದೆ? ತಮ್ಮ ತೆರಿಗೆ ತೆರುವ ಶಕ್ತಿ ಇನ್ನು ಎಷ್ಟು ಉಳಿದಿದೆ? ದೇಶದ ಒಟ್ಟು ಸಂಪತ್ತು ವರಮಾನಗಳಿಗೆ ಹೋಲಿಸಿದರೆ ತೆರಿಗೆಯ ಪ್ರಮಾಣ ಎಷ್ಟು? ದೇಶದಲ್ಲಿ ಸಂಪತ್ತೂ ವರಮಾನವೂ ಜನವರ್ಗದಲ್ಲಿ ಹಂಚಿರುವ ರೀತಿ ಯಾವುದು? ಯಾವಯಾವ ತೆರಿಗೆಗಳು ಯಾವ ವರ್ಗದ ಮೇಲೆ ಹೊತ್ತಿವೆ? ಅವು ಹೇರಿ ಹೊರುತ್ತಿರುವ ಪ್ರಮಾಣಕ್ಕೂ ಸಂಪತ್ತು ವರಮಾನಗಳು ಹಂಚಿರುವ ಮತ್ತು ಉಂಟಾಗುತ್ತಿರುವ ರೀತಿಗೂ ಯಾವ ಹೊಂದಿಕೆ ಇದೆ? ದೇಶದ ಕೈಗಾರಿಕೆ ಉದ್ಯೋಗಗಳ ಲಕ್ಷಣವೇನು? ಅವಕ್ಕೆ ಬೇಕಾಗುವ ಬಂಡವಾಳ ಹೆಚ್ಚೊ ಕಡಿಮೆಯೊ? ಸರಕಾರದ ವ್ಯಯದ ಉದ್ದೇಶವೇನು? ಅವುಗಳಿಂದ ಆರ್ಥಿಕ ಪ್ರಯೋಜನಗಳು ಎಷ್ಟು ಹೆಚ್ಚಾಗಬಹುದೆಂಬ ನಿರೀಕ್ಷೆಯಿರುವುದು? ಕೇಂದ್ರ ಸರಕಾರಕ್ಕೂ ಪ್ರಾಂತ ಅಥವಾ ಸ್ಥಳೀಯ ಧನಸಂಗ್ರಹ ಸಂಸ್ಥೆಗಳಿಗೂ ಯಾವ ಸಂಬಂಧಗಳು ಏರ್ಪಟ್ಟಿವೆ? ಪ್ರಧಾನ ಸರಕಾರದವರಾಗಲಿ ಪ್ರಾಂತ ಅಥವಾ ಸ್ಥಳೀಯ ಅಧಿಕಾರಿ ಮಂಡಲವಾಗಲಿ ನಡೆಸುತ್ತಿರುವ ಸಾರ್ವಜನಿಕ ಕೈಗಾರಿಕೆ ಮತ್ತು ಉತ್ಪತ್ತಿ ಕಾರ್ಯಗಳ ನೀತಿ (Policy) ಯಾವುದು? ಅದರಿಂದ ತೆರಿಗೆಯ ಭಾರ ಇಳಿಯುವುದೆ—ಏರುವುದೆ? ಜನರ ಸಾಮಾಜಿಕ ಸ್ಥಿತಿಗತಿಗಳು ಹೇಗಿವೆ? ಅವರ ಜೀವನದ ಮಟ್ಟವೂ ವೆಚ್ಚವೂ ಹೆಚ್ಚು ಕಡಿಮೆಯೆ? ಎಂಬ— ಅನೇಕ ಸಂಗತಿಗಳನ್ನು ಎಣಿಕೆಗೆ ತೆಗೆದುಕೊಂಡು ಲೆಕ್ಕ ಮಾಡಬೇಕಾಗುವುದು.

**ವಿದೇಶಿಯರು ಕೊಟ್ಟ ಸಾಲಗಳು.**—ಸಾಲದ ಭಾರ ಹೆಚ್ಚು, ಕಡಿಮೆಯೆಂದು ಎಣಿಸುವಾಗ ಸಾಲ ನಿಷ್ಫಲ (Unproductive) ಕಾರ್ಯಗಳಿಗೆ

ಉಪಯೋಗಿಸಲ್ಪಟ್ಟಿದೆಯೆ ಅಥವಾ ಸಫಲ (Productive) ಕಾರ್ಯಗಳಿಗೆ ಯೋಜಿಸಲ್ಪಟ್ಟಿದೆಯೆ ಎಂದು ಹೇಗೆ ಲೆಕ್ಕಮಾಡಬೇಕೊ ಹಾಗೆಯೇ ಸಾಲ ಒಳದೇಶದವರಿಂದ ತೆಗೆದುಕೊಂಡದ್ದೆ ಹೊರದೇಶಗಳವರಿಂದ ತೆಗೆದುಕೊಂಡದ್ದೆ ಎಂಬುದೂ ಮುಖ್ಯವಾದ ಸಂಗತಿ. ಇಲ್ಲಿ ಮಾಡಿಕೊಳ್ಳಬಹುದಾಗಿರುವ ವ್ಯತ್ಯಾಸಗಳನ್ನು ಅಲ್ಲಿ ಮಾಡುವಹಾಗಿಲ್ಲ. ಮೊದಲು ಗೊತ್ತುಮಾಡಿದಂತೆ ಪರದೇಶದ ಸಾಹುಕಾರರಿಗೆ — ಕಷ್ಟವೆನ್ನದೆ, ಸುಖವೆನ್ನದೆ — ಅಸಲನ್ನೂ ಬಡ್ಡಿಯನ್ನೂ ತೆರಲೇ ಬೇಕಾಗುವುದು. ಇಲ್ಲವಾದರೆ ದೇಶದ ಕೀರ್ತಿ ಕೆಟ್ಟು ಉತ್ತರೋತ್ತರ ತೊಂದರೆಗಳು ಉಂಟಾಗುವುವು. ವಿದೇಶಿ ಸಾಲದ ದುಷ್ಪರಿಣಾಮ ಬಹಳ ಹೆಚ್ಚು. ಅಸಲು ತೀರಿಸುವುದರಿಂದಾಗಲಿ, ಬಡ್ಡಿ ಕೊಡುವುದರಿಂದಾಗಲಿ ಆ ಮೊತ್ತದ ಹಣ ವರಮಾನವಾಗಿ ಬಂಡವಾಳವಾಗಿ ಅವರ ಪ್ರಯೋಜನಕ್ಕೆ ಸಾಗುವುದು. ಅದರ ಯಾವ ಸ್ವಲ್ಪ ಭಾಗವೂ ಇಲ್ಲಿನ ಉತ್ಪತ್ತಿಕಾರ್ಯಗಳಿಗಾಗಲಿ ಪದಾರ್ಥಗಳ ಕೊಳ್ಳಾಟಕ್ಕಾಗಲಿ ಉದ್ಯೋಗ ನಿರ್ಮಾಣಕ್ಕಾಗಲಿ ಪ್ರಯೋಜನವಾಗದೆ ಸಂಪೂರ್ಣವಾಗಿ ಹೊರಕ್ಕೆ ಪ್ರವಹಿಸುವುದು. ಒಳಗಿನವರಿಂದ ತೆಗೆದ ಸಾಲ ದೇಶದ ಒಳಗೇ ಇರುವುದು; ಜನತೆಯ ಒಂದು ವರ್ಗದವರ ಹಣ ಇನ್ನೊಂದು ವರ್ಗದವರ ಕೈಗೆ ಸರಿಯುವುದೇ ಹೊರತು ಒಟ್ಟು ದೇಶದ ಕೈತಪ್ಪಿ ಹೋಗದೆ ಅದರ ಪ್ರಯೋಜನಕ್ಕೆ ಸಂಪೂರ್ಣವಾಗಿ ನೆರೆಯುವ ಸಂಭವವುಂಟು.

**ಸಾಲಗಳ ಆರ್ಥಿಕ ಫಲಗಳು.** — ಸಾಲಗಳ ಆರ್ಥಿಕ ಪರಿಣಾಮಗಳಲ್ಲಿ ಇನ್ನೊಂದೆರಡನ್ನು ತಿಳಿಸಿ ಮುಂದೆ ಸಾಗಬಹುದು: ದೇಶದಲ್ಲಿರುವ ಬಂಡವಾಳಕ್ಕೆ ಯಾವ ಒಂದು ಸಮಯದಲ್ಲಿಯೇ ಆಗಲಿ ಮಿತಿಯಿದೆ. ಕೈಗಾರಿಕೆ ಮೊದಲಾದ ಸಂಪದಭಿವೃದ್ಧಿಕಾರ್ಯಗಳಿಗೆ ಉಪಯುಕ್ತವಾಗುತ್ತಿದ್ದ ಹಣವನ್ನು ಸರಕಾರದ ಸಾಲಕ್ಕಾಗಿ ತಿರುಗಿಸಿಕೊಂಡರೆ ಆ ಮಟ್ಟಿಗೆ ಅವು ಬಡವಾಗುವುವು. ಸರಕಾರ ಕೊಡುವೆನೆನ್ನುವ ಬಡ್ಡಿಯ ದರವೂ ಪ್ರಯೋಜನದ ದರವೂ ಎಷ್ಟು ಎಂಬುದರಿಂದ ಇಲ್ಲಿನ ಲಾಭ ನಷ್ಟಗಳ ಪ್ರಮಾಣ ಗೊತ್ತಾಗುವುದು. ಅವು ಸಾಮಾನ್ಯವಾಗಿದ್ದರೆ ಕೈಗಾರಿಕೆಗಳಲ್ಲಿ ಈಗಾಗಲೇ ಹೂಡಿರುವ ಬಂಡವಾಳ ಅಲ್ಲಿಯೇ ಉಳಿಯುವುದು. ಹಾಗೆ ಹೂಡದೆ ಇನ್ನೂ

ಜಡಿಯಾಗಿರುವ ಬಂಡವಾಳ ಮಾತ್ರ ಸರಕಾರಿ ಸಾಲಕ್ಕೆ ಹರಿದುಬರುವುದು.* ಆಗ ಬಹುತರವಾಗಿ ಸರಕಾರದ ಸಾಲಪತ್ರಗಳಿಗೂ ಕೈಗಾರಿಕೆ ಪತ್ರಗಳಿಗೂ ಯಾವ ಸ್ಪರ್ಧೆಯೂ ಉಂಟಾಗುವುದಿಲ್ಲ. ಕೆಲವು ವೇಳೆ ಈ ಪತ್ರಗಳನ್ನು ಕೊಳ್ಳಬೇಕೆಂಬ ಆಸೆ ಜನರಿಗೆ ಹೆಚ್ಚು ಉಂಟಾಗಿ ಅವರು ಅಗತ್ಯವಾದ ಸ್ವಂತ ವೆಚ್ಚಗಳನ್ನು ಕಡಮೆ ಮಾಡಿಕೊಂಡು ಹಣ ಕೂಡಿಸಬೇಕೆಂದು ಉತ್ತೇಜಿತರಾಗುವ ಸಂಭವವುಂಟು. ಸಾಲದ ಹಣವನ್ನು ಸರಕಾರದವರೂ ಕೈಗಾರಿಕೆಗಾಗಿಯೇ ತೆಗೆದುಕೊಂಡರೆ ಮಾತ್ರ ಖಾಸಗಿ ಕೈಗಾರಿಕೆಗಳಿಗೆ ಕೊಡುವ ಬಂಡವಾಳ ಪ್ರಪಂಚದಲ್ಲಿ ಸ್ಪರ್ಧೆ ಮಾಡಿದಂತಾಗುವುದು (ಯುದ್ಧಾದಿಗಳಿಗೆ ಉಪಯೋಗಿಸಿದರೆ ಅಂಥ ಪೈಪೋಟಿ ಇರುವುದಿಲ್ಲ). ಹೆಚ್ಚು ಬಡ್ಡಿಯನ್ನು ಕೊಡುತ್ತೇವೆಂದು ಆಸೆ ತೋರಿಸಿ ಸರಕಾರದವರು ಸಾಲವೆತ್ತಿದರೆ ಸರಕಾರದ ನಂಬಿಕೆಯೇ ಮೇಲಾದುದರಿಂದ ಜನರು ಹೆಚ್ಚು ಹಣವನ್ನು ಕೂಡಿಡುವರಲ್ಲದೆ ಸಾಲ ಕೊಡಲು ಹೆಚ್ಚಾಗಿ ಮುಂದೆ ಬರುವುದು ಸಹಜ. ಖಾಸಗಿ ಉತ್ಪತ್ತಿಕ್ಷೇತ್ರದಲ್ಲಿ ಬಂಡವಾಳವನ್ನು ಹೂಡಿದವರೂ ಅಲ್ಲಿಂದ ಹಣವನ್ನು ಹಿಂದಕ್ಕೆ ತೆಗೆದುಕೊಂಡು ಈ ಸಾಲಪತ್ರಗಳನ್ನು ಕೊಳ್ಳಲು ಆತುರಪಡುವರು. ಇದರ ಫಲ ಕಂಡಹಾಗೆಯೇ ಇದೆ. ಖಾಸಗಿ ಉತ್ಪತ್ತಿ ಕಾರ್ಯಗಳಿಗೆ ಅಡ್ಡಿ — ಕಷ್ಟ. ಪೇಟೆಯಲ್ಲಿ ಬಡ್ಡಿಯ ದರ ಖಾಸಗಿ ಜನರಿಗೆ ಕೆಡುಕಾಗುವಷ್ಟು ಮೇಲೆ ಏರುವುದು. ಅವಕ್ಕೆ ನಷ್ಟ ಎಷ್ಟು ಎಂಬುದು — ಸರಕಾರದ ಸಾಲದ ಮೊತ್ತ ಎಷ್ಟು? ಸಾಲದ ಉದ್ದೇಶವೇನು? ಅದರ ವಿನಿಯೋಗ ಹೇಗೆ ಎಂಬುದರಿಂದ ನಿರ್ಧರವಾಗುವುದು. ಈ ಸಾಲ ಬಂಡವಾಳಗಳಿಗೆಲ್ಲಾ ಹಣ ಕೊಡುವುದಾದರೂ ಹೇಗೆ? (೧) ಸ್ವಂತವಾಗಿ ಜನರು ತಿಂಡಿತೀರ್ಥ ಸೌಕರ್ಯಗಳಲ್ಲಿ ಇಕ್ಕಟ್ಟು ಮಾಡಿಕೊಂಡು ಹಣವನ್ನು ಸಾಲಕ್ಕೆ ಒದಗಿಸಬಹುದು. ಆಗ ಅವರು ಕೊಳ್ಳುತ್ತಿದ್ದ ಪದಾರ್ಥಗಳಿಗೆ ಗಿರಾಕಿ ಕುಗ್ಗಿ ಅವುಗಳ ಉತ್ಪತ್ತಿ ಕಡಮೆಯಾದೀತು; ಅಲ್ಲಿ ಉದ್ಯೋಗ ಇಳಿದೀತು. ಅದರಿಂದ ಇತರ ಕೈಗಾರಿಕೆಗಳಿಗೂ ನಷ್ಟ ಹರಡೀತು. ಅಥವಾ, (೨) ಈವರೆಗೆ ಲಾಭಕರವಲ್ಲವಾಗಿದ್ದ

* ಯಾವ ಕೆಲಸಕ್ಕೇ ಆಗಲಿ ಸರಕಾರದ ಪ್ರೋತ್ಸಾಹವಿದೆ ಎಂದರೆ ಸರಕಾರದ ವ್ಯಾಪಾರಕ್ಕೇ ಬಲ ಬರುತ್ತದೆ. ಅದರ ಕಡೆಗೇ ಜನರ ಮನಸ್ಸು ಹೆಚ್ಚು ಒಲಿಯುತ್ತದೆ

ಉದ್ಯೋಗ ಕೈಗಾರಿಕೆಗಳಲ್ಲಿ ಹೂಡಿದ್ದ ಹಣ ಅಲ್ಲಿಂದ ಎದ್ದು ಸರಕಾರದ ಕೈಗೆ ಬಿದ್ದೀತು. ಅಥವಾ, (ಇ) ಕಡಮೆ ಬಡ್ಡಿ ಸಂಪಾದನೆಯಾಗುತ್ತಿದ್ದ ಕಡೆಯಿಂದ ಈ ಹೆಚ್ಚು ಬಡ್ಡಿಯ ಆಸೆಗಾಗಿ ಇಲ್ಲಿಗೆ ಕೂಡಿಬರುವುದು — ಇದರಿಂದ ಸಾಮಾನ್ಯವಾಗಿ ನಡೆಯುತ್ತಿದ್ದ — ಎಂದರೆ, ಲಾಭವಿಲ್ಲದೆ ನಷ್ಟವಿಲ್ಲದೆ ತೆವಳಿಕೊಂಡು ನಡೆಯುತ್ತಿದ್ದ ಕರೆಯಲ್ಲಿನ ಕೈಗಾರಿಕೆ ಸಂಸ್ಥೆಗಳಿಗೆ (Marginal Industries) ಕ್ಷಾಮ ಬಂದು ಅವುಗಳ ಪೋಷಣೆ ನಿಲ್ಲುವುದು. ಅತಿಯಾಗಿ ಬಡ್ಡಿ ಏರಿಸಿ ಎತ್ತಿದ ಸಾಲದಿಂದ ಕಡೆಗೆ ಖಜಾನೆಗಾಗಲಿ ಸಮಾಜಕ್ಕಾಗಲಿ ಯಾವ ಲಾಭವೂ ಇಲ್ಲ. ಜನರಿಗೆ ತೆರಿಗೆ ತೆರುವ ಶಕ್ತಿ ಕಡಮೆಯಾದಂತೆಲ್ಲಾ ತೆರಿಗೆಯ ಹುಟ್ಟುವಳಿ ಇಳಿಯುತ್ತಿದ್ದರೆ ಹೆಚ್ಚು ಬಡ್ಡಿ ತೆರಬೇಕಾಗಿರುವ ಸರಕಾರದ ವೆಚ್ಚ ಏರುತ್ತ ಹೋಗಿ ಇಬ್ಬಗೆಯ ನಷ್ಟ ಪ್ರಾಪ್ತಿಯಾಗುವುದು. ಈ ಬಗೆಯ ಸಾಲಗಳಿಂದ ಧಾರಣೆವಾಸಿ ಕೃತ್ರಿಮವಾಗಿ ಏರುವುದು. ಅದರ ಪರಿಣಾಮವೆಲ್ಲ ಹಿಂದೆ ವಿವರಿಸಿರುವಂತೆ ಸಾಲಾಗಿ ಉಂಟಾಗುವುದು. ಉದ್ಯೋಗ ಕೈಗಾರಿಕೆಗಳಲ್ಲಿ ಕೆಲಸ ಮಾಡುವ ಜನರ ಕಷ್ಟಗಳು ಮೇರೆ ಮೀರುವುವು. ವರಮಾನ ಮತ್ತು ಹಣದ ಹಂಚಿಕೆಯ ವಿಷಯವಾಗಿ ಅವರ ಕ್ಲೇಶಗಳೆಲ್ಲ ಭೇತಾಳನಂತೆ ಬೆನ್ನು ಹತ್ತಿ ಬರುವುವು.

ಸರಕಾರಿ ಹಣಸಂಗ್ರಹ ಕಾರ್ಯವಿವರಣದಲ್ಲಿ ಇನ್ನೊಂದು ನಡವಳಿಕೆಯನ್ನು ಕಡೆಯವರೆಗೂ ಇಟ್ಟುಕೊಂಡಿತು. ಅದರ ವಿಚಾರ ಈಗಾಗಲೇ ಅಲ್ಲಲ್ಲಿ ಅಷ್ಟಷ್ಟನ್ನು ಸೂಕ್ಷ್ಮವಾಗಿ ತಿಳಿಸಿ ಆಗಿದೆ. ಆದರೂ ಅದರ ಸ್ಥಾನ ಇಲ್ಲಿ. ಸರಕಾರ ಹಣವನ್ನು ಹುಟ್ಟಿಸಿಕೊಳ್ಳುವುದು — ಆಸ್ತಿಗಳಿಂದ, ತೆರಿಗೆಯಿಂದ, ಸಾಲಗಳಿಂದ, ತಾನೇ ಅಚ್ಚುಮಾಡಬಲ್ಲ ನೋಟು ನಾಣ್ಯಗಳಿಂದ ಎಂದು ಹೇಳಿತಷ್ಟೆ. ಈ ಕಡೆಯ ಬಾಬನ್ನು ಈಗ ವಿಸ್ತಾರಮಾಡಿದೆ.

**ಕಾಗದ ನಾಣ್ಯಗಳ ತಯಾರಿಕೆ.** — ಸರಕಾರಕ್ಕೆ ತನ್ನ ಕಾರ್ಯಮಂಡಲದಲ್ಲಿ ಸರ್ವಾಧಿಕಾರವಿರುವುದರಿಂದ ಯಾರನ್ನೂ ಒಂದು ಕಾಸು ಕೊಡಿರೆಂದು ಕೇಳದೆ ಹೊಸಹೊಸವಾಗಿ ನೋಟನ್ನು ಅಚ್ಚುಮಾಡಿ ತನ್ನ ವೆಚ್ಚಗಳಿಗೆ ಬೇಕಾಗುವ ಎಲ್ಲ ಹಣವನ್ನೂ ಒದಗಿಸಿಕೊಳ್ಳಬಹುದು. ಇತರ ಯಾವ ವಿಧದಲ್ಲಿಯೂ ಬಾಳಲಾರದ ಸರಕಾರ ಈ ಮೂಲಕವೇ ಕೆಲವು ಕಾಲ

ಬಾಳುವುದು ಸಾಧ್ಯ. ಇದೂ ಒಂದು ಬಗೆಯ ತೆರಿಗೆ. ಆದರೆ ಇದನ್ನು ತೆರಿಗೆ ಎಂದು ಕರೆಯುವುದಿಲ್ಲ; ಅದು ಹಾಗೆ ಕಾಣುವುದಿಲ್ಲ. ಇದನ್ನು ತಪ್ಪಿಸಿಕೊಳ್ಳುವುದು ಪ್ರಜೆಗೆ ಕಷ್ಟ. ಅತಿದುರ್ಬಲವಾದ ಸರಕಾರವೂ ಈ ಉಪಾಯವನ್ನು ಸಾಧಿಸಬಲ್ಲದು. ದಿವಾಳಿ ಗತಿಗೆ ಬಂದಿರುವ ಸರಕಾರಗಳೂ, ಯಾರಿಂದಲೂ ಸಾಲ ಹುಟ್ಟದಿರುವ ಸರಕಾರಗಳೂ, ನೀತಿರಹಿತವಾದ ಸರಕಾರಗಳೂ, ಯುದ್ಧಾದಿ ವಿಪರೀತಗಳಲ್ಲಿ ತೊಳಲುತ್ತಿರುವ ಸರಕಾರಗಳೂ ಈ ಮೂಲಕ ಖರ್ಚಿಗೆ ಬೇಕಾಗುವ ಹಣವನ್ನೆಲ್ಲ ತಯಾರು ಮಾಡಿಕೊಳ್ಳುವುವು.

ಹಣದ ಬೆಲೆಯನ್ನು ಕುರಿತ ಪ್ರಕರಣದಲ್ಲಿ, ಜನರು ಉತ್ಪತ್ತಿಮಾಡಿ ಅನುಭವಿಸಲಿರುವ ಸಂಪತ್ತು ಯಾವ ವಿಧದಲ್ಲಿಯೂ ಹೆಚ್ಚದೆ ಇದ್ದು, ಅವರ ಅಭ್ಯಾಸಗಳು ಬದಲಾಗದೆ ಇರುವಾಗ ಹಣದ ಮೊತ್ತ ಮಾತ್ರ ಮೊದಲಿದ್ದುದಕ್ಕಿಂತ ಎರಡರಷ್ಟು, ಹತ್ತರಷ್ಟು ಹೆಚ್ಚಿದರೆ — ಅವರ ಕೈಯಲ್ಲಿ ಓಡಿಯಾಡಿ ವ್ಯಾಪಾರಕ್ಕೆ ಸೇರಿದರೆ, — ನಿಜವಾಗಿ ಲಾಭವೇನೂ ಇಲ್ಲ; ಕೊಂಡುಕೊಳ್ಳುತ್ತಿದ್ದ ಪದಾರ್ಥಗಳಿಗೇ ಈಗ ಎರಡರಷ್ಟು, ಹತ್ತರಷ್ಟು ಹಣ ತೆರಬೇಕಾಗುತ್ತದೆ; ಹಣದ ಬೆಲೆ ಮೊದಲಿಗಿಂತ ಎರಡರಷ್ಟು, ಹತ್ತರಷ್ಟು ಇಳಿಯುತ್ತದೆ; ವಸ್ತು ಸೌಕರ್ಯಗಳ ಲೆಕ್ಕದಲ್ಲಿ ಅಳೆಯುವ ದೇಶದ ಸಂಪತ್ತು ಅಷ್ಟು ಪ್ರಮಾಣದಲ್ಲಿಯೇ ಇದ್ದು, ನಾಣ್ಯ ನೋಟು ಎಷ್ಟು ಪ್ರಮಾಣದಲ್ಲಿ ಹೆಚ್ಚಿದರೆ ತಾನೇ ಪ್ರಯೋಜನವೇನು ಬಂತು? ಹಣದ ಬೆಲೆ ಆ ಪ್ರಮಾಣಕ್ಕೆ ಕುಗ್ಗಿ ಹೋಗುವುದು — ಎಂದು ಹೇಳಲಾಗಿದೆ. ಸರಕಾರ ಹೊಸ ಹೊಸದಾಗಿ ನೋಟನ್ನು ಚಲಾಯಿಸುತ್ತಿದ್ದರೆ ಹಣದ ಬೆಲೆ ಇಳಿದು ಪದಾರ್ಥಗಳ ಬೆಲೆ ಏರುವುದರಿಂದ ಆ ಮೊತ್ತದಷ್ಟು ತೆರಿಗೆಯನ್ನು ಸರಕಾರ ಜನರಿಂದ ಎತ್ತಿದ ಹಾಗಾಯಿತು. ಜನರು ತಮಗೆ ತಿಳಿಯದೆಯೆ ಅಷ್ಟು ಹೊಸ ತೆರಿಗೆಯನ್ನು ತೆತ್ತಹಾಗಾಯಿತು. ಇದರ ಭಾರ ಹೆಚ್ಚಾಗಿ ಎಲ್ಲಾ ಕಡೆಯೂ ಹರಡುವುದು. ಎತ್ತುವುದು ಸುಲಭ. ಸರಕಾರಕ್ಕೆ ವೆಚ್ಚವೇ ಇಲ್ಲವೆನ್ನಬೇಕು. ಯಾರು ಹಣವನ್ನು ವೆಚ್ಚಮಾಡುತ್ತಾರೋ ಅವರ ವೆಚ್ಚಕ್ಕೆ ಅನುಗುಣವಾಗಿ, ಅವರ ಸಂಪತ್ತು ವರಮಾನಗಳ ಪ್ರಮಾಣಕ್ಕೆ ಹೊಂದಿಕೊಂಡು ಈ ತೆರಿಗೆ ಬೀಳುವುದು. ಆದುದರಿಂದಲೇ ಸರಕಾರದ

ಅಧಿಕಾರಿಗಳು ಆಪತ್ ಸಮಯದಲ್ಲಿ ಹಿಂದೆ ಮುಂದೆ ನೋಡದೆ ಈ ರೀತಿ ಹಣವನ್ನೊದಗಿಸಿಕೊಳ್ಳುವರು.

**ದುಷ್ಫಲಗಳು.**—ಮೊದಮೊದಲು ಸರಕಾರಕ್ಕೆ ಇದರಿಂದ ಲಾಭವೇ. ಹಿಂದೆ ಎಷ್ಟು ವಸ್ತುಸಾಮಗ್ರಿಯನ್ನು (ಆ ವರೆಗೂ ಬಳಕೆಯಲ್ಲಿದ್ದ ಧಾರಣೆ ವಾಸಿಗೆ ತಕ್ಕಂತೆ) ಕೊಳ್ಳುತ್ತಿದ್ದರೊ ಅಷ್ಟನ್ನೂ ಕೊಂಡುಕೊಳ್ಳಬಹುದು. ಆದರೆ ಬಹುಬೇಗ ಪದಾರ್ಥಗಳ ಬೆಲೆ ಏರಿ ಹಣದ ಬೆಲೆಯನ್ನು ಇಳಿಸುವುದು. ಕೂಡಲೆ ಧಾರಣೆಗಳು ಎಷ್ಟು ಪ್ರಮಾಣದಲ್ಲಿ ಏರುವುವೊ ಆ ಪ್ರಮಾಣಕ್ಕೆ ಮೀರಿ ಹೆಚ್ಚು ನೋಟನ್ನು ಅಚ್ಚು ಮಾಡಬೇಕಾಗುವುದು. ಹಾಗೆ ಮಾಡಿದ ಹೊರತು ತಮಗೆ ಬೇಕಾಗುವಷ್ಟು ಸಾಮಾನು ದೊರೆಯುವುದಿಲ್ಲ. ಪುನಃ ಧಾರಣೆ ಏರುವುದು. ಜಾಡ್ಯ ಹೀಗೇ ಪ್ರಬಲಿಸುತ್ತ ಹೋಗುವುದು.

ಹಣದ ಬೆಲೆ ಅತಿಯಾಗಿ ಇಳಿಯಿತೆಂದು ಗೊತ್ತಾದಾಗ ಜನರಿಗೆ ನೋಟನ್ನು ಕಳೆದು ಪದಾರ್ಥಗಳನ್ನೂ, ಒಡವೆ, ವಾಹನ, ಮನೆ ಮುಟ್ಟುಗಳನ್ನೂ ಸಂಗ್ರಹಿಸಬೇಕೆಂಬ ಬುದ್ಧಿ ಉಂಟಾಗುವುದು. ಆಗ ತಮ್ಮಲ್ಲಿರುವ ಕೈ ನಗದನ್ನು ಕಡಮೆ ಮಾಡಿಕೊಳ್ಳುವರು. ಇದರಿಂದ ಆ ಹಣದ ಬೆಲೆ ಮತ್ತೂ ಇಳಿಯುವುದು. ಕೆಲವರು ತಮ್ಮ ದೇಶದ ಹಣಕ್ಕೆ ಬದಲು ವಿದೇಶಿ ಹಣವನ್ನು ಕೊಂಡಿಡಲು ಪ್ರಯತ್ನಿಸುವರು; ಚಿನ್ನ ಬೆಳ್ಳಿಗಳನ್ನು ಒಳಗೇ ಇಟ್ಟು ನೋಟನ್ನು ಮಾತ್ರ ಪೇಟೆಗೆ ಕೊಡುವರು. ಚಿನ್ನಕ್ಕೆ ಹೆಚ್ಚು ಪೇಟೆಯ ಬೆಲೆ; ನೋಟಿಗೆ ಬೇರೆ ಧಾರಣೆ—ಹೀಗೆ ಎರಡು ಬಗೆಯ ಪೇಟೆ ಧಾರಣೆ ಏರ್ಪಡುವುದು.

**ಲಾಭ.**—ಜನರು ಹಣರೂಪದಲ್ಲಿ ನೋಟನ್ನು ತೆಗೆದುಕೊಳ್ಳುತ್ತಿಲ್ಲ, ವ್ಯಾಪಾರಮಾಡುತ್ತಿಲ್ಲ ಎಂದು ತಿಳಿಯುವವರೆಗೂ ಸರಕಾರದವರು ಹೀಗೆ ಹಣವನ್ನು ಉತ್ಪತ್ತಿಮಾಡಬಹುದು. ಆ ಮಿತಿ ಬಂದರೆ ಹೆಚ್ಚು ಚಲಾವಣೆಯ ಹೂಟ ನಿಲ್ಲಿಸಬೇಕಾಗುವುದು. ಸರಕಾರ ಯಾವ ಪ್ರಯೋಜನವನ್ನು ಬಯಸಿತೊ ಆ ಪ್ರಯೋಜನ ಸುತರಾಂ ಇಲ್ಲದಾಗುವುದು. ಇತರರಿಗೆ ಇಂತಹ ದೇಶಗಳವರೊಡನೆ ವ್ಯಾಪಾರ ಸಾಧ್ಯವಾಗದೆ ನಿಲ್ಲುವುದು. ಬದುಕಿನಲ್ಲಿ ಹಣವಲ್ಲ ಮುಖ್ಯ; ಪದಾರ್ಥ, ಸೇವೆ—ಸೌಕರ್ಯ, ನಂಬಿಕೆ,

ಇವು ಮುಖ್ಯ ಎಂಬುದು ಇಂಥ ಸಂದರ್ಭಗಳಲ್ಲಿ ಗೊತ್ತಾಗುವಷ್ಟು ಚೆನ್ನಾಗಿ ಸಾಧಾರಣ ಕಾಲಗಳಲ್ಲಿ ತಿಳಿಯುವುದಿಲ್ಲ. ಸರಕಾರದವರು ಏನು ವೆಚ್ಚಮಾಡಲಿ ಹೇಗೆ ವೆಚ್ಚಮಾಡಲಿ ಅದನ್ನು ತೆರುವವರು ಕಡೆಗೆ ಜನರೇ; ಅದರ ದುಷ್ಫಲಗಳೆಲ್ಲ ಕಡೆಗೆ ಜನರ ಭಾಗಕ್ಕೇ ಬರುವುವು ಎಂಬ ಅರಿವು ಸ್ಥಾಯಿಯಾಗುವುದು. ಇದರಲ್ಲಿ ಒಂದು ಅನುಕೂಲವುಂಟು: ಈ ಸ್ಥಿತಿಗೆ ಪೂರ್ತಿ ಇಳಿಯುವುದಕ್ಕೆ ಮುಂಚೆ ಈ ದೇಶದ ಹಣದ ಲೆಕ್ಕದಲ್ಲಿ ಯಾರು ಯಾರು ಒಳದೇಶದಲ್ಲಿಯಾಗಲಿ ಹೊರಗಾಗಲಿ ಸಾಲ ಕೊಟ್ಟಿರುವರೊ ಅಂಥವರ ಸಾಲ ಹರಿಯುವುದಕ್ಕೆ ಇದು ಉತ್ತಮೋತ್ತಮ ಉಪಾಯ. ಸಾಲ ಹಿಂತಿರುಗಿಸುವ ಶಕ್ತಿಯಿಲ್ಲದ ಸರಕಾರಗಳವರು ಬಾಯಲ್ಲಿ ತಾವು ದಿವಾಳಿ ಎಂದು ಹೇಳದಿದ್ದರೂ ಈ ರೀತಿ ಕಡೆಗೆ ಒಳದೇಶದ ಸಾಲಗಳನ್ನಾದರೂ ತೀರಿಸಿ ಮುಕ್ತರಾಗಲು ಅವಕಾಶವುಂಟು. ಆದರೆ ಇಂಥ ಅನೀತಿ, ಅಧರ್ಮದಿಂದ ಬಹುಕಾಲದವರೆಗೂ ಸರಕಾರಕ್ಕೆ ಹೊರಗೆ ಮರ್ಯಾದೆ ಬರುವುದಿಲ್ಲ. ಏಕೆಂದರೆ ಅಷ್ಟು ಹಣವನ್ನೂ ಸಾಲಪತ್ರಗಳ ಯಜಮಾನರಿಂದ ಬಲಾತ್ಕಾರವಾಗಿ ತೆಗೆದುಕೊಂಡಹಾಗಾಯಿತು ಅಲ್ಲವೆ?

ಈ ಸ್ಥಿತಿಗೆ ಬಂದ ಇನ್ನು ಕೆಲವು ಸರಕಾರಗಳವರು ತಮ್ಮ ಹಣ ಪದ್ಧತಿಯನ್ನು ಈ ಕೆಸರಿಂದ ಮೇಲೆತ್ತಲು ಆಸೆಪಟ್ಟು ಎಲ್ಲ ಸಾಹುಕಾರರಿಗೂ ಪೂರ್ತಿ ಸೊನ್ನೆಹಾಕದೆ ತಮ್ಮ ಹಣಕ್ಕೆ ಮೊದಲಷ್ಟು ಬೆಲೆಯಿಲ್ಲವೆಂದೂ ಕಡಮೆ ಬೆಲೆಯ ಲೆಕ್ಕದಲ್ಲಿ ಅಸಲನ್ನು ತೀರಿಸುವೆವೆಂದೂ ಮಾತು ಕೊಡುವರು. ಸಾಲದ ಅಸಲನ್ನೂ ಆ ಮೂಲಕ ಬಡ್ಡಿಯ ವೆಚ್ಚವನ್ನೂ ಇಳಿಸಿಕೊಂಡು ಸಾಲವನ್ನು ಉತ್ತರೋತ್ತರ ತೀರಿಸುವೆವೆನ್ನುವುದುಂಟು. ಅಥವಾ ಹಿಂದಿನ ನಾಣ್ಯಕ್ಕೆ ಈಗ ಇಷ್ಟೇ ಕಡಮೆ ಬೆಲೆಯೆಂದೂ ಹೊರಗಿನ ನಾಣ್ಯಗಳಿಗೆ ಮಾರುವೆಯಾಗಿ ಈಗ ಇಷ್ಟು ಸ್ವದೇಶಿ ಹಣದಂತೆ ಮಾರುವೆವು ಲೆಕ್ಕಮಾಡಿದರೆ ಮಾತ್ರ ಸಾಲಗಳನ್ನು ತೀರಿಸುವ ವ್ಯವಸ್ಥೆಮಾಡಬಹುದೆಂದೂ ಲೆಕ್ಕಕಟ್ಟಿ, ಒಂದು ಹೊಸ ಮಟ್ಟಕ್ಕೆ ಅದರ ಬೆಲೆಯನ್ನು ಸ್ಥಿರವಾಗಿ ತಂದು ಕಟ್ಟುವ ಏರ್ಪಾಡುಮಾಡುವರು. ಹೇಗೇ ಮಾಡಲಿ ಅವರ ಸಾಲಗಳ ಅಸಲೂ ವೆಚ್ಚವೂ ಬಹುಮಟ್ಟಿಗೆ ಹರಿದು ಉಳಿತಾಯವಾದಂತಾಗುವುದು. ಸಾಲ ಕೊಟ್ಟವನೇ ಕಡೆಗೆ ಹುಚ್ಚ. ಆದರೆ ಒಟ್ಟು ಒಂದು ಸಮಾಜದ

ಭಾಗಕ್ಕೆ ಹೊಸ ಹದವೂ ಕಲ್ಯಾಣವೂ ಈ ಮೂಲಕ ಬರುವಂತಾಗುವುದರಿಂದ ಇದೂ ಸರಿಯಾದ ಚಿಕಿತ್ಸೆಯೇ ಆಗುವುದು.

ಇನ್ನೊಂದು ದಾರಿಯೂ ಸರಕಾರಗಳಿಗೆ ತೆರೆದಿರುವುದು: ಯುದ್ಧದ ಅವಸರದಲ್ಲಿ ಸರಕಾರದ ದೌರ್ಬಲ್ಯವನ್ನು ಲಾಭಕ್ಕೆ ತಿರುಗಿಸಿಕೊಳ್ಳಬೇಕೆಂಬ ಆಸೆಯಿಂದ ಸಾಲಕೊಟ್ಟವರಿಗೆ, ಶಾಂತ ಕಾಲದಲ್ಲಿ ದುಡಿದು ತೆರಿಗೆ ತೆರುವವರ ಹಣದಿಂದ ತಾನೇ ಬಡ್ಡಿಯನ್ನೂ ಅಸಲನ್ನೂ ಹಿಂತಿರುಗಿಸಬೇಕು? ದೇಶದ ಕಷ್ಟದಿಂದ ಇವರ ಹೊಟ್ಟೆ ತುಂಬಿಸಿ ಇವರ ಧನಿಕತೆಯನ್ನು ಕಾಪಾಡುವುದು ಅನ್ಯಾಯವೆಂದು ತಿಳಿದು ಸರಕಾರಗಳವರು ಜನರ ಕೈಯಲ್ಲಿರುವ ಬಂಡವಾಳದಲ್ಲಿ ಗೊತ್ತಾದ ಒಂದು ಪ್ರಮಾಣವನ್ನು ತಮಗೆ ತೆರಬೇಕೆಂದು ನಿರ್ಧರಿಸಬಹುದು (A Levy on Capital). ಅಥವಾ ಸಾಲದ ಹೊರೆ ದುರ್ಭರವಾಗಿ ಅದನ್ನು ತೀರಿಸಲು ಬೇರೆ ಯಾವ ರೀತಿಯಲ್ಲಿಯೂ ಸರಸೂಸ ಬಾರದಿರುವಾಗ ಸಾಲವನ್ನು ಹಿಂದಕ್ಕೆ ಕೊಡುವುದಿಲ್ಲವೆನ್ನಬಹುದು. ಅತ್ಯುತ್ಕಟ ಸ್ಥಿತಿ ಸನ್ನಿವೇಶಗಳು ಉಂಟಾದ ಹೊರತು ಈ ನಡತೆ ಸಾಧ್ಯವಾಗುವುದಿಲ್ಲ.

## ಸ್ಥಳೀಯ ಮಂಡಲಿಗಳಿಗೆ ಧನ ಒದಗುವ ಬಗೆ

ಪ್ರಧಾನ ಸರಕಾರಕ್ಕಾಗಲಿ ಅಂಶ ಅಥವಾ ಪ್ರಾಂತ ಸರಕಾರಕ್ಕಾಗಲಿ ಸ್ಥಳ ಮಂಡಲಿಗಾಗಲಿ ಹಣ ಒದಗುವ ರೀತಿ, ತತ್ವದಲ್ಲಿ **ಒಂದೇ.** ಆದರೆ ಪ್ರಧಾನ ಸರಕಾರಗಳಿಗಿರುವ ಒಡೆತನ ಎಂದರೆ ಸರ್ವಾಧಿಕಾರ ಪ್ರಾಂತ ಸರಕಾರಗಳಿಗಿರುವುದಿಲ್ಲ. ರಾಜ್ಯದ ಆಡಳಿತ ಸಂಪೂರ್ಣವಾಗಿ ಕೇಂದ್ರ ಸರಕಾರಕ್ಕೆ ಅಧೀನವಾಗಿದ್ದರೆ ಅದು ಕೊಟ್ಟ ಅಶನ ಮಾತ್ರ ಅಂಗ ಸರಕಾರಕ್ಕೆ ಸಿಕ್ಕುವುದು. ಅದಕ್ಕೆ ಹಣಕಾಸಿನ ವ್ಯವಸ್ಥೆಯಲ್ಲಿಯೂ ಪ್ರಾಂತ ಸರಕಾರ ಪೂರ್ತಿ ಅಧೀನ. ಅದು ಕೊಟ್ಟಷ್ಟನ್ನು ತೆಗೆದುಕೊಳ್ಳಬೇಕು; ಮಾಡೆಂದುದನ್ನು ಮಾಡಬೇಕು. ಅದು ವಿಧಿಸಿದ ವೆಚ್ಚವನ್ನು ವಿಧಾಯಕವಾದ ರೀತಿಯಲ್ಲಿ ಮಾತ್ರ ಮಾಡಬೇಕು. ಕೇಂದ್ರ ಸರಕಾರಕ್ಕೂ ಪ್ರಾಂತ ಭಾಗಗಳಿಗೂ ಯಾವ ಬಗೆಯ ಸಂಬಂಧ ಏರ್ಪಟ್ಟಿದೆಯೊ ಯಾವ ಹಕ್ಕು ಸ್ವತಂತ್ರ ನಿರ್ಣಯವಾಗಿವೆಯೊ ಆ ನಿರ್ಣಯಗಳಿಗೆ ಒಳಪಟ್ಟು ಅವುಗಳ ಆಯ ವ್ಯಯ ಪದ್ಧತಿ ನಡೆಯುವುವು. ಸಮ್ಮೇಳನ ಪದ್ಧತಿಗಳಲ್ಲಿ

(Federations) ಅಂಶ ಸಂಸ್ಥಾನಗಳಿಗೆ ಅಥವಾ ಮೂಲ ಮಂಡಲಿಗಳಿಗೆ (The Units of the Federation) ಹೆಚ್ಚು ಸ್ವತಂತ್ರ ಇರುವುದುಂಟು. ಸಮ್ಮೇಳನದ ಆಡಳಿತಕ್ಕೆ ಇಷ್ಟು ಭಾಗ ಆದಾಯ, ಇಷ್ಟು ಬಗೆಯ ವೆಚ್ಚ; ಅಂಶ ಸರಕಾರಗಳವರದು ಇಷ್ಟು ಎಂದು ಸಮ್ಮೇಳನದ ಕಟ್ಟಡಕ ದಲ್ಲಿಯೇ ನಿರ್ಧರವಾಗುತ್ತದೆ. ಇಂಥ ಇಂಥ ವರಮಾನಗಳನ್ನು ಇವರು, ಇಂಥ ಇಂಥನನ್ನು ಅವರು ಹೀಗೆ ಹೀಗೆ ಎತ್ತತಕ್ಕದ್ದು, ಈ ಪ್ರಮಾಣ ದಲ್ಲಿಯೇ ತೆಗೆದುಕೊಳ್ಳತಕ್ಕದ್ದೆಂದೊ, ಅಂಶ ಸರಕಾರಗಳವರೆಲ್ಲ ಮೇಲ್ಪಟ್ಟ ಸರಕಾರಕ್ಕೆ ಇಷ್ಟಿಷ್ಟು ಮೊತ್ತವನ್ನಾಗಲೊ, ಶಕ್ತಿಗೆ ತಕ್ಕ ಪ್ರಮಾಣದಲ್ಲಿಯೊ ಗೊತ್ತಾಗಿ ಹಣ ಒದಗಿಸತಕ್ಕದ್ದೆಂದೊ ಏರ್ಪಾಡು ಕಲ್ಪನೆಯಾಗಿರುತ್ತದೆ. ಕಟ್ಟಡಕ ದಲ್ಲಿ ಎಣಿಕೆಗೆ ಬರದ ಯಾವುದಾದರೂ ಹೊಸ ಬಾಬಿನಿಂದ ವರಮಾನ ಬರುವಂತಾದರೆ ಆ ವರಮಾನವನ್ನು ಸಮ್ಮೇಳನ ತೆಗೆದುಕೊಳ್ಳಬೇಕೆ ಅಂಶ ಸರಕಾರದವರು ತೆಗೆದುಕೊಳ್ಳಬೇಕೆ ಎಂಬ ನಿರ್ಣಯವೂ ಹುಟ್ಟಿರುವುದು. ಇವಕ್ಕೆ ಸಂಬಂಧಪಟ್ಟ ಎಲ್ಲ ಹಕ್ಕು ಹೊಣೆಗಾರಿಕೆಗಳನ್ನು ತೀರ್ಮಾನಿಸಲು ಶ್ರೇಷ್ಠ ನ್ಯಾಯ ಮಂಡಲಿಯೊಂದು ರಚಿತವಾಗಿ ನ್ಯಾಯಗಳು ನಡೆಯುವ ಏರ್ಪಾಡಿರುವುದು.

ಸ್ಥಳೀಯ ಸಂಸ್ಥೆಗಳಿಗೂ ಆಯಾ ರಾಜ್ಯಗಳ ಶಾಸನದಂತೆ ಸ್ವತಂತ್ರ ವಾಗಿ ಕರವೆತ್ತುವ ಬಾಬುಗಳಿರುವುವು. ಅವುಗಳ ಜೊತೆಗೆ ಕೆಲವು ವೇಳೆ ಪ್ರಧಾನ ಸರಕಾರದವರು ಇವರಿಗೆ ವರ್ಷಂಪ್ರತಿ ಇಷ್ಟು ಸಹಾಯ ದ್ರವ್ಯ ವನ್ನು (Grant-in-Aid) ಕೊಡುತ್ತೇವೆಂದು ವಾಗ್ದಾನಮಾಡಿ ಅಲ್ಲಿನ ಕಾರ್ಯಗಳಿಗೆ ಸಹಾಯಮಾಡಬಹುದು. ದೇಶದ ಸ್ಥಳೀಯ ಮಂಡಲಿ ಗಳಲ್ಲಿ ಪ್ರಜಾಗುಣ, ಸ್ವಾವಲಂಬನ, ಪರಿಸ್ಥಿತಿಯ ಸಂಪನ್ನತೆ, ಕಾರ್ಯೋತ್ಸಾಹ ಯಾವ ರೀತಿ ಇರುವುವೊ ಅದಕ್ಕೆ ತಕ್ಕಂತೆ ಅವು ತಮ್ಮ ದೇಶದ ಸಂಪ್ರದಾಯಗಳನ್ನೂ ಶಾಸನಗಳನ್ನೂ ಅನುಸರಿಸಿ ಸ್ಥಳೀಯ ವರಮಾನ ಗಳನ್ನು ಸಂಗ್ರಹಿಸುವುವು. ಅವು ಸಾಲಗಳನ್ನೆತ್ತಬೇಕಾಗಿರುವಾಗಲೂ ಮೇಲಿನ ಸರಕಾರದ ಆಶ್ರಯದಲ್ಲಿ ಅವರ ಒಪ್ಪಿಕೆಗೆ ಒಳಪಟ್ಟೇ ನಡೆಯು ವುದು ರೂಢಿ. ಪ್ರಜಾತತ್ತ್ವ ಊರಿ ಬಲಿತಿರುವ ದೇಶಗಳಲ್ಲಿ ಸ್ಥಳೀಯ ಮಂಡಲಿಗಳ ಶಕ್ತಿ ಅಪಾರವಾದುದು. ಸ್ಥಳದ ಸಮಷ್ಟಿ ಹಿತಕ್ಕೆ ಸಂಬಂಧ

ಪಟ್ಟ ಎಲ್ಲ ದೊಡ್ಡ ಕೈಗಾರಿಕೆ ಉತ್ಪತ್ತಿಗಳನ್ನೂ ಅವೇ ಮಾಡಿಕೊಂಡು ತಮ್ಮ ಗೌರವವನ್ನೂ ಆಢ್ಯತೆಯನ್ನೂ ಸ್ವಾಧೀನತೆಯನ್ನೂ ಕಾಪಾಡಿಕೊಂಡು ದೇಶದ ರಾಜಕೀಯ ರಂಗದಲ್ಲಿ ಗಣ್ಯವಾಗುತ್ತವೆ. ಸಮ್ಮೇಳನ ಪದ್ಧತಿಯು ಆಯವ್ಯಯದ ಬಾಬುಗಳಲ್ಲಿ ಹೇಗೆ ಗೊತ್ತಾದ ಹಂಚಿಕೆಗಳಾಗಿರುತ್ತವೆಯೋ ಹಾಗೆಯೆ ಮೂಲ (ಅಂಶ) ಸರಕಾರಗಳೇ ಆಗಲಿ, ಕೇಂದ್ರ ಪದ್ಧತಿಯಲ್ಲಿ ಪ್ರಾಂತ ಸರಕಾರಗಳೇ ಆಗಲಿ ಸಾಲಗಳನ್ನು ಹೇಗೇ ಎತ್ತಬೇಕು, ಹೇಗೇ ತೀರಿಸಬೇಕು ಎಂಬ ಬಗ್ಗೆ ವಿವರವಾದ ಸ್ಪಷ್ಟವಾದ ನಿಯಮ ಏರ್ಪಡುವುದು.

# ಪ್ರಕರಣ ೧೧

## ಸರಕಾರದ ಕೈವಾಡ, ಕರನೀತಿ ಮತ್ತು ವ್ಯಾಪಾರನೀತಿ

**ಕಾರ್ಯ ಪ್ರಭಾವ.**—ಹಿಂದಿನ ಪ್ರಕರಣದಲ್ಲಿ ವರ್ಣಿಸಿದ ಕಾರ್ಯ ಕಲಾಪಗಳು ಕೇವಲ ಸರಕಾರದ ಬಾಳುವೆಗೂ ಲೇವಾದೇವಿಗೂ ಸಂಬಂಧ ಪಟ್ಟವು. ಅವುಗಳ ಜೊತೆಗೆ, ರಾಜಕೀಯ ಕಾರಣದಿಂದಲೊ ಸಾಮಾಜಿಕ ದೃಷ್ಟಿಯಿಂದಲೊ ವ್ಯಾಪಾರ, ಉದ್ಯೋಗ, ಕೈಗಾರಿಕೆಗಳ ಸ್ವರೂಪ, ರೀತಿ ರಚನೆ, ಗುರಿಗಳನ್ನೇ ತಮ್ಮ ಕೋರಿಕೆಯಂತೆ ತಿರುಗಿಸಿಕೊಳ್ಳಬೇಕೆಂದು ಬಯಸಿ ಅನೇಕ ಬಗೆಯ ಶಾಸನಗಳನ್ನು ಸರಕಾರದವರು ಪ್ರಕಟಿಸುವರು. ವ್ಯಾಪಾರ ಸುಸೂತ್ರವಾಗಿ ಸಾಗುವುದು, ನಿಲ್ಲುವುದು; ಜನರೂ, ಹಣವೂ, ಉದ್ಯೋಗಗಳೂ ತಡೆಯಿಲ್ಲದೆ ದೇಶದೊಳಕ್ಕೆ ಬರುವುದು, ಹೊರಬರುವುದು; ಮಾರುವೆ, ಬ್ಯಾಂಕು, ಸ್ಟಾಕ್ ಎಕ್ಸ್‌ಛೇಂಜುಗಳ ಕಾರ್ಯ ವ್ಯಾಪಕವಾಗಿ ನಡೆಯುವುದು, ಇಲ್ಲದಾಗುವುದು — ಇವೆಲ್ಲವೂ ಹೀಗೆ ನಡೆಯತಕ್ಕದ್ದು, ಬೇರೊಂದು ವಿಧವಾಗಿ ನಡೆಯಕೂಡದು ಎಂಬ ಮುಂತಾದ ನಿರ್ಬಂಧಗಳನ್ನು ಉಂಟುಮಾಡಿ ಅವರು ರಾಷ್ಟ್ರರಥವನ್ನು ತಮಗೆ ಇಷ್ಟವಾದ, ಅನುಕೂಲವೆಂದು ತೋರಿದ ದಿಕ್ಕಿನಲ್ಲಿ ನಡಸಿಕೊಂಡು ಹೋಗುವರು. ಅವರು ಅನುಸರಿಸುವ ಹಣನೀತಿ ಆರ್ಥಿಕನೀತಿಯಿಂದ ವ್ಯಾಪಾರಗಳ ರೂಪೇ ಫಲಗಳೇ ಬದಲಾಯಿಸುತ್ತವೆ. ಕೆಲವು ಸಂಸ್ಥೆಗಳನ್ನೂ, ಪದ್ಧತಿಗಳನ್ನೂ, ರೀತಿ, ನೀತಿ, ಹಕ್ಕು ಹೊಣೆಗಾರಿಕೆಗಳನ್ನೂ ತಾವೇ ಏರ್ಪಡಿಸುವರು; ಉತ್ತೇಜನ ಸಹಾಯಗಳನ್ನು ಕಲ್ಪಿಸುವರು, ತಡಗಳನ್ನು ತಂದೊಡ್ಡುವರು; ದೇಶದೊಳಗೆ ಅನ್ಯೋನ್ಯ ಸಂಬಂಧಗಳನ್ನು ರಚಿಸುವರು; ವಿದೇಶಗಳವರೊಡನೆ ಬೆರೆಯುವ ರೀತಿಯನ್ನು ನಿರ್ಧರಿಸುವರು; ಪ್ರತಿಕಾರ್ಯಗಳನ್ನು ಮಾಡುವರು; ಒಟ್ಟಿನಲ್ಲಿ ತಮ್ಮ ರಾಷ್ಟ್ರದ ಮೇಲ್ಮೆಯನ್ನು ಸಾಧಿಸುವ ಮತ್ತು ಸ್ಥಾಪಿಸುವ ವಿಧಿನಿಷೇಧಗಳನ್ನೊಳಗೊಂಡ ಶಾಸನಗಳನ್ನು ಪ್ರಚಾರಕ್ಕೆ ತಂದು ಆರ್ಥಿಕ ಮತ್ತು ರಾಜಕೀಯ ಬದುಕನ್ನು ನಡಸುವರು. ಸಂಪತ್ತಿನ ಉತ್ಪತ್ತಿ, ಸಂಚಾರ, ವಿನಿಮಯ,

ವಿಭಾಗ ಮತ್ತು ಭೋಗ ವಿವೇಚನೆ ಮುಂತಾದ ಎಲ್ಲ ರಂಗಗಳಿಗೂ ಅವರ ರೀತಿ ನೀತಿ ವ್ಯಾಪಿಸುವುವು.

ಆಯಾ ದೇಶದ ಎಲ್ಲೆಕಟ್ಟಿನಲ್ಲಿ ಅಲ್ಲಿನ ಪ್ರಜೆಗಳು ಸಂಪೂರ್ಣವಾಗಿ ಈ ಶಾಸನಗಳಿಗೆ ಒಳಪಟ್ಟಿರಬೇಕು. ಸ್ವದೇಶಿಯರೂ ವಿದೇಶದವರೂ ವ್ಯಾಪಾರ ವ್ಯವಹಾರಗಳಲ್ಲಿ ಬೆರೆಯುತ್ತಿರುವಾಗ ನ್ಯಾಯವನ್ನೂ ಇಬ್ಬರ ಕ್ಷೇಮಲಾಭಗಳನ್ನೂ ಸಾಧಿಸಬೇಕಾಗುವುದು. ಆದರೂ ತಮ್ಮ ರಾಷ್ಟ್ರದ ಬಲವನ್ನು ಕಾಪಾಡುವುದೂ, ಸ್ವಸಂಪೂರ್ಣತೆಯನ್ನು ಕಾಯುವುದೂ, ಇತರರೊಡನೆ ಸ್ಪರ್ಧೆಯಲ್ಲಿ ಸರಿತೂಗುವುದೂ ಇತರರ ಆಧಿಪತ್ಯ ಪ್ರಾಬಲ್ಯಗಳು ಒಳದೇಶದಲ್ಲಿ ಹೆಚ್ಚಾಗಿ, ಸಮಯಾಸಮಯಗಳಲ್ಲಿ ತಮ್ಮ ಕೈಮುರಿಯದಿರುವಂತೆ ಏರ್ಪಡಿಸುವುದೂ ಅವರ ಮುಖ್ಯ ಗುರಿಯಾಗುವುದು. ಈ ಶಾಸನ ಕಾರ್ಯಗಳಿಂದಲೂ ರಾಜಕೀಯ ದೃಷ್ಟಿ ವ್ಯವಹಾರಗಳಿಂದಲೂ ಹಣ ಮತ್ತು ಲೇವಾದೇವಿ ಪ್ರಪಂಚಕ್ಕೆ ಯಾವ ಅಡ್ಡಿ, ಅಡಚಣೆ, ಸೌಕರ್ಯ, ಸೌಲಭ್ಯ ಉಂಟಾಗುವುವು ಎಂಬುದು ಈ ಪ್ರಕರಣದ ವಿಷಯ.

**ದೇಶಗಳ ಲಕ್ಷಣಗಳು.** — ಈಗಿನ ರಾಷ್ಟ್ರಗಳಲ್ಲಿ ಕೆಲವು ದಣಿರಾಷ್ಟ್ರಗಳು; ಕೆಲವು ಸಾಲ ಹೊತ್ತವು. ಕೆಲವು ಯಂತ್ರ ವಿಧಾನದ ಉತ್ಪತ್ತಿಯಲ್ಲಿಯೂ ಆರ್ಥಿಕ ಸುವ್ಯವಸ್ಥೆಯಲ್ಲಿಯೂ ಬಹಳವಾಗಿ ಮುಂದುವರಿದಿವೆ; — ಕೈಗಾರಿಕೆಯ ದೊಡ್ಡ ಮಂಡಲವನ್ನು ರಚಿಸಿ ತಮ್ಮಲ್ಲಿ ತಯಾರಾದ ಸಾಮಾನನ್ನು ಹೊರಕ್ಕೆ ಮಾರಿ ಲಾಭಪಡೆಯುತ್ತಿವೆ; ಇನ್ನು ಕೆಲವು ಕೇವಲ ವ್ಯವಸಾಯ, ಗಣಿಯ ಕೆಲಸ, ಕಾಡುಗಳ ವಸ್ತು ಸಂಗ್ರಹ ಮುಂತಾದ ಕೈಗಾರಿಕೆಯ ಮೂಲ ಸಾಮಗ್ರಿಯನ್ನೂ ಆಹಾರಪದಾರ್ಥಗಳನ್ನೂ ಒದಗಿಸುವ ಕೆಲಸಗಳಲ್ಲಿಯೇ ತೊಡಗಿರುತ್ತವೆ. ಇನ್ನೂ ಕೆಲವು ರಾಷ್ಟ್ರಗಳಲ್ಲಿ ಎರಡು ಬಗೆಯ ಕೆಲಸವೂ ಅಕ್ಕಪಕ್ಕದಲ್ಲಿ ನಡೆಯುತ್ತ ಸ್ವಸಂಪೂರ್ಣವಾಗಿರಬೇಕೆಂಬ ಪ್ರಯತ್ನವಿರುತ್ತದೆ. ಕೆಲವು ಸ್ವಧರ್ಮಶಕ್ತಿಯಿಲ್ಲದೆ ಸರಕಾರದ ಕೈ ಕಾಯುತ್ತ ಸ್ವಾಧೀನತೆಯಿಲ್ಲದೆ ಇವೆ. ರಾಜಕೀಯ ರಂಗದಲ್ಲಿ ಹೇಗೋ ಆರ್ಥಿಕಮಂಡಲದಲ್ಲಿಯೂ ಹಾಗೇ ಪ್ರಬಲ ರಾಷ್ಟ್ರಗಳೂ ದುರ್ಬಲರಾಷ್ಟ್ರಗಳೂ ಎರಡೂ ಉಂಟು. ಪ್ರಬಲರ ದಾಳಿ

ಯಿಂದ ದುರ್ಬಲರ ಸ್ವಾಧೀನತೆಗೆ ಭಂಗಬಾರದಂತೆ ಏರ್ಪಾಡೂ ರಕ್ಷಣೆಯೂ ಬೇಕಾಗುವುವು. ರಾಜಕೀಯ ರಂಗದಲ್ಲಿಯೂ ರಾಷ್ಟ್ರಗಳವರು ಪೈಪೋಟಿಯಲ್ಲಿ ನಿಲ್ಲಬೇಕಾಗುವುದು. ಹೀಗೆ ಆರ್ಥಿಕ ಮಂಡಲವೂ ರಾಜಕೀಯ ವ್ಯವಹಾರವೂ ಒಂದಕ್ಕೊಂದು ಹೊಂದಿಕೊಂಡು ಪ್ರತಿಯೊಂದು ರಾಷ್ಟ್ರದ ಕಾರ್ಯವನ್ನೂ ನಡಸುತ್ತಿರುವುವು; ರಾಜಕೀಯ ಶಾಸನಗಳಂತೆ ಈ ಕೆಲಸಕ್ಕಾಗಿ ಆರ್ಥಿಕ ಶಾಸನಗಳು ಏರ್ಪಡುವುವು.

**ಮೂಲ ಸಂಸ್ಥೆಗಳು: (i) ಆಸ್ತಿ, (ii) ಒಪ್ಪಂದ, (iii) ಆಸ್ತಿಯ ವಿಭಾಗ ಸ್ವಾತಂತ್ರ್ಯ—ಹಕ್ಕಿನ ಮೇಲೆ ಅಂಕೆ ಮಿತಿಗಳು (Limitations on Rights).**—ಯಾರಿಗೆ ಹಣ ಒದಗಬೇಕಾಗಲಿ, ಯಾವ ಒಪ್ಪಂದಗಳು ನಡೆಯಬೇಕಾಗಲಿ, ಯಾವ ಕಾಗದ ಪತ್ರಗಳು ಊರ್ಜಿತವಾಗಬೇಕಾಗಲಿ, ಕಡೆಗೆ ಯಾವ ಹಕ್ಕುಗಳು ಉಂಟಾಗಿ ಜನರ ಬಳಕೆಗೆ ನಿಲ್ಲಬೇಕಾಗಲಿ ಅದೂ ರಾಷ್ಟ್ರದ ಸರಕಾರವೇ ಅವಕ್ಕೆ ಕಾರಣ; ಮೂಲ. ಅವರು ಕಲ್ಪಿಸಿಕೊಟ್ಟರೆ ಹಕ್ಕು.* ಅವರು ಬದಲಾಯಿಸಿದರೆ ಮಾತ್ರ ಹಕ್ಕು ಬದಲಾಯಿಸುವುದು. ಈಗಿನ ಜೀವನ ಪದ್ಧತಿಯನ್ನು ನೋಡಿದರೆ ಇಂಥ ಹಕ್ಕಿನ ಸಂಸ್ಥೆಗಳು ನಾಲ್ಕು ಕಣ್ಣಿಗೆ ಕಾಣಿಸುವುವು: ನೆರೆಹೊರೆಯ ಅಥವಾ ಈಗಿನ ಸಮಾಜ ವ್ಯವಹಾರದಲ್ಲಿ ಅವಕ್ಕೆ ಬಹಳ ದೊಡ್ಡ ಸ್ಥಾನವಿದೆ.† (೧) ವ್ಯಕ್ತಿಯ ಸ್ವಂತ ಆಸ್ತಿ ಸಂಗ್ರಹ, ಮತ್ತು ಒಡೆತನ (Private Property); (೨) (ವೃತ್ತಿ ಕಳ್ಳತನ, ದರೋಡೆ, ಘಾತಕತನ ಮುಂತಾದ ಅಸಾಮಾಜಿಕ ವೃತ್ತಿಯಲ್ಲಿನಾದರೆ) ಸ್ವಂತ ಲಾಭ ಪ್ರಯೋಜನಗಳಿಗಾಗಿ ಜನರು ಪರಸ್ಪರವಾಗಿಯೂ, ಹೊರಗಿನವರೊಡನೆಯೂ ಅಡ್ಡಿಯಿಲ್ಲದೆ ಮಾಡಿಕೊಳ್ಳಬಹುದಾದ, ಕೊಳ್ಳುವ ಕೊಡುವ ವ್ಯವಹಾರ ನಡಸುವ ಒಪ್ಪಂದದ ಸ್ವಾತಂತ್ರ್ಯ, ಇದರ ಫಲವಾಗಿ ಕರಾರುಗಳೂ ಪತ್ರಗಳೂ

---

* ಇಲ್ಲಿ ರಾಜಕೀಯ ಹಕ್ಕಿನ ತತ್ವವನ್ನು ಹೇಳುತ್ತಿಲ್ಲ. ಈಗಾಗಲೇ ಏರ್ಪಟ್ಟು ನಡೆಯುತ್ತಿರುವ ಸರಕಾರಗಳಲ್ಲೆಲ್ಲ ಆ ಸರಕಾರಗಳು ಉಳಿಯುವವರೆಗೂ ಜನರ ಹಕ್ಕುಗಳೆಲ್ಲ ರಾಷ್ಟ್ರದ ಶಾಸನಗಳೇ ಜೀವಾಧಾರವೆಂದು ಮಾತ್ರ ಹೇಳುತ್ತೇವೆ.

† ಅವು ಇಂದಿನಂತೆಯೇ ಮುಂದೆಯೂ ನಡೆದರೆ ಮಾತ್ರ ಈ ಪುಸ್ತಕದಲ್ಲಿ ಹೇಳಿರುವ ವಿಷಯ ಸುಪ್ರತಿಷ್ಠಿತವಾದೀತು. ಇವುಗಳಿಂದ ಸಮಾಜ ಮಂಗಳಕ್ಕೆ ಹಾನಿತಟ್ಟದಂತೆ ಸರಕಾರಗಳು ಆಗಾಗ್ಗೆ ಹಲವು ಬಗೆಯ ಶಾಸನಗಳ ಮೂಲಕ ಇವುಗಳ ಸ್ವಚ್ಛಂದತೆಯನ್ನು ತಡೆದಿಡುವರು.

ಜನಗಳೂ ದೇಶದಿಂದ ದೇಶಕ್ಕೆ ಧಾರಾಳವಾಗಿ ಸಾಗಲು ಅವಕಾಶವಾಗುವುದು (Freedom of Contract); (೩) ಆಸ್ತಿಗಳಿಗೆ ಸಂಬಂಧಿಸಿದ ಎಲ್ಲ ವಿನಿಯೋಗ ವ್ಯವಸ್ಥೆಯನ್ನೂ ಮಾಡಿಕೊಂಡು, ತಮಗೆ ಇಷ್ಟ ಬಂದವರಿಗೆ ಅವನ್ನು ಕ್ರಯ, ಭೋಗ್ಯ, ಹಂಚಿಕೆ, ದಾನ, ಮರಣಶಾಸನ ಮುಂತಾದ ಪತ್ರಗಳ ಮೂಲಕ, ಒಡೆತನವನ್ನು ಸಾಗಿಸುವ ಸ್ವಾತಂತ್ರ್ಯ (Right of Transfer, Bequest and Inheritance of Property); (೪) ಇವುಗಳ ಜೊತೆಗೆ ಎಲ್ಲ ಕಾರ್ಯರಂಗಗಳಲ್ಲಿಯೂ ನ್ಯಾಯವಾದ ಎಲ್ಲ ಸ್ಪರ್ಧೆಯ ಸ್ವಾತಂತ್ರ್ಯವನ್ನು (Freedom of Competition) ಬಹುಮಟ್ಟಿಗೆ ಒಪ್ಪಿ ರಕ್ಷಿಸುವುದು ;—* ಈ ಸಂಬಂಧದಲ್ಲಿ ಸರಕಾರ ಅನೇಕ ನಿಯಮ ನಿರ್ಬಂಧಗಳನ್ನು ಮಾಡಿ ಹಕ್ಕುಗಳನ್ನು ಸಂತತವಾಗಿ ಮೊಟಕುಮಾಡುತ್ತಿರುವುದಾದರೂ ನಿರ್ಬಂಧಗಳ ಒಳ ಅಂಗಳದಲ್ಲಿ ಪ್ರಜೆಗೆ ಬಹುಮಟ್ಟಿಗೆ ಸ್ವಾತಂತ್ರ್ಯವಿದೆ. ಯುದ್ಧ ಸಮಯದಲ್ಲಿಯೂ, ಶಾಂತಿ ಸಮಯದಲ್ಲಿಯೂ ಪ್ರಜಾರೋಗ್ಯಕ್ಕೊ, ಹಿತಕ್ಕೊ, ಸಾರ್ವಜನಿಕ ಉಪಯೋಗಕ್ಕೊ, ಭೂಮಿ ಕಾಣಿ ಮನೆ ಮಠಗಳನ್ನು ಸರಕಾರದವರು ಬಲಾತ್ಕಾರವಾಗಿ ಖಾಸಗಿ ಜನರಿಂದ ತೆಗೆದುಕೊಳ್ಳಬಹುದು. ಅವಕ್ಕೆ ಪ್ರತಿಯಾಗಿ ಹಣ ಕೊಟ್ಟರೆ ಕೊಡಬಹುದು ; ಇಲ್ಲವಾದರೆ ಕೊಡದೆ ಹೋಗಬಹುದು. ವಿಶೇಷ ಕಾಲಗಳಲ್ಲಿ ಭೂಮಿಯ ಉತ್ಪತ್ತಿಯನ್ನು ಕೂಡ, ಭೂಮಿಯೊಳಗಣ ಲೋಹಾದಿಗಳಂತೆಯೇ ತಾವೇ ತೆಗೆದುಕೊಳ್ಳುವ ಅಧಿಕಾರವನ್ನಿಟ್ಟುಕೊಳ್ಳುವರು. ಆಸ್ತಿಗಳನ್ನು ವಿದೇಶಿಯರ ಕೈವಶಮಾಡುವ ವಿಷಯದಲ್ಲಿ ಅನೇಕ ಬಗೆಯ ಅಡ್ಡಿ ಏರ್ಪಡಿಸುವರು. ಒಪ್ಪಂದಗಳನ್ನು ಮಾಡಿಕೊಳ್ಳುವಾಗ ಈ ಈ ಬಗೆಯನ್ನು ಇಂಥ ಇಂಥ ಸಮಯದಲ್ಲಿ ಮಾಡಕೂಡದು ; ಇಂಥ ಸಮಾಜದ್ರೋಹದ ಒಡಂಬಡಿಕೆಗೆ ಯಾರೂ ಕೈಯಿಡಲೇ ಕೂಡದು ಎಂದು ನಿರೋಧಿಸುವರು. ಒಳದೇಶದಲ್ಲಿ ಪದಾರ್ಥಗಳೂ ಹಣವೂ ಬೇಕಾಗಿರುವಾಗ ಅವನ್ನು ಹೊರಕ್ಕೆ ಲಾಭಕ್ಕೆ ಸಾಗಿಸಕೂಡದು ಎಂದು ವಿಧಿಸುವರು. ತಾವು ಗಳಿಸಿಟ್ಟ ಹಣವನ್ನು ಮಕ್ಕಳುಮರಿಗೆ ಮಾಡುವಾಗಲೂ ಇತರರಿಗೆ

* ಈ ನಾಲ್ಕು ಸಂಗತಿಗಳ ಪ್ರಭಾವ ನಡೆಯುವವರೆಗೂ ಹಿಂದೆ ಹೇಳಿದ ಎಲ್ಲವೂ ಈ ರೀತಿ ನಡೆಯುವುವು. ಇವು ಮುರಿದರೆ ಈಗಿನ ಪ್ರಪಂಚದ ಸ್ಥಿತಿಗತಿಗಳು ಸಂಪೂರ್ಣವಾಗಿ ಮಾರ್ಪಡುವುವು.

ಮಾಡುವಾಗಲೂ ಈ ಈ ನಿಯಮಕ್ಕೂ ತೆರಿಗೆಗಳಿಗೂ ಒಳಪಟ್ಟು ಮಾಡ ಬೇಕೆಂದು ವಿಧಿಸುವರು. ಇಂಥ ಇಂಥ ಕಂಪನಿಗಳು ಹೀಗೆ ಹೀಗೆ ಕಾರ್ಯ ಮಾಡಬೇಕು; ಸಾಹುಕಾರರು ಇಷ್ಟಕ್ಕಿಂತ ಹೆಚ್ಚು ಬಡ್ಡಿ ತೆಗೆದುಕೊಳ್ಳ ಕೂಡದು; ಎಂದು ಮುಂತಾಗಿ ಅನೇಕ ನಿಯಮ ನಿರ್ಬಂಧಗಳನ್ನು ವಿಧಿಸುವರು. ಆದರೂ ಈಗಿನ ಎಲ್ಲ ಆರ್ಥಿಕ ವ್ಯಾಪಾರದಲ್ಲಿಯೂ, ಆಸ್ತಿ ಒಪ್ಪಂದ, ಆಸ್ತಿ ಹಂಚಿಕೆಗಳ ಸಂಬಂಧದಲ್ಲಿ ಸರಕಾರದ ರಕ್ಷಣೆ ದೊರೆತು, ಆ ಹಕ್ಕುಗಳ ಪ್ರಾಬಲ್ಯದಿಂದ ದೇಶದಲ್ಲಿನ ಬಂಡವಾಳದ ಮೊತ್ತ, ವರಮಾನ, ಸಂಪತ್ತು, ಉದ್ಯೋಗ ಕೈಗಾರಿಕೆಗಳಿಗೂ, ಸ್ವದೇಶಿ ವಿದೇಶಿ ವ್ಯಾಪಾರಕ್ಕೂ, ಸರಕಾರಿ ಸಾಹುಕಾರಿ ಸಂಸ್ಥೆಗಳಿಗೂ ಒದಗಬಹುದಾದ ವರಮಾನ ಮುಂತಾದುವೆಲ್ಲ ನಿರ್ಧರವಾಗುವುವು.

**ವಿಧಿ ನಿಷೇಧಗಳು.**— ಹಣ ನಿರ್ಮಾಣ ಕಾರ್ಯದಲ್ಲಿ ಅವರು ಎಷ್ಟು ತೀವ್ರವಾದ ವ್ಯತ್ಯಾಸಗಳನ್ನು ಮಾಡಬಲ್ಲರೆಂದು ಹಿಂದಿನ ಪ್ರಕರಣಗಳಲ್ಲಿ ಹೇಳಿದೆ. ಕೈಗಾರಿಕೆ ವ್ಯಾಪಾರ ಉದ್ಯೋಗಗಳು ಹೀಗೆಯೇ ನಡೆಯ ಬೇಕು; ಇಂತಹ ಕೈಗಾರಿಕೆಗಳು ಕೂಡದು (ಉದಾ.— ಮಾದಕದ್ರವ್ಯ ಗಳು, ಸಿಡಿಮದ್ದು, ಯುದ್ಧೋಪಕರಣ, ವಿಷವಸ್ತು ನಿರ್ಮಾಣ, ದ್ರಾವಕಗಳು); ಇಂಥವನ್ನು ಹೆಚ್ಚಾಗಿ ತಯಾರಿಸಬೇಕು (ಉದಾ.— ಗೋಧಿ, ಅಕ್ಕಿ, ಸಕ್ಕರೆ, ಹತ್ತಿ, ಉಣ್ಣೆ, ರೇಷ್ಮೆಬಟ್ಟೆ, ಯಂತ್ರ); ಇಂಥ ಪದಾರ್ಥಗಳನ್ನು ಕಡ್ಡಾಯವಾಗಿ ಇಷ್ಟಿಷ್ಟೇ ಉಪಯೋಗಿಸತಕ್ಕದ್ದು; ಇಂಥಾದ್ದನ್ನೇ ತಿನ್ನತಕ್ಕದ್ದು; ಇಂಥಾ ವ್ಯಾಪಾರವನ್ನು ಈ ಈ ಹಡಗು ಗಳ ಮೂಲಕವಾಗಿಯೇ ಸಾಗಿಸತಕ್ಕದ್ದು — ಎಂದು ವಿಧಿನಿಷೇಧಗಳನ್ನು ಹೂಡಿ ಕೆಲವು ಉದ್ಯೋಗಗಳಿಗೆ ಹೆಚ್ಚು ಉತ್ತೇಜನವನ್ನು ಕೊಡಬಹುದು; ಕೆಲವನ್ನು ತಡೆಯಬಹುದು. ಉದ್ಯೋಗಗಳಲ್ಲಿ ಹೀಗೆ ಹೀಗೆ ಕೆಲಸಗಾರರಿಗೆ ಸಂಬಳ ಕೊಡಬೇಕು; ಹೀಗೇ ಅವರ ಜೀವವಿಮೆಗೆ ಸಹಾಯ ಮಾಡ ಬೇಕು; ಇಂಥ ಯಂತ್ರಗಳನ್ನೇ ಉಪಯೋಗಿಸಬೇಕು; ಕೆಲಸದ ಆವರಣ ವನ್ನು ಇಷ್ಟೇ ಶುಚಿಯಾಗಿ ಇಡಬೇಕು; ಯಾರನ್ನೇ ಆಗಲೆ ಅತಿ ಹೆಚ್ಚು ಕಾಲ ಕೆಲಸ ಮಾಡಿಸಕೂಡದು ಎಂದು ಗೊತ್ತುಮಾಡಬಹುದು; ಬಂಡವಾಳವನ್ನು ಹೀಗೆಲ್ಲಾ ಸಂಗ್ರಹಿಸಬಹುದು; ಇಂಥ ಇಂಥ ಸಂಸ್ಥೆಗಳು

ಮಾತ್ರ ಜನರಿಂದ ಹಣ ತೆಗೆಯಬಹುದು; ಈ ನಿಯಮಗಳಿಗೆ ಅವರು ಒಳಪಡಬೇಕು; ಇದೇ ಕ್ರಮದಲ್ಲಿ ಲೆಕ್ಕವಿಟ್ಟು ಮೇಲ್ತನಿಖೆ ನಡಸಬೇಕು; ಲಾಭಗಳನ್ನು ಹೀಗೇ ಹಂಚಬೇಕು; ಇಂಥ ಉದ್ಯೋಗಗಳಲ್ಲಿ ಇಷ್ಟು ರಾಯಮಾನವನ್ನು ಸರಕಾರದವರಿಗೆ ತೆರಬೇಕು ಮುಂತಾಗಿ ಶಾಸನ ಮಾಡಬಹುದು. ಅಥವಾ ಹಣ, ಜನ, ಕಾರ್ಯನಿಪುಣತೆ ಮತ್ತು ಯಂತ್ರ ಸಾಮಗ್ರಿ ಸಹಾಯಗಳು ಹೆಚ್ಚುವಂತೆಯೋ ಕೊರತೆಯಾಗುವಂತೆಯೋ ವರ್ತಿಸಬಹುದು; ತೆರಿಗೆ ಎತ್ತಬಹುದು; ತಮ್ಮ ರಾಜ್ಯದಲ್ಲಿನ ಎಲ್ಲ ಕೆಲಸಗಳ ಮೊತ್ತ, ಸ್ವರೂಪ, ರೀತಿ, ಗುರಿಗಳನ್ನು ವ್ಯತ್ಯಾಸಮಾಡಿ ತಮಗೆ ತೋರಿದಂತೆ ರಾಷ್ಟ್ರಜೀವನವನ್ನು ನಡಸಬಹುದು: ಒಟ್ಟಿನಲ್ಲಿ ಸರಕಾರದ ಸರ್ವತೋಮುಖವಾದ ನಡವಳಿಕೆಯಿಂದ ಆರ್ಥಿಕರಂಗದಲ್ಲಿ ಹಣದ ಸಂಚಲನ—ಅದು ಕಾರ್ಯಕ್ಷೇತ್ರಗಳಿಗೆ ಒದಗುವ ಮೊತ್ತ, ರೀತಿ — ಜನವರ್ಗದಲ್ಲಿ ಅದರ ಹಂಚಿಕೆ, ಸಂಪತ್ತಿನಲ್ಲಿ ಸರಕಾರದ ಭಾಗ, ದೇಶದ ಸಂಪತ್ತಿನ ಸ್ಥಿತಿ, ಏಳ್ಗೆ, ಬೀಳು ಮುಂತಾದುವು ನಿರ್ಧರವಾಗುವುವೆನ್ನಬಹುದು.

ಸರಕಾರದ ತೆರಿಗೆಯೆತ್ತುವ ರೀತಿನೀತಿಗಳಲ್ಲಿ ಕೆಲವನ್ನು ಹಿಂದಿನ ಪ್ರಕರಣದಲ್ಲಿ ಹೇಳಿ ಆಗಿದೆ. ಅವಕ್ಕೆ ಸಂಬಂಧಿಸಿದ ಇನ್ನೊಂದು ಅಂಶ ವಿಶೇಷವನ್ನು ಈ ಪ್ರಕರಣದಲ್ಲಿ ಹೇಳಲಾಗುತ್ತದೆ.

**ಪದಾರ್ಥಗಳ ಮೇಲಿನ ತೆರಿಗೆಗಳ ಉದ್ದೇಶ; ರಕ್ಷಣೆ—ಸ್ವತಂತ್ರವಾದಿಗಳು; ರಕ್ಷಣ ವಾದಿಗಳು.**—ಕೆಲವು ಪದಾರ್ಥಗಳ ಮೇಲೆ ತೆರಿಗೆ ಹಾಕಬೇಕಾದರೆ ಸರಕಾರಕ್ಕೆ ಕೇವಲ ಅಷ್ಟು ದುಡ್ಡನ್ನು ಬರಮಾಡಿಕೊಂಡರೆ ಸಾಕು ಎಂದಿರಬಹುದು. ಪದಾರ್ಥದ ಮೇಲೆ ಎತ್ತಿದರೆ ಸುಲಭವಾಗಿ ವಸೂಲಾಗುವುದು; ಎಲ್ಲ ಜನವರ್ಗಗಳಿಂದಲೂ ಅವರವರ ಶಕ್ತಿಗೆ ತಕ್ಕಂತೆ ಸರಕಾರಕ್ಕೆ ವರಮಾನವನ್ನು ಬರಮಾಡಿಕೊಂಡಂತೆಯೂ ಆಗುವುದು (ಉದಾ.— ಇಂಡಿಯಾದಲ್ಲಿ ಉಪ್ಪು, ಇಂಗ್ಲೆಂಡಿನಲ್ಲಿ ಹೊಗೆಸೊಪ್ಪು ಇವುಗಳ ಮೇಲೆ ಹಾಕಿರುವಹಾಗೆ) ಎಂಬ ಉದ್ದೇಶವಿರಬಹುದು;— ಅಥವಾ, ಭೋಗಸಾಮಗ್ರಿಗಳನ್ನು ಉಪಯೋಗಿಸುವವರು ಹೆಚ್ಚು ತೆರಿಗೆ ತೆರಬಲ್ಲರು ಎಂದೆಣಿಸಿ ಅವುಗಳ ಮೇಲೂ ವಿನೋದ ವಿಹಾರಗಳ ಮೇಲೂ ತೆರಿಗೆಯೆತ್ತಬಹುದು; ಅಥವಾ, ಈ ಪದಾರ್ಥದ ಉಪಯೋಗ ಹೆಚ್ಚಲಿ,

ಇದರ ಉಪಯೋಗ ಕುಗ್ಗಲಿ ಎಂಬ ಉದ್ದೇಶದಿಂದ ಇಕ್ಕಬಹುದು. ಆದರೆ ಕೆಲವು ಕರಗಳನ್ನು ಹಾಕುವ ಉದ್ದೇಶವೇ ವಿಶೇಷವಾದ್ದು: ಅವು ಬಹುವಾಗಿ ವಿದೇಶ ವ್ಯಾಪಾರಕ್ಕೆ ಸಂಬಂಧಪಟ್ಟವು. ಕೆಲವು ಆಮದುಗಳನ್ನು ಕಡಮೆಮಾಡಬೇಕು ಅಥವಾ ಹೆಚ್ಚಿಸಬೇಕು; ಕೆಲವು ರಫ್ತುಗಳಿಗೆ ಉತ್ತೇಜನಕೊಡಬೇಕು ಅಥವಾ ತಡೆಹಾಕಬೇಕು; ಕೆಲವು ಉದ್ಯೋಗ ಕೈಗಾರಿಕೆಗಳನ್ನು ಒಳಗೆ ನಿರ್ಮಾಣಮಾಡಿ ಬೆಳಸಬೇಕು, ದುರ್ಬಲವಾಗಿರುವವನ್ನು ಪೋಷಿಸಬೇಕು; ಅದೇ ಬಗೆಯ ಕೈಗಾರಿಕೆಗಳಲ್ಲಿ ತೊಡಗಿ ಅದೇ ವ್ಯಾಪಾರವನ್ನು ಈ ದೇಶದಲ್ಲಿ ಮಾಡುವ ವಿದೇಶಿಯರ ಸ್ಪರ್ಧೆಯ ಕೇಡುಗಳಿಂದ ಇವನ್ನು ರಕ್ಷಿಸಬೇಕು: ಸ್ವದೇಶದ ಕೈಗಾರಿಕೆ ವ್ಯಾಪಾರಗಳಿಗೆ ಹೊರದೇಶದಲ್ಲಿ ಪ್ರಾಬಲ್ಯವನ್ನು ಕಲ್ಪಿಸಿಕೊಡಬೇಕು; ದೇಶದೊಳಕ್ಕೆ ಹೊರಗಿನ ಬಂಡವಾಳವನ್ನು ಆಕರ್ಷಿಸಬೇಕು; ಅದು ಅತಿಯಾಗಿ ಬರುತ್ತಿದ್ದರೆ ತಡೆಯಬೇಕು — ಎಂದು ಉದ್ದೇಶ ಇರುವುದುಂಟು. ಇಲ್ಲಿನ ಕೈಗಾರಿಕೆ – ವ್ಯಾಪಾರ – ಬಂಡವಾಳ - ಕಾಮಗಾರ ಮಂಡಲಿ — ಇವನ್ನು ಇತರರಿಂದ ರಕ್ಷಿಸಿ ಅವುಗಳ ಧಾರಾಳವಾದ ಚಲನವಲನಕ್ಕೆ ಸಹಾಯವಾಗುವಂತೆಯೂ, ಅಡಚಣೆಗಳನ್ನು ಉಂಟುಮಾಡುವಂತೆಯೂ ತೆರಿಗೆ ಬೀಳುವುದು;* ಶಾಸನಗಳು ಏರ್ಪಡುವವು. ಈ ಶಾಸನಗಳನ್ನು ಸಾಧಿಸುವಾಗ ಹೆಚ್ಚು ಹಣ ವೆಚ್ಚವಾಗಬಹುದಾಗುವುದೂ ಉಂಟು. ಈ ಬಗೆಯ ರಕ್ಷಣಾ ಶಾಸನಗಳೂ ನಿಷೇಧಗಳೂ ಸರಿಯಲ್ಲ; ಪ್ರಯೋಜನಗಳಿಗಿಂತಲೂ ಕೇಡು ಹೆಚ್ಚು; ತಕ್ಷಣದಲ್ಲಿ ಅನುಕೂಲವೆಂದು ಕಂಡುಬಂದರೂ ಉತ್ತರೋತ್ತರ ಮೊತ್ತದಲ್ಲಿ ನಷ್ಟವೇ ಬಹಳ; ಪದಾರ್ಥಗಳನ್ನು ಉಪಯೋಗಿಸುವ ಜನರಿಗೆ ಧಾರಣೆಹಾನಿ ಏರಿ ಅವರ ನಷ್ಟದಿಂದ ಬಂದ ಹಣ ಧನಿಕರಾದ ಉತ್ಪತ್ತಿಕಾರರ ಜೇಬಿಗೆ ಸೇರಿ ಅವರು ಪುಷ್ಟರಾಗುವಂತಾಗುತ್ತದೆ; ಕಡೆಗೆ ಯಾವ ಉದ್ಯೋಗ ಕೈಗಾರಿಕೆಗಳನ್ನು ರಕ್ಷಿಸಬೇಕು, ಪೋಷಿಸಬೇಕು ಎಂದು ಉದ್ದೇಶಪಟ್ಟಿದೆಯೋ ಅವು ಪೋಷಿತವಾಗುವ ಸಂಭವ ಕಡಮೆ; ಸರಕಾರವನ್ನು

* ಅನೇಕ ವೇಳೆ ಕೇವಲ ವರಮಾನದ ಉತ್ಪತ್ತಿಗಾಗಿ ಇಕ್ಕಿದ ಎಷ್ಟೋ ತೆರಿಗೆಗಳಿಂದಲೇ (Excise or Revenue Duties) ಈ ಬಗೆಯ ಫಲಗಳುಂಟಾಗುವುವು.

ಸೆಚ್ಚಿ, ಅವುಗಳ ಬೆಳವಣಿಗೆ ಅಷ್ಟು ಚೆನ್ನಾಗಿ ಆಗುವುದಿಲ್ಲ; ಧಾರಾಳವಾದ ಪೈಪೋಟಿ ಇದ್ದರೆ ದಕ್ಷವಾಗಿ ನಡೆಯಲಾರದ, ಸ್ವಸತ್ವದಿಂದ ಊರ್ಜಿತವಾಗಲಾರದ ಕೈಗಾರಿಕೆಗಳು ತಮ್ಮಕಷ್ಟಕ್ಕೆ ತಾವೇ ಮುರಿದುಬಿದ್ದು ಪ್ರಪಂಚದ ಎಲ್ಲ ಕಡೆಯಿಂದಲೂ ಪದಾರ್ಥಗಳು ಆಮದಾಗಿ ಬಂದು, ಕೊಂಡು ತಿನ್ನುವರಿಗೆ ಅಗ್ಗವಾಗುವುವು; ಇಲ್ಲಿ ವಿಧಿನಿಷೇಧಗಳು ಕ್ರೂರವಾಗಿ ಏರ್ಪಟ್ಟಿರುವುದನ್ನು ಕಂಡರೆ ವಿದೇಶಗಳವರು ಈ ದೇಶದ ಪದಾರ್ಥಗಳ ಮೇಲೆ ತೆರಿಗೆ ಸುಂಕಗಳನ್ನು ಹಾಕಿ ಮುಯ್ಯಿ ತೀರಿಸಿಕೊಳ್ಳುವರು; ರಾಷ್ಟ್ರ ರಾಷ್ಟ್ರಗಳವರಿಗೆ ವೈಮನಸ್ಯಗಳನ್ನು ಉಂಟಾಗಿಸಿ ಜನದ ಮತ್ತು ವಸ್ತುಗಳ ಸಂಚಾರಕ್ಕೆ ಅಡಚಣೆ ತಂದುಹಾಕುವುದು ಸರಿಯಲ್ಲ. ಒಟ್ಟಿನಲ್ಲಿ ದೇಶದ ಆರ್ಥಿಕ ಕ್ಷೇಮ ಇದರಿಂದ ಸಾಧಿತವಾಗುವುದಿಲ್ಲ ಎಂದೂ ಇನ್ನೂ ಅನೇಕವಾಗಿಯೂ ವ್ಯಾಪಾರ ಸ್ವಾತಂತ್ರ್ಯವಾದಿಗಳು (Free Traders) ಹೇಳುತ್ತಾರೆ. ಅದಕ್ಕೆ ಪ್ರತಿಯಾಗಿ ರಕ್ಷಣವಾದಿಗಳು (Protectionists) ರಾಷ್ಟ್ರಗಳ ಅನ್ಯೋನ್ಯ ವ್ಯಾಪಾರದಲ್ಲಿ ಸಂಪೂರ್ಣ ಸ್ವಾತಂತ್ರ್ಯವಿದ್ದರೆ ಉಗ್ರ ಸ್ಪರ್ಧೆಗಳಿಂದ ಅನೇಕ ರಾಜಕೀಯ ಸಾಮಾಜಿಕ ಆರ್ಥಿಕ ಕೇಡುಗಳುಂಟಾಗಿ ಒಳದೇಶದ ಜೀವನ ಬಾಡಿ ಬಳಲುವುದು; ಕಡೆಯಲ್ಲಿ ಪ್ರಪಂಚದ ಮಂಗಳ ಈ ಬಗೆಯ ರಕ್ಷಣೆಯಿಂದ ಸಾಧಿತವಾಗುವುದಿಲ್ಲವೆಂಬ ಕೇವಲ ಒಂದು ಒಣ ತತ್ವಕ್ಕೆ ಕಟ್ಟುಬಿದ್ದು ಸ್ವನಾಶಮಾಡಿಕೊಳ್ಳುವುದು ಪ್ರಯೋಜನವಲ್ಲ; ಕಡೆಯ ಮಂಗಳವನ್ನು ಹಾರೈಸುತ್ತ ಮೊದಲಲ್ಲಿಯೇ ಆತ್ಮನಾಶ ಮಾಡಿಕೊಳ್ಳುವುದು ಮಡ್ಡಿತನ; ಬಹು ಕಾಲದಿಂದ ಉದ್ಯೋಗಗಳಲ್ಲಿ ಬಲಿತು ಪೈಪೋಟಿಯಲ್ಲಿ ಗಟ್ಟಿಗರಾಗಿರುವ ಹೊರಗಿನವರು ಒಳದೇಶಕ್ಕೆ ಬಂದು ಇಲ್ಲಿ ಅಗತ್ಯವಾಗಿ ಸ್ಥಾಪಿತವಾಗಿ ನಡೆಯಬೇಕಾಗಿರುವ ಕೈಗಾರಿಕೆಗಳನ್ನು ನಾಶಮಾಡುವರು; ಸಸಿಯಂತೆ ಈಗತಾನೇ ನಟ್ಟಿರುವ ವ್ಯಾಪಾರ ಕೈಗಾರಿಕೆಗಳನ್ನು ಬೆಳಸಬೇಕಾದರೆ ಹೊರಗಿನ ಪೀಡೆಗಳಿಂದಲೂ, ವಿಷವಾತಗಳಿಂದಲೂ, ಕೊಡಲಿಗಳಿಂದಲೂ, ಕೆಟ್ಟ ಕಣ್ಣುಗಳಿಂದಲೂ ರಕ್ಷಿಸಿ ನೀರೆರೆದು ಬಲಿಸಬೇಕು; ಬಹಳ ಬಲಿಷ್ಠರಾಗಿರುವವರಿಗೂ ಬಹಳ ದುರ್ಬಲರಾಗಿರುವವರಿಗೂ ಪೈಪೋಟಿ ಶಕ್ತಿ, ಜೊತೆ, ಒಂದೇ ಸಮವೆಂತಾದೀತು? ದೇಶದ ಒಳಗೇ ಹೊಸ

ಹೊಸ ಕೈಗಾರಿಕೆಗಳನ್ನು ಸ್ಥಾಪಿಸಿ ಉದ್ಯೋಗವಿಲ್ಲದವರಿಗೆ ಉದ್ಯೋಗವನ್ನು ಕಲ್ಪಿಸಿಕೊಡತಕ್ಕದ್ದು ಅವಶ್ಯ ಕರ್ತವ್ಯ; ಒಂದೇ ಬಗೆಯ ಉತ್ಪತ್ತಿ ಅಥವಾ ಕೈಗಾರಿಕೆಗಳನ್ನು ನಂಬಿಕೊಂಡು ಆಪತ್ ಸಮಯಗಳಲ್ಲಿ ಕ್ಲೇಶಪಡುವುದಕ್ಕಿಂತ ಉದ್ಯೋಗ ಕೈಗಾರಿಕೆಗಳನ್ನು ವಿವಿಧವಾಗಿ ಅಭಿವೃದ್ಧಿಗೊಳಿಸಬೇಕು; ತಮ್ಮ ಕೆಲಸಗಾರರಿಗೆ ಬದುಕಿನ ಸುಖ ಮೇಲಾಗಲಿ ಎಂಬ ದೃಷ್ಟಿಯಿಂದ ಹೆಚ್ಚು ಕೂಲಿ ಸಂಬಳಗಳನ್ನು ಕೊಟ್ಟು ಕೆಲಸದಲ್ಲಿ ನಿಯೋಜಿಸಿರುವಾಗ ಕಡಮೆ ಸಂಬಳ, ಉತ್ಪತ್ತಿಯ ವೆಚ್ಚ—ಕೀಳಾದ ಬಾಳಿನ ಮಟ್ಟ (Low Standard of Life) ಮುಂತಾದ ಆವರಣದಲ್ಲಿ ಕೆಲಸಮಾಡುತ್ತಿರುವ ಇತರ ದೇಶಗಳವರು ತಮ್ಮ ತಯಾರಿಕೆಯ ವಸ್ತುಗಳನ್ನು ಇಲ್ಲಿಗೆ ಕಳುಹಿಸಿರುವುದರಿಂದ ಇಲ್ಲಿನ ವಸ್ತುಗಳಿಗೆ ಪೇಟೆಯಲ್ಲಿ ಗಿರಾಕಿ ಸಿಕ್ಕದಾದರೆ ಇಲ್ಲಿನವರ ಕೂಲಿ ಸಂಬಳದ ಪ್ರಮಾಣಕ್ಕೆ ಊನಬಾರದಂತೆ ತಡೆಯಬೇಕು; ರಾಜಕೀಯ ಕ್ರಾಂತಿಗಳ ಕಾಲದಲ್ಲಿ ಅಥವಾ ಯುದ್ಧಕಾಲಗಳಲ್ಲಿ ಒಳದೇಶಕ್ಕೆ ಬೇಕಾದ ಆಹಾರ ಮತ್ತು ಮೂಲ ಸಾಮಗ್ರಿಗಾಗಿ ಪರಕೀಯರಿಗೆ—ಬಹುಶಃ ಶತ್ರುಗಳಿಗೆ—ಅಧೀನವಾಗುವ ಸಂಭವವಿರುವುದರಿಂದ ಒಳಗೇ ಅಂತಹವನ್ನು ಪೋಷಿಸಬೇಡವೆ? ನಮ್ಮ ದೇಶದ ಆರ್ಥಿಕ ಮೇಲ್ಮೆಯನ್ನು ನಾವೇ ಸರ್ವತೋಮುಖವಾಗಿ ಬೆಳಸಬೇಕು; ಅದಕ್ಕಾಗಿ ಸ್ವಲ್ಪ ಹೆಚ್ಚು ದರಗಳನ್ನು ತಕ್ಷಣದಲ್ಲಿ ತೆರಬೇಕಾದರೂ ಅಗ್ಗವಾದ ವಿದೇಶಿ ಪದಾರ್ಥಗಳನ್ನು ಕೊಂಡು ಇಲ್ಲಿನ ಕೈಗಾರಿಕೆ ಉದ್ಯೋಗಗಳನ್ನು ಹಾಳುಮಾಡುವುದಕ್ಕಿಂತ ಕೆಲವು ಕಾಲ ಹೆಚ್ಚು ದರಗಳನ್ನು ತೆತ್ತಾದರೂ ಇವುಗಳನ್ನು ಉಳಿಸಿಕೊಳ್ಳುವುದೇ ಮೇಲು ಎಂದು ಹೇಳುವರು.

**ರಕ್ಷಣೆಗೆ ಪಕ್ಷಪಾತ.**—ಕೇವಲ ತತ್ವ ದೃಷ್ಟಿಯಿಂದ ನೋಡಿದರೆ, ಪರಿಣಾಮದಲ್ಲಿ, ವ್ಯಾಪಾರ ಸ್ವಾತಂತ್ರ್ಯ ವಾದಗಳ ಮತಕ್ಕೇ ಪ್ರಪಂಚದವರೆಲ್ಲರೂ ತಿರುಗಬೇಕಾದುದು ಹಿತ; ಕ್ಷೇಮ. ಆದರೂ ಎಲ್ಲ ದೇಶಗಳವರೂ ಎಲ್ಲ ವ್ಯಾಪಾರ ಕೈಗಾರಿಕೆಗಳ ಸಂಬಂಧದಲ್ಲಿಯೂ ಧಾರಾಳವಾದ ಸ್ವಾತಂತ್ರ್ಯ ಸಂಚಾರಗಳನ್ನು ಏರ್ಪಡಿಸಿದ ಹೊರತು ಯಾವೊಂದು ದೇಶಕ್ಕೇ ಆಗಲಿ ಆ ಪದ್ಧತಿಯನ್ನು ಅನುಸರಿಸುವುದರಿಂದ ಪ್ರಯೋಜನವಿಲ್ಲವೆಂದೂ, ರಾಷ್ಟ್ರದ ಪುಷ್ಟಿ ಬಯಸುವವರು ಕರಗಳ ಮೂಲಕ ರಾಷ್ಟ್ರದ ಬಲವನ್ನು ಹೆಚ್ಚಿಸ

ಬೇಕೆಂದೂ ಅನೇಕರು ರಕ್ಷಣೆಯ ಕಡೆ ಮನಸ್ಸು ಹರಿಸುತ್ತಿರುವರು. ಅಲ್ಲದೆ ಒಳಿಯ ಕೈಗಾರಿಕೆಗಳನ್ನು ಹೊರಗಿನವರ ಪೈಪೋಟಿಯಿಂದ ರಕ್ಷಿಸ ಬೇಕಾದರೆ ಒಳಗೆ ಅವಕ್ಕೆ ಹೆಚ್ಚು ಪೋಷಣೆಯನ್ನು ಕೊಡಬೇಕು. ಒಂದು ರಾಷ್ಟ್ರದ ಕೈಗೆ ಮೀರಿದ ಅಂತರ್ ರಾಷ್ಟ್ರೀಯ ಸನ್ನಿವೇಶಗಳಿಂದ ಒಳದೇಶದ ಬೆಲೆ, ವ್ಯಾಪಾರ, ಸಂಪತ್ ಸ್ಥಿತಿ, ಸಾಲಗಾರಿಕೆ ಇವುಗಳಿಗೆ ಕೇಡು ತಟ್ಟದಂತೆ ಧಾರಣೆವಾಸಿಯನ್ನೂ ವಿನಿಮಯವನ್ನೂ ಕೈಗಾರಿಕೆ ಮಂಡಲವನ್ನೂ ಬದುಕಿಸ ಹಣವನ್ನೂ ರಕ್ಷಿಸಬೇಕು ಎಂದು ಎಲ್ಲರೂ ಒಪ್ಪುವರು. ಒಟ್ಟಿನಲ್ಲಿ ಯಾವ ದೇಶದವರಿಗೆ ಧಾರಾಳವಾದ ಅಶೃಂಖಲ ವ್ಯಾಪಾರದಿಂದ ಪ್ರಯೋಜನ ವಿದೆಯೆಂದು ತೋರುವುದೋ ಅವರು ಸ್ವಾತಂತ್ರ್ಯ ಮಾರ್ಗವನ್ನೇ ಹಿಡಿಯು ವರು; ಯಾರಿಗೆ ರಕ್ಷಣೆಯ ಮಾರ್ಗ ಲಾಭಕರವೋ ಅವರು ಆ ಮಾರ್ಗ ವನ್ನು ಹಿಡಿಯುವರು. ಯಂತ್ರ ವಿಧಾನದ ಮೂಲಕ ಕೈಗಾರಿಕೆಗಳಲ್ಲಿ ಮುಂದುವರಿದಿರುವ ಇಂಗ್ಲೆಂಡ್, ಜರ್ಮನಿ, ಅಮೇರಿಕ, ಜಪಾನ್ ಮುಂತಾದ ಎಲ್ಲ ರಾಷ್ಟ್ರಗಳವರೂ ಪ್ರಬಲವಾದ ವಿದೇಶಿ ಸುಂಕಗಳ ಗೋಡೆ ಗಳನ್ನು ಸುತ್ತಲೂ ಕಟ್ಟಿಕೊಂಡು ಈಗಿನ ಬಲಿಷ್ಠ ಸ್ಥಿತಿಗೆ ಬಂದಿದ್ದಾರೆ. ಈ ಸಂಗತಿಯನ್ನು ತಿಳಿದು ಈಗ ಆರ್ಥಿಕ ಸ್ಥಿತಿಯಲ್ಲಿ ದುರ್ಬಲವಾಗಿರುವವ ರೆಲ್ಲರೂ ತಾವೂ ರಕ್ಷಣೆಯನ್ನು ಕೋರುವುದು ಸರಿಯೆಂದು ಆ ದಾರಿಯನ್ನು ಹಿಡಿಯುತ್ತಿದ್ದಾರೆ.

ರಕ್ಷಣೆ ಆರ್ಥಿಕ ಪ್ರಪಂಚವನ್ನು ಪದಾರ್ಥಗಳ ಸಂಬಂಧದಲ್ಲಿಯೂ ಉತ್ಪತ್ತಿಕರಣಗಳ ಸಂಬಂಧದಲ್ಲಿಯೂ ವ್ಯಾಪಿಸಬಹುದು. ಯಾವ ರೀತಿ ವ್ಯಾಪಿಸುವುದೆಂಬುದು ಸರಕಾರದ ಕಾರ್ಯನೀತಿಗೆ ಒಳಪಡುವುದು. ಕೈಗಾರಿಕೆಯನ್ನು ಅಭಿವೃದ್ಧಿಗೊಳಿಸಬೇಕೆಂಬ ಉದ್ದೇಶದಿಂದಲೋ; ಅಥವಾ ಈಗ ನಡೆಯುತ್ತಿರುವ ಯಾವುದಾದರೊಂದಕ್ಕೆ ಸ್ವಲ್ಪ ಸಹಾಯವನ್ನಿತ್ತರೆ ಅದು ಚೇತರಿಸಿಕೊಳ್ಳಬಲ್ಲದು ಎಂದು ತಿಳಿದಾಗಲೋ; ಒಳಗೆ ನಡೆಯು ತ್ತಿರುವ ಕೈಗಾರಿಕೆಗಳಿಗೆ ಹೊರಗಿನವರಿಂದ ಆಗುತ್ತಿರುವ ಪೈಪೋಟಿಯ ನಷ್ಟವನ್ನೂ ಅನ್ಯಾಯವನ್ನೂ ಕೊರತೆಯನ್ನೂ ನಿವಾರಿಸಿ ಅವನ್ನು ತುಂಬಿ ಕೊಡುವ ಉದ್ದೇಶದಿಂದಲೋ; ಇತರರ ಜೊತೆಗೆ ಸ್ಪರ್ಧೆಯಲ್ಲಿ ಸಮನಿಲ್ಲು ವಂತೆ ಶಕ್ತಿಯನ್ನುಂಟುಮಾಡಬೇಕೆಂಬ ಉದ್ದೇಶದಿಂದಲೋ; ಹೊರ

ದೇಶಗಳವರು ತಮ್ಮ ಸರಕಾರದವರಿತ್ತ ಅನುಕೂಲವನ್ನೂ ಹಣದ ಬಲ ಮತ್ತು ಮಾರುವೆಯ ಪರಿಳಿತಗಳನ್ನೂ ಉಪಯೋಗಿಸಿಕೊಂಡು ಈ ದೇಶದೊಳಕ್ಕೆ ಅಮಿತವಾಗಿ ನುಗ್ಗಿ ಬಂದು ಎಲ್ಲ ಬೆಲೆಗಳನ್ನೂ ಕುಗ್ಗಿಸಿ ಇಲ್ಲಿನ ಪದಾರ್ಥಗಳಿಗೆ ಗಿರಾಕಿ ಸಿಕ್ಕದಂತೆ ಪೋಟಿಯನ್ನು ಕೆಡಿಸುತ್ತಿದ್ದರೆ ಅದಕ್ಕೆ ಪ್ರತೀಕಾರಮಾಡಬೇಕೆಂಬ ಉದ್ದೇಶದಿಂದಲೋ ರಕ್ಷಣೆಯ ಸುಂಕಗಳನ್ನು ರಚಿಸುವರು. ಅವು ಆಮದು ರಫ್ತುಗಳೆರಡರ ಮೇಲೂ ಬೀಳುವುವು.

(೧) **ಸುಂಕಗಳು (Customs).**— ಆಮದು ತೆರಿಗೆಗಳು ವ್ಯವಸಾಯಕ್ಕೆ ಸಂಬಂಧಪಟ್ಟು ಬಗೆ ಬಗೆಯ ವ್ಯವಸಾಯದ ಮತ್ತು ಪ್ರಾಣಿವರ್ಗದ ಉತ್ಪತ್ತಿಯ ಮೇಲೆ (ಉದಾ: ಗೋಧಿ, ಹತ್ತಿ, ದನ, ಕುರಿ, ಮಾಂಸ, ಹಣ್ಣು, ಹಾಲು, ರೇಷ್ಮೆ ಮುಂತಾದುವು) ಬೀಳಬಹುದು; ಆಗ ಆ ಪದಾರ್ಥಗಳನ್ನು ಒಳದೇಶದಲ್ಲಿಯೇ ಉತ್ಪತ್ತಿಮಾಡುವಂತೆ ಉತ್ತೇಜನ ಕೊಡುವ ಉದ್ದೇಶವಿರುತ್ತದೆ. ಅಥವಾ, ಯಂತ್ರನಿರ್ಮಿತವಾದ ವಸ್ತುಗಳ ಮೇಲೆ ಬೀಳಬಹುದು (ಉದಾ: ಹತ್ತಿ ನೂಲು, ಗಾಜು, ಬಟ್ಟೆಗಳು, ಕಬ್ಬಿಣದ ಸಾಮಾನು, ಸಕ್ಕರೆ ಮುಂತಾದುವು).

(೨) **ಸಾಗಿಸುವ ವೆಚ್ಚ (Transit Charges).**— ರೈಲ್ವೆ, ಹಡಗು ಮುಂತಾದ ವಾಹನ ವೆಚ್ಚಗಳಲ್ಲಿ ಹೆಚ್ಚು ಕಡಿಮೆಯಾಗುವಂತೆ ಏರ್ಪಡಿಸಿ, ರಫ್ತಿನ ವೆಚ್ಚ ಹೆಚ್ಚಿಸಿ ಹೊರಗೆ ಹೋಗುವ ಸಾಮಾನನ್ನು ತಡೆಯುವುದು; ಒಳಕ್ಕೆ ಬರುವುದನ್ನು ತಡೆಯಲು ಆಮದು ದರ ಹೆಚ್ಚಿಸುವುದು; ರಫ್ತು ಆಮದುಗಳನ್ನು ಹೆಚ್ಚಿಸಬೇಕೆನ್ನಿಸಿದರೆ ದರಗಳನ್ನಿಳಿಸುವುದು ಮುಂತಾಗಿ ವಸ್ತುಗಳನ್ನು ಸಾಗಿಸುವ ತೆರಾಣಿಗಳನ್ನು ಹೆಚ್ಚು ಕಡಿಮೆ ಮಾಡುವುದುಂಟು, ಸುಂಕ ಎತ್ತುವುದುಂಟು.*

(೩) **ಆಡಳಿತಕ್ಕೆ ಸಂಬಂಧಪಟ್ಟವು — ವಿರೋಧ ಕಾರ್ಯಗಳು — ಸಹಾಯ ಕಾರ್ಯಗಳು.**— ಆಡಳಿತ ಶಾಸನಗಳಲ್ಲಿಯೂ ರಕ್ಷಣೆಗಳನ್ನು

---

* ಇವು ಇಷ್ಟೇ ಎಂದು ಒಂದು ಗೊತ್ತಾದ ಮೊತ್ತವಲ್ಲ ಬೀಳಬಹುದು, ಪದಾರ್ಥಗಳ ಬೆಲೆಗೆ ತಕ್ಕಂತೆ ಒಂದು ಪ್ರಮಾಣದಲ್ಲಿ, ದರವಲ್ಲಿ, ಬೀಳಬಹುದು; ಅಥವಾ ಹೊರಗಿನವರ ಬೆಲೆಗೂ ಒಳಗಿನವರ ಅದೇ ಪದಾರ್ಥದ ಬೆಲೆಗೂ ಎಷ್ಟು ಅಂತರವಿದೆಯೋ ಆ ಅಂತರವನ್ನು ಪೂರ್ತ ಬೀಳಬಹುದು (Specific, Ad Valorem and Differential Duties)

ಏರ್ಪಡಿಸಬಹುದು. ಪಶುಚಿಕಿತ್ಸೆ, ಪೋಲೀಸು ಕಾವಲು ಇವನ್ನು ಹೊರಗಿಂದ ಬರುವ ಪದಾರ್ಥಗಳಿಗೆ ದೊರಕಿಸದಿರುವುದು; ಕೈಗಾರಿಕೆಯ ಆಸ್ತಿಗಳನ್ನು ಕಾಪಾಡುವ ಶಾಸನಗಳಿಗೆ ವಿದೇಶಿಯರೂ, ತಮಗೆ ಬೇಡವಾದವರೂ ಒಳಪಡದಂತೆ ಕಾನೂನು ಮಾಡುವುದು; ಆಹಾರ ಪದಾರ್ಥಗಳ ವಿಚಾರದಲ್ಲಿ ನಿಷೇಧಗಳನ್ನೇರ್ಪಡಿಸುವುದು; ಸರಕಾರಿ ಒಪ್ಪಂದಗಳನ್ನು ಇಂಥವರೊಡನೆ ಮಾಡಿಕೊಳ್ಳುವುದಿಲ್ಲ, ಇಂಥವರಿಂದ ಸಾಮಾನು ತರಿಸಿಕೊಳ್ಳುವುದಿಲ್ಲ ಎಂಬಂತೆ ಕಾರ್ಯಭಾರ ಮಾಡುವುದು; ಇಲ್ಲವಾದರೆ ಜನಸಾಮಾನ್ಯದವರು ಒಗ್ಗಟ್ಟಾಗಿ ವಿದೇಶಿ ಸಾಮಾನುಗಳನ್ನು ಕೊಳ್ಳದಂತೆಯೂ ಅವಕ್ಕೆ ಇಲ್ಲಿ ಗಿರಾಕಿ ದೊರೆಯದಂತೆಯೂ ಮಾಡುವುದು — ಇವೇ ಮುಂತಾದುವು ರಕ್ಷಣೆಗೆ ನೆರವಾಗುವ ಪ್ರತಿಷೇಧ ಕಾರ್ಯಗಳು. ಇವುಗಳ ಜೊತೆಗೆ ಕೆಲವು ನೇರವಾದ ಸಹಾಯ ಸೌಕರ್ಯಗಳನ್ನೂ ಒದಗಿಸುವುದುಂಟು: ದೇಶದ ವ್ಯಾಪಾರವೂ ಕೈಗಾರಿಕೆಯೂ ಬೆಳೆದು ಸಂಪತ್ತು ಹೆಚ್ಚಲಿ, ಅನುಕೂಲವಾದ ವಿದೇಶಿ ವ್ಯಾಪಾರವೂ ಹೊರಗಿನ ಗಿರಾಕಿಯೂ ತಮ್ಮ ಪದಾರ್ಥಕ್ಕೆ ದೊರೆಯಲಿ ಎಂದು ರಫ್ತಾಗುವ ತಮ್ಮ ಪದಾರ್ಥಗಳಲ್ಲಿ ಕೆಲವಕ್ಕೆ ಉದಾರವಾಗಿ ಹಣ ದಾನ (Subsidies-Subventions) ಕೊಡುವುದುಂಟು. ಅಂತಹ ಪದಾರ್ಥಗಳ ತಯಾರಿಗೆ ಬೇಕಾಗುವ ಭೂಮಿ ಕಾಣಿ ವಸತಿ ಸೌಕರ್ಯಗಳನ್ನೂ ಶಾಸ್ತ್ರ ಮತ್ತು ಯಂತ್ರ ಸಹಾಯವನ್ನೂ (Scientific and Technical Aids) ಉಚಿತವಾಗಿ ಕಲ್ಪಿಸಬಹುದು. ರಫ್ತಾಗಲಿರುವ ವಸ್ತುಗಳನ್ನು ಹೊರಗಿನ ಪೇಟೆಗೆ ಸಾಗಿಸಲು ತಗಲುವ ವೆಚ್ಚಗಳನ್ನೂ ಕಡಮೆಮಾಡಿ ಕೊಡಬಹುದು. ಅವಕ್ಕೆ ಸುಲಭವಾದ ವಿಮೆಯನ್ನು ಏರ್ಪಡಿಸಬಹುದು. ಎಲ್ಲ ದರಗಳಲ್ಲಿಯೂ ಕರಗಳಲ್ಲಿಯೂ ರಿಯಾಯಿತಿ ತೋರಿಸಬಹುದು ಅಥವಾ ಸೋಡಿಕೊಡಬಹುದು. ಅನುಕೂಲವಾದ ವಿನಿಮಯ ದರಗಳನ್ನು ಏರ್ಪಡಿಸಿ ವ್ಯಾಪಾರಕ್ಕೆ ಉತ್ತೇಜನಕೊಡಬಹುದು.* ಅಂತು ತಮ್ಮ

* ಉದಾ: ಹಡಗಿನ ಕೈಗಾರಿಕೆಯೂ, ಹಡಗಿನ ವ್ಯಾಪಾರ ಯಾನಾದಿಗಳೂ ಏಳಿಗೆಗೆ ಬರುವಂತೆ ಅವುಗಳ ಚಾಲಕರಿಗೆ ಹಣದ ನೆರವನ್ನೂ ರೇವುಗಳ ಸೌಕರ್ಯಗಳನ್ನೂ ಕೊಟ್ಟು ನಾವಿಕತನಕ್ಕೆ ಬಹುಮಾನ ಪ್ರೋತ್ಸಾಹಗಳನ್ನು ಕೊಡಬಹುದು. ಇಂಥ ಇಂಥ ಹಡಗುಗಳಲ್ಲಿಯೇ ತಮ್ಮ ದೇಶದವರ ಸಾಮಾನು ಸಾಗತಕ್ಕದ್ದು ಎಂದು ಶಾಸನಮಾಡಬಹುದು.

ದೇಶದಲ್ಲಿ ತಯಾರಾದ ವಸ್ತುಗಳು ಹೊರಗಿನ ಪೇಟೆಗಳಿಗೆ ರಫ್ತಾಗಿ ಅಲ್ಲಿ ಅನುಕೂಲವಾಗಿ ಮಾರಾಟವಾಗಲು ಯಾವ ಯಾವ ರಾಜಕೀಯ, ಖಾಸಗಿ ಅಥವಾ ಸರಕಾರಿ ಸಹಾಯಗಳನ್ನು ಕಲ್ಪಿಸಬಹುದೋ ಎಲ್ಲವನ್ನೂ ಒದಗಿಸಿ ಉತ್ತೇಜನಕೊಡಬಹುದು.

**ಸರಕಾರದ ಆದಾಯ ವೆಚ್ಚಗಳಲ್ಲಿ ವ್ಯತ್ಯಾಸಗಳು.** — ಇಷ್ಟೂ ಪದಾರ್ಥಗಳ ಆಮದು ರಫ್ತುಗಳಿಗೆ ಸಂಬಂಧಿಸಿದ ಅಂಶಗಳು. ಇವುಗಳ ಮೇಲೆತ್ತುವ ತೆರಿಗೆಗಳಿಂದ ಸರಕಾರಕ್ಕೆ ವರಮಾನ ಬರುತ್ತದೆ; ಇವರು ಕೊಡುವ ಸಹಾಯಗಳಿಂದ ಸರಕಾರದ ವೆಚ್ಚ ಹೆಚ್ಚುತ್ತದೆ. ಈ ಕಾರ್ಯಗಳಿಂದ ಆಮದು ರಫ್ತು ವ್ಯಾಪಾರಕ್ಕೆ ಉತ್ತೇಜನವೊ ತಡೆಯೊ ಉಂಟಾಗಿ ಸರಕಾರದ ಆದಾಯ ವೆಚ್ಚಗಳಲ್ಲಿ ವ್ಯತ್ಯಾಸವುಂಟಾಗುತ್ತದೆ. ಸುಂಕವನ್ನೂ ತೆರಿಗೆಯನ್ನೂ ತೆತ್ತು ಒಳಕ್ಕೆ ಬರುವ ಪದಾರ್ಥಗಳ ಪೈಪೋಟಿಯಿಂದ ಸ್ವದೇಶಿ ಕೈಗಾರಿಕೆಗಳಿಗೆ ಉಂಟಾಗಬಹುದಾದ ಕೇಡಿನಲ್ಲಿ ಬಹು ಭಾಗವನ್ನು ತಪ್ಪಿಸುವುದರ ಜೊತೆಗೆ ಆ ವ್ಯಾಪಾರದ ಹೆಚ್ಚಿಗೆಯೆಲ್ಲಾ ಸರಕಾರದ ಕೈಗೆ ಹೊರಗಿನವರಿಂದ ಹೆಚ್ಚು ಹಣ ಬರುವಂತಾಗಿ ತನ್ನ ಸಾಮಾನ್ಯ ವೆಚ್ಚಕ್ಕೂ ವ್ಯಾಪಾರ ರಕ್ಷಣೆಯ ವೆಚ್ಚಕ್ಕೂ ಒದಗುತ್ತದೆ. ಅಲ್ಲದೆ ಸರಕಾರದ ಖರ್ಚಿನಲ್ಲಿ ಸ್ವಲ್ಪ ಭಾಗವನ್ನು ಪರದೇಶದವರು ತೆರುವ ಹಾಗಾಗುತ್ತದೆ.

ಮುಖ್ಯವಾಗಿ ಬಂಡವಾಳ ದೇಶದೊಳಕ್ಕೆ ಧಾರಾಳವಾಗಿ ಬರಲೂ ಹೊರಕ್ಕೆ ಹೋಗಲೂ ಸರಕಾರದ ವಿಧಿನಿಷೇಧಗಳು ಯಾವ ರೀತಿ ಕೆಲಸ ಮಾಡುವುವು ಎಂಬುದು ಈ ಪುಸ್ತಕದ ವಿಷಯಕ್ಕೆ ಹೆಚ್ಚಾಗಿ ಸಂಬಂಧಪಟ್ಟದ್ದು.*

**ಬಂಡವಾಳದ ಪ್ರವಾಹ.** — ದೇಶದಿಂದ ದೇಶಕ್ಕೆ ಬಂಡವಾಳ ಏಕೆ ಹೋಗುವುದು? ಹೇಗೆ ಹೋಗುವುದು? ಅದರ ಪರಿಣಾಮವೇನು? ಕಳುಹಿಸುವ ದೇಶದ ಮೇಲೆ ಆಗುವ ಪರಿಣಾಮಗಳು ಯಾವುವು? ಬಳಸುವ ದೇಶಗಳ ಮೇಲೆ ಯಾವ ಫಲಾಫಲಗಳು ಉಂಟಾಗುವುವು ಎಂಬುದನ್ನು

* ಹಣದ ಬೆಲೆಯ ಏರಿಳಿತಗಳಿಂದ ಉಂಟಾಗುವ ಅನನುಕೂಲಗಳನ್ನು ತಿದ್ದಲು ಏನು ಮಾಡುವರೆಂದು ಹಿಂದೆ ತಿಳಿಸಿ ಆಗಿದೆ.

ಹಿಂದೆಯೇ ಸ್ವಲ್ಪಮಟ್ಟಿಗೆ ಸೂಚಿಸಿದೆ. ಯಾವುದಾದರೊಂದು ಸರಕಾರ ದವರು ವಿದೇಶಿ ಬಂಡವಾಳ ಒಳಕ್ಕೆ ಬಂದರೆ, ಬಡ್ಡಿ, ಲಾಭ, ಕೈಗಾರಿಕೆಯ ಮೇಲಿನ ಒಡೆತನ, ಉದ್ಯೋಗ ಮುಂತಾದುವನ್ನೂ ಒಳಗಿನ ಆರ್ಥಿಕ ರೀತಿನೀತಿಗಳನ್ನೂ ನಡಸುವ ವಿಚಾರದಲ್ಲಿ ಅವರ ವ್ಯಾಪಕತೆ ಹೆಚ್ಚಾಗಿ ರಾಜಕೀಯ ರಂಗದಲ್ಲಿಯೂ ಪರತಂತ್ರವಾಗಬೇಕಾದೀತು ಎಂದು ಊಹಿಸಿ ಆ ಕೆಲಸಕ್ಕೆ ಪ್ರತೀಕಾರಮಾಡುವುದುಂಟು.

**ಬಂಡವಾಳದ ಆಮದು.**—ದೇಶಕ್ಕೆ ಅಗತ್ಯವಾದ ವ್ಯಾಪಾರ, ಕೈಗಾರಿಕೆ, ಶಾಸನ ನೀತಿ, ಇವು ಪರಕೀಯರಿಗೆ ಅಧೀನವಾಗದಂತೆಯೂ ವಿದೇಶಿಯರ ಮೇಲೆ ಇಲ್ಲಿನವರಿಗೆ ಅಪ್ರೀತಿ ಬರುವಂತೆಯೂ ಅವರು ಇಲ್ಲಿ ತಮ್ಮ ಬಂಡವಾಳದಿಂದ ಕಂಪನಿಗಳನ್ನು ಸ್ಥಾಪಿಸಿ ನಡಸಲಾಗದಂತೆ ಮಾಡುವರು; ಅವರು ಈಗಾಗಲೇ ನಡಸುತ್ತಿರುವ ಕಂಪನಿಗಳನ್ನು (ಉದಾ: ರೈಲ್ವೆ, ಗಣಿಕೆಲಸ) ಹಣಕೊಟ್ಟು ಹಿಂದಕ್ಕೆ ತೆಗೆದುಕೊಳ್ಳುವ ವರೆಗೂ—ಮೊಂಡುತನದಿಂದ ಇನ್ನೂ ಕೆಲಸ ಮಾಡುವವರಿಗೆ ಹಿಂದೆ ಒದಗಿಸುತ್ತಿದ್ದ ರಿಯಾಯಿತಿಗಳನ್ನೆಲ್ಲಾ ಹಿಂದಕ್ಕೆ ಕಿತ್ತುಕೊಳ್ಳುವವರೆಗೂ—ವಿದೇಶಿಯರಾರೂ ಇಂತಹ ಕರೀದಿ, ಮಾರಾಟ, ಹರಾಜು ದರಖಾಸ್ತು ಗಳ ಸಂಬಂಧದಲ್ಲಿ ಸ್ವದೇಶದವರೊಡನೆ ಸ್ಪರ್ಧೆಗೆ ನಿಲ್ಲಕೂಡದೆಂದು ನಿಷೇಧಿಸುವವರೆಗೂ—ಈ ಬಗೆಯ ಕಾರ್ಯವನ್ನು ಮಾಡುವರು. ಪರಕೀಯರ ದೊಡ್ಡ ಆಸ್ತಿಗಳು ಇಲ್ಲಿದ್ದರೆ ಈ ದೇಶದ ಪ್ರಜೆಯಾದ ಹೊರತು ಅವನ್ನು ಇಲ್ಲಿ ಇಡಕೂಡದೆಂದು ನಿಷೇಧಿಸುವುದುಂಟು.

**—ರಫ್ತು; ಇತರ ವಿಧಿನಿಷೇಧಗಳು.**—ಎರಡನೆಯದಾಗಿ ಒಳದೇಶದ ಬಂಡವಾಳ ಇಲ್ಲಿನ ಉಪಯೋಗಕ್ಕೆ ಬೇಕಾಗಿರುವಾಗ ಅದರಲ್ಲಿ ಯಾವ ಭಾಗವೇ ಆಗಲಿ ಹೊರಕ್ಕೆ ಸಾಗಕೂಡದೆಂದು ಅನೇಕ ವಿಧವಾಗಿ ನಿರೋಧಿಸಬಹುದು. ಹಾಗೆ ಸಾಗಿಸುವುದರಿಂದ ಇಲ್ಲಿನ ಸಂಪತ್ತಿಗೆ ಎಷ್ಟು ಕೇಡು ಎಂದು ತಿಳಿಯುವಂತೆ ಸರಕಾರದವರು ತಿಳಿಯಹೇಳುವರು; ಅದರಿಂದ ದೇಶದಲ್ಲಿನ ಸಾಹಸ ಕಾರ್ಯಗಳೆಲ್ಲಾ ಹೇಗೆ ಬಡವಾಗುವುವು, ನಿಂತೇಹೋಗಬಹುದು ಎಂದು ತಿಳಿಸುವರು; ಶತ್ರುವಿಗೊ, ಪರಕೀಯ ನಿಗೊ ನಮ್ಮ ಆರ್ಥಿಕಸ್ಥಿತಿಯನ್ನು ಹಂಚಿಕೊಟ್ಟರೆ ಆಮೇಲೆ ಗತಿಯೇನು

ಎಂದು ಜನರ ಸ್ವದೇಶಿ ಬುದ್ಧಿಯನ್ನೂ ಅಭಿಮಾನವನ್ನೂ ಕೆರಳಿಸಿ ಆ ಬಗೆಯ ಕೆಲಸಕ್ಕೆ ತಡೆಯನ್ನು ತರುವರು. ಅದಕ್ಕಾಗಿ ಧನಿಕರಾದ ಬಂಡವಾಳಸ್ಥರಿಗೆ ಹಿತಬೋಧಮಾಡಿ ನೋಡುವುದು, ಹೆದರಿಸುವುದು, ಬಂಡವಾಳವನ್ನು ಒಳಗೇ ಇಟ್ಟರೆ ಬೇಕಾದ ಸೌಕರ್ಯಗಳನ್ನೂ ಅನುಕೂಲವನ್ನೂ ಕಲ್ಪಿಸಿಕೊಡುತ್ತೇವೆಂದು ವಾಗ್ದಾನಮಾಡುವುದು ಮುಂತಾಗಿ ಅವರ ಮನಸ್ಸನ್ನು ತಿರುಗಿಸಲು ಪ್ರಯತ್ನಪಡುವರು. ಅಥವಾ ಕೈಗಾರಿಕೆಗೆ ಬಂಡವಾಳ ಒದಗಿಸುವ ಬ್ಯಾಂಕುಗಳು, ವರ್ತಕ ಮಂಡಲಿ, ಪತ್ರಗಳ ಮಾರುವ ಸಂಸ್ಥೆ (Stock-Exchanges) ಮುಂತಾದುವುಗಳ ಮೇಲೆ ಕಣ್ಣಿಟ್ಟು ಕೈಯಿಟ್ಟು ಪತ್ರಗಳೂ ಹಣವೂ ಹೊರಕ್ಕೆ ಹೋಗದಿರುವಂತೆ ಕಾರ್ಯವ್ಯವಸ್ಥೆ ಮಾಡುವರು. ಅಥವಾ, ಹೊರಗಿನ ಬಂಡವಾಳಸ್ಥರು ತಮ್ಮ ಕೈಗಾರಿಕೆ ವ್ಯಾಪಾರಗಳಿಗೆ ಈ ದೇಶಗಳವರಿಂದ ಬಲ್ಲ ಸ್ಪ ಪೋಟಿ ಇಲ್ಲದಿರಲಿ, ನೆರವಾಗಲಿ, ಆ ಮೂಲಕ ತಮ್ಮ ಸೇವೆಯೂ ವ್ಯಾಪಕತೆಯೂ ಬೆಳೆಯಲಿ ಎಂಬ ಉದ್ದೇಶದಿಂದ ಇಲ್ಲಿನ ಸಂಸ್ಥೆಗಳನ್ನು ಕೊಂಡು ತಮ್ಮ ಕೈವಶಮಾಡಿಕೊಳ್ಳದಿರುವಂತೆ ವರ್ತಿಸುವರು. ಅಂಥ ಕಾರ್ಯಗಳನ್ನು ತಡೆಯುವುದಕ್ಕಾಗಿ ಕಂಪನಿಗಳ ಬಂಡವಾಳವನ್ನು ಹೀಗೆ ಹಂಚಬೇಕು, ಇಂಥವರು ಮಾತ್ರವೇ ಒದಗಿಸಬಹುದು, ಷೇರನ್ನೂ ಸಾಲಪತ್ರವನ್ನೂ ಇಂಥವರಿಗೆ ಮಾತ್ರ ವರ್ಗಾಯಿಸಬಹುದು (Transfer), ಕಂಪನಿಯ ಚಾಲಕ ಮಂಡಲಿಯವರೆಲ್ಲರೂ ದೇಶಿಯರೇ ಆಗಬೇಕು, ಅವರ ಮುಖ್ಯ ಕಚೇರಿಯೂ ಆಡಳಿತ ಸ್ಥಾನವೂ ಒಳಗೇ ಇರಬೇಕು, ಅಲ್ಲಿನ ದೊಡ್ಡ ಉದ್ಯೋಗಸ್ಥರಲ್ಲಿ ಇಷ್ಟು ಭಾಗವಾದರೂ ಒಳದೇಶದವರೇ ಇರಬೇಕು ಎಂದು ಮುಂತಾಗಿ ವಿಧಿಸುವುದುಂಟು. ಅಥವಾ ಸರಕಾರದವರೇ ದೊಡ್ಡ ವಿದೇಶಿ ಕಂಪನಿಗಳಲ್ಲಿ ಕೆಲವು ಷೇರುಗಳನ್ನು ಕೊಂಡು ಕಂಪನಿಯ ಆಡಳಿತದಲ್ಲಿ ತಮ್ಮ ಮಾತು ನಡೆಯುವಂತೆ ಮಾಡಿಕೊಳ್ಳಬಹುದು. ಹೊರಗಿನವರು ಎಲ್ಲಿಗೂ ಸಾಧ್ಯರಾಗದಿದ್ದರೆ ಆ ಸಂಸ್ಥೆಗಳನ್ನು ಸಂಪೂರ್ಣವಾಗಿ ಸರಕಾರದ ಸರ್ವಾಧಿಕಾರಕ್ಕೆ ತೆಗೆದುಕೊಳ್ಳುವುದುಂಟು. ಈ ನಡವಳಿಕೆಯಿಂದಲೂ ಸರಕಾರದ ಆಯ-ವ್ಯಯ ಸ್ಥಿತಿ ಒಂದು ಕಡೆಯೂ, ದೇಶದ ಬಂಡವಾಳ ವ್ಯವಸ್ಥೆ ಒಂದು ಕಡೆಯೂ ಏರುಪೇರಾಗುವುವು.

ಇಲ್ಲಿಯೂ ಸಹಾಯ ಉತ್ತೇಜನಗಳನ್ನು ಕಲ್ಪಿಸುವ ಮಾರ್ಗ ಒಂದಿದೆ: ಒಳಗಿನ ಕೈಗಾರಿಕೆ ಉದ್ಯೋಗಗಳು ವಿಸ್ತಾರವಾಗಲೆಂದೂ ಬೆಳೆಯಲೆಂದೂ ಹಣವಿರುವ ಪರಕೀಯರಿಗೆ ಎಲ್ಲ ಬಗೆಯ ಸೌಕರ್ಯ ಸೌಲಭ್ಯಗಳನ್ನು ಒದಗಿಸುವೆವೆಂದು ಹೇಳಿ ಬ್ರೆಸಿಲ್, ಅರ್ಜೆಂಟೈನ, ಆಸ್ಟ್ರೇಲಿಯ, ಕ್ಯಾನಡ ದೇಶಗಳು ಮಾಡುವಂತೆ ಅವರು ಬಂದು ಇಲ್ಲಿಯೇ ನೆಲಸುವಂತೆ ಮಾಡಬಹುದು. ಇದರಿಂದ ಅವರು ಉತ್ಪತ್ತಿ ಕಾರ್ಯಗಳಿಗೆ ಕೈಹಾಕದೆ ಇಲ್ಲಿನ ಪದಾರ್ಥಗಳಿಗೂ ಉದ್ಯೋಗಕ್ಕೂ ಗಿರಾಕಿಯಾಗಿ ಸಹಾಯಮಾಡುವರೆಂಬ ಎಣಿಕೆಯಿರುತ್ತದೆ.

**ಉದ್ಯೋಗ ಸಾಹಸಿಗಳ ಗಮನ.**—ಹೊರಗಿನ ಉದ್ಯೋಗ ಸಾಹಸಿಗಳು ಬಂದು ಒಳದೇಶದಲ್ಲಿ ನೆಲಸಿ ಇಲ್ಲಿನ ಕಾರ್ಯಗಳನ್ನು ನಡಸುವಂತೆಯೂ ಏರ್ಪಡಿಸಬಹುದು. ಯಾವುದಾದರೂ ಸುಂಕ ತೆರಿಗೆಗಳಿಂದ ಹೊರಗಿನ ಪದಾರ್ಥಗಳು ಒಳಕ್ಕೆ ಬಂದು ಮಾರಾಟವಾಗುವುದು ಸಾಧ್ಯವಾಗದಿರುವಾಗ ಒಳಗೇ ಇಂಥ ಕೈಗಾರಿಕೆ ಉದ್ಯೋಗಗಳನ್ನು ಏರ್ಪಡಿಸುವುದು ಅನುಕೂಲವೆಂದು ಬಂಡವಾಳಸ್ಥರಿಗೆ ತಿಳಿಯುತ್ತಿರಲು ಅವರು ಒಳಕ್ಕೆ ಬಂದು ಆ ಕೈಗಾರಿಕೆಯನ್ನು ಇಲ್ಲಿಯೇ ಸ್ಥಾಪಿಸಿ ನಡಸುವಂತೆ ಏರ್ಪಡಿಸಬಹುದು. ಆ ಮೂಲಕ ಹೊರಗಿನವರ ಬಂಡವಾಳವೂ ಸಾಹಸವೂ ಒಳಗೆ ಬಂದು ಇಲ್ಲಿ ಅನುಕೂಲವನ್ನು ಕಲ್ಪಿಸಲು ನೆರವಾಗುತ್ತವೆ.

**ಬಂಡವಾಳದ ರಫ್ತೆಂದರೆ ಹೇಗೆ?**—ಈ ದೇಶದ ವ್ಯಾಪಾರ ವಿದೇಶಿ ಪೇಟೆಗಳಲ್ಲಿ ವಿಜೃಂಭಿಸಬೇಕು; ಇಲ್ಲಿನ ಪದಾರ್ಥಗಳಿಗೆ ಹೊರಗೆ ಆಧಿಪತ್ಯ ಬೇಕು; ಇಲ್ಲಿನ ಬಂಡವಾಳವೂ ಯಜಮಾನಿಕೆ ಆಡಳಿತಗಳೂ ಹೊರದೇಶಗಳಲ್ಲಿ ನಡೆದು ಅವರ ಆರ್ಥಿಕ ಜೀವನ ತಮ್ಮ ಸ್ವಾಧೀನಕ್ಕೆ ಬರಬೇಕು ಎಂದು ಒಳಸರಕಾರದವರ ಇಚ್ಛೆಯಾದರೆ ದೇಶದಿಂದ ಬಂಡವಾಳ ರಫ್ತಾಗುವಂತೆ ಸೌಕರ್ಯಗಳನ್ನೂ ಉತ್ತೇಜನಗಳನ್ನೂ ಕಲ್ಪಿಸಬಹುದು.* ಬಂಡವಾಳದ ರಫ್ತೆಂದರೆ ಸಾಧಾರಣವಾಗಿ ಹಣದ ರೂಪದಲ್ಲಿಯೂ ಆಸ್ತಿಪತ್ರಗಳ

* ಇದು ಚಕ್ರಾಧಿಪತ್ಯಗಳ ಅಧೀನ ರಾಜ್ಯಗಳಲ್ಲಿ ಸುಲಭ. ಇಲ್ಲವಾದರೆ ಗುಟ್ಟಾಗಿಯೊ ಒಪ್ಪಂದಗಳ ಮೂಲಕವಾಗಿಯೊ ಸ್ವತಂತ್ರ ರಾಜ್ಯಗಳೊಡನೆ ಒಡಂಬಡಿಕೆಗೆ ಬಂದು ಸಾಧಿಸಬೇಕಾಗುತ್ತದೆ.

ರೂಪದಲ್ಲಿಯೂ ಹೋಗುವುದಷ್ಟೇ ಅಲ್ಲ. ಇಲ್ಲಿ ತಯಾರಾದ ಯಂತ್ರಗಳೂ ಪದಾರ್ಥಗಳೂ ರಫ್ತಾಗುವುವು. ಹೊರದೇಶಗಳವರು ಸಾಲ ತೆಗೆದು ಕೊಳ್ಳುವಾಗ ಇಲ್ಲಿನ ಯಂತ್ರಗಳನ್ನೂ ಪದಾರ್ಥಗಳನ್ನೂ ಕೊಂಡುಕೊಳ್ಳುವ ಕರಾರಿನಮೇಲೆ ಸಾಲ ಕೊಡುವುದಕ್ಕಾಗುವುದಿಲ್ಲವೆಂದೂ ಆಯಾ ಸರಕಾರದವರು ಷರತ್ತು ಮಾಡಿಕೊಳ್ಳುವುದುಂಟು; ಕೆಲವು ವೇಳೆ ಆ ದೇಶದ ಕಂಪನಿಗಳ ಷೇರು ಮತ್ತು ಸಾಲಪತ್ರಗಳನ್ನು ಮಾತ್ರ ತಮ್ಮ ಹೆಸರಿನಲ್ಲಿಟ್ಟುಕೊಂಡು ಸಾಲ ಒದಗಿಸುವರು.

**ಕೆಲಸಗಾರರ ಚಲನಕ್ಕೆ ಸಹಾಯ, ನಿರೋಧ.** — ಸರಕಾರದವರು ದೇಶದೊಳಕ್ಕೆ ವಿದೇಶಿ ಕೆಲಸಗಾರರು ಬರುವುದನ್ನು ಪ್ರೋತ್ಸಾಹಿಸಬಹುದು ಅಥವಾ ತಡೆಯುವ ಪ್ರಯತ್ನ ಮಾಡಬಹುದು. ಆ ಉದ್ಯೋಗಿಗಳ ಮೂಲಕ ಈ ದೇಶದ ಸಂಪತ್ತನ್ನು ಹೆಚ್ಚಿಸುವ ಅವಕಾಶಗಳನ್ನು ಕಲ್ಪಿಸಿಕೊಳ್ಳಬಹುದು. ಇಲ್ಲಿನ ಅನೇಕ ಜನರಿಗೆ ಉದ್ಯೋಗವಿಲ್ಲದೆ ಇಲ್ಲಿನ ಉತ್ಪತ್ತಿಗಿಂತ ಜನಸಾಂದ್ರತೆ ಹೆಚ್ಚಾಗಿದ್ದರೆ ಇಲ್ಲಿನವರು ಬೇರೆ ಕಡೆ ಹೋಗಿ ನೆಲಸುವಂತೆ ಏರ್ಪಡಿಸಬಹುದು. ತಮ್ಮ ಜನರು ಎಲ್ಲಿಯೇ ಇರಲಿ, ಅವರ ಆಸ್ತಿ, ಕ್ಷೇಮ, ಆರೋಗ್ಯ, ಹಕ್ಕುಗಳ ವಿಚಾರದಲ್ಲಿ ಅವರು ಹೋಗಿ ನೆಲಸಿದ ಸರಕಾರಗಳೊಡನೆ ಒಡಂಬಡಿಕೆ ಮಾಡಿಕೊಳ್ಳುವರು. ಇಲ್ಲಿ ಪ್ರಕೃತವಾದ ವಿಶೇಷ ಸಂಗತಿ ಒಂದು: ಸಾಹಸಿಗಳಾಗಿ ದೇಶವನ್ನು ಬಿಟ್ಟು ಹೊರಗೆ ಹೋಗಿ ನೆಲಸುವವರಲ್ಲಿ ದೃಢಕಾಯರಾಗಿರುವವರೂ ಕಾರ್ಯದಕ್ಷರಾಗಿರುವವರೂ ಸಂಪಾದನೆಯ ವಯಸ್ಸಿನವರೂ ಮಾತ್ರವೇ ಹೆಚ್ಚಾಗಿರುವರು. ಯಾವ ದೇಶದಲ್ಲಿ ನೆಲಸಲಿ ಅವರಿಗೆ ತಮ್ಮ ದೇಶದ ಪದಾರ್ಥಗಳೂ ಬಾಂಧವ್ಯಗಳೂ ಆಕರ್ಷಣೆಗಳೂ ಹೆಚ್ಚಾಗಿರುವುದು ಸ್ವಾಭಾವಿಕವೇ ಆಗಿರುತ್ತದೆ. ಅಲ್ಲಿಯೇ ಶಾಶ್ವತವಾಗಿ ಹೋಗಿ ನೆಲಸುವಂತಿದ್ದರೆ ಒಂದು ಬಗೆ. ಆದರೆ ಬಹುತರ ಕೈಯುಳ್ಳಾಗುವವರೆಗೂ ಪರಮಾವಧಿ ವರಮಾನವನ್ನು ಗಳಿಸಿ ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ತಮ್ಮ ದೇಶಕ್ಕೆ ಹಿಂತಿರುಗುವ ಅಭಿಲಾಷೆಯುಳ್ಳವರೇ ಅವರಲ್ಲಿ ಹೆಚ್ಚು ಮಂದಿ. ನೆಲಸಿದ ಪ್ರದೇಶದಲ್ಲಿ ಅವರಿಗೆ ಯಾವ ಸ್ಥಿರವಾದ ಆಸಕ್ತಿಯೂ ಭಕ್ತಿಯೂ ಇರುವುದಿಲ್ಲ. ಅಲ್ಲಿನ ಜನಜೀವನದಲ್ಲಿ ಸುತರಾಂ

ಬೆರೆಯದೆ ಹೋಗಬಹುದು. ತಮ್ಮ ಸಂಪಾದನೆಯಲ್ಲಿನ ಬಹು ಭಾಗವನ್ನು ಕೂಡಿಸಿ ತಮ್ಮ ತವರಿಗೆ ಕಳುಹಿಸುವುದೇ ವಾಡಿಕೆ. ಹೆಂಡಿರು ಮಕ್ಕಳು ಕೂಡ ಬಹುತರ ತವರಿನಲ್ಲಿಯೇ ಉಳಿದುಕೊಳ್ಳುತ್ತಾರೆ. ಅಲ್ಪವಾದ ದಿನಚರಿಯ ವೆಚ್ಚಗಳಿಗೂ ಆಹಾರಕ್ಕೂ ಸಣ್ಣ ಸೇವೆಗಳಿಗೂ ತಾವು ನೆಲಸಿರುವ ದೇಶದಲ್ಲಿ ಹಣ ವೆಚ್ಚಮಾಡುವರೇ ಹೊರತು ವಿಶೇಷ ಬಯಕೆಗಳನ್ನೆಲ್ಲಾ ತಮ್ಮ ದೇಶದ ಸಾಮಾನುಗಳನ್ನು ಕೊಂಡೇ ಪೂರ್ತಿಮಾಡಿಕೊಳ್ಳುತ್ತಾರೆ. ಆದುದರಿಂದ ಅವರ ವಿದೇಶ ಪ್ರವಾಸದಿಂದ ಅವರ ತಾಯಿನಾಡಿಗೆ ಲಾಭ ಹೆಚ್ಚು. ಹಾಗಲ್ಲದೆ ಹೋದಲ್ಲಿಯೇ ಅವರು ವಸತಿಯನ್ನು ಕಲ್ಪಿಸಿಕೊಂಡು ಅಲ್ಲಿನ ಬದುಕಿನಲ್ಲಿ ಬೆರೆತು ತಮ್ಮ ಆದಾಯ ವೆಚ್ಚ, ಆಸ್ತಿ-ಸಂಗ್ರಹ ಮುಂತಾದುವನ್ನು ಮಾಡುವಂತಾದರೆ ಮಾತ್ರ ಆ ದೇಶಕ್ಕೆ ಪ್ರಯೋಜನ ಹೆಚ್ಚು. ಈ ಎಲ್ಲ ಸಂಬಂಧಗಳಲ್ಲಿಯೂ ಸರಕಾರದ ಇಷ್ಟ, ಗುರಿ, ವ್ಯವಹಾರ ನೀತಿಗಳು ಉದ್ಯೋಗ ಉದ್ಯೋಗಿಗಳ ಏಳ್ಗೆ ಬೀಳುಗಳನ್ನು ಬಹುವಾಗಿ ವ್ಯತ್ಯಾಸಗೊಳಿಸುವುವೆನ್ನಬಹುದು.

**ವ್ಯಾಪಾರ ನೀತಿಯ ಚರಿತ್ರೆ.**—ನೂರಾರು ಹದಿನಾರನೆಯ ಶತಮಾನದಿಂದ ಹಿಡಿದು ಹತ್ತೊಂಬತ್ತರ ಕಡೆಯ ಭಾಗದವರೆಗೂ ಪ್ರಬಲರಾದ ಪಾಶ್ಚಾತ್ಯ ರಾಷ್ಟ್ರಗಳವರು ಏಷ್ಯ, ಅಮೇರಿಕ, ದಕ್ಷಿಣ ಅಮೇರಿಕ, ಆಫ್ರಿಕ, ಆಸ್ಟ್ರೇಲಿಯ ದೇಶಗಳಲ್ಲಿ ವ್ಯಾಪಾರಕ್ಕಾಗಿಯೊ ಉದ್ಯೋಗಕ್ಕಾಗಿಯೊ ವಸತಿ ಕಲ್ಪನೆಮಾಡಿಕೊಂಡು, ಅಲ್ಲೇ ನೆಲಸುವುದಕ್ಕೆ ಕೆಲವರು ಅಲ್ಲಿ ಲಾಭಕರವಾದ ಉತ್ಪತ್ತಿಕಾರ್ಯಗಳನ್ನು ನಡಸುವುದಕ್ಕೆ ಕೆಲವರು, ಹೋಗಿ, ಕ್ರಮವಾಗಿ—ರಾಜಕೀಯ ಕ್ಷೇತ್ರದಲ್ಲಿಯೂ—ವ್ಯಾಪಕರಾದರು. ತಮ್ಮ ದೇಶಕ್ಕೆ ಸಂಪತ್ತನ್ನು ಹೊತ್ತು ಕಳುಹಿಸಿದರು. ಮೊದ ಮೊದಲು ತಮ್ಮ ಸರಕಾರಗಳವರ ಉತ್ತೇಜನ ಧನಸಹಾಯಾದಿಗಳಿಂದಲೇ ಹೊರಟವರಾದ್ದರಿಂದ ಇವರು ಅಲ್ಲಿ ವಸತಿಗಳನ್ನು ನಿರ್ಮಾಣಮಾಡಿಕೊಂಡಿರಲು ವಸತಿಯ ಅಧಿಕಾರಿಗಳಿಗೂ ತಾಯಿನಾಡಿನ ಸರಕಾರದವರಿಗೂ ರಾಜಕೀಯ ಸಂಬಂಧಗಳು ಬೆಳೆಯುತ್ತಬಂದುವು. ಅವರು ಆಹಾರ ಸಾಮಗ್ರಿಗಳನ್ನೂ, ಕೈಗಾರಿಕೆಯ ಮೂಲ ಸಾಮಗ್ರಿಗಳನ್ನೂ ಉತ್ಪತ್ತಿ ಮಾಡಿ ಸ್ವದೇಶಕ್ಕೆ ಕಳುಹಿಸತಕ್ಕದ್ದು; ತಾಯಿನಾಡಿನಲ್ಲಿ ತಯಾರಾದ

ಕೈಗಾರಿಕೆ ಪದಾರ್ಥಗಳನ್ನು ಕೊಂಡುಕೊಳ್ಳತಕ್ಕದ್ದು; ತಾಯಿನಾಡಿನ ಹಡಗುಗಳಲ್ಲಿಯೇ ಸಾಮಾನನ್ನು ಸಾಗಿಸತಕ್ಕದ್ದು; ಇಲ್ಲಿನ ಕಾರ್ಯಕುಶಲಿಗಳನ್ನೇ ಉದ್ಯೋಗದಲ್ಲಿ ನೇಮಿಸಿಕೊಳ್ಳತಕ್ಕದ್ದು; ಇಲ್ಲಿನ ಬ್ಯಾಂಕುಗಳ ಮೂಲಕವೇ ವ್ಯವಹರಿಸತಕ್ಕದ್ದು; ನೇರವಾಗಿ ಪರದೇಶಿಯರೊಂದಿಗೆ ವ್ಯಾಪಾರ ಮಾಡಕೂಡದು; ಸ್ವದೇಶದ ಯಂತ್ರ ಕೈಗಾರಿಕೆಗಳು ತಯಾರಿಸುವ ಪದಾರ್ಥಗಳನ್ನು ತಯಾರಿಸಕೂಡದು — ಎಂದು ಮುಂತಾಗಿ ಅನೇಕ ಬಗೆಯ ಶಾಸನಗಳನ್ನು ಮಾಡಿ ಅವರ ರಕ್ಷಣೆಗಾಗಿ ತಮ್ಮ ಸೈನ್ಯಗಳನ್ನು ಸಿದ್ಧವಾಗಿಡುತ್ತಿದ್ದರು. ಕಾಲಕ್ರಮದಲ್ಲಿ ವಸತಿಗಳವರು ಪುಷ್ಟರಾಗಿ ಆಸ್ತಿ ಕಟ್ಟಿಕೊಂಡು ಅಲ್ಲಿಯೇ ನಿಂತು ಸ್ವತಂತ್ರಾಭಿಲಾಷೆಯಿಂದ ತಾಯಿನಾಡಿನ ಸರಕಾರಕ್ಕೆ ಅವಿಧೇಯರಾದುದಲ್ಲದೆ ತಮ್ಮ ಅವಿಧೇಯತೆಯನ್ನು ಜೀರ್ಣಿಸಿಕೊಂಡು ಸ್ವಾಧೀನರಾಷ್ಟ್ರಗಳಾದರು. ಹಿಂದಿನ ಶಾಸನಗಳಲ್ಲಿದ್ದ ನಿರ್ಬಂಧಗಳೆಲ್ಲವೂ ಕೊನೆಗೊಂಡು ಈಗ ಸಖ್ಯದ ಮೂಲಕವೂ ಒಪ್ಪಂದದ ಮೂಲಕವೂ ವ್ಯಾಪಾರ ಕೈಗಾರಿಕೆಗಳ ವ್ಯವಸ್ಥೆಯನ್ನು ಇವರು ಒಡಂಬಡಿಕೆ ಉಂಟುಮಾಡಿಕೊಂಡಿದ್ದಾರೆ.

**— ದಣಿ ರಾಷ್ಟ್ರಗಳು.** — ಮೊದಮೊದಲು ಈ ವಸತಿಗಳವರಿಂದ ತವರಿನ ಸರಕಾರಕ್ಕೂ ಖಾಸಗಿ ವರ್ತಕರಿಗೂ ಬಹುವಾದ ಸಂಪತ್ತು ದೊರಕಿತು. ಅಖಂಡವಾದ ಭೂಪ್ರದೇಶಗಳು ಅಧಿಕಾರಕ್ಕೆ ಬಂದುವು. ಸುಮಾರು ಅದೇ ಕಾಲದಲ್ಲಿ ಹುಟ್ಟಿ ಬೆಳೆಯಲು ಆರಂಭವಾದ ಕೂಡುಬಂಡವಾಳದ ಕಂಪನಿಗಳು ಈ ಕಾರ್ಯಗಳಿಗೆ ಹಣದ ನೆರವಿತ್ತುವು. ನಾನಾರಾಷ್ಟ್ರ ಪೂರದಲ್ಲಿ ನಡೆಯುವ ಚಿನ್ನ, ಬೆಳ್ಳಿ, ತಾಮ್ರದ ಗಣಿಗಳು; ಟೀ, ರಬ್ಬರ್ ತೋಟಗಳು; ಗೋಧಿಯ ಮತ್ತು ಹತ್ತಿಯ ಮಂಡಲಗಳು; ಎಣ್ಣೆ, ಮತ್ತು ಕಲ್ಲಿದ್ದಲ ಕ್ಷೇತ್ರಗಳು ಇವುಗಳ ಉತ್ಪತ್ತಿಯೆಲ್ಲ ತಾಯಿನಾಡಿನ ಅಭಿವೃದ್ಧಿಗೂ ಉತ್ಕರ್ಷೆಗೂ ದೊರೆಯುವಂತಾಯಿತು. ಇತ್ತ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕೈಗಾರಿಕೆಯ ರೀತಿ ರಚನೆಗಳಲ್ಲಿಯೇ ದೊಡ್ಡ ಪರಿವರ್ತನೆ ಉಂಟಾಗಿ ಯಂತ್ರಚಾಲಿತ ಕಾರ್ಖಾನೆ ಕಾರ್ಯಾಲಯಗಳ ಸ್ಥಾಪನೆಯ ಮೂಲಕ ಉತ್ಪತ್ತಿಯ ಪರಿಮಾಣವನ್ನು ನೂರರಷ್ಟು ಸಾವಿರದಷ್ಟು ಹೆಚ್ಚಿಸುವುದು ಸಾಧ್ಯವಾಯಿತು. ಆ ವಸ್ತುಗಳಿಗೆ ಪೇಟೆ ಗಿರಾಕಿಗಳನ್ನು

ಒಪ್ಪಿಸುವ ಉದ್ಯಮದಲ್ಲಿ ತಮ್ಮ ತಮ್ಮ ವಸತಿಗಳ ವಿಸ್ತಾರ ಸಾಲ ದಾಗಿ ದೇಶದೇಶಗಳವರಿಗೆ ವ್ಯಾಪಾರದ ಪೈಪೋಟಿಯೂ ಮಾತ್ಸರ್ಯವೂ ಉಂಟಾಗಿ ವ್ಯಾಪಾರದ ಬೆಂಗಾವಲಿಗೆ ರಾಜ್ಯಶಕ್ತಿಯೂ ರಾಜ್ಯಾಧಿಕಾರದ ವಿಸ್ತರಣಕ್ಕೆ ವ್ಯಾಪಾರ ನೀತಿಯೂ ಪ್ರಮುಖವಾಗಿ ಹೂಡಿ ಒಟ್ಟು ಲೋಕದ ಆರ್ಥಿಕ ಜೀವನದಲ್ಲಿಯೇ ಅನೇಕ ತೊಡಕುಗಳೂ ಪರಿವರ್ತನೆ ಗಳೂ ಉಂಟಾಗುವಂತಾಯಿತು. ಪ್ರತಿಯೊಂದು ರಾಷ್ಟ್ರವೂ ಒಟ್ಟಿನಲ್ಲಿ ತನ್ನ ರಫ್ತನ್ನು ಹೆಚ್ಚು ಮಾಡಿಕೊಂಡು ಹೊರಗಿನವರು ತನಗೆ ತೆರಬೇಕಾಗುವ ಹೆಚ್ಚು ಹಣವನ್ನು ಆಹಾರಸಾಮಗ್ರಿ ಅಥವಾ ಮೂಲ ಸಾಮಗ್ರಿಗಳ ರೂಪದಲ್ಲಿ ಇಲ್ಲವಾದರೆ ಚಿನ್ನದ ರೂಪದಲ್ಲಿ ಮಾತ್ರವೇ ಸಂಗ್ರಹಿಸಲು ಆರಂಭಮಾಡಿ ತನ್ನ ಧನಸ್ಥಿತಿಯನ್ನು ಬಲಪಡಿಸಿಕೊಂಡು ಕಾಲಕ್ರಮದಲ್ಲಿ ಈಗಿರುವ ರಾಜಕೀಯ ಮತ್ತು ಆರ್ಥಿಕ ದಣಿ ಪಟ್ಟಕ್ಕೆ ಬಂದಿತು.

**ಪರಿಣಾಮಗಳು.**—ಆ ಕಾರ್ಯವನ್ನೆಲ್ಲಾ ರಾಷ್ಟ್ರರಕ್ಷಣ ಮತ್ತು ರಾಷ್ಟ್ರ ಪ್ರತಿಷ್ಠಾಸಾಧನದ ಕಾರ್ಯಗಳೆಂದು ಮಾಡಿಕೊಂಡರು.* ಇದರಿಂದ ಹಣಗಳ ಓಡಾಟದ ರೀತಿ, ರೂಪ, ಗುರಿ, ದಾರಿ ವ್ಯತ್ಯಾಸ ವಾದವು. ಹೊರದೇಶಗಳಲ್ಲಿ ರೈಲ್ವೆ, ರೇವು, ಬಂದರು ಕೆಲಸ, ನಾಲೆ, ಕಟ್ಟೆ ಕೆಲಸ ಮುಂತಾದುವು ನಡೆಯಬೇಕಾದಾಗ ಅಥವಾ ಹೊಸ ನೆಲ ಜಲ ಮಾರ್ಗಗಳು (ಉದಾ: ಸುಯೆಸ್ ನಾಲೆ, ಪನಾಮಾ ನಾಲೆ) ಹೊಸದಾಗಿ ತೆರೆಯಲ್ಪಡುವಾಗ ಅವಕ್ಕೆ ಸಾಕಾಗುವಷ್ಟು ಬಂಡವಾಳವನ್ನು ನಾವು ತಾವೆಂದು ಮುಂದೆ ಬಂದು ಹೂಡಿ ಅವಕ್ಕೆ ಸಂಬಂಧಿಸಿದ ಕಾರ್ಯಕಲಾಪ ಗಳಲ್ಲಿ ಪ್ರಭಾವ ಮಂಡಲಗಳನ್ನೂ (Spheres of Influence), ಅಧಿಕಾರ ಕ್ಷೇತ್ರಗಳನ್ನೂ ಸ್ಥಾಪಿಸಿಕೊಂಡರು. ಕಡೆಗೆ ಅನೇಕ ವೇಳೆ ಇವರಿವರಲ್ಲಿ ಉಂಟಾದ ಹೆಚ್ಚು ಪೈಪೋಟಿಯಲ್ಲಿ ಲಾಭ ಕಡಮೆಯೆಂದು ತೋರಿದ ಕೂಡಲೆ ತಮ್ಮ ತಮ್ಮಲ್ಲಿಯೇ ಒಪ್ಪಂದಗಳನ್ನು ಮಾಡಿಕೊಂಡು ಇಂಥ ಇಂಥವರೇ ಇಂಥ ಇಂಥ ರಾಜ್ಯಗಳಲ್ಲಿ ಸರಕಾರದವರಿಗೂ ಖಾಸಗಿ ಕಂಪನಿ

* ಇದರ ಫಲವಾಗಿ ದ್ವೇಷ, ಅಸೂಯೆ ಮತ್ತು ಯುದ್ಧಗಳ ಬಿತ್ತವನ್ನು ಬಿತ್ತಿದರು. ಈ ವಿಷವೃಕ್ಷದ ಫಲಗಳು ಬೆಳೆಯುತ್ತಲೇ ಇವೆ. ಇದರಿಂದ ಹುಟ್ಟಿದ ಮುಯ್ಯಿ ಇನ್ನೆಷ್ಟು ಶತಮಾನಗಳವರೆಗೆ ಜನಜನಾಂಗಗಳನ್ನು ರಕ್ಕಸಕವಳವನ್ನಾಗಿ ಮಾಡುವುವೊ ಹೇಳುವುದಕ್ಕೆ ಕಷ್ಟವಾಗಿದೆ.

ಗಳವರಿಗೂ ನೆರವು ಕೊಡಬೇಕು, ಸಾಲ ಕೊಡಬೇಕು, ಅವರಿಗೆ ಹೊರತು ಇತರರಿಗೆ ಆ ಹಕ್ಕಿಲ್ಲ ಎಂದು ಮುಂತಾಗಿ ಏರ್ಪಡಿಸಿ; ಇವರೆಲ್ಲರನ್ನೂ ಪೂರಿಸಿದ ಬಲಪ್ರಕಾಶಮಾಡಿದ ಹೊರತು ಅಥವಾ ಆ ಬೆದರಿಕೆಯನ್ನು ಜಾಯಿಸಿದ ಹೊರತು ಇನ್ನೊಬ್ಬರಿಗೆ ಆ ಹಕ್ಕು ದೊರೆಯಲಾಗದಂತೆ ಮಾಡಿ; ಚೀಣಾ, ಈಜಿಪ್ಟ್, ಅರ್ಜೆಂಟೈನಾ, ಇಂಡಿಯ, ಬ್ರೆಸಿಲ್, ಪೂರ್ವ ಇಂಡಿಯಾ ದ್ವೀಪಗಳು, ಪಶ್ಚಿಮ ಇಂಡಿಯಾ ದ್ವೀಪಗಳು ಮುಂತಾದುವು ಗಳಲ್ಲಿ ಸರ್ವ ಮಾನ್ಯಗಳನ್ನು ಸಂಪಾದಿಸಿಕೊಂಡರು. ಯಾನ ವಾಹನ ಸೌಕರ್ಯಗಳೂ ವರ್ತಮಾನ ಸಂಚಾರದ ಸೌಲಭ್ಯವೂ ಕಾಲಕ್ರಮದಲ್ಲಿ ಹೆಚ್ಚಿ ಬಂಡವಾಳದ ಚಲನೆ ಚುರುಕಾಯಿತು. ದೊಡ್ಡ ದೊಡ್ಡ ಬ್ಯಾಂಕು ಗಳು ಎಲ್ಲೆಲ್ಲಿಯೂ ಏರ್ಪಟ್ಟು ಸಾಲ ಬಂಡವಾಳಗಳನ್ನು ಒದಗಿಸಲು ಅನುವಾದುವು. ಸ್ಟಾಕ್-ಎಕ್ಸ್‌ಛೇಂಜುಗಳು ಆಸ್ತಿಗಳ ಒಡೆತನವನ್ನು ಧಾರಾಳವಾಗಿ ಸಾಗಿಸುತ್ತ ಹಂಚುತ್ತ ಬಂದವು. ಇವುಗಳ ಹಿಂದೆ ಎಲ್ಲ ಧನಿಕರ ಬಂಡವಾಳ, ಸರಕಾರಗಳ ರಾಜಕೀಯ ಶಕ್ತಿ, ಸೈನ್ಯಶಕ್ತಿಗಳು ನಿಂತು ಒಂದಕ್ಕೊಂದು ಒತ್ತಾಸೆಕೊಟ್ಟು ಪ್ರಪಂಚದ ಆರ್ಥಿಕ ಆಚರಣವನ್ನೇ ವ್ಯತ್ಯಾಸಮಾಡಿದುವು. ಹಿಂದಿನ ನಾಗರಿಕತೆಯ ಸ್ವರೂಪವನ್ನು ಬದ ಲಾಯಿಸಿ ಹಾಗೆಯೇ ಬಹುಶಃ ಹೊಸ ನಾಗರಿಕತೆಯ ನಾಶದ ಮೊಳೆ ಯನ್ನೂ ನೆಟ್ಟುಕೊಂಡುವು.

**ದುಗುಣಿ ತೆರಿಗೆ — ಅಮೇರಿಕಾದ ಪದ್ಧತಿ — ಎರಡನೆಯದು.** — ಬೇರೆ ಬೇರೆ ದೇಶದ ಬಂಡವಾಳಸ್ಥರು ತಮ್ಮ ದೇಶದಲ್ಲಿಯೇ ಕುಳಿತುಕೊಂಡು ಹೀಗೆ ಹೊರದೇಶಗಳವರಿಗೂ ಸರಕಾರಗಳವರಿಗೂ ಸಾಲಕೊಡುತ್ತ ಬಡ್ಡಿ ಯನ್ನೂ ಲಾಭವನ್ನೂ ಸಂದಾಯಮಾಡಿಸಿಕೊಳ್ಳುತ್ತ ಇರುವಾಗ ಅನೇಕ ವೇಳೆ ದೇಶದೇಶಗಳವರಿಗೆ ತೆರಿಗೆ ಎತ್ತುವುದರಲ್ಲಿ ಮನಸ್ತಾಪ ಬರುವು ದುಂಟು. ಅಂತಹ ಮನಸ್ತಾಪಗಳಲ್ಲಿ ಕೆಲವನ್ನು ಮಧ್ಯಸ್ಥಿಕೆಗಳಿಂದಲೂ ಪರಸ್ಪರ ಒಡಂಬಡಿಕೆಗಳಿಂದಲೂ ಸರಿಮಾಡಿಕೊಳ್ಳುವರು. ಯಾವುದಾದ ರೊಂದು ದೇಶದಲ್ಲಿ ಇತರರು ಬಹಳವಾಗಿ ಸಂಪಾದನೆಮಾಡುತ್ತ ಆ ಸಂಪಾದನೆ ಯಜಮಾನನ ದೇಶಕ್ಕೆ ಸಾಗುತ್ತಿದ್ದರೆ ಅದರಮೇಲೆ ತೆರಿಗೆ ಎತ್ತುವ ಅಧಿಕಾರ ಯಾರದು? ಉತ್ಪತ್ತಿಯಾಗುವ ರಾಜ್ಯದವರದೆ

ವರಮಾನ? ಯಜಮಾನನು ವಾಸಮಾಡಿಕೊಂಡಿರುವ ರಾಜ್ಯದವರದೆ ಎಂಬುದು ಚರ್ಚೆಗೆ ಬೀಳುವುದು. ಆದರೆ ಯಾವ ಮನುಷ್ಯನ ವಿಷಯ ದಲ್ಲಿಯೇ ಆಗಲಿ ಒಂದೇ ವರಮಾನ, ಆಸ್ತಿ ಅಥವಾ ಉತ್ಪತ್ತಿಯ ಮೇಲೆ ಎರಡು ಸರಕಾರಗಳವರು ತೆರಿಗೆಯೆತ್ತುವುದು ಅನ್ಯಾಯ; ತೆರಿಗೆಯನ್ನು ಎತ್ತುವ ಹಕ್ಕು ಯಾರಿಗಿರಬೇಕೆಂಬ ಮನಸ್ತಾಪ ಬೆಳೆಯುವುದೂ ಸರಿಯಲ್ಲ. ಆದ್ದರಿಂದ ಸಕಲ ರಾಷ್ಟ್ರಗಳ ಸಂಘದ (League of Nations) ಅಧಿಕಾರಿಗಳು ಒಂದು ತೀರ್ಮಾನಕ್ಕೆ ಬಂದು ಈ ಚರ್ಚೆಯನ್ನು ಇತ್ಯರ್ಥಮಾಡಿರುತ್ತಾರೆ. ಒಡವಾಳವನ್ನೂ ಅವರ ಕಾರ್ಯರಂಗವೂ ಒಂದೇ ದೇಶದಲ್ಲಿದ್ದರೆ ತೊಂದರೆಯೇ ಇಲ್ಲ. ಅವರೊಂದು ಕಡೆ ಅವರ ಕಾರ್ಯಾಲಯವೂ ಮುಖ್ಯ ಕಚೇರಿಯೂ ಒಂದು ಕಡೆಯೂ, ಉತ್ಪತ್ತಿ ಮತ್ತು ಲಾಭದ ವಿಭಾಗ ಬೇರೊಂದು ಕಡೆಯೂ ಆದಾಗ ಮಾತ್ರ ತೊಡಕು ಬರುವುದು. ಈ ತೆರಿಗೆಗಳು ಆಸ್ತಿಗಳ ಮೇಲೂ ಸಂಸ್ಥೆಗಳ ಮೇಲೂ ಬೀಳಬಹುದು; ಅಥವಾ ವರಮಾನದ ತೆರಿಗೆ, ಮೇಲ್ತೆರಿಗೆ (Super-Tax), ಆಸ್ತಿ ತೆರಿಗೆ, ಮುಂತಾದ ರೂಪದಲ್ಲಿ ಬೀಳಬಹುದು. ಇವನ್ನು ತಪ್ಪಿಸಿಕೊಳ್ಳಲು ಬಹಳವಾಗಿ ಪ್ರಯತ್ನಪಡುವುದು ಎಲ್ಲೆಲ್ಲಿಯೂ ವಾಡಿಕೆ. ಅಮೇರಿಕ ದೇಶದಲ್ಲಿ ವಾಸಮಾಡುತ್ತಿರುವ ಧನಿಕರು ಸ್ವದೇಶ ದಲ್ಲಿ ತೆರಬೇಕಾಗುತ್ತಿದ್ದಂತಹ ತೆರಿಗೆಗಳನ್ನು ಈಗಾಗಲೇ ಇತರ ದೇಶಗಳಲ್ಲಿ ತೆರುತ್ತಿದ್ದರೆ ಆ ತೆರಿಗೆಗಳನ್ನು ತನಗೆ ಸಂದಂತೆ ಎಣಿಸಿ ಅಷ್ಟು ಮೊತ್ತವನ್ನು ಆ ಧನಿಕನು ಸರಕಾರಕ್ಕೆ ಪುನಃ ತೆರತಕ್ಕದ್ದಿಲ್ಲವೆಂದು ಅಲ್ಲಿ ಗೊತ್ತು ಮಾಡಿದ್ದಾರೆ. ಈ ಪದ್ಧತಿಯಲ್ಲಿ ಅಷ್ಟುಮಟ್ಟಿನ ತೆರಿಗೆಯ ವರಮಾನ ಅಮೇರಿಕಾಕ್ಕೆ ಇಲ್ಲದೆ ಹೋಗುವುದು. ಸಂಪಾದನೆಯೆಲ್ಲ ತಮ್ಮಲ್ಲಿಯೇ ದೊರೆಯುತ್ತಿದ್ದರೂ ಯಜಮಾನನು ಬೇರೆ ದೇಶದಲ್ಲಿ ವಾಸಮಾಡುತ್ತಿದ್ದರೆ ಅವನಿಂದ ಇಲ್ಲಿ ತೆರಿಗೆ ವಸೂಲುಮಾಡದಿರುವುದು ಎರಡನೆಯ ರೀತಿ.

**ಬ್ರಿಟಿಷ್ ಪದ್ಧತಿ.**—ಬ್ರಿಟಿಷ್ ದ್ವೀಪಗಳಲ್ಲಿಯೂ ಸಾಮ್ರಾಜ್ಯ ದಲ್ಲಿಯೂ ವರಮಾನದ ಸಂಪಾದನೆಯಾಗುತ್ತಿರುವ ದೇಶಕ್ಕಷ್ಟು, ಯಜ ಮಾನರು ವಾಸಮಾಡುತ್ತಿರುವ ದೇಶಕ್ಕಷ್ಟು ಎಂದು ತೆರಿಗೆಯ ಮೊತ್ತ ವನ್ನು ಪಾಲುಮಾಡಿಕೊಳ್ಳುವ ಪದ್ಧತಿ ಇದೆ. ಇನ್ನೊಂದು ಪದ್ಧತಿಯಲ್ಲಿ,

ಕೆಲವು ಬಗೆಯ ಸಂಪತ್ತನ್ನು ಈ ದೇಶದವರೂ ಇನ್ನು ಕೆಲವು ಬಗೆಯವನ್ನು ಇನ್ನೊಬ್ಬರೂ ತೆರಿಗೆಯ ಕೆಲಸಕ್ಕೆ ಉಪಯೋಗಿಸಿಕೊಳ್ಳಬಹುದು ಎಂದು ನಿರ್ಣಯವಿರುತ್ತದೆ. ಆಗ ಆ ಬಾಬುಗಳ ಮೇಲೆ ಇಬ್ಬರೂ ಸ್ವತಂತ್ರವಾಗಿ ತೆರಿಗೆಯೆತ್ತಬಹುದು. ಈ ಸಂಬಂಧದಲ್ಲಿ ಆಸ್ತಿ ಮುಂತಾದುವುಗಳ ಮೇಲೆ ಎತ್ತುವ ತೆರಿಗೆಗಳನ್ನು ಅವು ಯಾವ ರಾಜ್ಯದಲ್ಲಿ ಇವೆಯೋ ಆ ಸರಕಾರಗಳವರೇ ಎತ್ತಬೇಕು ಎಂದೂ ವರಮಾನದ ತೆರಿಗೆಯನ್ನೆತ್ತುವಾಗ ಯಜಮಾನನು ಯಾವ ದೇಶದಲ್ಲಿ ವಾಸಮಾಡುತ್ತಿರುವನೋ ಆ ದೇಶದ ಸರಕಾರದವರು ಮಾತ್ರ ಎತ್ತಬೇಕು ಎಂದೂ ಒಡಂಬಡಿಕೆಗೆ ಬರುವುದು ಲೇಸೆಂದು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. ಈ ಸೂಚನೆಗಳಿಂದಲೂ ಸರಕಾರದ ವರಮಾನ ಹೆಚ್ಚು ಕಡಿಮೆಯಾಗುವುದೆಂದು ವೇದ್ಯವಾಗಬಹುದು.

**ರಾಜಕೀಯ ಅಧೀನತೆಯ ಆರ್ಥಿಕ ಪರಿಣಾಮಗಳು.**—ರಾಜಕೀಯ ಅಧೀನತೆ ಅಥವಾ ರಾಜಕೀಯ ಒಡೆತನಗಳಿಂದ ಸರಕಾರಗಳ ಹಣ ಕಾರ್ಯಗಳು ವ್ಯತ್ಯಾಸವಾಗುತ್ತಿರುತ್ತವೆ. ರಕ್ಷಿತ ರಾಜ್ಯಗಳೂ ಅಧೀನ ಸರಕಾರಗಳೂ ಇರುವ ಕಡೆ ರಾಜಕೀಯ ಅಧೀನತೆಯ ಜೊತೆಗೆ ಆರ್ಥಿಕ ಅಧೀನತೆ ಬರುವುದು. ಅಧೀನ ರಾಜ್ಯಗಳ ಆರ್ಥಿಕ ಮಂಡಲದ ರೂಪ ರಚನೆ, ನಾಣ್ಯ ಪದ್ಧತಿ, ಮಾರುವೆ ಪದ್ಧತಿ, ತೆರಿಗೆ ಪದ್ಧತಿ, ವ್ಯಾಪಾರ ಕೈಗಾರಿಕೆ ಶಾಸನಗಳು—ಇವೆಲ್ಲ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಒಡೆಯ ಸರಕಾರದ ಆಡಳಿತಕ್ಕೂ ಚಾಲನೆಗೂ ಒಳಗಾಗಿರುವುವು. ಅಧೀನ ರಾಜ್ಯದ ವ್ಯಾಪಾರ ಕೈಗಾರಿಕೆಗಳಿಗೆ ಅನುಕೂಲವಿರಲಿ ಇಲ್ಲದಿರಲಿ ಒಂದು ಬಗೆಯ ಪೊಗದಿಯನ್ನು ಎತ್ತುವಂತೆ ಪರೋಕ್ಷವಾದ ಈ ಪ್ರಭುಗಳನ್ನೆತ್ತುವರು. ವರ್ಷೇ ವರ್ಷೇ ಇಷ್ಟು ಹಣವನ್ನು ಸಲ್ಲಿಸಬೇಕು; ತಮ್ಮ ನಾಡಿನ ಇಷ್ಟು ಜನ ನೌಕರರನ್ನೂ ಹುದ್ದೇದಾರರನ್ನೂ ಕೆಲಸಕ್ಕಿಟ್ಟುಕೊಂಡು ಅವರ ಸಂಬಳ, ಪರಿವಾರದ ವೆಚ್ಚ, ವಿಶ್ರಾಂತಿ ವೇತನ ಮುಂತಾದುವನ್ನು ತೆರಬೇಕು; ಅವರ ಸಂಬಳಸಾರಿಗೆ ಈ ಅಂತಸ್ತಿನಲ್ಲಿಯೇ ಏರ್ಪಡಬೇಕು, ತಮ್ಮ ದೇಶದ ಹಣದಲ್ಲಿಯೇ ಇರಬೇಕು; ಅಧೀನ ಸರಕಾರದ ಮೇಲ್ವಿಚಾರಣೆಗಾಗಿ ಒಡೆಯರ ರಾಜ್ಯದಲ್ಲಿ ಏರ್ಪಟ್ಟ

ಸಿರುವ ಆಡಳಿತ ಮಂಡಲಿಯ ಸಿಬ್ಬಂದಿ ವೆಚ್ಚಗಳನ್ನು ಹೊರಬೇಕು; ಇಷ್ಟು ಸೈನ್ಯವನ್ನು ಕಾಪಾಡಿ ಅದರ ವೆಚ್ಚವನ್ನು ತೆರಬೇಕು; ಈ ಈ ಪದಾರ್ಥಗಳನ್ನೇ ಮಾರಬೇಕು, ಕೊಳ್ಳಬೇಕು; ಸಾಲಗಳನ್ನು ಇಲ್ಲಿಯೇ ಹೀಗೆಯೇ ಇಂಥ ಸಮಯದಲ್ಲಿ ಮಾತ್ರವೇ ತೆಗೆಯಬೇಕು; ಸಾಲವನ್ನೊದಗಿಸುವ ತಮ್ಮ ಸಾಹುಕಾರರಿಗೆ ಇವೇ ಅನುಕೂಲಗಳನ್ನೂ ರಿಯಾಯಿತಿಗಳನ್ನೂ ಉಂಟುಮಾಡಬೇಕು; ಇಂತಹ ತೆರಿಗೆಗಳನ್ನು ಇಂತಹ ಸಾಮಾಸಿಕ ಅಥವಾ ಮಾಸದ ಮೇಲೆಯೇ ಎತ್ತಬೇಕು, ಸೋಡಿ ಕೊಡಬೇಕು, ಅಥವಾ ಎತ್ತಲೇ ಕೂಡದು; ನಾಣ್ಯ ಪದ್ಧತಿಯನ್ನು ಹೀಗೆಯೇ ಏರ್ಪಡಿಸಬೇಕು; ನಾಣ್ಯಸಿಧಗಳ ಗಾತ್ರ ರಚನೆ ವ್ಯವಸ್ಥೆಗಳನ್ನು ಹೀಗೆಯೇ ಮಾಡಬೇಕು; ಹಣದ ಸಂಚಾಲನೆಯನ್ನೂ ವಿನಿಯೋಗವನ್ನೂ ಒಡೆಯ ಸರಕಾರದ ಮೇಲ್ವಿಚಾರಣೆಗೆ ಒಳಪಡಿಸಬೇಕು; ಇವರನ್ನು ಜಯಿಸುವುದಕ್ಕೂ ಹದ್ದಿನಲ್ಲಿಟ್ಟು ಆಳುವುದಕ್ಕೂ, ಕಡೆಗೆ ಇವರು ಸ್ವತಂತ್ರರಾಗದಂತೆ ತಡೆಯುವುದಕ್ಕೂ ಮಾಡಿರುವ, ಮಾಡುತ್ತಿರುವ ಎಲ್ಲ ವೆಚ್ಚಗಳನ್ನೂ ಸಾಲಗಳನ್ನೂ ಇವರೇ ಹೊರಬೇಕು; ಇಂಥ ಇಂಥ ಸುಂಕಗಳನ್ನು ಹಾಕಿ ಒಡೆಯರ ವ್ಯಾಪಾರಕ್ಕೆ ತಡೆ ತರಬಾರದು; ಇವರ ಪದಾರ್ಥಗಳಿಗೆ ದೊರೆಯುವ ಅನುಕೂಲಗಳನ್ನು ಇತರ ದೇಶಗಳವರಿಗೆ ಕಲ್ಪಿಸಕೂಡದು; ಇತರರಿಗೆ ಕಲ್ಪಿಸಬಹುದಾದ ಅನುಕೂಲಕ್ಕಿಂತಲೂ ಮೇಲಾದ ಅನುಕೂಲಗಳನ್ನು ಅವರಿಗೆ ಕಲ್ಪಿಸಿಕೊಡಬೇಕು; ಮಾರುವೆಯ ದರವನ್ನು ಅವರಿಗೆ ಪ್ರತಿಕೂಲವಾಗುವಂತೆ ಏರ್ಪಡಿಸಬಾರದು ಎಂದು ಮುಂತಾಗಿ ವಿಧಿಸುವುದುಂಟು. ಇದರಿಂದ ಅಧೀನ ಸರಕಾರಗಳ ಸಂಪತ್-ಸ್ಥಿತಿ ಎರಡು ಕಾಲಲ್ಲಿಯೂ ಕುಂಟುವಂತಾಗುವುದು. ಅಧೀನ ರಾಜ್ಯದ ಆದಾಯ ವೆಚ್ಚಗಳೂ ಒಡೆಯ ಸರಕಾರದ ಆದಾಯ ವೆಚ್ಚಗಳೂ ಈ ರೀತಿಯಲ್ಲಿ ವ್ಯತ್ಯಾಸವಾಗುವುವು.

ಈ ಪ್ರಕರಣದಲ್ಲಿ ವರ್ಣಿಸಿರುವ ಕಾರ್ಯಗಳೂ ಒಂದು ಬಗೆಯ ತೆರಿಗೆಯ ಹೊರೆಯೇ ಆಗಿರುವುದರಿಂದ, ಇರುವ ಕಡೆ ಈ ರಾಜಕೀಯ ಭಾರವನ್ನು ಸೇರಿಸಿಕೊಂಡೇ ಒಟ್ಟು ದೇಶದ ತೆರಾಣೆಯ ಲೆಕ್ಕವನ್ನು ಮಾಡಬೇಕು. ಆದ್ದರಿಂದ ನೇರವಾಗಿ ಒಳಸರಕಾರಕ್ಕೆ ತೆರಬೇಕಾದ್ದೆಷ್ಟು?

ಹೊರಗಿನ ತೆರಾಣೆ ಎಷ್ಟು? ಸಾಮಾನಿನ ಮೇಲೆ ಬೀಳುವ ಸುಂಕಗಳೆಷ್ಟು? ರಾಜಕೀಯ ಕಾರಣಗಳಿಂದ ಹೊತ್ತಿರುವುವೆಷ್ಟು? ಪ್ರಧಾನ ಸರಕಾರಕ್ಕೂ ಇತರರಿಗೂ ನೇರವಾಗಿ ತೆರುವ ಅಥವಾ ಸಾಲ ಸಿಬ್ಬಂದಿಗಳ ರೂಪದಲ್ಲಿ ತೆರುವ ತೆರಾಣೆ ಎಷ್ಟು? ಸ್ಥಳೀಯ ಮತ್ತು ಪ್ರಾಂತ ಸರಕಾರಗಳವರಿಗೆ ತೆರುತ್ತಿರುವುದೆಷ್ಟು? ಎಂದು ಎಲ್ಲವನ್ನೂ ಒಟ್ಟುಗೂಡಿಸಿ ಇವುಗಳೆಲ್ಲದರಿಂದಲೂ ಪ್ರತಿಯಾಗಿ ದೇಶಕ್ಕೆ ಉಂಟಾಗುವ ಆರ್ಥಿಕ ಪ್ರಯೋಜನಗಳನ್ನು ಕಳೆದು ಒಟ್ಟು ತೆರಾಣೆಯ ಭಾರವನ್ನು ಗೊತ್ತುಮಾಡುವುದು ಯೋಗ್ಯ. ಆಗಲೂ ಈ ದೇಶದ ಸಂಪತ್ತು, ಆಸ್ತಿ, ವಾರ್ಷಿಕ ವರಮಾನ, ಸಾಲಸ್ಥಿತಿ ಇವುಗಳೊಡನೆ ಈ ಭಾರಗಳನ್ನು ಹೋಲಿಸಿದರೆ ಮಾತ್ರವೇ ದೇಶದ ಕೈಗಾರಿಕೆ ಉದ್ಯೋಗಗಳಿಗೆ ಉತ್ತೇಜನವಿದೆಯೆ ಇಲ್ಲವೆ? ಯಾವ ಅಡ್ಡಿ ಅಡಚಣೆಗಳಿವೆ? ಧನಕಾರ್ಯಗಳ ಫಲಾಫಲಗಳು ಯಾವುವು? ಎಂಬುದನ್ನು ಗೊತ್ತುಮಾಡಬಹುದು.

**ಮಾರುವೆಯ ನೀತಿ.—** ಕೆಲವು ದೇಶಗಳಲ್ಲಿ ರಾಜಕೀಯ ಅಥವಾ ಇತರ ಹಣವ್ಯವಸ್ಥೆಯ ಕಾರಣದಿಂದ ಸರಕಾರದವರೇ ಮಾರುವೆಯ ದರವನ್ನು ಹೆಚ್ಚು ಕಡಮೆ ಮಾಡುವುದುಂಟು. ಇದರ ಪರಿಣಾಮವಾಗಿಯೂ ಸರಕಾರದ ಆದಾಯ ವೆಚ್ಚ ವ್ಯತ್ಯಾಸ ಹೊಂದುವುವು. ಅವರ ಆಸ್ತಿ, ನಿಧಿ, ಹಣಗಳ ಬೆಲೆ ಏರುಪೇರಾಗುವುದುಂಟು. ಆದರಲ್ಲಿಯೂ ಒಳದೇಶದಲ್ಲಿ ಸಂಚಾರಮಾಡುವ ಹಣ ಒಂದಾಗಿ, ವಿದೇಶಿ ವ್ಯಾಪಾರಕ್ಕೆ ಒದಗುವ ಹಣ ಬೇರೊಂದಾಗಿ ಇವೆರಡರ ಬೆಲೆಗಳಲ್ಲಿಯೂ ನಾನಾಕಾರಣಗಳಿಂದ ಹೊಂದಿಕೆಯಾಗದಿದ್ದರೆ ಅಥವಾ ಇಂತಹ ರಾಜ್ಯದ ಕೈಗೆ ಮಾರಿದ ಕಾರಣಗಳಿಂದ ಮಾರುವೆ ಅವ್ಯವಸ್ಥವಾದರೆ ಆಗಲೂ ಸರಕಾರ, ಕೈಗಾರಿಕೆ, ಬ್ಯಾಂಕು ಇವುಗಳ ಧನಸ್ಥಿತಿಯಲ್ಲಿ ಹೆಚ್ಚು ಕಡಮೆಗಳಾಗುವುವು.

**ರಾಜಕೀಯ ದಂಡಗಳು** (Indemnities and Reparations). — ಇನ್ನೊಂದು ಕೇವಲ ರಾಜಕೀಯ ಸಂಗತಿ ದೇಶವಿದೇಶಗಳ ಧನಸ್ಥಿತಿಯನ್ನು ಮಟ್ಟುಮಾಡುವುದು. ಅದು ಯಾವಾಗಲೂ ಎಲ್ಲ ದೇಶಗಳಲ್ಲಿಯೂ ಕಾಣಬರುವುದಿಲ್ಲ. ಯುದ್ಧಗಳು ನಡೆದು ಯುದ್ಧದಲ್ಲಿ ಸೋತವರಿಂದ ದಂಡಗಳನ್ನೂ ಪರಿಹಾರದ್ರವ್ಯಗಳನ್ನೂ ತೆಗೆದು ನಷ್ಟ ತುಂಬಿಸಿಕೊಳ್ಳುವ

ಪದ್ಧತಿಯೊಂದಿದೆ. ಗೆಲವಿನ ಹುಮ್ಮಸ್ಸಿನಲ್ಲಿ ಸೇಡುಬುದ್ಧಿ ಹುರಿದುಂಬಿ ಸೋತವರಿಗೆ ಪರಾಭವ ಸಾಲದೆಂದು, ಅವರಿಗೆ ಸೇರಿದ ಭೂಭಾಗಗಳನ್ನೂ ವಸತಿಗಳನ್ನೂ ಕಿತ್ತುಕೊಳ್ಳುವುದು ಸಾಲದೆಂದು, ಗೆದ್ದವರಿಗೂ ಅವರ ಮಿತ್ರ ಮಂಡಲಿಯವರಿಗೂ ಆಗಿರುವ ಜನನಷ್ಟವನ್ನೂ ವಸ್ತು ಕೈಗಾರಿಕೆ ವ್ಯಾಪಾರಗಳ ನಷ್ಟವನ್ನೂ ಬಹು ದೊಡ್ಡ ಮೊತ್ತಗಳಲ್ಲಿ ಕಟ್ಟಿಕೊಡಬೇಕು ಎಂದು—(ಮೊನ್ನೆಯ ಘೋರ ಯುದ್ಧದಲ್ಲಿ ಜರ್ಮನಿಯು, ಆಸ್ಟ್ರಿಯಾದವರ ಮೇಲೆ ಹೊರಿಸಿದಂತೆ)— ಹಣದ ಭಾರಗಳನ್ನು ಹೊರಿಸಬಹುದು. ಯುದ್ಧ ಮುಗಿದ ಹತ್ತಾರು ವರ್ಷಗಳಾದಮೇಲೂ ಪ್ರಪಂಚದ ಜನಜೀವನದ ಮೇಲೆ ಇದರ ದುಷ್ಪರಿಣಾಮಗಳು ಕಂಡುಬರುವುವು.

**ರೀತಿ — ಫಲಗಳು.** — ಈ ಹಣದ ಭಾರವನ್ನು ಅವರು ಇಳಿಸಿಕೊಳ್ಳ ಬೇಕಾದರೆ: ವರುಷಕ್ಕೆ ಇಷ್ಟೆಂಬಂತೆ ಚಿನ್ನವನ್ನು ಕೊಡಬೇಕು ಅಥವಾ ಸಾಮಾನನ್ನು ರಫ್ತುಮಾಡಬೇಕು, ಅಥವಾ ಆಸ್ತಿಪತ್ರಗಳನ್ನು ಒಪ್ಪಿಸ ಬೇಕು, ಇಲ್ಲವಾದರೆ ಆ ಮೊತ್ತದಲ್ಲಿ ಆದಾಯ ತರುವ ವರಮಾನದ ಬಾಬುಗಳನ್ನು ಅಧೀನಕ್ಕೆ ಒಪ್ಪಿಸಬೇಕು; ರಾಜ್ಯಭಾಗವನ್ನೂ ಆಸ್ತಿ ಗಳನ್ನೂ ಒತ್ತೆ ಇಡಬೇಕು; ಅಥವಾ ಗೆದ್ದವರೇ ದಂಡದ್ರವ್ಯವನ್ನು ವಸೂಲು ಮಾಡಿಕೊಳ್ಳುವಂತೆ ಅನುಕೂಲ ಕಲ್ಪಿಸಿಕೊಡಬೇಕು; ಅಥವಾ ತಮ್ಮ ಜನರಿಂದ ದುರ್ಭರವಾದ ತೆರಿಗೆಗಳನ್ನು ಎತ್ತಿ ದೊರೆತ ಹಣವನ್ನು ತಮ್ಮನ್ನು ಸೋಲಿಸಿದ ಶತ್ರುಗಳಿಗೆ ಸಮರ್ಪಿಸಬೇಕು; ಇಲ್ಲವಾದರೆ ಇತರ ರಾಜ್ಯಗಳವರಿಂದ ಸಾಲವನ್ನು ತೆಗೆದು ತೀರಿಸಬೇಕು. ಆದರೆ ಹೀಗೆ ಯಾವ ರೀತಿಯಲ್ಲಿ ಮಾಡುವುದೂ ಸಾಧಾರಣವಾಗಿ ಕಷ್ಟವಾಗುವುದು. ತೆರುವ ವರಿಗೆ ಹಿಂಸೆ, ತೆಗೆದುಕೊಳ್ಳುವವರಿಗೆ ಸುಖವಿಲ್ಲ. ಪರಿಣಾಮಗಳು ಹೇಗಾಗುವುವೆಂಬುದನ್ನು ಸ್ವಲ್ಪಮಟ್ಟಿಗೆ ವಿವರಿಸಬಹುದು :—

ಯುದ್ಧದಲ್ಲಿ ಗೆದ್ದವರಿಗೆ ಆಸ್ತಿ, ಕೈಗಾರಿಕೆ, ಉದ್ಯೋಗ, ಸಂಪತ್ತು ಎಷ್ಟು ನಷ್ಟವಾಗಿರುವುದೋ ಸೋತವರಿಗೂ ಕಡಮೆಯೆಂದರೆ ಅಷ್ಟಾದರೂ ನಷ್ಟವಾಗಿ ಅವರ ದೇಶದಲ್ಲಿ ಕ್ಷಾಮವೂ ದುರ್ಭಿಕ್ಷವೂ ಉಂಟಾಗಿರುತ್ತವೆ. ಯುದ್ಧದ ಉದ್ಯಮಕ್ಕೆ ಹೂಡಿದ್ದ ಯಂತ್ರ ಕಾರ್ಖಾನೆ ಉತ್ಪತ್ತಿಕಾರ್ಯ ಗಳು ಶಾಂತಿಕಾಲದ ಉದ್ಯಮಗಳಿಗೆ ತಿರುಗಲು ಸ್ವಲ್ಪ ಕಾಲ ಹಿಡಿಯು

ವುದು. ಅಲ್ಲದೆ ಯುದ್ಧಕ್ಕಾಗಿ ತಾವೇ ಮಾಡಿರುವ ಸಾಲದ ಹೊರೆ ತಮ್ಮನ್ನು ನೆಲಕ್ಕೆ ತುಳಿಯುತ್ತಿರುವುದರಿಂದ ಅವುಗಳ ಬಡ್ಡಿಯನ್ನು ಸಲ್ಲಿಸುವ ಬಗೆ ಹೇಗೆ ಎಂಬ ಚಿಂತೆ ಇರುತ್ತದೆ. ಜೊತೆಗೆ ಸೈನ್ಯ ಖಂಡಗಳನ್ನು ಒಡೆದು ಸೈನಿಕರಾಗಿದ್ದವರಿಗೆ ಬೇರೆ ಉದ್ಯೋಗಗಳನ್ನು ಕಲ್ಪಿಸುವುದು ಆಗತ್ಯವಾಗಿರುವುದು. ಉತ್ಪತ್ತಿಕಾರ್ಯಗಳಲ್ಲಿ ಉತ್ತಮವಾಗಿ ತೊಡಗಬಹುದಾಗಿದ್ದ ಪ್ರಜಾಭಾಗವೆಲ್ಲ ಬಹುವಾಗಿ ಯುದ್ಧದಲ್ಲಿ ನಷ್ಟವಾಗಿ ಉಳಿದ ಜನಸಂಖ್ಯೆ ದುರ್ಬಲವಾಗಿರುವುದು. ಅಂಗವಿಹೀನರಾಗಿರುವವರಿಗೂ ಮಡಿದವರ ಕುಟುಂಬಗಳಿಗೂ ವೇತನಗಳನ್ನೂ ಮಾಸಾಶನಗಳನ್ನೂ ಸಲ್ಲಿಸಬೇಕಾಗಿರುವುದು. ಹೀಗೆ ವೆಚ್ಚ ಹೆಚ್ಚಿರುವಾಗ ಜನರ ತೆರಿಗೆ ತೆರುವ ಶಕ್ತಿ ಬಹುವಾಗಿ ಕ್ಷೀಣಿಸಿರುತ್ತದೆ. ಯುದ್ಧಾರಂಭಕ್ಕೆ ಮುಂಚೆ ಎಷ್ಟು ಉತ್ತಮ ವ್ಯವಸ್ಥೆಯಿಂದ ಕೆಲಸಮಾಡುತ್ತಿದ್ದರೋ ಅದಕ್ಕಿಂತಲೂ ದಕ್ಷವಾಗಿ ಕೆಲಸ ಮಾಡಿದರೂ ತಕ್ಕಷ್ಟು ಉತ್ಪತ್ತಿಮಾಡುವುದು ಸಾಧ್ಯವಲ್ಲದಿರುವಾಗ ಯುದ್ಧಶ್ರಮ ಆರದಿರುವ ಇಂತಹ ದುರ್ಬಲಸ್ಥಿತಿಯಲ್ಲಿ ಉತ್ಪತ್ತಿ ಮಾಡಿದುದೆಲ್ಲವನ್ನೂ ತೆತ್ತರೂ ದಂಡಗಳ ಕಂತನ್ನು ಸಲ್ಲಿಸುವುದು ಶಕ್ಯವಾಗದೆ ಇರಬಹುದು. ಚಿನ್ನವನ್ನು ಎಲ್ಲಿಂದ ತಂದುಕೊಡುವರು? ಇದ್ದುದೆಲ್ಲಾ ಈವರೆಗೇ ಕರಗಿಹೋಗಿರುತ್ತದೆ. ಹೊಸದಾಗಿ ಕೊಳ್ಳಬೇಕು;—ಪದಾರ್ಥಗಳನ್ನು ಹೆಚ್ಚಾಗಿ ತಯಾರಿಸಿ ಮಾರಿದ ಹೊರತು, ಆಮದಿಗಿಂತ ಬಹುವಾಗಿ ರಫ್ತನ್ನು ಕಳುಹಿಸಿದ ಹೊರತು ಹೊಸ ಚಿನ್ನವನ್ನು ಸಂಪಾದಿಸುವುದಕ್ಕಾಗುವುದಿಲ್ಲ. ಈ ಸಮಯದಲ್ಲಿ ವಿದೇಶಗಳವರು ತಮ್ಮ ಕೈಕೋಶಗಳಲ್ಲಿರುವ ಚಿನ್ನ ಕದಲದಂತೆ ಕಾಪಾಡಿಕೊಳ್ಳಲು ತಮ್ಮ ದೇಶದಿಂದ ಚಿನ್ನದ ರಫ್ತನ್ನು ನಿಷೇಧಿಸುವರು. ಆಗ ಆ ದೇಶಗಳವರ ಕೃಪೆ ಬೇಡಿ ಸಾಲವೆತ್ತಬೇಕಾಗುವುದು; ಅಥವಾ ಅವರ ಪತ್ರಗಳನ್ನು ಕೊಂಡು ಆ ಮೂಲಕ ದಂಡದ ಮೊತ್ತವನ್ನು ತೀರಿಸಬೇಕಾಗುವುದು.

ವಸ್ತುಗಳ ರೂಪದಲ್ಲಿ ಕಳುಹಿಸೋಣವೆಂದರೆ, ಇವರ ಪದಾರ್ಥಗಳು ಆ ದೇಶಗಳಿಗೆ ಧಾರಾಳವಾಗಿ ಹೋಗಲು ಶಕ್ಯವಾಗದಂತೆ ದೊಡ್ಡ ಆಮದು ಸುಂಕದ ಪೌಳಿಗಳನ್ನು ಅವರು ನಿರ್ಮಿಸಿಕೊಂಡಿರುವುದುಂಟು. ಇವರಿಂದ ತಯಾರಾದ ಪದಾರ್ಥಗಳ ಪೈಪೋಟಿಯಿಂದ ತಮ್ಮ ಕೈಗಾರಿಕೆ ನಾಶವಾಗ

ದಂತೆ ತಡೆಯುವ ಈ ಪ್ರಯತ್ನಗಳು ಸಾಲಗಾರರ ವ್ಯಾಪಾರಕ್ಕೆ ಪೇಟೆ ಸಿಕ್ಕದಂತೆ ಮಾಡುವುವು. ಹಿಂದೆ ಇವರ ವಶದಲ್ಲಿರುತ್ತಿದ್ದ ಕಾವಲು, ವಸತಿ, ರಾಜ್ಯಭಾಗ, ಪೇಟೆ, ಗಿರಾಕಿ ಇವೆಲ್ಲ ಶತ್ರುಗಳ ಕೈಸೇರಿಯೋ ಇತರ ವಿಧ ವಾಗಿ ಹಂಚಿಹೋಗಿಯೋ — ಅಂತು ಇವರ ಕೈತಪ್ಪಿಹೋಗಿರುವುದರಿಂದ ಆ ಮೂಲಕವೂ ಸಹಾಯ ಸಂಪತ್ತಿಯನ್ನು ಒದಗಿಸಿಕೊಳ್ಳುವುದು ಆಗದು. ಅದೂ ಅಲ್ಲದೆ ಯಾವ ದೇಶವೇ ಆಗಲಿ ಅನಂತ ಕಾಲವೂ ರಫ್ತನ್ನೇ ಅತಿಯಾಗಿ ಹೆಚ್ಚಿಸಿಕೊಳ್ಳುವುದು ಈಗಿನ ಆರ್ಥಿಕ ಪ್ರಪಂಚದಲ್ಲಿ ಸಾಧ್ಯ ವಾಗುವಂಥಾದ್ದಲ್ಲ.

ಉಳಿದಿರುವ ಮಾರ್ಗವೊಂದೇ. ತಮ್ಮನ್ನು ಗೆದ್ದಿರುವ ಶತ್ರುಗಳಿಂದ ಅಥವಾ ಯುದ್ಧದಲ್ಲಿ ತಟಸ್ಥರಾಗಿದ್ದ ಧನಿಕ ರಾಷ್ಟ್ರಗಳವರಿಂದ ಸಾಲ ಪಡೆದು ಈ ದಂಡಗಳನ್ನು ಹರಿಸಬೇಕಾಗುತ್ತದೆ. ಒಂದು ಕಡೆ, ಯಾರಿಗೆ ಸಾಲ ತೀರಿಸಬೇಕೊ ಅವರಿಂದಲೇ ಅವರಂಥವರಿಂದಲೇ ಪುನಃ ಸಾಲ ತೆಗೆದು ಹಿಂದಿನ ಸಾಲ ತೀರಿಸಬೇಕಾಗುವುದು. ಇನ್ನೊಂದು ಕಡೆ ಯಾವ ರೋಗವನ್ನು ನಿವಾರಿಸಲು ಚಿಕಿತ್ಸೆ ಬೇಕಾಯಿತೋ, ಆ ಚಿಕಿತ್ಸೆ ಔಷಧಿ ಗಳ ಪ್ರಯೋಗದಿಂದ ರೋಗ ಹೆಚ್ಚುವ ಸಂಭವವೇ ಬಹಳ. ಹೇಗೆಂದರೆ ಸಾಲ ತೆಗೆದುಕೊಳ್ಳುವುದೆಂದರೆ ಅದರ ಬಡ್ಡಿಗಾಗಿಯೂ ಅಸಲಿಗಾಗಿಯೂ ತೆರಾಣೆ ಒದಗುವಂತೆ ಪುನಃ ರಫ್ತನ್ನು ಹೆಚ್ಚುಮಾಡಿಕೊಳ್ಳಬೇಕು; ಚಿನ್ನವನ್ನು ಒದಗಿಸಬೇಕು; ಪ್ರಜೆಗಳ ಮೇಲೆ ಇನ್ನೂ ಭಾರವಾದ ತೆರಿಗೆಗಳನ್ನು ಹೊರಿಸಬೇಕು. ಇವೆಲ್ಲದರ ಪರಿಣಾಮ: ಈಗಿನ ಸ್ಥಿತಿ ಯಲ್ಲಿ ನಾವು ದಂಡವನ್ನು ತೆರುವುದು ಸಾಧ್ಯವಿಲ್ಲ, ನೀವು ಬೇಕಾದ್ದನ್ನು ಮಾಡಿಕೊಳ್ಳಬಹುದು ಎಂದು ಹೇಳುವ ಸ್ಥಿತಿಗೆ ಬರುವುದು. ಆಗ ಆ ರಾಷ್ಟ್ರಗಳವರು ಕಡ್ಡಾಯವಾಗಿ ಈ ವರ್ಷ ಕೊಡಬೇಕಾದ್ದಿಲ್ಲ, ಇನ್ನೂ ನಾಲ್ಕು ವರ್ಷ ತೆಗೆದುಕೊಳ್ಳಿ ಎಂದು ವರ್ಷೇವರ್ಷೇ ರಿಯಾಯಿತಿ ಯನ್ನು ತೋರಿಸಿ ಕಡೆಗೆ ಸಾಲಗಳನ್ನು ರದ್ದುಮಾಡಿದ ಹೊರತು ತೆರಾಣೆ ಸಂದಾಯಗಳೂ ಆರ್ಥಿಕಜೀವನವೂ (Economic Life) ನಡೆಯ ವಾಗುವುವು. ಈ ಮಧ್ಯೆ ಎಲ್ಲೆಲ್ಲಿಯೂ ಅನಿಶ್ಚಯ, ಅಸಮಾಧಾನ, ಒಳಗೇ ಉರಿಯುವ ಸೇಡು ಬುದ್ಧಿ, ಕ್ರೋಧ, ಆರ್ಥಿಕ ಅಸ್ಥಿಮಿತ. ಇಂಥವುಗಳ

ಪರಿಣಾಮವನ್ನು ಅಳೆಯುವುದು ಅಶಕ್ಯ. ಇವೆಲ್ಲ ಕ್ರಾಂತಿ ಕಾರಣಗಳು. ಈಗಿನ ಯುದ್ಧಗಳಲ್ಲಿ ಗೆದ್ದವರಿಗೂ ಸೋತವರಿಗೂ ಒಂದೇ ಫಲ.

* * *

## ಈಚಿನ ಲಕ್ಷಣಗಳು

ಈವರೆಗೆ ಹೇಳಿದುದೆಲ್ಲ ಇರುವ ಒಂದು ಸ್ಥಿತಿಯನ್ನು ಅನುಸರಿಸಿ ಹೇಳಿದುದು. ಹಿಂದೆ, ಒಂದು ಕಡೆ ಇತರ ಸಂದರ್ಭಗಳೂ ಆಗು ಹೋಗುಗಳೂ ಒತ್ತೆರನಾಗಿದ್ದರೆ, ಸಮವಾಗಿದ್ದರೆ ಈ ಈ ಬಗೆಯ ಪರಿಣಾಮ ಉಂಟಾಗುವುದು ಎಂಬ ನಿರ್ಬಂಧವನ್ನು ಅಧ್ಯಾಹಾರಮಾಡಿಕೊಂಡು ಈ ಪುಸ್ತಕವನ್ನು ಓದಬೇಕೆಂದು ಸೂಚನೆಕೊಟ್ಟಿತ್ತು.

ಖಾಸಗಿ ಆಸ್ತಿ, ಸಾಹಸ, ಬಂಡವಾಳ ಪದ್ಧತಿ; ಉದ್ಯೋಗದ ಮತ್ತು ವ್ಯವಹಾರದ ಸ್ವಾತಂತ್ರ್ಯ; ಒಪ್ಪಂದದ, ಆಸ್ತಿ ಹಂಚಿಕೆಯ, ಸ್ಪರ್ಧೋಟಿಯ ಮತ್ತು ಚಲನವಲನಗಳ ಸ್ವಚ್ಛಂದತೆ—ಮುಂತಾದುವು ಇರುವವರೆಗೂ ಈಗಿನ ಲಕ್ಷಣಗಳೇ ಸ್ಥೂಲವಾಗಿ ನಿಲ್ಲುವುವು. ಜೊತೆಗೆ ಅರ್ಥಸಾಧನೆಯ ಸಂಬಂಧದಲ್ಲಿ ಸರಕಾರದವರು ನೇರವಾಗಿ ಜನದ ಕೈತಡೆಯದೆ, ಒಂದು ಬಗೆಯ ಸ್ವಾತಂತ್ರ್ಯದ ಆವರಣವನ್ನೂ ಅವಕಾಶವನ್ನೂ ಕಲ್ಪಿಸಿಕೊಡುತ್ತಿದ್ದ ಸಂಗತಿ ಇವನ್ನು ಸ್ಥಾಪಿಸಿದ್ದಿತು. ಆದರೆ ಸ್ವಾತಂತ್ರ್ಯ ವಿಷಮಿಸಿತು. ಬಲಿಷ್ಠರಿಗೂ ಸಿರಿವಂತರಿಗೂ ಮಾತ್ರ ಅದರಿಂದ ಪ್ರಯೋಜನ ಎಂಬ ತಿಳಿವು ಈ ನಡುವೆ ಸ್ಪಷ್ಟವಾಗುತ್ತ ಬಂದು ಚಿಕಿತ್ಸೆಯ ಅಗತ್ಯ ಎಲ್ಲೆಲ್ಲಿಯೂ ತೋರಿಬರುತ್ತಿದೆ. ಆದ್ದರಿಂದ ಎಲ್ಲ ದೇಶಗಳಲ್ಲಿಯೂ ಒಂದು ರೀತಿಯಲ್ಲಲ್ಲದಿದ್ದರೆ ಮತ್ತೊಂದರಲ್ಲಿ ರಾಜಕೀಯ ರೀತಿನೀತಿಗಳ ಪ್ರಭಾವದಿಂದ ಕೇವಲ ಆರ್ಥಿಕ ಶಕ್ತಿ ಪ್ರಭಾವಗಳನ್ನು ಹದಕ್ಕೆ ತರುವ ಉದ್ಯಮ ನಡೆಯುವುದಕ್ಕೆ ಮೊದಲಾಗಿದೆ. ಆಡಳಿತದ ರಚನೆ, ಗುರಿ, ಜನದ ಒಲೆತ, ಸತ್ವ ಇವುಗಳನ್ನನುಸರಿಸಿ ಪ್ರತಿ ರಾಷ್ಟ್ರದಲ್ಲಿಯೂ ಉತ್ಪತ್ತಿ, ಮಾರುವೆ, ಹಂಚಿಕೆ, ರಾಜ್ಯದ ಆಯವ್ಯಯ ನೀತಿ, ಹಣ ಸಂಚಾರ, ಜನಸುಖದ ಸಾಧನೆ, ವ್ಯವಹಾರ ಧರ್ಮ ಇವು ವ್ಯತ್ಯಾಸವಾಗುತ್ತಿವೆ. ಮುಂದುವರಿದ ರಾಷ್ಟ್ರಗಳಲ್ಲೆಲ್ಲ ಸರಕಾರದ ಉದಾಸೀನ ಅಥವಾ ತಟಸ್ಥಭಾವದಿಂದ ಅನ್ಯಾಯ ಹೆಚ್ಚುತ್ತಿದೆ ಎಂಬ ಪರಿವೆಬಂದು ತೀವ್ರವಾಗಿ ಬುದ್ಧಿ

ಪರಿವರ್ತನ ಉಂಟಾಗುತ್ತಿದೆ. ತಾಟಸ್ಥ್ಯದಿಂದ ದುರ್ಬಲರಿಗೂ ಬಡವರಿಗೂ ಕಷ್ಟ, ರಾಷ್ಟ್ರದ ಮಂಗಳಕ್ಕೆ ಕುಂದು ಎಂದು ತಿಳಿದು ಸರಕಾರದವರು ಎಲ್ಲ ರಂಗಗಳಲ್ಲಿಯೂ ಕೈಹಾಕಿ ಸಂಪತ್ಪ್ರಪಂಚದಲ್ಲಿ ತಿದ್ದುಪಾಟುಗಳನ್ನು ಮಾಡುತ್ತಿದ್ದಾರೆ. ಇರುವುದನ್ನು ಇರುವಂತೆ ಬಿಡಲು ಸಾಧ್ಯವಿಲ್ಲದೆ ಬಂದುದರಿಂದ ಇದನ್ನು ಸುಧಾರಿಸಿ ಸಂಸ್ಕರಿಸೋಣ, ಸ್ವಲ್ಪ ಸ್ವಲ್ಪವಾಗಿ ವ್ಯತ್ಯಾಸಮಾಡಿ ಸಮಾಜವನ್ನು ಉದ್ಧರಿಸೋಣ ಎಂಬುದೊಂದು ಪಂಥ. ಇದು ಸಾಲದು; ಇಷ್ಟೇ ಕಾರ್ಯಕಾರಿಯಾಗುವುದಿಲ್ಲ; ಅಧಿಕಾರಿಗಳ, ಬಲಿಷ್ಠರ, ಶ್ರೀಮಂತರ ಪ್ರವೃತ್ತಿ ಈ ರೀತಿ ಬದಲಾಗದು; ಈ ತೇಪೆಯಿಂದ ಜನತೆಯ ಬದುಕು ಎಂದಿಗೂ ಹಸನಾಗದು; ವಿಪ್ಲವರೂಪವಾದ ಬದಲಾವಣೆಯೇ ಆಗಬೇಕು ಎಂಬುದು ಇನ್ನೊಂದು ಪಂಥ.—ಹೀಗೆ ಎರಡು ಪಂಗಡಗಳು ಏರ್ಪಡುತ್ತಿವೆ. ಈ ಎರಡನೆಯ ಪಂಥದಲ್ಲಿಯೂ ಎರಡು ಬಗೆ ಉಂಟು: ಶಾಂತರೀತಿಯಿಂದ ಕಾರ್ಯ ನಡೆಯತಕ್ಕದ್ದು ಎಂಬ ವಾದದವರೊಬ್ಬರು; ಸ್ಥಿತಿಯನ್ನು ಧ್ವಂಸಮಾಡಿಯೇ ಹೊಸ ವ್ಯವಸ್ಥೆಯನ್ನು ಏರ್ಪಡಿಸಬೇಕು ಎಂದು ವಾದಿಸುವವರು ಒಬ್ಬರು;—ಹೀಗೆ ತೊನೆಯುತ್ತಿದೆ ತಕ್ಕಡಿ.

ಮುಂದೆ ಯಾವ ಬಗೆಯ ರಾಜ್ಯಾಂಗ ರಚನೆ ಮತ್ತು ಸಮಾಜಕಾರ್ಯ ವ್ಯವಸ್ಥೆ ಬರುವುವೋ ಹೇಳುವುದು ಕಷ್ಟ. ಆದರೆ ಒಂದು ಸಂಗತಿ ಖಂಡಿತ: ಈಗ ಸುಮಾರು ೧೦೦ ವರ್ಷಗಳಿಂದ ನಡೆದುಬಂದಂತೆ ಮಾತ್ರ ಇನ್ನುಮೇಲೆ ಖಾಸಗಿ ಆಸ್ತಿಗಳ ರಕ್ಷಣೆಯಾಗಲಿ, ಸಾಹಸವಾಗಲಿ ನಡೆಯಲಾರದು. ಹೇಗೆ ಮಾತ್ರವೇ ಉತ್ಪತ್ತಿಮಾಡಬೇಕು? ಎಷ್ಟನ್ನು? ಎಲ್ಲಿ, ಹೇಗೆ ಮಾರಬೇಕು? ಯಾವ ಬೆಲೆ ಹಾಕಬೇಕು? ಸಂಪತ್ತಿನ ಹಂಚಿಕೆ ಹೇಗೆ ಆಗಬೇಕು? ಹೇಗೆ ಎಲ್ಲರಿಗೂ ಉದ್ಯೋಗ ಏರ್ಪಡಬೇಕು? ಲಾಭ ವಿಭಾಗವಾಗಬೇಕು? ಸಮಾಜದಲ್ಲಿ ಅಸಮಾನತೆ ತೊಲಗಿ ಎಲ್ಲರಿಗೂ ಕೀಳಿಣಿಕೆಯಲ್ಲಿ ಇಷ್ಟಕ್ಕೆ ಕಡಮೆಯಿಲ್ಲದ್ದೆಂಬ ಒಂದು ಅನ್ನ ವಸತಿ ಸೌಕರ್ಯ ಒದಗಬೇಕು? ಬೆಲೆಗಳು, ಕೂಲಿ ಸಂಬಳ, ಬಡ್ಡಿ, ಗುತ್ತಿಗೆ ಇವು ಯಾವ ಹೊಸ ನಿಯಮಕ್ಕೆ ಒಳಪಟ್ಟು ಏರ್ಪಡಬೇಕು? ಒಳ ಹೊರ ಆಸ್ತಿ ಋಣ ಯಾವ ಹದ್ದಿನಲ್ಲಿರಬೇಕು? ಎಂಬಂಶಗಳಲ್ಲಿ ಖಾಸಗಿ

ಬಂಡವಾಳ ಪದ್ಧತಿ ಉಳಿಯುವ ಕಡೆಗಳಲ್ಲಿ ಕೂಡ ತೀವ್ರವಾದ ಬದಲಾವಣೆ ಗಳಾಗಿಯೇ ತೀರುವುವು.

ಆ ಪದ್ಧತಿಗೆ ವಿರೋಧ ಬರಲು ಹಲವು ಕಾರಣಗಳು ಎದ್ದುವು: ಎಲ್ಲೋ ಕೆಲವರಿಗೆ ಅತಿಧನಿಕತೆ, ಲಾಭ, ಸುಖ, ಉತ್ಕರ್ಷೆ, ಭೋಗ ಮತ್ತು ಮೇಲ್ಮೆಯ ಅವಕಾಶ; ಹಲವರಿಗೆ — ಬಹುಶಃ ಉಳಿದವರಿಗೆಲ್ಲ — ನಿರ್ಬಲತೆ, ದಾಸ್ಯ, ಬಡತನ, ನಿರುದ್ಯೋಗ, ನಿರಾಶೆ, ಅನ್ಯಾಯ. ಸ್ವಂತ ಲಾಭಕ್ಕಾಗಿ ಇತರರ ಹಿತಕ್ಕೆ — ಕಡೆಗೆ ಸ್ವದೇಶದ ಕೇಡಿಗೆ ಕೂಡ — ಹಿಂತೆಗೆಯದ ದುಸ್ಸಾಹಸ; ಲಾಭವೊಂದರ ದೃಷ್ಟಿಯಿಂದ ಉತ್ಪತ್ತಿ ಕಡಮೆ ಮಾಡುವುದು, ಬೆಲೆ ಏರಿಸುವುದು; ಉತ್ಪತ್ತಿ ಮಾರಾಟಗಳ ಸರ್ವಸ್ವಾಮ್ಯ ಪಡೆದು ಮದಿಸುವುದು, ಜನ ಜನಾಂಗಗಳ ಸುಭಿಕ್ಷವನ್ನೇ ತಮ್ಮ ಜೂಜಿನ ಪಣವಾಗಿಸುವುದು; ಸ್ವೇಚ್ಛೆಯಾಗಿ ಲೋಕದಲ್ಲಿ ಸಾಹುಕಾರಿಕೆ ಸಾಲ ಗಾರಿಕೆ ಹರಡುವುದು; ಉದ್ಯೋಗ ಹೆಚ್ಚಿಸುವುದು ಕುಗ್ಗಿಸುವುದು; ಅನುಪಯುಕ್ತವಾದ ಭೋಗವಸ್ತುಗಳಿಗೆ ಗಮನ ಹೆಚ್ಚಿಸಿ ದಿನದಿನದ ಬದುಕಿಗೆ ಬರುವ ವಸ್ತುಗಳ ತಯಾರಿಕೆಯಲ್ಲಿಯೂ ಮಾರಾಟದಲ್ಲಿಯೂ ಅನಾಸಕ್ತಿ ತೋರುವುದು; ಉದ್ಯೋಗ ಕೈಗಾರಿಕೆಗಳಲ್ಲಿ ವಿಷಮತೆ ಉಂಟು ಮಾಡಿ ಅವನ್ನು ಅತಂತ್ರಕ್ಕೆ ಎಳೆಯುವುದು — ಹೀಗೆ ನೂರಾರು ರೀತಿ ಗಳಲ್ಲಿ ಅಸಾಮಾಜಿಕ ವೃತ್ತಿ ಬೆಳೆದುದೇ ಆ ಪದ್ಧತಿಗೆ ಮಾರಕವಾಯಿತು. ಅದೂ ಎಂತಹ ದುಃಸ್ಥಿತಿ? ಕೇವಲ ಸಿರಿವಂತರ ಮಕ್ಕಳಾಗಿ ಹುಟ್ಟಿದ ಕಾರಣದಿಂದಲೇ ಒಂದು ವರ್ಗದವರಿಗೆ ಎಲ್ಲ ಅವಕಾಶ, ಅನುಕೂಲ, ಸಮಾಜದಲ್ಲಿ ಪ್ರತಿಷ್ಠೆ, ಲೋಲುಪ್ತಿ; ಬಡವರಲ್ಲಿ ಹುಟ್ಟಿದ ಮಾತ್ರ ದಿಂದಲೇ ಎಲ್ಲ ಕೊರತೆ. ಅಲಸರಾದವರಿಗೆ, ದುರ್ವ್ಯಯಮಾಡಿ ಇತರರನ್ನು ಬೇಕಾದಹಾಗೆ ಮೆಟ್ಟುವ, ಆಳುವ ವೈಭವ; ದುಡಿಯುವವರಿಗೆ ಕೀಳ್ತನ, ಅನಾರೋಗ್ಯ, ಹಿಂಸೆ, ಹಸಿವು. ದೇಶವಿದೇಶ ವ್ಯಾಪಾರಗಳ ಮತ್ತು ಬಂಡವಾಳದ ಚಲನವಲನಗಳಲ್ಲಿ ಗೊತ್ತಿಗೆ ಸಿಕ್ಕದ ಅನಿಶ್ಚಯ, ಅಸ್ಥಿಮಿತ; ಕಳವಳ, ದುಂದು, ಪೋಲು. ಎಲ್ಲೆಲ್ಲಿಯೂ ಅಸಮತೆ. ಹೀಗಾದುದ ರಿಂದ ಎಲ್ಲ ಸರಕಾರಗಳವರೂ ತಮಗೆ ಧೈರ್ಯವಿರುವಮಟ್ಟಿಗೆ, ತಮ್ಮ ಸಮಾಜದಲ್ಲಿ ಸಾಧ್ಯವಾಗುವ ಮಟ್ಟಿಗೆ ಆರ್ಥಿಕ ಸಾಮರಸ್ಯ ತರಬೇಕೆಂದೂ

ಒಂದು ಕ್ರಮದಲ್ಲಿ ಜನದ ಬದುಕನ್ನು ತಿದ್ದಿ ನಡಸಬೇಕೆಂದೂ ಬಯಸು ತ್ತಿದ್ದಾರೆ.

ಆಯಾ ದೇಶದ ಚರಿತ್ರೆ, ಜನಗುಣ, ಸಂಪ್ರದಾಯ, ರಾಜಕೀಯ ಶಿಕ್ಷಣ, ಗುರಿ, ಜನಕ್ಕಿರುವ ಸ್ವಾತಂತ್ರ್ಯ, ಶಕ್ತಿ, ಧರ್ಮಬುದ್ಧಿ ಇವುಗಳ ನ್ನನುಸರಿಸಿ ಬೇಕೆನ್ನಲಿ ಬೇಡವೆನ್ನಲಿ ಖಾಸಗಿ ಬಂಡವಾಳ ಪದ್ಧತಿಯಲ್ಲಿ ಮತ್ತು ವ್ಯಕ್ತಿ ಸ್ವಾತಂತ್ರ್ಯ ಪದ್ಧತಿಯಲ್ಲಿ ಮಾರ್ಪಾಡುಗಳಾಗುತ್ತಿವೆ. ಶಾಂತರೀತಿಯಲ್ಲಿ ಸಾಧ್ಯವಾಗದಿದ್ದರೆ ಬಲಾತ್ಕಾರದಿಂದ,—ರಕ್ತಪಾತವಾಗ ಬೇಕಾದರೂ ಸರಿಯೆ,—ರಾಜಕೀಯ ಯಂತ್ರವನ್ನು ಕೈವಶಮಾಡಿಕೊಳ್ಳ ತಕ್ಕದ್ದೆಂಬ ಮನಸ್ಸು ಬೆಳೆಯುತ್ತಿದೆ. ಯಾವ ಪಕ್ಷ ಅಥವಾ ಉದ್ದೇಶದವರು ಈ ಬಲವನ್ನು ಸಂಪಾದಿಸಿ ಜನದ ಬದುಕಿನಲ್ಲಿಯೂ ಆರ್ಥಿಕ ವ್ಯವಸ್ಥೆ ಯಲ್ಲಿಯೂ ಹೊಸ ಪಾಕವನ್ನು ತರುತ್ತಾರೆಂಬುದೂ ಹೇಗೆ ತರುತ್ತಾ ರೆಂಬುದೂ ಆಯಾ ದೇಶದ ಜನನಾಯಕರಿಗೂ ಸ್ಥಿತಿಗತಿಗಳಿಗೂ ಹೊಂದು ವುವು. ಇಂಗ್ಲಿಷ್ ಪದ್ಧತಿ ಅವರ ಚರಿತ್ರೆಯಂತೆಯೇ ಕ್ರಮಕ್ರಮವಾಗಿ ಮಾರ್ಪಡುತ್ತ ಬೆಳೆದೀತೆಂಬ ನಿರೀಕ್ಷೆಯಿದೆ. ಖಾಸಗಿ ಬಂಡವಾಳ ಮತ್ತು ಆಸ್ತಿ ರಕ್ಷಣೆಯ ಚೌಕಟ್ಟನ್ನು ಪೂರ್ತಿ ಒಡೆಯದೆ ಒಳರಚನೆಯ ನಿರ್ಬಂಧ ಗಳಿಂದ ಸಮತಾನ ಏರ್ಪಡುವಂತೆ ಅಮೇರಿಕಾದೇಶದಲ್ಲಿ ಕಾರ್ಯ ನಡೆಯು ತ್ತಿದೆ. ಅತಿ ಶ್ರೀಮಂತರು ಸ್ವೇಚ್ಛೆಯಾಗಿ ವರ್ತಿಸುತ್ತ ತಮ್ಮ ಹಣಶಕ್ತಿ ಕೈವಾಡಗಳಿಂದ ದೇಶದ ಸಂಪತ್ತಿನ ಹದ ಕೆಡದಂತೆ ನಡಸುವುದಕ್ಕಾಗಿ ಸರಕಾರ ಪ್ರಬಲಿಸುತ್ತಿದೆ. ಜರ್ಮನಿಯಲ್ಲಿ ನಾಸಿ ಪದ್ಧತಿ, ಇಟಲಿಯಲ್ಲಿ ಫಾಸಿಸಂ ಮುಂತಾದುವು ಮಧ್ಯಮ ತರಗತಿಯವರ, ವ್ಯವಸಾಯಗಾರರ, ಪಟ್ಟಣದ ಕುಶಲ ಕರ್ಮಿಗಳ, ಸಾಧಾರಣ ವ್ಯಾಪಾರಿಗಳ, ಶ್ರೇಯಸ್ಸನ್ನು ಮುಂದಿಟ್ಟುಕೊಂಡು ಎಲ್ಲ ಕಾರ್ಯರೀತಿಯೂ ಸರಕಾರದ ಯೋಜನೆಗೂ ಶಾಸನಕ್ಕೂ ಪರಮೋನ್ನತಿಗೂ ತಗ್ಗಿ ನಡೆಯಬೇಕೆಂಬ ಅಧಿಕಾರದಿಂದ ಸಂಪದ್ಯಂತ್ರವನ್ನು ತಿರುಗಿಸುತ್ತಿವೆ. ಇವರೂ ತುರ್ಕಿ ಆಸ್ಟ್ರಿಯಾ ದೇಶ ದಲ್ಲಿನ ಅಧಿಕಾರಿಗಳೂ ಒಂದು ದುಃಸ್ಥಿತಿಯಿಂದ ತಮ್ಮ ದೇಶಗಳನ್ನು ಮೇಲೆತ್ತಬೇಕಾದ ಅಗತ್ಯ ಬಂದುದರಿಂದ ತಕ್ಷಣಕ್ಕೆ ವ್ಯಕ್ತಿ ಸ್ವಾತಂತ್ರ್ಯವನ್ನು ಆಹುತಿಕೊಟ್ಟು ಜನನಾಯಕರಿಗೆ ಸರ್ವಾಧಿಕಾರ ದಾನಮಾಡಿ, ಒಳತಿರು

ಳನ್ನು ಬಲಿಸಿಕೊಂಡು ತಾವೊಂದು ಗಟ್ಟಿಯಾದ ಸ್ವಾಧೀನ ಜನಾಂಗವಾಗಿ ನಿಂತರೆ ಸಾಕೆಂದು ಈ ಬಗೆಯ ಸ್ಥಿತಿಗೆ ಒಪ್ಪಿಕೊಂಡಿರುವಂತೆ ಕಾಣುತ್ತದೆ. ಹೊರಗಿನ ಪ್ರಭಾವಗಳಿಂದ ತನ್ನ ಒಡಲು ಕೆಡದಂತೆ ಆ ರೀತಿ ಆತ್ಮರಕ್ಷಣೆ ಮಾಡಿಕೊಳ್ಳುತ್ತ ಇವರು ಇದ್ದಾರೆ. ರಷ್ಯಾ ದೇಶದಲ್ಲಿ ಕಾಮ್ಯುನಿಸಂ ಎಂಬ ತತ್ತ್ವದ ಮೊನೆಯಲ್ಲಿ ಸಂಪೂರ್ಣ ವಿಪ್ಲವವುಂಟಾಗಿ ಹಿಂದಿನ ರೀತಿಯ ಬದುಕೆಲ್ಲ ವ್ಯತ್ಯಾಸವಾಗಿದೆ. ಖಾಸಗಿ ಬಂಡವಾಳದ ಪ್ರಭಾವ ಅಳಿಸಿ ಹೋಗಿ; ಎಲ್ಲ ಉತ್ಪತ್ತಿಕರಣಗಳೂ ಒಟ್ಟು ಸಮಾಜಕ್ಕೆ ಸೇರಿದುವು ಎಂಬ ಶಾಸನವಾಗಿ; ಹಣ, ಲಾಭ, ಬಿಟ್ಟಿಯ ಗಳಿಕೆ, ವ್ಯಕ್ತಿಯ ಏಳಿಗೆ ಇವಕ್ಕಿಂತ ಸಮಾಜ ಸೇವೆ, ಸಕಲಜನ ಕಲ್ಯಾಣ, ಸಂಸ್ಕೃತಿ ಇವುಗಳ ಸಾಧನೆಗಾಗಿ ಎಲ್ಲರೂ ಕಾಯಕಮಾಡಬೇಕು, ಉದ್ಯೋಗಿಗಳಾಗಬೇಕು ಎಂಬ ನಿರ್ಧಾರ ಏರ್ಪಟ್ಟು; ಎಲ್ಲರ ಎಲ್ಲ ಬಗೆಯ ಏಳಿಗೆಗೂ ಎಲ್ಲರೂ ಹೊರತಿಲ್ಲದೆ ದುಡಿಯ ದಿದ್ದರೆ ಸಮಾಜದಲ್ಲಿ ಯಾರಿಗೇ ಆಗಲಿ ಸ್ಥಾನಮಾನ ಆಹಾರಗಳಿಲ್ಲ ಎಂಬ ವಿಧಿಯಾಗಿ; ದೇಶದ ಬಡತನ, ಕೊಳಕು, ಅಜ್ಞಾನ, ಅಸಮತೆಗಳನ್ನು ನಾಶ ಮಾಡಿ ಎಲ್ಲರ ವಿದ್ಯೆ, ಆರೋಗ್ಯ, ಅನ್ನ ಬಟ್ಟೆ, ವಸತಿ ಸೌಕರ್ಯ, ಆತ್ಮೋನ್ನತಿಗಳಿಗೂ ಸರಕಾರವೇ ಹೊಣೆಯೆಂಬ ಭಾರ ಹೊತ್ತು; ಈ ಮುಂದಿನ ಐದು ವರ್ಷದಲ್ಲಿ, ಆ ಮುಂದಿನ ಹತ್ತು ವರ್ಷದಲ್ಲಿ ಉತ್ಪತ್ತಿ ಹೀಗೆಯೇ ನಡೆಯಬೇಕು, ಜನಾರೋಗ್ಯ ಹಿತಕಾರ್ಯಗಳು ಹೀಗೆಯೇ ಬಲಿಯ ಬೇಕು, ಕಲೆ ಶಾಸ್ತ್ರ ಉದ್ಯೋಗ ನ್ಯಾಯವ್ಯವಹಾರ ಹೀಗೆಯೇ ಪೋಷಿತ ವಾಗಬೇಕು ಎಂದು ಕಾರ್ಯಕ್ರಮ ಏರ್ಪಟ್ಟು ಒಂದು ಹೊಸ ನಾಗರಿಕತೆ ಯನ್ನೇ, ಬದುಕಿನ ಒಂದು ಹೊಸ ರೀತಿಯನ್ನೇ (Technique) ನಿರ್ಮಾಣ ಮಾಡಬೇಕೆಂದು ಈ ಸುಮಾರು ೧೫ ವರ್ಷಗಳಿಂದ ಪ್ರಯತ್ನ ನಡೆಯುತ್ತಿದೆ.

ಇವುಗಳೆಲ್ಲದರಲ್ಲೂ ಹಣದ ಸಂಚಾರವಿದೆ; ಬೆಲೆಗಳನ್ನು ಅಳೆಯು ವುದಕ್ಕೆ ಅದೇ ಇನ್ನೂ ಸಾಧನ. ಆದರೆ ಸಾಧನ ಮಾತ್ರವೇ ಹೊರತು ಪುರುಷಾರ್ಥವಾಗಕೂಡದು — ಎಂಬುದು ಜನಮನವನ್ನು ಹೊಸ ರೀತಿಗೆ ತಿದ್ದುತ್ತಿದೆ. ಹಣ ಚಾಲನೆಯ ವಕ್ರತೆಗಳಿಂದ ಜನದ ವಸ್ತು-ಕ್ಷೇಮ ಕೆಡದಂತೆ ಮಾಡುವ ಬುದ್ಧಿ ಎದ್ದು ಕಾಣುತ್ತಿದೆ. ವ್ಯಕ್ತಿಗೆ, ಉದ್ಯೋಗ ಕೈಗಾರಿಕೆಗಳಿಗೆ, ಕಿರುವಾಯಿದೆ ವ್ಯಾಪಾರ ಪೇಟೆಗೆ, ವಿದೇಶಿ ವ್ಯಾಪಾರಕ್ಕೆ,

ಸರಕಾರಕ್ಕೆ, ಸಂಸ್ಥೆಗಳಿಗೆ ಯಾವ ರೀತಿ ಯಾವ ಮಟ್ಟಿಗೆ ಹಣವೊದಗಬೇಕೆಂಬ ನಿಷ್ಕೃಷ್ಟ ನಿರ್ಣಯವನ್ನು ಅಧಿಕಾರಿಗಳು ಮಾಡಲಾರಂಭಿಸಿದ್ದಾರೆ. ಈ ಕಾರ್ಯ ನಡೆಯುವಾಗ ಆರ್ಥಿಕ ವ್ಯವಹಾರದ ಅಚ್ಚು ಬದಲಾಗಿ, ಕಟ್ಟು ಬೇರೆಯಾಗಿ ಬದುಕಿನ ರೀತಿಯೇ ವ್ಯತ್ಯಾಸವಾಗುವುದು. ವರಮಾನ, ವೆಚ್ಚ, ಕೂಲಿ ಸಂಬಳ, ಜನದ ಸರ್ವತೋಮುಖವಾದ ಏಳಿಗೆ, ಬದುಕಿನ ಆವರಣ, ಶ್ರದ್ಧೆ, ಗುರಿ, ಸಾಧನಾ ರೀತಿ ಎಲ್ಲ ಮಾರ್ಪಡುವುವು. ಯಾವ ಯಾವ ದೇಶದಲ್ಲಿ ಹೇಗೆ, ಎಷ್ಟು ಜಾಗ್ರತೆ ತೀವ್ರತೆಗಳಲ್ಲಿ, ದಕ್ಷತೆಯಲ್ಲಿ, ಶಿಕ್ಷೆಯಲ್ಲಿ, ಶಾಂತಿಯಲ್ಲಿ, ಕ್ರಮದಲ್ಲಿ, ತಕ್ಷಣದ ಹಿಂಸೆಯಲ್ಲಿ, ಅನ್ಯಾಯದಲ್ಲಿ ಆಗುವುವು ಎಂಬುದು ಆಯಾ ದೇಶದ ಅದೃಷ್ಟದಂತೆ ನಡೆಯಲಿರುವುದು. ಖಾಸಗಿ ಬಂಡವಾಳ ಮತ್ತು ಆಸ್ತಿಪದ್ಧತಿಯೇ ಸುಧಾರಿತವಾಗಿ ಸಮಾಜ ಹಿತಸಾಧನೆಗೆ ಒದಗಿ ನಿಂತು ವ್ಯಕ್ತಿ ಸ್ವಾತಂತ್ರ್ಯ ಉಳಿಯುವುದೊ ಸಮಾಜ ಸಮತಾತತ್ವ ವಿಜೃಂಭಿಸಿ ಯಾವುದಾದರೊಂದು ಹೊಸ ಸಾಮರಸ್ಯವೇ ಏರ್ಪಡುವುದೊ ಎಂಬುದು ನಾಳೆಯ ತಂತ್ರ.

# ಪ್ರಕರಣ ೧೨

## ಇಂಡಿಯಾ ದೇಶದಲ್ಲಿ ಹಣ ಮತ್ತು ಹಣದ ಪೇಟೆ

ಇಂಡಿಯಾ ದೇಶದಲ್ಲಿ ಹಣವ್ಯವಸ್ಥೆ ಹೇಗಿದೆ? ಇಲ್ಲಿನ ಧನಮಂಡಲದ ಬಲಾಬಲಗಳೇನು? ಕೆಲಸ ಮಾಡುವ ಸಂಸ್ಥೆಗಳಲ್ಲಿ ಯಾವ ಹೊಂದಿಕೆ ಅಥವಾ ವೈಷಮ್ಯ ಇದೆ? ಇದರಿಂದ ವ್ಯಾಪಾರ ಉದ್ಯೋಗ ಕೈಗಾರಿಕೆಗಳ ಮೇಲೆ ಯಾವ ಪರಿಣಾಮಗಳುಂಟಾಗುತ್ತಿವೆ? ಎಂಬುದು ಈ ಪ್ರಕರಣದ ವಿಷಯ.

**ಕೆಲವು ಸಾಮಾನ್ಯ ಲಕ್ಷಣಗಳು.**—ಇಲ್ಲಿನ ಸರಕಾರ ಬ್ರಿಟಿಷ್ ಜನಾಂಗಕ್ಕೆ ಅಧೀನವಾಗಿದೆ; ಅದರ ಅಂಗವಾಗಿದೆ. ಇಲ್ಲಿನ ಪ್ರಾಂತಗಳೂ ಸಂಸ್ಥಾನಗಳೂ ಕೇಂದ್ರ ಸರಕಾರದ ಆಡಳಿತಕ್ಕೆ ಎಲ್ಲ ವಿಧದಲ್ಲಿಯೂ ಒಳಪಟ್ಟಿವೆ. ರಾಜಕೀಯ ವಿಚಾರದಲ್ಲಿ ಹೇಗೆಯೋ ಆರ್ಥಿಕ ವಿಚಾರ ಗಳಲ್ಲಿಯೂ ಹಾಗೆಯೇ ಪ್ರಭುತ್ವ ಇಂಗ್ಲೆಂಡಿನ ಕೈಯಲ್ಲಿ ಕಾರ್ಯಮಾಡಿಸುವುದು. ಇಲ್ಲಿನ ಅರ್ಥಮಂಡಲ ಒಂದಲ್ಲ ಇನ್ನೊಂದು ರೀತಿಯಲ್ಲಿ ಬ್ರಿಟಿಷ್ ಪ್ರಭಾವಕ್ಕೆ ಶರಣಾಗಿ ನಡೆಯುವುದು.

ಈಗ ಸುಮಾರು ೧೦೦–೧೫೦ ವರ್ಷಗಳಿಂದ ಇಲ್ಲಿನ ಜನಜೀವನದ ಎಲ್ಲ ಕಾರ್ಯಗಳೂ ಹಣದ ಸೂತ್ರಕ್ಕೆ ಕಟ್ಟುಬಿದ್ದು ಅದರ ಸ್ಥಿತಿಗತಿಗಳನ್ನು ಅನುಸರಿಸುವಂತಾಗಿದೆ. ಹಿಂದೆ ಪ್ರಬಲವಾಗಿರುತ್ತಿದ್ದ ಸಮಾಜದ ಕಟ್ಟು, ರೂಢಿ, ಸಂಪ್ರದಾಯ ಸಡಿಲವಾಗಿವೆ. ಗ್ರಾಮಜೀವನ ಪದ್ಧತಿ, ಜಾತಿ ಮರ್ಯಾದೆ, ಸಾಮಾಜಿಕ ವ್ಯವಹಾರ, ಬದುಕಿನ ಆಸೆ ಆಶಯ ಎಲ್ಲವೂ ಕ್ರಮವಾಗಿ ಸ್ವಲ್ಪ ಸ್ವಲ್ಪವಾಗಿ ಮಾರ್ಪಟ್ಟಿವೆ. ಮಾಮೂಲಿನಂತೆ ನಡೆಯು ತ್ತಿದ್ದುದು ಒಪ್ಪಂದಗಳ ಮೇಲೆ ನಡೆಯುತ್ತಿದೆ. ವಾಡಿಕೆಯಾಗಿ ಇಷ್ಟು ಕೊಟ್ಟರೆ ಕೆಲಸ ನಡೆಯುತ್ತದೆ ಎಂಬ ನಂಬಿಕೆಯಿರುತ್ತಿದ್ದ ಕಡೆ ಸ್ಪರ್ಧೆ ಏರ್ಪಟ್ಟು ಬೆಲೆಗಳು ಗೊತ್ತಾಗುತ್ತಿವೆ. ಹಿಂದೆ ಇಲ್ಲದಿರುತ್ತಿದ್ದ ಸ್ವಾತಂತ್ರ್ಯವೂ ಚಲನವಲನಗಳೂ ಹಣದ ಲೆಕ್ಕದ ದೃಷ್ಟಿಯೂ ಜನಜೀವನದಲ್ಲಿ ಉಂಟಾಗಿ ಎಲ್ಲ ವ್ಯವಹಾರವೂ ಹಣದ ಲೆಕ್ಕಕ್ಕೂ ಪೇಟೆಯ ವ್ಯಾಪಾರಕ್ಕೂ

ತಿರುಗುತ್ತಿದೆ. ಪದಾರ್ಥಗಳ ಬೆಲೆ ಹೇಗೊ ಹಾಗೆಯೇ ಕೂಲಿ ಸಂಬಳಗಳೂ ಬಡ್ಡಿಯ ದರಗಳೂ ಅವುಗಳ ಸರಬರಾಯಿ (Supply) ಮತ್ತು ಅವುಗಳಿಗಿರುವ ಗಿರಾಕಿಯ (Demand) ಪ್ರಮಾಣಕ್ಕೆ ತಕ್ಕಂತೆ ಏರ್ಪಡುತ್ತಿವೆ. ಕಾರ್ಯ ಕ್ಷೇತ್ರಗಳಲ್ಲಿ ವಿದೇಶಿಯರ ಸಂಪರ್ಕವೂ ಶಕ್ತಿ ಪ್ರಭಾವಗಳೂ ಬಲಿತು ದಿನ ದಿನದ ಬದುಕಿನಲ್ಲಿ ನಮ್ಮ ದೇಶ ವಿಶಾಲ ಪ್ರಪಂಚದ ಮೇಲುಬೀಳುಗಳನ್ನು ಅನುಸರಿಸುತ್ತ, ಹಿಂದೆ ಅನುಭವಿಸುತ್ತಿದ್ದ ಏಕಾಂತವನ್ನೂ ಸ್ವಸಂಪೂರ್ಣತೆ ಯನ್ನೂ ಕಳೆದುಕೊಂಡಿದೆ. ಎಂದರೆ, ಇಲ್ಲಿನ ಪರಿಸ್ಥಿತಿಯನ್ನು ಹೊರಗಿನದೂ ಹೊರಗಿನದನ್ನು ಇಲ್ಲಿನದೂ ಮಾರ್ಪಡಿಸುತ್ತಿರುವುವು. ನಮಗೆ ಬೇಕಾಗಲಿ ಬೇಡವಾಗಲಿ ಅಂತರ್‌ರಾಷ್ಟ್ರೀಯ ಆರ್ಥಿಕ ಪ್ರಭಾವಗಳೂ ಸಂಸ್ಕೃತಿ ಪ್ರಭಾವಗಳೂ ಇತರ ಬಗೆಯ ಪ್ರಭಾವಗಳಂತೆಯೇ ನುಗ್ಗಿ ಒತ್ತಿಕೊಂಡು ಒಳಕ್ಕೆ ಬರುತ್ತಿವೆ. ನಮ್ಮ ರೇವು ಬಂದರುಗಳನ್ನೂ ಗಡಿನಾಡಿನ ರಸ್ತೆ ಗಳನ್ನೂ ವಿದೇಶಿ ವ್ಯಾಪಾರಕ್ಕೆ ಸಂಪೂರ್ಣವಾಗಿ ಮುಚ್ಚಿದ ಹೊರತು ಇಲ್ಲಿನ ಸ್ವಾಸ್ಥ್ಯ ಉಳಿಯುವಂತಿಲ್ಲ. ಹಾಗೆ ಮುಚ್ಚುವುದು ಸಾಧ್ಯವಿಲ್ಲ. ಪ್ರಯೋಜನಕರವೂ ಅಲ್ಲವೆಂಬುದು ಹಲವರ ಮತ. ಹಾಗಿರುವುದರಿಂದ ಆಮದು ರಫ್ತುಗಳ ವ್ಯಾಪಾರವೂ ಅದರ ಅನುಕೂಲ ಪ್ರತಿಕೂಲಗಳೂ ಇಲ್ಲಿನ ಉದ್ಯೋಗ ಕೈಗಾರಿಕೆ ಹಣಸ್ಥಿತಿಗಳನ್ನು ಖಂಡಿತವಾಗಿ ವ್ಯತ್ಯಾಸ ಗೊಳಿಸುವುವು. ವಿದೇಶಿಯರ ಪೈಪೋಟಿ ಇಲ್ಲಿನ ರೀತಿ ನೀತಿಗಳನ್ನು ರೂಪಾಂತರಗೊಳಿಸಿಯೇ ತೀರುವುವು. ಇವಕ್ಕೆಲ್ಲ ಮುಖ್ಯ ಕಾರಣ ಬ್ರಿಟಿಷರ ಸಂಪರ್ಕ, ಅವರು ಚಲಾವಣೆಗೆ ತಂದಿರುವ ಹಣದ ಪ್ರಭಾವ; ಈಗಿನ ಉತ್ಪತ್ತಿ ವ್ಯಾಪಾರಗಳ ರಚನೆ ಮತ್ತು ವ್ಯವಸ್ಥೆ. ಯಾವೊಂದು ದೇಶ ಎಷ್ಟೇ ಉದಾಸೀನವಾಗಿರಲಿ ಕಡೆಯ ಎರಡು ಕಾರಣಗಳು ಅದನ್ನು ತಮ್ಮ ಸುಳಿಯಲ್ಲಿ ಸುತ್ತಿಕೊಳ್ಳುವುವು. ಈಗಿನ ಪ್ರಪಂಚದಲ್ಲಿ ಅಭಿವೃದ್ಧಿ ಉಂಟಾಗಬೇಕಾದರೆ ಹಿಂದಿದ್ದುದಕ್ಕಿಂತ ಈಗ ಸ್ವಲ್ಪ ಮೇಲನ್ನು ಸಂಪಾದಿಸಿ ದರೆ ಸಾಲದು. ಇದು ಪೈಪೋಟಿಯ, ಹುರುಡಿನ ಜೀವನ. ಇತರರಿಗೆ ಮೇಲಾಗಲ್ಲದಿದ್ದರೆ ಅವರ ಸಮಕ್ಕಾದರೂ ನಾವು ಅಭಿವೃದ್ಧಿಯನ್ನು ಸಾಧಿಸಬೇಕಾಗುವುದು. ಅವರ ಬಲಕ್ಕೆ ತಕ್ಕ, — ಬೇಕಾದಾಗ ಅದನ್ನು ತಡೆಯುವ, — ಅವರ ಪ್ರಭಾವ ಮೆಟ್ಟುವ, ತಿದ್ದುವ — ಬಲವನ್ನು

ಸಂಪಾದಿಸಿಕೊಂಡ ಹೊರತು ನಮಗೆ ಉಳಿಗಾಲವಿಲ್ಲವಾಗುವುದು. ಈ ಎಲ್ಲ ಕಾರ್ಯಮಂಡಲಕ್ಕೂ ಹಿಡಿಯುವಂತೆ ರಾಟೆಯಂತೆ ಹಣವಿರುವುದರಿಂದ ಇಲ್ಲಿನ ಹಣಪದ್ಧತಿ ಹೇಗಿದೆ? ಅದರ ವ್ಯವಸ್ಥೆ ಹೇಗಾಗುತ್ತಿದೆ ಎಂಬುದನ್ನು ವಿವರಿಸುವ ಪ್ರಯತ್ನ ಮಾಡಿದೆ.

**ಈವರೆಗಿನ ಹಣಪದ್ಧತಿ.**—ಇಂಡಿಯಾ ದೇಶದ ಹಣಪದ್ಧತಿ ಈ ವರೆಗೂ ವಿಚಿತ್ರವಾಗಿತ್ತು: ಹಣದ ಪೇಟೆಯು ಒಟ್ಟಿನ ಬೇರೆ ಬೇರೆ ಅಧಿಕಾರ ಮಂಡಲಿಯವರ ಕೈಯಲ್ಲಿತ್ತು. ಸರಕಾರದವರು ತಮ್ಮ ಹಣದ ಇಲಾಖೆಯ ಮೂಲಕ ನಾಣ್ಯ ನೋಟನ್ನು ನಿರ್ಮಾಣ ಮಾಡುತ್ತ ಆ ಕೆಲಸಕ್ಕೆ ಸಂಬಂಧ ಪಟ್ಟ ಎಲ್ಲ ವ್ಯವಹಾರಗಳನ್ನೂ ನಡಸುತ್ತಿದ್ದರು; ಅದರ ಲಕ್ಷ್ಯವನ್ನೂ ಗತಿಯನ್ನೂ ತಿದ್ದುತ್ತಿದ್ದರು. ಇಂಗ್ಲೆಂಡಿನಲ್ಲಿರುವ ಇಂಡಿಯಾ ಸಚಿವರ — (ಅವರ ಮೂಲಕ ಬ್ರಿಟಿಷ್ ಪಾರ್ಲಮೆಂಟಿನ ಮತ್ತು ಇಂಗ್ಲಿಷ್ ಹಣದ ಪೇಟೆಯ) — ಕೈವಾಡ ಇವರ ಕಾರ್ಯಕಲಾಪಗಳ ಮೇಲೆ ಅಧಿಕಾರ ಮಾಡುತ್ತಿತ್ತು. ಇಲ್ಲಿನ ಹಣದ ಪೇಟೆಯಲ್ಲಿ ಹೆಗ್ಗಡೆಯಾಗಿ ಸ್ವಲ್ಪ ಮಟ್ಟಿಗೆ ವ್ಯಾಪಾರ ಬ್ಯಾಂಕುಗಳ ನಿಧಿಗಳನ್ನು ಕೈಯಲ್ಲಿಟ್ಟುಕೊಂಡು, ಸರಕಾರದವರ (ಸುಮಾರು ೧೫ ಕೋಟಿ ರೂಪಾಯಿಷ್ಟು) ಡಿಪಾಸಿಟ್ಟುಗಳ ಬಲದಿಂದ ಪೇಟೆಯಲ್ಲಿ ವ್ಯಾಪಕವಾಗಿದ್ದುದು ಇಂಪೀರಿಯಲ್ ಬ್ಯಾಂಕು. ಹೀಗೆ, ದೇಶದ ಹಣದ ನಿಧಿ ಸರಕಾರದವರ ಕೈಯಲ್ಲಿ; — ಅದರ ಒಂದು ದೊಡ್ಡ ಭಾಗ ಇಂಗ್ಲೆಂಡಿನಲ್ಲಿ; ಬ್ಯಾಂಕ್ ಹಣದ ನಿಧಿ ಇಲ್ಲಿ ಇಂಪೀರಿಯಲ್ ಬ್ಯಾಂಕಿನ ಕೈಯಲ್ಲಿ ಇರುತ್ತಿತ್ತು. ಹೊರವ್ಯಾಪಾರದ ಹತ್ತರಲ್ಲಿ ಒಂಬತ್ತು ಭಾಗ ವಿದೇಶಿ ಮಾರುಪೆ-ಬ್ಯಾಂಕುಗಳವರ ಕೈಯಲ್ಲಿ; ಮಾರುಪೆ ಪೇಟೆಯಲ್ಲಿ ಸರಕಾರದ ಕೈವಾಡವೇ ಕೈವಾಡ; ಅದರ ಜೊತೆಗೆ ಮಾರುಪೆ-ಬ್ಯಾಂಕು ಗಳವರದು. ಹೀಗೆ ಹಣದ ಒಳಬೆಲೆಗಳನ್ನಾಗಲಿ ಹೊರಬೆಲೆಗಳನ್ನಾಗಲಿ ಆಳಿ ಒಂದು ಕ್ರಮದಲ್ಲಿ ನಡಸುವ ಏರ್ಪಾಡಿರಲಿಲ್ಲ. ಈ ಪೇಟೆಯ ಸಂಬಂಧ ವಿಲ್ಲದೆ ಒಳದೇಶದಲ್ಲಿ ಅನೇಕ ಬಗೆಯ ಲೇವಾದೇವಿ ಸಂಸ್ಥೆಗಳು ತಮತಮಗೆ ಅನುಕೂಲ ತೋರಿದಂತೆ ನಡೆಯುತ್ತ ಈ ಕಿರುವಾಯಿದೆ ಹಣದ ಪೇಟೆ ಯಿಂದ ಬೇರೆಯಾಗಿ ತಮ್ಮ ಕಾರ್ಯಮಂಡಲವನ್ನು ಹೂಡಿರುತ್ತಿದ್ದುವು. ಹಣದ ಪೇಟೆಯಲ್ಲಿ ಒಂದು ಭಾಗಕ್ಕೂ ಇನ್ನೊಂದಕ್ಕೂ ಹೊಂದಿಕೆ

ಯಾಗಲಿ ಸಮರಸವಾಗಲಿ ಇಲ್ಲದೆ, ರೀತಿ ನೀತಿ, ಬಡ್ಡಿಯ ದರ ಅವ್ಯವಸ್ಥಿತ ವಾಗುತ್ತಿದ್ದವು.

ಇಲ್ಲಿನ ಹಣಪದ್ಧತಿಗೆ ಮಾರುವೆ ಪದ್ಧತಿ ಎಂದು ಹೆಸರು: ಒಳ ಸಂಚಾರದ ಹಣವೊಂದು; ಹೊರವ್ಯಾಪಾರಕ್ಕಾಗಿ ಏರ್ಪಟ್ಟಿರುವುದು ಬೇರೊಂದು. ಎರಡಕ್ಕೂ ಗೊತ್ತಾದ ಬೆಲೆಯ ಸಂಬಂಧವನ್ನೇನೊ ಆಗಾಗ್ಗೆ ಸರಕಾರದವರು ಏರ್ಪಡಿಸುವರು. ಆ ಎಣಿಕೆಯಂತೆಯೇ ವಿದೇಶಿ ತೆರಾಣೆ ಮಾಡುವುದು; ಸರಕಾರ ತೆರಿಗೆಗಳನ್ನು ಸಲ್ಲಿಸಿಕೊಳ್ಳುವುದು. ಈ ಶತಮಾನದ ೩೬ ವರ್ಷಗಳಲ್ಲಿ ನಮ್ಮ ವಿದೇಶಿ ವ್ಯಾಪಾರದ ಹಣ ಕೆಲವು ಸಲ ಚಿನ್ನದ ನವರನ್ನು, ಕೆಲವು ಸಲ ಗೊತ್ತಾದ ಒಂದು ತೂಕದ ಚಿನ್ನದ ಗಟ್ಟಿ, ಇನ್ನು ಕೆಲವು ಸಲ ಇಂಗ್ಲಿಷ್ ಪೌಂಡು — ಈ ರೀತಿ ಏರ್ಪಟ್ಟಿದೆ.

ದೇಶದ ಒಳವ್ಯಾಪಾರಕ್ಕೆ ಬೆಳ್ಳಿಯ ರೂಪಾಯಿ ಪ್ರಧಾನ ನಾಣ್ಯ; ಹೊರವ್ಯಾಪಾರಕ್ಕೆ ಅದು ಸುತರಾಂ ಸಲ್ಲದು. ಎಲ್ಲಿಯವರೆಗೂ ಔನ್ಸಿಗೆ (೨⅘ ತೊಲ) ೪೮ ಪೆನ್ನುಗಳಿಗಿಂತಲೂ ಬೆಳ್ಳಿಯ ಬೆಲೆ ಏರುವುದಿಲ್ಲವೊ ಅಲ್ಲಿಯ ವರೆಗೂ ಈಗಿನಂತೆ ರೂಪಾಯನ್ನು ಚಲಾವಣೆಯಲ್ಲಿ ಹಣವಾಗಿರಿಸುವುದು ಸಾಧ್ಯ. ಹದಿನಾರಾಣೆ ಬೆಲೆಯ ಲೋಹಾಂಶ ಅದರಲ್ಲಿಲ್ಲವಾದ್ದರಿಂದ ಅದನ್ನು ಬೆಳ್ಳಿಯ ತಗಡಿನ ಮೇಲೆ ಅಚ್ಚುಮಾಡಿದ ನೋಟೆಂದು ಹೇಳುವು ದುಂಟು. ನಾಣ್ಯದ ಜೊತೆಗೆ ರೂಪಾಯಿ ಲೆಕ್ಕದಲ್ಲಿ ಆಳೆಯುವ (ಸುಮಾರು ೧೮೦ ಕೋಟಿ ರೂಪಾಯಷ್ಟು) ನೋಟು ಚಲಾವಣೆಯಲ್ಲಿರುವುದು. ಈ ನೋಟಿನ ಬೆಲೆಯನ್ನು ಕಾಪಾಡಲು ನೋಟಿನ ನಿಧಿ (Paper Currency Reserve) ಸ್ವರ್ಣಪ್ರಮಿತಿಯ ನಿಧಿ (Gold Standard Reserve) ಎಂಬ ಎರಡು ನಿಧಿಗಳನ್ನು ಸರಕಾರದವರು ಸ್ವಲ್ಪ ಭಾಗ ಇಲ್ಲಿಯೂ ಸ್ವಲ್ಪ ಭಾಗ ಇಂಗ್ಲಂಡಿನಲ್ಲಿಯೂ ಇಡುತ್ತಿದ್ದರು. ರೂಪಾಯ ಬೆಲೆಯನ್ನು ೧೮ ಪೆನ್ನಿ ಗಳಂತೆ ಚಿನ್ನದ ಬೆಲೆಗೆ ಹೊಂದಿಸಿದ್ದಾಗ ಚಿನ್ನದ ಬೆಲೆ ಪೇಟೆಯಲ್ಲಿ ಏರಿದಂತೆ ಇಳಿದಂತೆ ದೇಶವಿದೇಶಗಳ ಹಣದ ಬೆಲೆಯೂ ವ್ಯತ್ಯಾಸ ಹೊಂದಿ ನಮ್ಮ ಮಾರುವೆ ದರ ಮಾರ್ಪಡುತ್ತಿತ್ತು. ಚಿನ್ನದ ಲೆಕ್ಕದಲ್ಲಿ ನಡೆಯುತ್ತಿದ್ದ ಇತರ ದೇಶಗಳ ಹಣಗಳ ಮಾರುವೆಯೂ ನೇರವಾಗಿ ಸ್ಥಾಪಿತವಾಗುತ್ತಿತ್ತು. ೧೯೩೧ನೆಯ ಸೆಪ್ಟೆಂಬರ್ ತಿಂಗಳಲ್ಲಿ ಇಂಗ್ಲಂಡಿನ ಹಣಪದ್ಧತಿ ಚಿನ್ನದ

ಲೆಕ್ಕದಿಂದ ಜಾರಿಕೊಂಡಾಗ ರೂಪಾಯಿಯ ಭಾಗ್ಯವನ್ನು ಇಂಗ್ಲಿಷ್ ಪೌಂಡಿನ ಅದೃಷ್ಟಕ್ಕೆ ತಗುಲಿಹಾಕಿದರು. ಈಗ ಚಿನ್ನದ ಬೆಲೆ ಹೊರಗೆ ಹೇಗೆಯೇ ಇರಲಿ; ಇತರ ದೇಶಗಳವರಿಗೂ ನಮಗೂ ವ್ಯಾಪಾರ ಋಣ ಸಂಬಂಧಗಳು ಯಾವ ರೀತಿಯೇ ಇರಲಿ; ಅವರ ಹಣ ಲೆಕ್ಕದಲ್ಲಿ ಪೌಂಡು ಏರಿರಲಿ, ಇಳಿದಿರಲಿ, ನಮ್ಮ ವ್ಯಾಪಾರದ ಸಾಲಗಳೆಲ್ಲ ಪೌಂಡಿನ ಲೆಕ್ಕದಲ್ಲಿಯೇ ತೀರಬೇಕು. ಇಲ್ಲಿನ ಹಣಕ್ಕೂ ಚಿನ್ನಕ್ಕೂ ನಡುವೆ ನೇರವಾದ ಸಂಬಂಧವಿಲ್ಲ. ನಮಗೆ ವಿದೇಶಗಳಿಂದ ಬರಬೇಕಾದ ಹಣವನ್ನೂ ಪೌಂಡಿನ ಲೆಕ್ಕದಲ್ಲಿಯೇ ತರಿಸಬೇಕಾದ್ದರಿಂದ ಪೌಂಡಿನ ಬೆಲೆ ಹೆಚ್ಚಾಗಿರುವ ದೇಶದ ಮಾರುವೆಯಿಂದ ನಮಗೆ ಲಾಭವುಂಟು; ಕಡಮೆಯಾಗಿರುವಲ್ಲಿ ನಷ್ಟ. ಈ ದರದಂತೆ ಒಂದು ಪೌಂಡಿಗೆ ರೂ. ೧೩-೫-೪ (£ ೭೫ -- ರೂ. ೧,೦೦೦) ಎಂದು ಲೆಕ್ಕ. ಯಾವ ಕಾರಣದಿಂದಲಾದರೂ ರೂಪಾಯಿ ಬೆಲೆ ೧೬ ೩/೩೨ ಪೆನ್ನಿಗಳಾದರೆ ಅದಕ್ಕಿಂತ ಮೇಲೆ ಅದು ಏರದಂತೆ ತಡೆಯಲು ಸರಕಾರದವರು ಪೌಂಡು ಕೊಳ್ಳುವರು; ೧೫ ೨೯/೩೨ ಪೆನ್ನಿಗಳಾದರೆ ಅದಕ್ಕಿಂತ ಕೆಳಗೆ ಇಳಿಯದಂತೆ ಪೌಂಡನ್ನು ಮಾರುವರು. — ಈ ರೀತಿ ಮಾಡಿ ರೂಪಾಯಿಯ ವಿನಿಮಯ ಬೆಲೆ ೧೬ ಪೆನ್ನಿಗಳ ಆಚೆ ಈಚೆ ೩/೩೨ ಪೆನ್ನಿಯ ಮಿತಿಗೆ ಮೀರದಂತೆ ಒಂದು ಗೊತ್ತಿನಲ್ಲಿಟ್ಟು ನಡೆಸುತ್ತಿದ್ದರು.*

**ಎರಡು ವಿಶೇಷ ಲಕ್ಷಣಗಳು.** — ಇಂಡಿಯಾ ದೇಶದ ಮಾರುವೆ ವ್ಯವಹಾರದಲ್ಲಿ ಎರಡು ವಿಶೇಷ ಸಂಗತಿಗಳಿವೆ: (೧) ಈ ದೇಶದ ಮೇಲಾಡಳಿತ ಶಾಖೆಯೊಂದು ಇಂಗ್ಲೆಂಡಿನಲ್ಲಿ ಇದೆ. ಬ್ರಿಟಿಷ್ ಚಕ್ರಾಧಿಪತ್ಯದಲ್ಲಿರುವ ಇತರ ರಾಜ್ಯಗಳ ಮೇಲಾಡಳಿತ ವೆಚ್ಚದಲ್ಲಿ ಬಹು ಭಾಗವನ್ನು ಬ್ರಿಟಿಷ್ ಸರಕಾರದವರೇ ವಹಿಸುತ್ತಿದ್ದರೂ ಇಂಡಿಯಾ ಶಾಖೆಯ ವೆಚ್ಚವೆಲ್ಲ ಈ ದೇಶದ ಮೇಲೆಯೇ ಹೊರುತ್ತಿತ್ತು. ಜೊತೆಗೆ ಇಲ್ಲಿ ಕೆಲಸಮಾಡಿ ನಿವೃತ್ತರಾಗಿ ತವರಿಗೆ ಹೋಗಿ ನೆಲಸಿರುವ ಬ್ರಿಟಿಷರ ವಿಶ್ರಾಂತಿವೇತನ; ಅಲ್ಲಿನವರೂ ಇತರರೂ ಸರಕಾರಕ್ಕೆ ಕೊಟ್ಟಿರುವ ಸಾಲಗಳ ಬಡ್ಡಿ ಮುಂತಾದ ಬಾಬುಗಳಲ್ಲಿ, ಮನೆವಾರ್ತೆಯ ವೆಚ್ಚಗಳು (Home Charges) ಎಂಬ ಹೆಸರಿನ

---

* ೩/೩೨ ಏಕೆಂದರೆ ಆ ಮೊತ್ತದ ಚಿನ್ನ ಹೊರಕ್ಕೆ ಸಾಗ ಹಾಕುವುದಕ್ಕೆ ಅಷ್ಟು ಖರ್ಚು ಬೀಳುವುದು.

ಸುಮಾರು ೫೦ ಕೋಟಿ ರೂಪಾಯಷ್ಟು ಹಣವನ್ನು ಈ ದೇಶ ವರ್ಷೇ ವರ್ಷೇ ಇಂಗ್ಲಂಡಿಗೆ ಸಲ್ಲಿಸಬೇಕಾಗಿರುವುದು. ಅವೆಲ್ಲ ಸರಕಾರದವರು ತೆರಬೇಕಾದ ಹಣಗಳು. ಹೀಗಿರುವಾಗ ರೂಪಾಯಿನ ಮಾರುವೆ ದರ ಇಳಿದರೆ ಇಂಡಿಯಾ ಸರಕಾರ ಹೆಚ್ಚು ರೂಪಾಯನ್ನು ಸಲ್ಲಿಸಬೇಕಾಗುವುದು; ಏರಿದರೆ ಈ ಬಾಬಿನಲ್ಲಿ ಆ ಪುಟ್ಟಿಗೆ ತೆರಾಣೆ ಕಡಮೆಯಾಗುವುದು. ಸರಕಾರಕ್ಕೆ ವರಮಾನ ರೂಪಾಯಲ್ಲಿ ಬರುವುದು; ವಿದೇಶಿ ತೆರಮಾನ ಪೌಂಡಿನಲ್ಲಿ ಆಗಬೇಕಾಗಿರುವುದು; ಆದ್ದರಿಂದ. (೨) ನಮ್ಮ ಹೊರ ವ್ಯಾಪಾರದಲ್ಲಿ ನಿನ್ನೆ ಮೊನ್ನೆಯವರೆಗೂ ಆಮದಿಗಿಂತ ರಫ್ತು ಹೆಚ್ಚು. ಎಂದರೆ ಇತರರು ನಿವ್ವಳವಾಗಿ ನಮಗೆ ತೆರಬೇಕಾದ ಹಣ ಹೆಚ್ಚು. ಆ ಮೊತ್ತದ ಬಹು ಭಾಗ ಚಿನ್ನ ಬೆಳ್ಳಿಯ ರೂಪದಲ್ಲಿ ಬರುವುದು ರೂಢಿ. ವ್ಯಾಪಾರ ಅನುಕೂಲವಾಗಿರುವಾಗ ಒಂದು ರೀತಿಯೂ ಪ್ರತಿಕೂಲವಾದಾಗ ಒಂದು ರೀತಿಯೂ ದೇಶದ ಹಣದ ಅಧಿಕಾರಿಗಳಾದ ಸರಕಾರದವರು ಮಾರುವೆ ದರವನ್ನು ಹೊಂದಿಸಿಕೊಳ್ಳುತ್ತ ದೇಶದ ಹಣದ ಮೊತ್ತವನ್ನೂ ನಿಧಿಯನ್ನೂ ತಕ್ಕಂತೆ ಅಲ್ಲಿ ಇಲ್ಲಿ ಹೆಚ್ಚಿಸುತ್ತ ಕುಗ್ಗಿಸುತ್ತ ಸಾಲ ತೀರಿಸುತ್ತಿದ್ದರು. ನಿವ್ವಳವಾಗಿ ಹೊರುವ ತೆರಾಣಿಗೆ ಬೇಕಾದ ಹಣವನ್ನು ನಿಧಿಗಳಿಂದ ತೆಗೆಯುತ್ತಿದ್ದರು. ಒಳ ಸಂಚಾರಕ್ಕೆ ಹೆಚ್ಚು ಹಣ ಬೇಕಾದಾಗ ಚಲಾವಣೆಯನ್ನು ಹೆಚ್ಚು ಮಾಡುವ ರೀತಿಯನ್ನೂ ಬೇಡವಾದಾಗ ಕಡಮೆ ಮಾಡುವ ರೀತಿಯನ್ನೂ ತಾವೇ ನೇರವಾಗಿಯೊ, ಇಂಪೀರಿಯಲ್ ಬ್ಯಾಂಕಿನ ಮೂಲಕವಾಗಿಯೊ ಏರ್ಪಡಿಸುತ್ತಿದ್ದರು. ಮಾರುವೆಯನ್ನು ಒಂದು ಹದದಲ್ಲಿ ಹಿಡಿದಿಡಲು ಸರಕಾರ ಇಲ್ಲಿನ ಹಣಯಂತ್ರದ ಕೀಲುಗಳನ್ನು ಸಂತತವಾಗಿ ತಿರುಗಿಸುತ್ತಿರಬೇಕಾಗುತ್ತಿತ್ತು. ಹಣದ ಪೇಟೆಯ ವ್ಯವಸ್ಥೆ ಚೆನ್ನಾಗಿರುವ ದೇಶಗಳಲ್ಲಿಯೇ ವಿನಿಮಯ ಪ್ರಮಿತಿಯ (Exchange Standard) ಕಾರ್ಯರೀತಿ ಬಹಳ ತೊಡಕು; ಕೃತಕ. ಸ್ವಲ್ಪ ಎಚ್ಚರಿಕೆ ತಪ್ಪಿದರೆ, ಬುದ್ಧಿ ಸ್ವಲ್ಪ ಮಂದವಾದರೆ, ಪಕ್ಷಪಾತ ಈಕಡೆ ಆಕಡೆ ಸ್ವಲ್ಪ ಹೊರಳಿದರೆ, ಕೋಟ್ಯಂತರ ರೂಪಾಯಿ ನಷ್ಟವಾಗುವುದು. ಯೋಗ್ಯರಾದ, ಪ್ರಾಮಾಣಿಕರಾದ, ದಕ್ಷರಾದ, ಕೇವಲ ರಾಷ್ಟ್ರಹಿತ ಬುದ್ಧಿಯುಳ್ಳ ಅಧಿಕಾರಿಗಳ ಕೈಯಲ್ಲಿ ಈ ಪದ್ಧತಿಯ ಪರಮಾವಧಿ ಪ್ರಯೋಜನ ಸಿಕ್ಕುವುದು ಸಾಧ್ಯವಾದರೂ

ಸಾಧಾರಣರು ಇದನ್ನು ಅರ್ಥಮಾಡಿಕೊಳ್ಳುವುದು ಕಷ್ಟ. ಇಲ್ಲಿನ ಸರಕಾರ ವಿದೇಶಿ; ಧನಾಧಿಕಾರಿಗೆ ಕರುಳ ಬಾಧೆ ಹಿಡಿಸುವುದೂ ಹಿಡಿಸುವುದೆಂಬ ಜನರ ಸಂದೇಹವಿರುವುದೂ ಸಹಜ; ಹಿಂದೆ ಹಲವು ವೇಳೆ ಇಂಗ್ಲಂಡಿನ ಹಣದ ಪೇಟೆಯ ಸೌಕರ್ಯಕ್ಕಾಗಿ ನಮ್ಮ ಪೇಟೆ ವ್ಯಾಪಾರ ಬಲಿಯಾಗಿರುವ ನೆನಪು ಅಳಿಸದು; ಜನದ ಅಭಿಪ್ರಾಯವನ್ನು ನಿರ್ಲಕ್ಷ್ಯಮಾಡುವ ಪ್ರವೃತ್ತಿ ಅಧಿಕಾರಿಗಳಲ್ಲಿ ಸಾಮಾನ್ಯ. ಆದುದರಿಂದ ಪರಿಸ್ಥಿತಿಯನ್ನು ಬೇಕಾಗಿ ಹೆಚ್ಚು ಕಡಮೆಮಾಡದಿದ್ದರೂ ಬೇಕೆಂದೇ ಮಾಡುತ್ತಿರುವರೆಂಬ ಆಪಾದನೆ ಬರಲು ಬಹಳ ಅವಕಾಶವಿತ್ತು. ಇದರ ಪರಿಣಾಮವಾಗಿ ರಾಜಕೀಯ ಅಸಮಾಧಾನಗಳೂ ಬಲಿತುವು.

ಹೀಗೆ ಧನಮಂಡಲದಲ್ಲಿ ಒಂದು ಕೇಂದ್ರದಿಂದ ಅಧಿಕಾರ ನಡೆಯುತ್ತಿರಲಿಲ್ಲ. ರೂಪಾಯಿನ ಮಾರುವೆಯ ಕಡೆಯೇ ಅತಿ ಲಕ್ಷ್ಯವಿಟ್ಟು ಹಟದಿಂದ ಕೆಲವು ವೇಳೆ ೧೬ ಪೆನ್ನಿ, ಕೆಲವು ವೇಳೆ ೨೪ ಪೆನ್ನಿ, ಕೆಲವು ವೇಳೆ ೧೮ ಪೆನ್ನಿಯಂತೆ ದರ ಸಾಧಿಸಲು ಪ್ರಯತ್ನಪಟ್ಟು ಸರಕಾರ ಅಪಕೀರ್ತಿಪಡೆಯಿತು. ಒಳದೇಶದಲ್ಲಿ ಧಾರಣೆವಾಸಿ ಹೇಗಿರಲಿ, ಇಲ್ಲಿನ ವ್ಯಾಪಾರದ ಕೈಗಾರಿಕೆಗಳಿಗೆ ಯಾವ ದುಃಸ್ಥಿತಿಯೇ ಬರಲಿ ಆ ಕಡೆ ಗಮನ ಹರಿಸುತ್ತಿರಲಿಲ್ಲವಾಗಿ ಒಟ್ಟಿನಲ್ಲಿ ದೇಶಕ್ಕೆ ಅನುಕೂಲವಿಲ್ಲದ ಮಾರುವೆ ದರದಿಂದ ಈ ಪದ್ಧತಿ ಕಟುವಿಮರ್ಶೆಗೆ ಈಡಾಗಿತ್ತು. ರಾಜಕೀಯ ಕೈವಾಡಕ್ಕೆ ಸಿಕ್ಕಿ ತೊಳಲದಿರುವ ಒಂದು ಪ್ರಧಾನ ಬ್ಯಾಂಕಿನ ಅವಶ್ಯಕತೆ ಇಲ್ಲಿದ್ದಷ್ಟು ಬೇರೆ ಇನ್ನೆಲ್ಲಿಯೂ ಇರಲಿಲ್ಲ.

**ಇಂಪೀರಿಯಲ್ ಬ್ಯಾಂಕು.**—ನಿನ್ನೆ ಮೊನ್ನೆಯವರೆಗೂ ಪ್ರಧಾನ ಬ್ಯಾಂಕಿನ ಕೆಲಸವನ್ನು ಅರೆ ಅರಕಲಾಗಿ ಮಾಡುತ್ತಿದ್ದುದು ಇಂಪೀರಿಯಲ್ ಬ್ಯಾಂಕು. ಇದೊಂದು ಖಾಸಗಿ ಷೇರುದಾರರ ಬ್ಯಾಂಕು. ಇತರ ವ್ಯಾಪಾರದ ಬ್ಯಾಂಕುಗಳೊಡನೆ ಒಳವ್ಯಾಪಾರದಲ್ಲಿ ಇದರ ಸ್ಪರ್ಧೆಯಿರುತ್ತಿತ್ತು. ಸರಕಾರದ ಎಲ್ಲ ಲೇವಾದೇವಿಯೂ ಇದರ ಕೈಯಲ್ಲಿಯೇ ಇದ್ದುದರಿಂದಲೂ ಸರಕಾರದ ಕೈಶಿಲ್ಕನ್ನು ಕಾಪಾಡಬೇಕಾಗಿದ್ದುದರಿಂದಲೂ ಸರಕಾರ ಇವರ ಕೈಗೆ ಕೆಲವು ತಡೆಗಳನ್ನು ಒಡ್ಡಿ ಕೆಲವು ಜವಾಬ್ದಾರಿಗಳನ್ನು ಹೊರಿಸಿದ್ದರು. ಸರಕಾರದ ಧನ ನೀತಿಗೆ ಇದರಿಂದ ಯಾವ ಪ್ರತಿರೋಧವೂ ಬಾರದಿರುವಂತೆಯೂ ಇಷ್ಟ ಬಂದಂತೆ ಸರಕಾರದ ಅಥವಾ

ಸ್ವಂತ ಹಣವನ್ನು ಉಪಯೋಗಿಸಿ ನಷ್ಟಪಡದಂತೆಯೂ ಇರಲಿ ಎಂಬ ಉದ್ದೇಶದಿಂದ ಕೆಲವು ಬಗೆಯ ತಡೆಗಳನ್ನು ಒಟ್ಟಿದ್ದರು; ಈ ಈ ಬಗೆಯ ಕೆಲಸಗಳನ್ನು ಬ್ಯಾಂಕು ಮಾಡಬಹುದು; ಇಂಥವುಗಳನ್ನು — ಮುಖ್ಯವಾಗಿ ಸಟ್ಟಾ ಅಥವಾ ದುಸ್ಸಾಹಸದ ವ್ಯಾಪಾರವನ್ನು — ಮಾಡಕೂಡದು ಎಂದು ವಿಧಿಸಿದ್ದರು. ವಿದೇಶಿ ಮಾರುಪೆಯ ಕಾರ್ಯವನ್ನು ಮಾಡಲಾಗಲಿ ಇಂಗ್ಲಂಡಿನಲ್ಲಿ ಶಾಖೆಯನ್ನು ಇಡುವುದಕ್ಕಾಗಲಿ ಅಪ್ಪಣೆಯಿರಲಿಲ್ಲ. ಜೊತೆಗೆ ಬ್ಯಾಂಕಿನ ಇಬ್ಬರು ಕಾರ್ಯನಿರ್ವಾಹಕರನ್ನು ಸರಕಾರದವರೇ ನೇಮಿಸುತ್ತಿದ್ದರು.

**ಒಟ್ಟಿನಲ್ಲಿ ಸ್ಥಿತಿ.** — ಸರಕಾರದ ಖಜಾನೆ ಕೆಲಸವನ್ನು ಈ ಬ್ಯಾಂಕು ಉಚಿತವಾಗಿ ಮಾಡುತ್ತಿತ್ತು: ಅವರಿಗೆ ಸಾಲ ಒದಗಿಸುವುದು; ಸಾಲ ಹರಿಸುವ ಏರ್ಪಾಡುಗಳನ್ನು ಮಾಡಿಕೊಡುವುದು; ಲಂಡನ್ನಿನಲ್ಲಿನ ರೂಪಾಯಿ ಲೆಕ್ಕದ ಸಾಲವನ್ನು ನಡಸುವುದು; ದೇಶದ ಇತರ ಬ್ಯಾಂಕುಗಳ ನಗದು ಡಿಪಾಸಿಟ್ಟುಗಳನ್ನು ಇಟ್ಟುಕೊಂಡು ಸಮಯ ಸಂದರ್ಭಗಳಲ್ಲಿ ಅವರಿಗೆ ಬೇಕಾದ ಸಾಲ ಸೌಕರ್ಯಗಳನ್ನು ಒದಗಿಸುವುದು; ವ್ಯಾಪಾರ ಬ್ಯಾಂಕುಗಳ ಚೆಕ್ಕು ಸಿಕಾಲೆ, ಮೇಲ್ವಿಚಾರಣೆ ವ್ಯವಸ್ಥೆ ಮಾಡಿ ಅವರ ಪರಸ್ಪರ ಸಾಲ ಹರಿಸಲು ನೆರವಾಗುವುದು; ದೇಶದ ವ್ಯಾಪಾರಕ್ಕೆ ಹೆಚ್ಚು ಹಣ ಬೇಕಾದಾಗ ಖಜಾನೆ ಮತ್ತು ಇತರ ವ್ಯಾಪಾರದ ಹುಂಡಿಗಳನ್ನು ಸರಕಾರದವರಲ್ಲಿ ಅಡವಿಟ್ಟು ಹೆಚ್ಚು ನೋಟನ್ನು ಸಂಚಾರಕ್ಕೆ ತರುವುದು ಮುಂತಾದ ಹಲವು ಬಗೆಯ ಕೆಲಸಗಳನ್ನು ಬ್ಯಾಂಕು ಮಾಡುತ್ತಿತ್ತು. ಆದರೆ ಇತರ ರಾಷ್ಟ್ರಗಳ ಪ್ರಧಾನ ಬ್ಯಾಂಕುಗಳಂತೆ ನೋಟನ್ನು ತಯಾರಿಸುವ ಹಕ್ಕಾಗಲಿ, ನಾಣ್ಯ ನಿಧಿಗಳ ಆಡಳಿತವಾಗಲಿ, ವಿದೇಶಿ ವ್ಯಾಪಾರದ ಮೇಲೆ ಅಧಿಕಾರವಾಗಲಿ, ಇಂಗ್ಲಂಡಿನ ಇಂಡಿಯಾ ಸಚಿವರ ಬಿಲ್ಲುಗಳ ಮೇಲೆ ಅಂಕೆಯಾಗಲಿ — ಈ ಬ್ಯಾಂಕಿಗೆ ಇರಲಿಲ್ಲ. ವಿದೇಶಿ ವ್ಯಾಪಾರವೆಲ್ಲ ಮಾರುಪೆ-ಬ್ಯಾಂಕುಗಳವರದು;* ಒಳವ್ಯಾಪಾರದ ಸಾಲದ ಪೇಟೆ ಬಹುತರ ಮುಲ್ತಾನಿ, ಗುಜರಾತಿ ಸರಾಫರದು; ಮತ್ತು ಚೆಟ್ಟಿ,

* ದೇಶಿ ಬ್ಯಾಂಕುಗಳಲ್ಲಿ ಒಂದೆರಡು ಆ ಕೆಲಸಕ್ಕೆ ತೊಡಗಿದರೂ ಆ ಮೊತ್ತ ಅತ್ಯಲ್ಪ; ಆ ಕೆಲಸದಲ್ಲಿ ಅವು ಸಾಕಾದಷ್ಟು ಜಯಶೀಲವಾಗಿರಲಿಲ್ಲ.

ನಗರ್ತರದು ; ಕೈಗಾರಿಕೆ ವ್ಯವಸಾಯಗಳ ಬಂಡವಾಳದ ಪೇಟೆಗೂ ಇದರ ವ್ಯವಹಾರಕ್ಕೂ ಸಂಬಂಧವಿಲ್ಲ; ಪೇಟೆಯಲ್ಲಿ ಒಂದು ಭಾಗಕ್ಕೂ ಇನ್ನೊಂದಕ್ಕೂ ಹೊಂದಿಕೆಯಾಗಲೂ ಅವಕಾಶ ಕಡಮೆ. ವಿದೇಶಿ ಹುಂಡಿಯ ಓಪಾಟವೆಲ್ಲ ಮಾರುವೆ-ಬ್ಯಾಂಕುಗಳ ಕೈಯಲ್ಲಿ ಇದ್ದುದರಿಂದ ಇಲ್ಲಿ, 'ಬಿಲ್ ಮಾರ್ಕೆಟ್' ಎಂಬ ವಿದೇಶಿ ಹುಂಡಿ ಪೇಟೆ ಹುಟ್ಟಿ ಬೆಳೆಯಲು ಅವಕಾಶವಾಗಲಿಲ್ಲ; ಎರಡನೆಯ ವಟ್ಟದ ವ್ಯಾಪಾರವೂ ನಡೆಯದು. ಆ ಬ್ಯಾಂಕುಗಳು ಪೌಂಡು ಹುಂಡಿಗಳನ್ನು ಲಂಡನ್ನಿನಲ್ಲಿ ಕೊಂಡು ತಮಗೆ ಹಣ ಬೇಕಾದಾಗ ಅಲ್ಲಿನ ವಟ್ಟದ ಪೇಟೆಯಲ್ಲಿ ಮಾರಿ ಒದಗಿಸಿಕೊಳ್ಳುವುವು ; ಆಮದು ಹುಂಡಿ ಲೆಕ್ಕ ಕೂಡ ಪೌಂಡಿನಲ್ಲಿರುವಾಗ ಅವುಗಳ ಓಪಾಟ ತಾನೇ ಇಲ್ಲಿ ಹೇಗೆ? ಆದ್ದರಿಂದ ಇಲ್ಲಿನ ಪೇಟೆಯಲ್ಲಿ ವರ್ತಕರಿಗೂ ದಲ್ಲಾಳರಿಗೂ ಹಣ ಬೇಕಾದರೆ ಪ್ರಾಮಿಸರಿ ನೋಟನ್ನೂ ಕೈಹುಂಡಿಗಳನ್ನೂ ಬರೆದು ಕೊಟ್ಟೊ, ಸರಕಾರದ ಸಾಲಪತ್ರಗಳನ್ನು ಅಡವಿಟ್ಟೊ ಸಾಲ ತೆಗೆಯು ವುದೇ ವಾಡಿಕೆ. ವಿದೇಶಗಳಲ್ಲಿ ಬ್ಯಾಂಕ್ ರೇಟ್ ಎಂದರೆ (ಹಿಂದೆಯೇ ಹೇಳಿರುವಂತೆ) ಕಿರುವಾಯಿದೆಯ ವ್ಯಾಪಾರ ಹುಂಡಿಗಳನ್ನು ಕೊಳ್ಳಲು ಕೇಂದ್ರ ಬ್ಯಾಂಕಿನವರು ಕೇಳುವ ವಟ್ಟದ ದರ; ಇಲ್ಲಿ ಬ್ಯಾಂಕ್ ರೇಟ್ ಎಂದರೆ ಸರಕಾರಿ ಪ್ರಾಮಿಸರಿ ನೋಟಿನಂಥ ಪತ್ರಗಳನ್ನು ಅಡವಿಟ್ಟು ಹಣ ಕೇಳಿದರೆ ಇಂಪೀರಿಯಲ್ ಬ್ಯಾಂಕು ತೆಗೆದುಕೊಳ್ಳುತ್ತಿದ್ದ ವಟ್ಟದ ದರ. ಆ ದೇಶಗಳಲ್ಲಿ ಬ್ಯಾಂಕ್ ರೇಟಿನ ಪ್ರಭಾವ ಬಹಳ ಹೆಚ್ಚು. ಇಲ್ಲಿನ ಬ್ಯಾಂಕ್ ರೇಟಿನಿಂದ ಪೇಟೆಯನ್ನಾಳಲು ಸಾಧ್ಯವಿರಲಿಲ್ಲ. ಪೇಟೆಯ ವಟ್ಟದ ಧಾರಣೆಗೂ ಬಡ್ಡಿಯ ವಟ್ಟದ ದರಕ್ಕೂ ಹಲವೊಮ್ಮೆ ಯಾವ ಹೊಂದಿಕೆಯೂ ಇರದು. ಇಂಡಿಯಾದ ಹೊರಗಡೆ ಬ್ಯಾಂಕು ಡಿಪಾಸಿಟ್ ತೆಗೆಯ ಕೂಡದು, ಸಾಲಪತ್ರ ಕೊಡದು ಎಂಬ ನಿರ್ಬಂಧವಿರಲಾಗಿ ಹಣವನ್ನು ಒಳಕ್ಕೆ ತಂದು ಆ ಮೂಲಕವೂ ದೇಶದ ಪ್ರಯೋಜನವನ್ನು ಸಾಧಿಸಲು ಶಕ್ಯವಿರಲಿಲ್ಲ.

ಮೇಲಿನ ಈ ವಿವರಣೆಯಿಂದ ವಿಲಾಯಿತಿಯ ಪ್ರಧಾನ ಬ್ಯಾಂಕು ಗಳಂತೆ ಕೆಲಸಮಾಡುವ ಬ್ಯಾಂಕೊಂದು ಇಲ್ಲಿ ಇರಲಿಲ್ಲವೆಂದು ಅರ್ಥವಾಗಿರ ಬೇಕು. ಅವುಗಳಿಗಿರುವ ತಡೆಗಳೆಲ್ಲ ಇಂಪೀರಿಯಲ್ ಬ್ಯಾಂಕಿಗಿದ್ದುವು;

ಅವುಗಳ ದೊಡ್ಡ ಹಕ್ಕು ಅಧಿಕಾರ ಯಾವುವೂ ಇರಲಿಲ್ಲ. ಒಂದು ದೊಡ್ಡ ಕೆಲಸವನ್ನೇನೊ ಇಂಪೀರಿಯಲ್ ಬ್ಯಾಂಕು ಮಾಡಿತು: ದೇಶದ ಮೇಲೆ ಸುಮಾರು ೧೭೦ ಶಾಖೆಗಳನ್ನು ಏರ್ಪಡಿಸಿ ಜನರಲ್ಲಿ ಹೊಸ ಕಾಲದ 'ಬ್ಯಾಂಕಿಂಗ್' ವ್ಯವಹಾರವನ್ನು ಬಳಕೆಗೆ ತರಲು ನೆರವಾಯಿತು. ಆದರೆ ಅದರ ಫಲವಾಗಿ ಕೂಡ ಒಂದು ಕೆಡುಕು ಬಂದಿತೆನ್ನಬಹುದು. ದೊಡ್ಡ ಪ್ರಭಾವವುಳ್ಳ, ಸರಕಾರದ ಬೆಂಬಲದಿಂದ ಕೆಲಸಮಾಡುತ್ತ ಹತ್ತೆಂಟು ಕೋಟಿ ಪ್ರಮಾಣದ ಅವರ ಡಿಪಾಸಿಟ್ ಹಣವನ್ನಿಟ್ಟುಕೊಂಡಿರುವ, ಇಂಪೀರಿಯಲ್ ಬ್ಯಾಂಕಿನ ಪೈಪೋಟಿ ದೇಶದ ಸಣ್ಣ ಸಣ್ಣ ಕೂಡುಬಂಡವಾಳದ ಬ್ಯಾಂಕುಗಳ ಬೆಳವಣಿಗೆಗೆ ಅಡ್ಡಿಯಾಯಿತು. ಒಟ್ಟಿನಲ್ಲಿ ನಿನ್ನೆ ಮೊನ್ನೆಯವರೆಗೂ ಇದ್ದ ಇಲ್ಲಿನ ಪೇಟೆಯ ಸ್ಥಿತಿಯನ್ನು ಹೀಗೆ ವಿವರಿಸಬಹುದು:— ಹಣಪದ್ಧತಿಯಲ್ಲಿ ಇದು ಹೀಗೆಯೇ ನಡೆಯುವುದೆಂಬ ನಿಶ್ಚಯವಿರಲಿಲ್ಲ; ಸರಕಾರದ ಹಣ ಕಾರ್ಯದ ರೀತಿ ವಿಧಾನಗಳು ತೊಡಕು; ಸರಕಾರ ವಿದೇಶಿ; ಜನಗಳ ವಿಶ್ವಾಸ ಸಂಪಾದನೆಯಾಗುವಂತೆ ಕೆಲಸ ನಡೆಯದು; ಅವರ ಇಷ್ಟ ಅಭಿಪ್ರಾಯಗಳನ್ನು ಕಂಡರೆ ಸರಕಾರಕ್ಕೆ ಅಸಡ್ಡೆ; ಇಂಗ್ಲಂಡಿಗೆ ಸ್ವಲ್ಪಮಟ್ಟಿಗಾದರೂ ನಷ್ಟವಾಗುವಂತಾದರೆ ಈ ದೇಶದ ಅನುಕೂಲ ಶರಣಾಗುವುದೇ ವಾಡಿಕೆ; ನಮ್ಮ ಹಣದ ನಿಧಿಗಳು ಯಾವ ರೂಪದಲ್ಲಿರಬೇಕು? ಎಲ್ಲಿರಬೇಕು? ಅವನ್ನು ಯಾವ ರೀತಿ ಯಾವ ಸಮಯದಲ್ಲಿ ಪ್ರಯೋಗಿಸಬೇಕು? ಎಂಬ ಅಂಶಗಳಲ್ಲಿ ಜನರಿಗೂ ಸರಕಾರಕ್ಕೂ, ಸರಕಾರಕ್ಕೂ ಇಂಗ್ಲಂಡಿನ ಪ್ರಭು ಮಂಡಲಕ್ಕೂ ತೀವ್ರವಾದ ಭಿನ್ನಾಭಿಪ್ರಾಯಗಳು. ಈ ದೇಶದ ಉಪಯೋಗಕ್ಕೇ ಸಾಕಾಗುವಷ್ಟು ಹಣವಿಲ್ಲದಿರುವಾಗ ಸ್ವರ್ಣಪ್ರಮಿತಿ ನಿಧಿಯ ಹಣವನ್ನೆಲ್ಲ ಇಂಗ್ಲಂಡಿನಲ್ಲೇಕೆ ಇಡಬೇಕು?* ಇಂಗ್ಲಿಷ್ ಪೇಟೆ ಪತ್ರಗಳಲ್ಲಿ ಏಕೆ ಬಡ್ಡಿಗೆ ಹೂಡ

* ಹೊರ ವ್ಯಾಪಾರ ನಮಗೆ ಸಾಮಾನ್ಯವಾಗಿ ಅನುಕೂಲವಾಗಿರುವುದರಿಂದ ನಿವ್ವಳ ಪರಮಾನದಷ್ಟಕ್ಕೆ ಚಿನ್ನವನ್ನು ಕೊಂಡು ಇಂಡಿಯಾದಲ್ಲಿ ಇಡಲು ಪ್ರಯತ್ನಿಸಬಹುದು. ಆದರೆ ನಮ್ಮ ಹಣಪದ್ಧತಿ ವಿನಿಮಯ ಪ್ರಮಿತಿಯದು. ಚಿನ್ನವನ್ನು ನಾಣ್ಯರೂಪದಲ್ಲಿ ಒಳಗೆ ಬಳಸುತ್ತಿಲ್ಲ; ಬಳಸುವುದು ವ್ಯರ್ಥ; ಒಳಸಂಚಾರಕ್ಕಾಗಿ ರೂಪಾಯಿಗಳನ್ನು ಅಚ್ಚುಮಾಡಲು ಬೆಳ್ಳಿ ಕೊಳ್ಳಬೇಕಾಗಿದೆ; ವಿದೇಶಿ ಸಾಲವನ್ನೂ ಬಡ್ಡಿಯನ್ನೂ ಚಿನ್ನದ ಲೆಕ್ಕದಲ್ಲಿ ತೀರಿಸಬೇಕಾಗಿದೆ; ಆದ್ದರಿಂದ ಅದರ ಪ್ರಯೋಜನ ಇಂಗ್ಲಂಡಿನಲ್ಲಿಯೇ ಬಹಳ. ಲಂಡನ್ ಪಟ್ಟಣ

ಬೇಕು? ಇಲ್ಲಿ ಹೆಚ್ಚು ಬಡ್ಡಿ ಸಂಪಾದನೆಯಾಗಬಲ್ಲದಾಗಿರುವಾಗ ಅಲ್ಲಿಯು ಕಡಮೆ ದರಕ್ಕೇಕೆ ಸಾಲ ಹಾಕಬೇಕು? ಈ ದೇಶದ ಮರ್ಯಾದೆಗೂ ವ್ಯಾಪಾರದ ಅನುಕೂಲಕ್ಕೂ ಹಣಕಾರ್ಯದ ಪ್ರಮಾಣಕ್ಕೂ ತಕ್ಕಷ್ಟು ಚಿನ್ನವನ್ನು ಏಕೆ ಸಂಗ್ರಹಿಸಬಾರದು? ಒಳಗೆ ಮಾತ್ರ ಸಂಚರಿಸುವ ನೋಟಿನ ಬೆಂಗಾವಲಿಗಾಗಿರುವ ನೋಟಿನ ನಿಧಿಯಲ್ಲಿ ಒಂದು ಭಾಗವನ್ನು ಇಂಗ್ಲಂಡಿನಲ್ಲಿ ಏಕಿಡಬೇಕು? ಮಾರುಪೆ ದರವನ್ನು ಪೌಂಡಿಗೆ ಒಂದು ಸಲವೂ ಚಿನ್ನಕ್ಕೆ ಇನ್ನೊಂದು ಸಲವೂ ಇಷ್ಟಬಂದಂತೆ ತಗುಲಿಹಾಕಿ ಇಲ್ಲಿನ ಹಣಸ್ಥಿತಿಯನ್ನು ಏಕೆ ಹದಗೆಡಿಸಬೇಕು ಮುಂತಾದ ಅನೇಕ ನ್ಯಾಯಾ ನ್ಯಾಯವಾದ ಆಕ್ಷೇಪಣೆಗಳು ಲಾಗಾಯ್ತಿನಿಂದ ಬಂದಿವೆ. ಅಲ್ಲದೆ ಇಲ್ಲಿನ ಪೇಟೆಯಲ್ಲಿ ಯಾವ ಸುವ್ಯವಸ್ಥೆ ಮತ್ತು ಮೇಲಧಿಕಾರವೂ ಇಲ್ಲದಿರುವುದು ಕೊರತೆ; ದೇಶದ ವ್ಯಾಪಾರ ಲಾಭಕ್ಕೂ ಸಂಪದಭಿವೃದ್ಧಿಗೂ ಹಾನಿಕರ; ಒಳಗೆ ಕಿರುವಾಯಿದೆ ನಿಡುವಾಯಿದೆ ಸಾಲಗಳ ಮತ್ತು ಒಂತವಾಳದ ಪೇಟೆಗಳು ಒಂದು ಧಾತುವಿನಲ್ಲಿ ಒಂದು ಮುಖದಲ್ಲಿ ಕಾರ್ಯಮಾಡವು; ಈ ವ್ಯಾಪಾರದ ಪೇಟೆಗೂ ದೇಶದ ಮುಖ್ಯ ಉದ್ಯೋಗವಾದ ವ್ಯವಸಾಯ ಪ್ರಪಂಚಕ್ಕೂ ಯಾವ ಸಹಾಯ ಸಂಬಂಧಗಳೂ ಇಲ್ಲ— ಈ ಮುಂತಾದ ಕೊರತೆಗಳು ಕಣ್ಣಿಗೆ ಕಟ್ಟಿದಂತೆ ಇರುವುದನ್ನು ಕಂಡು ಸಾಧ್ಯವಾದ ಮಟ್ಟಿಗೂ ಅವನ್ನು ನಿವಾರಿಸುವ ಪ್ರಯತ್ನಮಾಡಲು ೧೯೩೫ರಲ್ಲಿ ರಿಸರ್ವ್ ಬ್ಯಾಂಕು ಏರ್ಪಟ್ಟಿತು.

ಪ್ರಪಂಚದ ವ್ಯಾಪಾರಕ್ಕೆ ಮಧ್ಯರಾಷ್ಟ್ರ: ಯಾವ ದೇಶದವರಿಗೆ ಯಾವ ಬಗೆಯ ಪಿರಾಸ್ ಮಾಡಬೇಕಾದರೂ ಅಲ್ಲಿ ಮಾಡುವುದು ಸುಲಭ, ಅಗ್ಗ. ಪೌಂಡ್ ಪತ್ರಗಳಿಗೆ ಲೋಕಪುರಸ್ಕಾರವಾದ ವಿಶ್ವಾಸವಿದೆ; ವ್ಯಾಪಕತೆಯಿದೆ. ಚಿನ್ನವನ್ನು ಇಂಡಿಯಾದಲ್ಲಿ ಇಡಬಹುದು: ಆದರೆ ಚಿನ್ನ ತೆರುವ ಅಗತ್ಯಬಿದ್ದ ಪ್ರತಿಸಲವೂ ಅದನ್ನು ಸಾಗಿಸಬೇಕಾದರೆ ಬಹುಕಾಲ ವಿಳಂಬವಾಗುವುದು; ವೆಚ್ಚ ಹೆಚ್ಚು; ನಷ್ಟವುಂಟು. ಅಲ್ಲದೆ ಇಂಡಿಯಾ ದೇಶದಲ್ಲಿ ಕಿರುವಾಯಿದೆ ಬಡ್ಡಿಯ ಪೇಟೆ ಸುರಚಿತವಾಗಿಲ್ಲ. ಕೇವಲ ಚಿನ್ನವನ್ನು ಕೂಡಿಸಿ ಇಲ್ಲಿ ಅದನ್ನಿಟ್ಟರೆ ಯಾವ ವರಮಾನವೂ ಇಲ್ಲದೆ ಅಷ್ಟು ನಿಧಿಯು ಚಿನ್ನ ಬಂಜೆಯಾಗಿ ನಿಷ್ಫಲವಾಗುವುದು. ಆದುದರಿಂದಲೇ ಯಾವಾಗ ಬೇಕೆಂದರಾಗ ಚಿನ್ನಕ್ಕೆ ಮಾರಿಸಲಾಗುವ ಸ್ಟರ್ಲಿಂಗ್ ಮತ್ತು ಸ್ವರ್ಣಪತ್ರಗಳನ್ನು (Sterling & Gold Securities) ಕೊಂಡಿಡುವುದಕ್ಕಾಗಿ ಈ ಹಣವನ್ನು ಅಲ್ಲಿಟ್ಟಿರುವುದು ಮುಂತಾದ ಯುಕ್ತಿಯಿಂದ ಸ್ವರ್ಣಪ್ರಮಿತಿ ನಿಧಿಯ ಬಹುಭಾಗವನ್ನು ಬ್ಯಾಂಕ್ ಆಫ್ ಇಂಗ್ಲಂಡಿನ ರಕ್ಷಣೆಯಲ್ಲಿ ಸರಕಾರದವರು ಇಟ್ಟಿರುತ್ತಿದ್ದರು.

## ಇಂಡಿಯಾ ದೇಶದ ರಿಸರ್ವ್ ಬ್ಯಾಂಕು

**ಕೆಲಸ — ರಿಸರ್ವ್ ಬ್ಯಾಂಕು — ಹಣಪದ್ಧತಿ.** — ಇದು ೫ ಕೋಟಿ ರೂಪಾಯಿಗಳ ಷೇರು ಬಂಡವಾಳದ ಮೇಲೆ ಹುಟ್ಟಿರುವ ಖಾಸಗಿ ಬ್ಯಾಂಕು. ಇದರ ಕೆಲಸಕ್ಕಾಗಿ ಸರ್ಕಾರದವರು ಈವರೆಗೂ ತಮ್ಮ ವಶದಲ್ಲಿದ್ದ ಸುಮಾರು ೨೨೦ ಕೋಟಿ ರೂಪಾಯಿ ಬೆಲೆಯ ನಿಧಿಗಳನ್ನು ಕೊಟ್ಟಿದ್ದಾರೆ. ಈವರೆಗೂ ಸರಕಾರದವರು ಮಾಡುತ್ತಿದ್ದ ಹಣದ ಕೆಲಸವನ್ನೆಲ್ಲ ಇನ್ನು ಮುಂದೆ ಈ ಬ್ಯಾಂಕೇ ಮಾಡುವುದು; ಹಣಪದ್ಧತಿಯನ್ನು ನಡಸುವುದು. ಇನ್ನುಮೇಲೆ ಸಂಚಾರಕ್ಕೆ ಬರುವ ನೋಟೆಲ್ಲ ಈ ಬ್ಯಾಂಕಿನ ಹೆಸರಿನವು. ನೋಟನ್ನು ಪ್ರಚಾರಕ್ಕೆ ತರುವ ಸರ್ವಾಧಿಕಾರವನ್ನು ಸರಕಾರ ಇದಕ್ಕೆ ವಹಿಸಿದೆ. ೫ ಲಕ್ಷ ರೂಪಾಯಿಗಳಿಗೆ ಮೇಲ್ಪಟ್ಟ ಬಂಡವಾಳದಿಂದ ಈ ದೇಶದಲ್ಲಿ ಕೆಲಸಮಾಡುವ ವ್ಯಾಪಾರದ ಮತ್ತು ಸಹಕಾರದ ಪ್ರಾಂತ ಬ್ಯಾಂಕುಗಳೆಲ್ಲ ಇದರ ಕುಳಗಳು. ಅವರ ಕೈನಗದು ಮತ್ತು ಚಾಲ್ತಿ ದೇಣಿಗೆಗಳ ಒಟ್ಟು ಶೇಕಡ ೭ರಷ್ಟು (೫%+೨%) ಹಣವನ್ನು ತನ್ನಲ್ಲಿ ಕಡ್ಡಾಯವಾಗಿ ಡಿಪಾಸಿಟ್ಟಿಟ್ಟುಕೊಂಡು ಅವರ ನಗದು ನಿಧಿಗಳನ್ನು ಕಾಪಾಡುವ ಮತ್ತು ಅವರ ಡಿಪಾಸಿಟ್ ವ್ಯಾಪಾರವನ್ನು ಆಳುವ ಹಕ್ಕನ್ನು ಸರಕಾರದಿಂದ ಪಡೆದಿದೆ. ಅವರಿಗೂ ವ್ಯಾಪಾರದ ಪೇಟೆಗೂ ಸರಕಾರಕ್ಕೂ ಬ್ಯಾಂಕಾಗಿ ನಿಂತು ಸಮಯ ಸಂದರ್ಭಗಳಲ್ಲಿ ಸಾಲದ ನೆರವನ್ನು ಕೊಡುವುದು. ಒಳಗೆ ರೂಪಾಯಿ ಬೆಲೆ ಹೆಚ್ಚುಕಡಮೆಯಾಗದಂತೆ ನಿಯಮ ಪ್ರಕಾರ ಅದರ ಮೊತ್ತವನ್ನು ಹೆಚ್ಚುಕಡಮೆಮಾಡುವುದಕ್ಕೂ ನಾಣ್ಯದ ಚಲಾವಣೆಯ ಬೆಂಗಾವಲಾದ (ಚಿನ್ನ ಬೆಳ್ಳಿ) ಲೋಹನಿಧಿಯನ್ನು ಒಂದು ಪ್ರಮಾಣದಲ್ಲಿ ಕಾಪಾಡುವುದಕ್ಕೂ ಅಧಿಕಾರ ಪಡೆದುಕೊಂಡಿದೆ. ರೂಪಾಯಿನ ಮಾರುವೆಯ ದರ ಬಹುವಾಗಿ ಏರದಂತೆ ತಗ್ಗದಂತೆ ನೋಡಿ ಕೊಳ್ಳಲು ಬೇಕಾದಾಗ ಪೌಂಡು ಪತ್ರಗಳನ್ನು ಮಾರಿ, ಬೇಕಾದಾಗ ಕೊಂಡು, ಅದನ್ನು ಸ್ತಿಮಿತದಲ್ಲಿಡುವ ಜವಾಬ್ದಾರಿ ಹೊತ್ತಿದೆ. ಇತರ ಬ್ಯಾಂಕುಗಳವರು ಮಾಡುವ ವ್ಯಾಪಾರ ಕಾರ್ಯಗಳನ್ನು ಸಾಧಾರಣವಾಗಿ ಮಾಡದು; ತನ್ನಲ್ಲಿಗೆ ಬರುವ ಡಿಪಾಸಿಟ್ಟುಗಳ ಮೇಲೆ ಬಡ್ಡಿ ಕೊಡದು. ಆದ್ದರಿಂದ ಲಾಭಕ್ಕಾಗಿ ಇತರ ಬ್ಯಾಂಕುಗಳೊಡನೆ ಸ್ಪರ್ಧಿಸದು. ಅವುಗಳ

ಮೂಲಕವೇ ವ್ಯವಹರಿಸುವುದು. ಅವರಿಂದ ಎರಡನೆಯ ಪಟ್ಟಕ್ಕೆ ಹುಂಡಿಗಳನ್ನು ಕೊಂಡು ಪೇಟೆಗೆ ಹಣವೊದಗಿಸುವುದು. ಅಗತ್ಯಬಿದ್ದಾಗ—ಉತ್ಕಟ ಕಾಲಗಳಲ್ಲಿ—ಮಾತ್ರ ತನ್ನ ವಶದಲ್ಲಿರುವ ಹಣಪತ್ರಗಳನ್ನು ಮಾರಿ, ಅಥವಾ ಪೇಟೆಯವರಿಂದ ಕಿರುಸಿಡುವಾಯಿದೆ ಪತ್ರಗಳನ್ನು ಕೊಂಡು, ಪೇಟೆಯಲ್ಲಿ ನೇರವಾಗಿ ವ್ಯವಹರಿಸಿ, ಹಣವನ್ನು ಹೆಚ್ಚಿಸುವುದು; ಕಡಮೆಮಾಡುವುದು. ಮಾರುಪೆಯ ದರವೂ ಪೇಟೆಯ ಧಾರಣೆವಾಸಿಯೂ ಬಡ್ಡಿಯ ದರಗಳೂ ಸಮವಾಗಿ ನಡೆಯುವಂತೆಯೂ ಒಳಹೊರಗಿನವರ ಯಾರ ಸ್ವಪ್ರಯೋಜನ ಸಾಧನೆಯ ಪರಿಣಾಮದಿಂದಲೇ ಆಗಲಿ ಇಲ್ಲಿನ ಹಣ ಕೆಟ್ಟು ಸಂಪದ್ಯಂತ್ರ ಅಸ್ವ್ಯವಸ್ಥಿತವಾಗದಂತೆಯೂ ನೋಡಿಕೊಳ್ಳುವುದು. ಸರಕಾರದ ಎಲ್ಲ ವರಮಾನವನ್ನೂ ಸ್ವೀಕರಿಸಿ, ಅದರ ವೆಚ್ಚಕ್ಕೆ ತೆತ್ತು, ಅದರ ಕಿರುಸಾಲ ನಿಡುಸಾಲಗಳ ಏರ್ಪಾಡನ್ನೂ ಲೆಕ್ಕಾಚಾರ ವ್ಯವಸ್ಥೆಯನ್ನೂ ಮಾಡುವುದು. ಸರಕಾರದವರು ಇಂಗ್ಲೆಂಡಿಗೆ ಸಲ್ಲಿಸಬೇಕಾದ ಹಣವನ್ನೂ ತನ್ನ ಕುಳ ಬ್ಯಾಂಕುಗಳವರಿಗೆ ಬೇಕಾಗುವಷ್ಟು ಪೌಂಡನ್ನೂ ಪರದೇಶಗಳಿಗೆ ಸಲ್ಲಿಸುವುದು. ಇಂಗ್ಲಿಷ್ ಪೇಟೆಯಲ್ಲಿ ಈ ಕೆಲಸ ಸುಲಭವಾಗಿ ನಡೆಯುವಂತೆ ಒಂದು ಶಾಖೆಯನ್ನು ಏರ್ಪಡಿಸಿಕೊಂಡಿರುವುದು. ಬ್ಯಾಂಕ್ ರೇಟಿನ ಮೂಲಕವೂ ನೇರವಾದ ಪೇಟೆಯ ವ್ಯಾಪಾರದ ಮೂಲಕವೂ ಇಲ್ಲಿಯ ಹಣಮಂಡಲವನ್ನು ಆಳಲು ಯೋಗ್ಯತೆಯನ್ನು ಪಡೆದುಕೊಂಡಿರುವುದು.

ಈವರೆಗೂ ನಮ್ಮ ನೋಟ್ ಪದ್ಧತಿ ಇಂಗ್ಲಿಷ್ ಪದ್ಧತಿಯಂತಿತ್ತು; ಎಂದರೆ ಚಲಾವಣೆಗೆ ಎಷ್ಟು ನೋಟು ಬರುತ್ತಿತ್ತೊ ಅದರಲ್ಲಿ ಒಂದು ಗೊತ್ತಾದ ಭಾಗಕ್ಕೆ (ಪರಮಾವಧಿಯೆಂದರೆ ೧೮೦ ಕೋಟಿ ರೂಪಾಯಿ ವರೆಗೆ) ಯಾವ ಲೋಹಕೋಶವನ್ನೂ ಇಡದೆ ಸರಕಾರದ ಹಣಪತ್ರಗಳನ್ನು ಆಧಾರವಾಗಿಟ್ಟು, ಆ ಮಿತಿಗೆ ಮೀರಿದ ನೋಟಿಗೆ ರೂಪಾಯಿಗೆ ರೂಪಾಯಂತೆ ಬೆಳ್ಳಿ ಚಿನ್ನ ಕಾವಲಾಗಿ ಇಡಬೇಕು ಎಂಬ ನಿಯಮವಿತ್ತು. ಈಗ ಅಮೇರಿಕಾ ದಕ್ಷಿಣ ಆಫ್ರಿಕಾ ಮುಂತಾದ ದೇಶಗಳಲ್ಲಿರುವಂತೆ ಶೇಕಡ-ನಿಧಿಯ ಪದ್ಧತಿ ಏರ್ಪಟ್ಟು ರಿಸರ್ವ್ ಬ್ಯಾಂಕಿನ ಆಡಳಿತಕ್ಕೆ ಬಂದಿದೆ. ಒಟ್ಟು ಸಂಚಾರಕ್ಕೆ ಬರುವ ನೋಟಿನ ಬೆಂಗಾವಲಾಗಿ ಅದರ ಶೇಕಡ ೪೦ರಷ್ಟನ್ನು

(⅖ ಭಾಗ) — ಅದರಲ್ಲಿ ಯಾವಾಗಲೂ ೪೦ ಕೋಟಿ ರೂಪಾಯಿ ಬೆಲೆಯ ಚಿನ್ನವಿರತಕ್ಕದ್ದು — ಲೋಹಕೋಶವಾಗಿಡತಕ್ಕದ್ದು, ಎಂಬ ನಿಯಮವಿದೆ. ಉಳಿದ ಭಾಗಕ್ಕೆ ನಿಯತವಾದ ವ್ಯಾಪಾರ ಪತ್ರಗಳನ್ನೂ ಬಡ್ಡಿಯ ಪತ್ರಗಳನ್ನೂ ಶೇಖರಿಸಬೇಕು ಎಂಬುದು ಶಾಸನ. ಈ ಶೇಕಡ ಪ್ರಮಾಣದಷ್ಟು ಲೋಹಕೋಶವಿಲ್ಲದಿರುವಾಗ ಹೆಚ್ಚಾಗಿ ಹಣವನ್ನು ಸಂಚಾರಕ್ಕೆ ತರಬೇಕಾಗಿ ಬಂದಲ್ಲಿ ಒಂದು ಗೊತ್ತಾದ ಕ್ರಮದಂತೆ ಸರಕಾರಕ್ಕೆ ತೆರಿಗೆ ಕೊಟ್ಟು ಸ್ವಲ್ಪಕಾಲದ ಮಟ್ಟಿಗೆ ಹಾಗೆ ಮಾಡಬಹುದೆಂದು ಶಾಸನವಾಗಿದೆ.

**— ಮಾರುವೆ. —** ಎರಡನೆಯದಾಗಿ ಇಲ್ಲಿನ ರೂಪಾಯಿ - ಪೌಂಡು ಮಾರುವೆಯ ಸ್ಥೈರ್ಯವನ್ನೂ ಬ್ಯಾಂಕೇ ಕಾಪಾಡಬೇಕಾಗಿದೆ. ಪೌಂಡಿನ ಲೆಕ್ಕದಲ್ಲಿಯೇ ಹೊರವ್ಯಾಪಾರ ನಡೆಯಬೇಕೆಂಬ ವಿಧಿ ಇರುವುದರಿಂದಲೂ ಮಾರುವೆಯ ದರ ಹಿಂದೆ ಹೇಳಿದಂತೆ ರೂಪಾಯಿಗೆ ೧೮ ಪೆನ್ನಿ ಎಂದು ವಿಧಾಯಕವಾಗಿರುವುದರಿಂದಲೂ ಆ ದರದ ಆಚೆ ಈಚೆ ³⁄₁₆ ಪೆನ್ನಿ ದಾಟದಂತೆ ಬ್ಯಾಂಕು ಏರ್ಪಡಿಸಬೇಕು. ಆದ್ದರಿಂದ ಬ್ಯಾಂಕು ತನ್ನಲ್ಲಿರುವ ನಿಧಿಗಳ ಬಲದ ಮೇಲೆ ಬೇಕಾದಷ್ಟು ಪೌಂಡನ್ನು ಮಾರುತ್ತ ಕೊಳ್ಳುತ್ತ ಈ ದರವನ್ನು ಸಾಧಿಸಲು ಸಿದ್ಧವಾಗಿರುತ್ತದೆ.

**— ಇಂಪೀರಿಯಲ್ ಬ್ಯಾಂಕು. —** ಇಲ್ಲಿನ ವಿಶೇಷ ಅಂಶಗಳು ಎರಡು: ಮುಂದೆ ೧೫ ವರ್ಷಗಳ ಕಾಲ ಇಂಪೀರಿಯಲ್ ಬ್ಯಾಂಕಿನ ನೆರವನ್ನು ತೆಗೆದುಕೊಂಡು ಅದು ಈವರೆಗೂ ತೆರೆದಿರುವ ಶಾಖೆಗಳ ಮೂಲಕ ತನ್ನ ಹಣ ಕಾರ್ಯಗಳನ್ನು ಮಾಡಬೇಕು ಎಂಬುದೊಂದು. ಈ ದೇಶದ ಜನ ಶೇಕಡ ೭೦ಕ್ಕೆ ಮಿಾರಿ ವ್ಯವಸಾಯದಿಂದ ಜೀವನ ಮಾಡುತ್ತಿರುವುದರಿಂದ ವ್ಯವಸಾಯದ ಪೇಟೆಯನ್ನು ಒಂದು ವ್ಯವಸ್ಥೆಗೆ ತರಲು ನೆರವಾಗಬೇಕೆಂಬುದು ಎರಡನೆಯದು. ಹೆಚ್ಚು ಬ್ಯಾಂಕುಗಳಿಲ್ಲದೆ ಇರುವ ಈ ದೇಶದಲ್ಲಿ ಅವು ಬೆಳೆಯುವಂತೆ ಮಾಡುವ ಕಾರ್ಯವನ್ನು ಇಂಪೀರಿಯಲ್ ಬ್ಯಾಂಕು ಕೈಕೊಂಡು ಅನೇಕ ಶಾಖೆಗಳನ್ನು ಏರ್ಪಡಿಸಿ ಈವರೆಗೂ ಪ್ರಧಾನ ಬ್ಯಾಂಕಿನ ಕೆಲಸವನ್ನು ಮಾಡುತ್ತಿದ್ದಿತು. ಈವರೆಗೂ ಸರಕಾರದ ಹಣಕಾರ್ಯಗಳಲ್ಲಿ ಬಹಳವಾಗಿ ಅನುಭವಪಡೆದಿರುವುದರಿಂದ ರಿಸರ್ವ್ ಬ್ಯಾಂಕು ಬೇರೂರಿ ಚೆನ್ನಾಗಿ ನಿಲ್ಲುವವರೆಗೂ ಅದರ ಹಣಕಾರ್ಯದಲ್ಲಿ ನೆರವು ಕೊಡುವುದು

ಅಗತ್ಯವೇ ಆಗುವುದು. ಸಹಕಾರದ ಪ್ರಾಂತ ಬ್ಯಾಂಕುಗಳನ್ನು ತನ್ನ ಕುಳವನ್ನಾಗಿ ಮಾಡಿಕೊಂಡು, ವ್ಯವಸಾಯ ಪೇಟೆಯ ಆಧಾರಪತ್ರಗಳ ಮೇಲೆ ೯ ತಿಂಗಳ ವಾಯಿದೆಯ ಪತ್ರಗಳನ್ನು ಆ ಸಂಸ್ಥೆಗಳ ಮೂಲಕ ವಟ್ಟಕ್ಕೆ ಕೊಂಡು ವ್ಯವಸಾಯ ಪ್ರಪಂಚಕ್ಕೆ ಹಣವೊದಗಿಸಬಹುದೆನ್ನುವ ಏರ್ಪಾಡು ಬಹು ಪರಿಣಾಮಕಾರಿಯಾಗುವುದು. ಸಾಧಾರಣವಾಗಿ ಮೂರು ತಿಂಗಳ ವಾಯಿದೆಗೆ ಮೀರಿದ ಅವಧಿಯ ಪತ್ರಗಳನ್ನು ಕೊಂಡು ಮಾರುವ ಕಾರ್ಯ ಇದಕ್ಕೆ ಸಲ್ಲದಾದರೂ ಅಮೇರಿಕಾ, ದಕ್ಷಿಣ ಆಫ್ರಿಕಾ, ಆರ್ಜೆಂಟೈನ, ಹಂಗೆರಿ ಮುಂತಾದ ದೇಶಗಳಲ್ಲಿನಂತೆ ಈ ಸೌಕರ್ಯವನ್ನು ಕಲ್ಪಿಸಿಕೊಡಲು ಮುಂದೆ ಬಂದಿರುವುದು ಉತ್ತರೋತ್ತರ ಪ್ರಯೋಜನಕಾರಿಯಾಗದೆ ಇರದು. ವ್ಯವಸಾಯ ಪ್ರಪಂಚಕ್ಕೆ ಬೇಕಾದ ಎಲ್ಲ ಧನಸಹಾಯಗಳನ್ನೂ ಹೇಗೆ ಒದಗಿಸಿ ವ್ಯವಸ್ಥೆ ಮಾಡಬೇಕೆಂಬ ಸಂಗತಿಯನ್ನು ಕೂಲಂಕಷವಾಗಿ ಪರ್ಯಾಲೋಚನೆ ಮಾಡಿ ಸರಕಾರಕ್ಕೆ ವರದಿ ಹೇಳಿ ಅದಕ್ಕೆ ಎಲ್ಲ ಬಗೆಯಲ್ಲಿಯೂ ನೆರವೀಯುವ ಪ್ರಯತ್ನವನ್ನು ಬೇಗನೆ ಕೈಕೊಳ್ಳಬೇಕೆಂಬ ರಾಜಶಾಸನವೂ ಶುಭಕಾರಿಯಾಗಬಲ್ಲದು.

**ಆಡಳಿತ ವ್ಯವಸ್ಥೆ.**—ಬಹುಕಾಲದ ಬಯಕೆಯಾಗಿದ್ದ ಈ ಸಂಸ್ಥೆ ಏರ್ಪಟ್ಟುದರಿಂದ ದೇಶದ ಸಂಪದಭಿವೃದ್ಧಿಕಾರ್ಯಗಳು ಇನ್ನು ಮುಂದೆ ಹೆಚ್ಚು ವಿಚಕ್ಷಣೆಯಿಂದ ನಡೆದಾವು. ಬ್ಯಾಂಕ್ ಆಫ್ ಇಂಗ್ಲಂಡಿನಲ್ಲಿರುವಂತೆ—ಆ ಅಗತ್ಯವಿರಲಿಲ್ಲ, ಆದರೂ—ಈ ಬ್ಯಾಂಕಿನಲ್ಲಿಯೂ ಬ್ಯಾಂಕಿಂಗ್ ಶಾಖೆ, ನೋಟಿನ ಶಾಖೆ ಎಂಬ ಭಾಗಗಳಿರತಕ್ಕದ್ದೆಂದೂ, ಇವುಗಳ ಕಾರ್ಯಕಲಾಪ ಹೀಗೆ ಹೀಗೇ ಇರಬೇಕೆಂದೂ ಶಾಸನವಾಗಿದೆ. ಇದು ಷೇರುದಾರರ ಬ್ಯಾಂಕಾದರೂ ದೇಶದ ಸಕಲ ವರ್ಗಗಳವರ ಪ್ರಯೋಜನಕ್ಕೂ ಕಾರಣವಾಗಿರಲು ಸರಕಾರದವರು ಅನೇಕ ನಿರ್ಬಂಧಗಳನ್ನು ಮಾಡಿದ್ದಾರೆ. ಕೆಲವೇ ಬಂಡವಾಳಗಾರರ ಕೈಗೆ ಬ್ಯಾಂಕು ಸಿಕ್ಕಿ ಅದರ ಕಾರ್ಯ ಕೆಡದಂತೆ, ಯಾರ ಹೆಸರಿನಲ್ಲಿಯೂ ಒಂದು ಮಿತಿಗೆ ಮೀರಿ ಷೇರುಗಳಿರಕೂಡದೆಂದೂ ಈ ಈ ಪ್ರಾಂತಗಳ ಬಂಡವಾಳದ ಭಾಗ ಈ ಈ ಮಿತಿಗೆ ಮೀರತಕ್ಕದ್ದಲ್ಲವೆಂದೂ ಜನರ ಹೆಸರಿನಲ್ಲಿ ಎಷ್ಟೇ ಷೇರಿರಲಿ ೧೦ ವೋಟುಗಳಿಗಿಂತ ಹೆಚ್ಚಿನ ಅಧಿಕಾರ ಯಾರೊಬ್ಬರಿಗೂ ಇಲ್ಲವೆಂದೂ ವಿಧಿಸಿ ಬಂಡವಾಳವನ್ನು ಹಂಚಿ ಹರಡಿದ್ದಾರೆ.

ಬ್ಯಾಂಕಿನ ಲಾಭದಲ್ಲಿ ಷೇರುದಾರರದು ಇಷ್ಟು ಭಾಗ, ಸರಕಾರದ್ದಿಷ್ಟು ಭಾಗ ಎಂದು ಗೊತ್ತುಮಾಡಿದ್ದಾರೆ. ರಾಜಕೀಯಕ್ಕೆ ಸೇರಿದ ಕಕ್ಷಿಗಳ ಕೈವಾಡಕ್ಕೂ ಪ್ರಭಾವಕ್ಕೂ ಸಿಕ್ಕಿ ಇದರ ಕೆಲಸ ಕೆಡದಂತೆ ಇರಬೇಕೆಂದು ಇದರ ಚಾಲಕ ಮಂಡಲಿಯಲ್ಲಿ (Directorate) ಶಾಸನ ಸಭೆಗಳ ಸದಸ್ಯರೂ ಸರಕಾರದ ನೌಕರರೂ ಇರಕೂಡದೆಂದು ವಿಧಿಸಿದ್ದಾರೆ.

**ನ್ಯೂನತೆಗಳು.**—ಇಂಥ ಬ್ಯಾಂಕು ಸಾಧಿಸಲಾಗದ ಕೆಲಸವೇ ಇಲ್ಲ. ಆದುದರಿಂದ ಅದು ಎಷ್ಟು ಸೂಕ್ಷ್ಮ ವಿವೇಚನೆಯಿಂದ, ಲಘು ಚಳಕದಿಂದ, ದೂರದರ್ಶನದಿಂದ, ಸಮಯ ಸ್ಫೂರ್ತಿಯಿಂದ, ಯಾವ ಒಳಹೊರ ರಾಜಕೀಯ ಪ್ರಭಾವಕ್ಕೂ ಬಾಗದ ಸ್ವಾಧೀನತೆಯಿಂದ ದೇಶಹಿತವನ್ನು ಸಾಧಿಸುವುದೊ ಅಷ್ಟೂ ಅಷ್ಟು ದೇಶದ ಮಂಗಳವನ್ನು ಗಳಿಸಬಹುದಾಗುವುದು. ತನ್ನ ರಚನೆ, ಅಧಿಕಾರಿವರ್ಗ, ಮಾರುಮೆಯ ಗರ ಮತ್ತು ನಾಣ್ಯಪದ್ಧತಿಗಳ ವಿಚಾರದಲ್ಲಿ ಅದು ನಡಸಬೇಕಾದ ನೀತಿ, ಇಂಪೀರಿಯಲ್ ಬ್ಯಾಂಕಿನ ಸಂಬಂಧದಲ್ಲಿಯೂ ದೇಶೀ ಬ್ಯಾಂಕುಗಳ ಸಂಬಂಧದಲ್ಲಿಯೂ ಅದರ ವರ್ತನೆ, ಅದರ ಲೆಕ್ಕಾಚಾರಗಳಲ್ಲಿ ಬ್ಯಾಂಕಿಂಗ್ ಮತ್ತು ಇಶ್ಯೂ ಇಲಾಖೆಗಳೆರಡರ ಅಗತ್ಯ ಮುಂತಾದುವುಗಳನ್ನು ಕುರಿತು ಬೇಕಾದಹಾಗೆ ಟೀಕೆಮಾಡಿ ಕುಂದು ಕೊರತೆಗಳನ್ನು ಸೂಚಿಸಬಹುದು. ಉದಾಹರಣೆ: ರಾಜಕೀಯ ಪಕ್ಷಗಳ ಪ್ರಭಾವವನ್ನು ತಪ್ಪಿಸುವ ಉದ್ದೇಶದಿಂದ ಮಾಡಿರುವ ಏರ್ಪಾಡು ಈ ದೇಶದ ಜನನಾಯಕರ ಮತ್ತು ಶಾಸನ ಸಭೆಗಳವರ ಪ್ರಭಾವವನ್ನು ತಪ್ಪಿಸುವುದೇ ಹೊರತು ಕೇಂದ್ರ ಸರಕಾರದ ಅಧಿಕಾರಕ್ಕೆ ಯಾವ ಚ್ಯುತಿಯೂ ಇಲ್ಲದಂತೆ ರಚಿತವಾಗಿದೆ. ಮೊದಲಿಂದಲೂ ಇಂಗ್ಲಿಷ್ ಹಣದ ಪೇಟೆಗೂ ಹಣನೀತಿಗೂ ಅಧೀನವಾಗಿ ಇಲ್ಲಿನ ಹಣಕಾರ್ಯ ನಡೆಯುತ್ತಿದ್ದು, ಅವರ ಭಾಗ್ಯಕ್ಕೆ ಬಗ್ಗಿದ್ದಂತೆಯೇ ಮುಂದೆಯೂ ನಡೆಯುವುದು. ಇಲ್ಲಿನ ಜನರೂ ನಾಯಕರೂ ಎಷ್ಟು ಪ್ರತಿಭಟಿಸಿದರೂ ರೂಪಾಯನ್ನು ಪೌಂಡಿನ ಅದೃಷ್ಟಕ್ಕೆ ಗಂಟುಹಾಕಿರುವುದೂ, ಬೆಳ್ಳಿಯ ಗೌರವವನ್ನು ಹಣಪದ್ಧತಿಯಲ್ಲಿ ಕಡಮೆ ಮಾಡಿ ತಗ್ಗಿಗೆ ಕೊಂಡದ್ದನ್ನು ಅಗ್ಗಕ್ಕೆ ಮಾರುತ್ತಿರುವುದೂ, ಗೌರ್ನರ್-ಜನರಲ್ಲಿನ ಅಪ್ಪಣೆಯಿಲ್ಲದೆ—ಎಂದರೆ ಬ್ರಿಟಿಷ್ ಪಾರ್ಲಮೆಂಟಿನ ಅಪ್ಪಣೆಯಿಲ್ಲದೆ—ಇಲ್ಲಿನ ಹಣಪದ್ಧತಿಯನ್ನಾಗಲಿ ಮಾರುವೆದರವನ್ನಾಗಲಿ ವ್ಯತ್ಯಾಸ

ಗೊಳಿಸುವ ಅಧಿಕಾರ ಈ ದೇಶಕ್ಕೆ ಇಲ್ಲದಿರುವುದೂ ದೊಡ್ಡ ಕೊರತೆಗಳು. ಪ್ರತಿ ದೇಶದ ಸರಕಾರಕ್ಕೂ ಅಲ್ಲಿನ ಪ್ರಧಾನ ಬ್ಯಾಂಕಿಗೂ ಈ ಬಗೆಯ ಸಂಬಂಧಗಳು ಕಡ್ಡಾಯವಾಗಿವೆಯಲ್ಲವೆ? ಎಂದು ಕೇಳಬಹುದು. ಆದರೆ ಆ ದೇಶಗಳ ಸರಕಾರಗಳು ಪ್ರಜಾಧಿಕಾರಕ್ಕೆ ಒಳಪಟ್ಟುವು; ಪ್ರಜೆಗಳಿಗೆ ಉತ್ತರವಾದಿಯಾದುವು; ಸ್ವತಂತ್ರವಾದುವು.

**ಚಾಲಕ ಮಂಡಲ.** — ಬ್ಯಾಂಕಿನ ಚಾಲಕ ವರ್ಗದಲ್ಲಿ ಒಟ್ಟು ೧೬ ಜನ ಇರುವರು: ಒಬ್ಬರು ಮ್ಯಾನೇಜಿಂಗ್ ಗೌರ್ನರು; ಇಬ್ಬರು ಡೆಪ್ಯೂಟಿ ಮ್ಯಾನೇಜಿಂಗ್ ಗೌರ್ನರುಗಳೆಂಬ ಅವರ ಸಹಾಯಕರು; ೮ ಜನ ಡೈರೆಕ್ಟರುಗಳನ್ನು ಮಾತ್ರ ಬ್ಯಾಂಕಿನ ಪ್ರಾಂತ ಶಾಖೆಗಳವರು ಚುನಾಯಿಸಿ ಪ್ರತಿನಿಧಿಗಳಾಗಿ ಕಳುಹಿಸುವರು; ೪ ಜನ ಡೈರೆಕ್ಟರುಗಳನ್ನು ಗೌರ್ನರ್-ಜನರಲ್ಲರು ನಿಯಮಿಸುವರು; ಇವರ ಜೊತೆಗೆ ಸರಕಾರದ ಪ್ರತಿನಿಧಿಯಾದ ಒಬ್ಬರು — ಬಹುತರ ಧನಾಧಿಕಾರಿ — ಚಾಲಕ ಮಂಡಲದಲ್ಲಿ ಇರಬೇಕೆಂದು ಶಾಸನವಾಗಿದೆ. ಮೊದಲು ಬಾರಿ ಮುಖ್ಯಾಧಿಕಾರಿಗಳನ್ನು ನಿಯಮಿಸಿದವರೂ ಸರಕಾರದವರೇ. ಹೀಗಿರುವಾಗ ಸರಕಾರದ ಅಧಿಕಾರ ಬ್ಯಾಂಕಿನ ಮೇಲೆ ಅತಿಯಾಗುವುದು ಎಂಬ ಭೀತಿ ಸಹಜವೇ. ಡೆಪ್ಯೂಟಿ ಗೌರ್ನರುಗಳಾಗಲಿ ಸರಕಾರದ ಪ್ರತಿನಿಧಿಯಾಗಲಿ ಚರ್ಚೆಯಲ್ಲಿ ಮಾತ್ರ ಭಾಗವಹಿಸುವರೇ ಹೊರತು ಅಭಿಮತಕೊಡುವ ಹಕ್ಕುಳ್ಳವರಲ್ಲ ಎಂಬ ಸಂಗತಿ ಅಷ್ಟೇನೂ ಸಮಾಧಾನ ತರುವಂಥದಲ್ಲ. ಪ್ರಬಲರಾದ ಅವರ ಮಾತಿನ ಬೆಲೆಗೆ ತಕ್ಕಂತೆ ಬ್ಯಾಂಕಿನ ರೀತಿ ನೀತಿ ತೂಗಬೇಕಾಗುವುದು. ಇಂಪೀರಿಯಲ್ ಬ್ಯಾಂಕು ಇನ್ನು ಮೇಲೆ ಯಾವ ಕಟ್ಟು ಅಂಕೆ ಆತಂಕಗಳೂ ಇಲ್ಲದೆ ತನ್ನ ಶಾಖೆಗಳ ಮೂಲಕ ರಿಸರ್ವ್ ಬ್ಯಾಂಕಿನ ಪ್ರತಿನಿಧಿಯಾಗಿ ದಲ್ಲಾಳಿಯಾಗಿ (Agent) ಕೆಲಸಮಾಡುತ್ತ ಇರುವುದರಿಂದ ಅದರ ಪೈಪೋಟಿ ತಟ್ಟಿ ದೇಶದ ಇತರ ಕೂಡುಬಂಡವಾಳದ ಬ್ಯಾಂಕುಗಳು ಮೊದಲಿಗಿಂತ ಹೆಚ್ಚಾಗಿ ಗಾಸಿಪಡುವ ಅವಕಾಶವೂ ಬೇಕಾದಷ್ಟಿದೆ. ಕುಳ ಬ್ಯಾಂಕುಗಳವರ ಕೈನಿಧಿಯೆಲ್ಲ ರಿಸರ್ವ್ ಬ್ಯಾಂಕಿಗೆ ಬಂದ ಹೊರತು ಅವರ ಮೇಲಿನ ಆಡಳಿತ ವ್ಯವಸ್ಥೆ ಬಿಗಿಯಾಗದೆ ಇರುವುದೂ ಸಾಧ್ಯ. ಒಳದೇಶದ ಹಣ ಪೇಟೆ, ವ್ಯಾಪಾರ, ಕೈಗಾರಿಕೆ, ವ್ಯವಸಾಯದ ಪೇಟೆಗಳನ್ನು ಒಂದು ಧಾತುವಿಗೆ ತರುವ ಕಾರ್ಯ ದೊಡ್ಡ

ದಾಗಿರುವಾಗ ಒಳವ್ಯಾಪಾರಕ್ಕೆಲ್ಲ ವಿಪುಲವಾಗಿ (ಸುಮಾರು ಅರ್ಧದಷ್ಟಕ್ಕೆ) ಹಣ ಒದಗಿಸಿ ಲೇವಾದೇವಿ ಮಾಡುತ್ತಿರುವ ಸರಾಫರ ಮಂಡಲ ನೇರವಾಗಿ ರಿಸರ್ವ್ ಬ್ಯಾಂಕಿನ ಕುಳವರ್ಗಕ್ಕೆ ಸೇರಿಲ್ಲ. ಇದೂ ಒಂದು ದೊಡ್ಡ ಕೊರತೆಯೇ. ಆದರೆ ರಿಸರ್ವ್ ಬ್ಯಾಂಕೂ ಇಂಪೀರಿಯಲ್ ಬ್ಯಾಂಕಿನಂತಹ ಒಂದು ದೊಡ್ಡ ವ್ಯಾಪಾರದ ಬ್ಯಾಂಕೂ ಕೈಸೇರಿಸಿ ದೇಶದ ಆರ್ಥಿಕ ಮಂಗಳಕ್ಕಾಗಿ ದುಡಿಯುವಂತಾದರೆ ಬಹಳ ಪ್ರಯೋಜನವುಂಟು. ಹೊಸ ಪದ್ಧತಿ ಕೆಲವು ವರ್ಷಗಳ ಕಾಲ ನಡೆದ ಹೊರತು ಅದರ ಕಷ್ಟಗಳೇನು, ಸುಖವೇನು? ಕೊರತೆಯೇನು, ಅನುಕೂಲಗಳೇನು ಎಂದು ಗೊತ್ತಾಗುವುದಿಲ್ಲವಾಗಿ ಅದರ ಕಾರ್ಯಕ್ಕೆ ಸಂಪೂರ್ಣವಾಗಿ ಸಹಕಾರಕೊಡುವುದೂ ಹಿತಕರವಾಗಿ ನಡೆಯುವಂತೆ ವಿಮರ್ಶೆ ಮಾಡುವುದೂ ತಾಳ್ಮೆಯಿಂದ ಸಲಹೆಕೊಡುವುದೂ ಮೇಲೆಂದು ಕಾಣುತ್ತದೆ.

## ವಿದೇಶಿ ಮಾರುವೆಯ ಬ್ಯಾಂಕುಗಳು

### (The Foreign Exchange Banks)

ಈ ದೇಶದ ವಿದೇಶಿ ವ್ಯಾಪಾರದ ಸುಮಾರು 'ಸರ್ವಮಾನ್ಯ'ವನ್ನು ಈವರೆಗೂ ಪಡೆದಿದ್ದವರು ವಿನಿಮಯದ ಬ್ಯಾಂಕುಗಳೆಂಬ ಹೆಸರಿನ ೧೮* ವಿದೇಶಿ ಬ್ಯಾಂಕುಗಳು. ನಮ್ಮ ದೇಶದ ಬ್ಯಾಂಕುಗಳು ಮಾರುವೆ ವ್ಯಾಪಾರವನ್ನು ಮಾಡಕೂಡದೆಂಬ ಯಾವ ವಿಧಿಯೂ ಇಲ್ಲದಿದ್ದರೂ, ಇವರೊಡನೆ ನಿಂತು ವ್ಯಾಪಾರದಲ್ಲಿಯೂ ಪೈಪೋಟಿಯಲ್ಲಿಯೂ ಉಳಿಯುವ ಸತ್ವ ನಮ್ಮ ಬ್ಯಾಂಕುಗಳಿಗಿರಲಿಲ್ಲ. ಇಂಪೀರಿಯಲ್ ಬ್ಯಾಂಕು ಆ ಕೆಲಸವನ್ನು ಈವರೆಗೂ ಮಾಡಕೂಡದಾಗಿತ್ತು. ಆದುದರಿಂದ ಕೆಲವು ವರ್ಷಗಳಲ್ಲಿ (೧೯೨೮–೨೯) ಸುಮಾರು ೬೦೦ ಕೋಟಿ ರೂಪಾಯಿಗಳ ಮೊತ್ತದವರೆಗೂ ವಿದೇಶಿ ವ್ಯಾಪಾರವನ್ನು ಈ ಬ್ಯಾಂಕುಗಳೇ ಮಾಡುತ್ತಿದ್ದುವು. ಈ ಎಲ್ಲ ಸಂಸ್ಥೆಗಳ

* ೧೮ರಲ್ಲಿ ಎರಡು ಕೇವಲ ಪ್ರಯಾಣಿಕರ ಸೌಕರ್ಯಕ್ಕಾಗಿ ಕೆಲಸಮಾಡುತ್ತಿದ್ದುವು; ೫ ಕಂಪನಿಗಳು ಮಾತ್ರ ಬಹುವಾಗಿ ನಮ್ಮ ಹೊರ ವ್ಯಾಪಾರದ ಚಾಲನೆಗಾಗಿಯೇ ಇದ್ದುವೆನ್ನಬಹುದು; ಉಳಿದುವು ಇತರ ದೇಶಗಳ ವ್ಯಾಪಾರವನ್ನು ನಡಸುತ್ತಿದ್ದಂತೆಯೇ ಈ ದೇಶದೊಡನೆಯೂ ಲೇವಾದೇವಿ ಕೆಲಸವನ್ನು ನಡಸುತ್ತಿದ್ದವು.

ಮುಖ್ಯ ಕಾರ್ಯಾಲಯುಗಳೂ ವಿದೇಶಗಳ ಮುಖ್ಯ ಪಟ್ಟಣಗಳಲ್ಲಿ; ಶಾಖೆಗಳು ಪ್ರಪಂಚದ ನಾನಾ ಭಾಗಗಳಲ್ಲಿರುವುವು.*

ವಿದೇಶಿ ವ್ಯಾಪಾರದ ಲೇವಾದೇವಿಯೆಂದರೆ ಇಲ್ಲಿನ ರೇವಿನಿಂದ ವಿದೇಶಗಳ ರೇವುಗಳಿಗೆ ಸಾಗುವ ಕಾರ್ಯಗಳಿಗೆ ಸಂಬಂಧಪಟ್ಟುದು; ಅಲ್ಲಿಂದ ಇಲ್ಲಿಗೆ ಬರುವುದಕ್ಕೆ ಸಂಬಂಧಿಸಿದುದು; ಮತ್ತು ಒಳದೇಶದ ಪೇಟೆ ಪಟ್ಟಣಗಳಿಂದ ರೇವುಪಟ್ಟಣಗಳಿಗೂ, ರೇವುಪಟ್ಟಣಗಳಿಂದ ಒಳದೇಶದ ಪೇಟೆ ಪಟ್ಟಣಗಳಿಗೂ ನಡೆಯುವ ವ್ಯಾಪಾರಕ್ಕೆ ಸಂಬಂಧಿಸಿದ ವ್ಯಾಪಾರ. ಈ ವ್ಯಾಪಾರದ ಜೊತೆಗೆ ಈ ಬ್ಯಾಂಕುಗಳು ಇತರ ಬಗೆಯ ಸಾಧಾರಣ ಬ್ಯಾಂಕಿಂಗ್ ಕೆಲಸವನ್ನು ಎಂದರೆ ಚಾಲ್ತಿ ಡಿಪಾಸಿಟ್ ಮತ್ತು ಸೇವಿಂಗ್ಸ್ ಡಿಪಾಸಿಟ್ ವ್ಯಾಪಾರ, ಫಿಕ್ಸೆಡ್ ಡಿಪಾಸಿಟ್ ಕೆಲಸ ಮಾಡುವುವು. ವಿದೇಶಿ ಹುಂಡಿಗಳನ್ನು ಕೊಳ್ಳುವುವು; ಮಾರುವುವು; ಹಡಗಿನಲ್ಲಿ ಸಾಗುತ್ತಿರುವ ಸಾಮಾನುಗಳ ಮೇಲೆಯೂ ಇತರ ಬಗೆಯ ವಿದೇಶಿ ವ್ಯಾಪಾರ ಪತ್ರಗಳ ಆಧಾರದ ಮೇಲೆಯೂ ಸಾಲ ಕೊಡುವುವು; ದೇಶದೊಳಕ್ಕೆ ಆಮದಾಗುವ ಚಿನ್ನ ಬೆಳ್ಳಿ ವ್ಯಾಪಾರಕ್ಕೆ ಹಣ ಒದಗಿಸುವುವು. ಇವರ ಹಣಗಳಲ್ಲಿ ಒಟ್ಟು ಎಷ್ಟು ಭಾಗ ಇಲ್ಲಿನ ವ್ಯಾಪಾರಕ್ಕೆ ಹೂಡಿರುವುದು, ಉಪಯೋಗವಾಗುತ್ತಿರುವುದು ಎಂಬ ಲೆಕ್ಕ ಸಿಕ್ಕುವುದಿಲ್ಲ. ಆ ಲೆಕ್ಕವನ್ನು ತೋರಿಸಬೇಕೆಂಬ ಯಾವ ಸರಕಾರದ ನಿಬಂಧನೆಯೂ ಇರುತ್ತಿರಲಿಲ್ಲ. ವಿದೇಶಿ ವ್ಯಾಪಾರಕ್ಕೆ ನೆರವು ಬೇಕಾಗುವ ಸುಮಾರು ಎಲ್ಲ ದೊಡ್ಡ ಆಮದು ರಫ್ತು ವ್ಯಾಪಾರಿಗಳೂ ಇವುಗಳಲ್ಲಿ ತಮ್ಮ ಡಿಪಾಸಿಟ್ಟು ಇಟ್ಟಿರುವರು.

ದೇಶ ವಿದೇಶಗಳ ಮುಖ್ಯ ವ್ಯಾಪಾರ ಪಟ್ಟಣಗಳಲ್ಲಿ ಶಾಖೆಗಳನ್ನು ನಡಸುವ ಇವರು ಎಲ್ಲೆಲ್ಲಿ ಸುಲಭವಾಗಿ ಬಡ್ಡಿಗೆ ಡಿಪಾಸಿಟ್ ಹಣ ಸಿಕ್ಕುವುದೊ ಅಲ್ಲೆಲ್ಲ ಡಿಪಾಸಿಟ್ಟು ತೆಗೆದುಕೊಳ್ಳುವರು. ಇವರ ಕೈಯಲ್ಲಿ ಓಡಿಯಾಡುವ ಹಣದ ಮೊತ್ತ ಬಹಳವಾಗಿರುವುದು. ಸುಮಾರು ೧೮ ಕೋಟಿ ಪೌಂಡಿನಷ್ಟು ಬಂಡವಾಳ ಮತ್ತು ಆಪದ್ಧನಗಳುಳ್ಳವರು ಇವರು;

* ೮ ರ ಮುಖ್ಯ ಕಚೇರಿ ಇಂಗ್ಲಂಡಿನಲ್ಲಿ; ೩ ಜಪಾನಿನವು, ೨ ಹಾಲೆಂಡಿನವು; ಉತ್ತರ ಅಮೇರಿಕಾದವು ೨; ಫ್ರಾನ್ಸಿನದೂ ಪೋರ್ಟುಗಲ್ಲಿನದೂ ಒಂದೊಂದು; ಹಾಂಗ್ ಕಾಂಗಿನದು ೧; ಒಟ್ಟು ೧೮.

ನಮ್ಮ ದೇಶದವರಿಟ್ಟ ಡಿಪಾಸಿಟ್ ಮೊತ್ತ ೬೦-೬೭ ಕೋಟಿ ರೂಪಾಯಿ ; ವಿದೇಶಿ ವ್ಯಾಪಾರದ ಸಂಚಾಲನೆ ಎಲ್ಲ ಅವರ ಕೈಯಲ್ಲಿದೆ; ಯಾವಾಗ ಬೇಕೆಂದರೆ ಆಗ ಹೊರಗಿನ ಪೇಟೆಗಳಲ್ಲಿ ಅತಿ ಸ್ವಲ್ಪ ದರದ ಬಡ್ಡಿಗೆ ಹಣದ ಸಾಲ ತೆಗೆದು ಅತಿ ಹೆಚ್ಚು ಬಡ್ಡಿ ದೊರಕುವ ನಮ್ಮ ದೇಶದಂತಹ ಪೇಟೆಗಳ ಮೇಲೆ ಸಾಲಹಾಕಿ ಲಾಭಪಡೆಯುವ ಅವಕಾಶ ಇವರಿಗೆ ಉಂಟು.

ಎಲ್ಲ ದೇಶಗಳ ವಿದೇಶಿ ವ್ಯಾಪಾರದ ಹುಂಡಿಗಳನ್ನೂ ಇವರು ಕೊಂಡು ಮಾರಲು ಸಿದ್ಧರಿರುವುದರಿಂದ ವಿದೇಶಿ ವ್ಯಾಪಾರ ಸಾಲಗಳನ್ನು ಹರಿಸಲು ಶಕ್ತರಾಗಿರುವರು. ಇವರಮೇಲೆ ದೇಶದ ಯಾವ ಪ್ರಧಾನ ಬ್ಯಾಂಕಿನ ಅಧಿಕಾರವೂ ನಡೆಯುತ್ತಿರಲಿಲ್ಲವಾದ್ದರಿಂದ ತಮ್ಮ ಲಾಭ ಪ್ರಯೋಜನಗಳ ಮೇಲೆ ಮಾತ್ರ ಗಮನವಿಟ್ಟು ಈ ಪೇಟೆಯ ಹದವನ್ನೂ ಹಣ ಕಾರ್ಯದ ವ್ಯವಸ್ಥೆಯನ್ನೂ ಕೆಡಿಸಲು ಬೇಕಾದಷ್ಟು ಅವಕಾಶವಿತ್ತು. ತಮಗೆ ಬೇಕಾದಂತೆ ದೇಶದೊಳಕ್ಕೆ ಹೆಚ್ಚು ಹಣ ತಂದು ಹೂಡುತ್ತ, ಇಲ್ಲಿಂದ ಹಣವನ್ನೂ ಹುಂಡಿಯ ವ್ಯಾಪಾರವನ್ನೂ ಸಾಗಿಸುತ್ತ ಯಾವ ಅಂಕೆಗೂ ಬಾಗದೆ ಇರುತ್ತಿದ್ದರು. ಯಾವೊಂದು ಸಮಯದಲ್ಲಿಯೇ ಆಗಲಿ ತಮಗೆ ಲಾಭವಿಲ್ಲದಿದ್ದರೆ ಇಲ್ಲಿನ ಒಳವ್ಯಾಪಾರ ಮಂಡಲದ ಸಹಾಯಕ್ಕೆ ಬರಲು ಇಷ್ಟವಿಲ್ಲದೆ ಇಲ್ಲಿನ ಹಿತಕ್ಕೆ ಭಕ್ತಿ ತೋರಿಸದೆ ಲಾಭಕ್ಕೆ ಮಾತ್ರ ಕೈಹಾಕು ತ್ತಿದ್ದ ಈ ಬ್ಯಾಂಕುಗಳು ಇನ್ನುಮೇಲೆ ರಿಸರ್ವ್ ಬ್ಯಾಂಕಿನ ಅಧಿಕಾರಕ್ಕೆ ಒಳಪಟ್ಟಾವೆಂಬ ಭರವಸೆ ತೋರುತ್ತಿದೆ. ಅಲ್ಲದೆ ಈವರೆಗೂ ಇದ್ದ ತಡೆ ಮುರಿದುಬಿದ್ದು ಇಂಪೀರಿಯಲ್ ಬ್ಯಾಂಕಿನವರೂ ಇತರರೂ ವಿದೇಶಿ ಮಾರುವೆಯ ವ್ಯಾಪಾರಕ್ಕೆ ನೆರೆಯಲು ಅವಕಾಶ ಸಿಕ್ಕಿರುವುದರಿಂದ ಆ ವ್ಯಾಪಾರದಲ್ಲಿ ಒಂದು ಗಣ್ಯವಾದ ಭಾಗ ಇಲ್ಲಿನವರ ಕೈಗೂ ಬಂದೀತೆಂಬ, ಇಲ್ಲಿನ ಮಾರುವೆ ಪೇಟೆ ಹೆಚ್ಚು ವ್ಯವಸ್ಥಿತವಾದೀತೆಂಬ ನಂಬಿಕೆಯೂ ಕ್ರಮ ಕ್ರಮವಾಗಿ ಜನರಿಗೆ ಉಂಟಾಗುವುದು.

## ನಾಡಿನ ಕೂಡುಬಂಡವಾಳದ ಬ್ಯಾಂಕುಗಳು
## (The Indian Joint-Stock Banks)

ಈ ಬ್ಯಾಂಕುಗಳೆಲ್ಲ ಇಂಡಿಯನ್ ಕಂಪನೀಸ್ ಆ್ಯಕ್ಟ್ ಎಂಬ ಶಾಸನಕ್ಕೆ ಒಳಪಟ್ಟು ಕೆಲಸಮಾಡುವುವು. ಇವು ಇಂಥ ಕೆಲಸವನ್ನು

ಮಾಡಬಹುದು, ಇಂಥವನ್ನು ಕೂಡದು ಎಂಬ ನಿರ್ಬಂಧವೇನೂ ಶಾಸನದಲ್ಲಿಲ್ಲ. ಇವೂ ಡಿಪಾಸಿಟ್ಟುಗಳನ್ನು ತೆಗೆದುಕೊಳ್ಳುವವು; ಸಾಲಗಳನ್ನೂ ಮುಂಗಡಗಳನ್ನೂ ಕೊಡುವವು; ಹುಂಡಿಗಳನ್ನು ಪಟ್ಟಕ್ಕೆ ಕೊಳ್ಳುವುವು; ಬಂದರುಗಳಿಗೆ ದವಸ ಪದಾರ್ಥ ಸಾಗುವುದಕ್ಕೂ ಆಮದಾದ ಪದಾರ್ಥಗಳು ದೇಶದೊಳಕ್ಕೆಲ್ಲಾ ಹಂಚಿ ಬರುವುದಕ್ಕೂ ಹಣವನ್ನು ಒದಗಿಸುವುವು; ಈ ಬ್ಯಾಂಕಿನವರ ವ್ಯವಹಾರವೆಲ್ಲ ಸುಮಾರು ದೊಡ್ಡ ಜಮೀನುದಾರರು, ತೋಟಗಳ ಯಜಮಾನರು (Planters) ಮತ್ತು ಪೇಟೆಯಲ್ಲಿ ಸುಲಭವಾಗಿ ಗಿರಾಕಿ ಸಿಕ್ಕುವ ಗಿರವಿಗಳನ್ನು ಕೊಡಬಲ್ಲ ಇತರ ದೊಡ್ಡ ಮನುಷ್ಯರು ಮುಂತಾದವರೊಡನೆಯೇ ಎನ್ನಬಹುದು.

**ಹಿಂದೆ ಕಂಪನಿಗಳು ಒಡೆದುದಕ್ಕೆ ಕಾರಣಗಳು.** — ಇಲ್ಲಿ ಮಿತ ಹೊಣೆಗಾರಿಕೆಯ ಬಂಡವಾಳದ ಪದ್ಧತಿ ೧೮೬೦ರಲ್ಲಿ ಏರ್ಪಟ್ಟಿತು. ಅಂದಿನಿಂದ ಅನೇಕ ಸಂಸ್ಥೆಗಳು ಹುಟ್ಟಿದ್ದರೂ ನಾನಾ ಕಾರಣಗಳಿಂದ ಅವು ಎಷ್ಟು ಹರಡಬೇಕಾಗಿತ್ತೋ, ಎಷ್ಟು ಪ್ರಭಾವಯುತವಾಗಬೇಕಾಗಿತ್ತೋ ಅಷ್ಟು ಆಗಲಿಲ್ಲ. ಮೊದಲೇ ಹಣ ಜನರ ಕೈಬಿಟ್ಟು ಬರುವುದಿಲ್ಲ. ಅದರ ಜೊತೆಗೆ ಇಲ್ಲಿ ಆರಂಭವಾದ ಕಂಪನಿಗಳು ಬಹುವಾಗಿ ನಷ್ಟಹೊಂದಿ, ದಿವಾಳಿಯಾಗಿ ಜನರಿಗೆ ಅವುಗಳಲ್ಲಿ ನಂಬಿಕೆ ಹೋಯಿತು. ಚಾಲಕರ ಅಯೋಗ್ಯತೆ, ಅಪ್ರಮಾಣಿಕತೆ, ಕಾರ್ಯದ ಅನುಭವವಿಲ್ಲದಿರುವುದು; ಚಾಲಕರ ಅಥವಾ ಅಧಿಕಾರಿಗಳ ದುರ್ಮಾರ್ಗವನ್ನು ಮೊದಲೇ ತಿಳಿದು ತಡೆಯಲು ಕಾರ್ಯದರ್ಶಿಗಳಿಗೆ ಶಕ್ತಿಯಿಲ್ಲದಿರುವುದು; ಕಂಪನಿಯ ಹಣವನ್ನು ಸ್ವಂತ ಮತ್ತು ಸಂಬಂಧಿಗಳ ಪ್ರಯೋಜನಕ್ಕೆ ಹೂಡುವುದು; ದುಂದುವೆಚ್ಚ; ಪೇಟೆ, ಗಿರಾಕಿ ಲಕ್ಷ್ಯವಿಲ್ಲದೆ ಕೆಲಸಮಾಡುವುದು; ಕೇವಲ ದುಸ್ಸಾಹಸ (ಸಟ್ಟಾ) ವ್ಯಾಪಾರಗಳಲ್ಲಿ ಹಣ ಹೂಡುವುದು; ಚಾಲಕ ಮಂಡಲಿಯವರಿಗೂ, ಅವರಿಗೆ ಬೇಕಾದ ಕುಳ ಕಂಪನಿಗಳಿಗೂ ತಡೆಯಿಲ್ಲದೆ, ಮಿತಿಯಿಲ್ಲದೆ ಕಂಪನಿ ಹಣವನ್ನು ಸಾಲವಾಗಿ ಕೊಡುವುದು; ಕಾರ್ಯ ವಿವೇಚನೆಯಿಲ್ಲದೆ ಮುಂಗಡ ಕೊಡುವುದು; ಜನರು ಕಿರುಗಾಲಗಳಿಗಾಗಿ ತಮ್ಮಲ್ಲಿಟ್ಟ ಡಿಪಾಸಿಟ್ ಹಣವನ್ನು ನಿಡುಸಾಲಗಳಾಗಿ ಕೊಡುವುದು; ಕೈಗೆ ಬಂದಿರುವ ನಗದು ಬಂಡವಾಳ ಕಂಪನಿ ಹೆಸರಿನಲ್ಲಿರುವ ಒಟ್ಟು ಬಂಡವಾಳಕ್ಕಿಂತ ಬಹು ಕಡಮೆಯಾಗಿರು

ವುದು; ಇರುವುದರಲ್ಲಿ ಬಹು ಭಾಗವನ್ನು ಸ್ಥಿರ ಆಸ್ತಿಯ ಮೇಲೆ ಹಾಕಿ ಹೆಪ್ಪು ಕಟ್ಟಿಸುವುದು; ಸಾಕಷ್ಟು ಆಪದ್ಧನ ಸಂಗ್ರಹಿಸದೆ ಇರುವುದು; ತಕ್ಷಣ ನಗದಾಗಬಲ್ಲ ಲೇವಾದೇವಿ ಪತ್ರ, ವ್ಯಾಪಾರ ಪತ್ರ ಮೊದಲಾದುವುಗಳ ಪ್ರಮಾಣ ಕಡಮೆಯಾಗಿರುವುದು; ಷೇರುದಾರರನ್ನು ಪ್ರಸನ್ನರಾಗಿಟ್ಟು ಕೊಳ್ಳುವ ಉದ್ದೇಶದಿಂದ ಅಶಕ್ಯವಾದರೂ ಹೆಚ್ಚು ದರದ ಲಾಭ (ಡಿವಿಡೆಂಡ್) ಹಂಚುವುದು; ವಿದೇಶಿ ಬ್ಯಾಂಕುಗಳ ಉದಾಸೀನ, ಅಸಹಕಾರ; ಆಪತ್ಕಾಲ ದಲ್ಲಿ ಅವರಿಂದಾಗಲಿ ಸರಕಾರದಿಂದಾಗಲಿ ಯಾವ ಸಹಾಯವೂ ದೊರೆಯ ದಿರುವುದು; ಇತರ ದೊಡ್ಡ ಬ್ಯಾಂಕುಗಳ ಪೈಪೋಟಿ, ಜನರಿಗೆ ಇಂಥ ಕಂಪನಿ ಗಳ ವ್ಯವಹಾರ ಜ್ಞಾನವಿಲ್ಲದಿರುವುದು ಮುಂತಾದ ಕಾರಣಗಳಿಂದ ಈಗ ಸುಮಾರು ೭೦ ವರ್ಷಗಳಿಂದಲೂ ನೂರಾರು ಕಂಪನಿಗಳು ಒಡೆದು ಜನಗಳ ನಂಬಿಕೆಯನ್ನು ಹೋಗಲಾಡಿಸಿದ್ದರೂ ಈಗ ಕೆಲಸಮಾಡುತ್ತಿರುವ ಸಂಸ್ಥೆ ಗಳಾದರೂ ಧೈರ್ಯವಾಗಿ ತಲೆಯೆತ್ತುತ್ತಿವೆಯೆನ್ನಬೇಕು.

ಈ ಬ್ಯಾಂಕುಗಳ ವ್ಯಾಪಾರ ಒಳವ್ಯಾಪಾರಕ್ಕೆ ಸಂಬಂಧಿಸಿದ್ದು.* ಇಂಪೀರಿಯಲ್ ಬ್ಯಾಂಕು ಈವರೆಗೂ ಇವರಿಗೆ ಬೇಕಾಗುವ ಸಾಲದ ಸೌಕರ್ಯಗಳನ್ನು ಆಗಾಗ ಒದಗಿಸುತ್ತಿದ್ದಿತು. ಇವರೂ ಒಂದು ಗೊತ್ತಾದ ಪ್ರಮಾಣದಲ್ಲಲ್ಲದಿದ್ದರೂ ತಮ್ಮ ನಗದು ಶಿಲ್ಕಿನ ಸ್ವಲ್ಪ ಭಾಗ ವನ್ನು ಅಲ್ಲಿ ಕೈಗಾವಲಾಗಿ ಪುದುವಟ್ಟಿಡುತ್ತಿದ್ದರು. ಈಗ ಕಡ್ಡಾಯವಾಗಿ ತಮ್ಮ ಡಿಪಾಸಿಟ್ ಲೆಕ್ಕಗಳ ಶೇಕಡ ೭ ಭಾಗವನ್ನು ರಿಸರ್ವ್ ಬ್ಯಾಂಕಿ ನಲ್ಲಿಡಬೇಕಾಗಿದೆ. ಆದರೆ ಇವರ ಒಟ್ಟು ಹೊಣೆಗಾರಿಕೆಯ ಮೊತ್ತಕ್ಕೂ ಕೈವೆಚ್ಚಕ್ಕಾಗಿ ಉಳಿಸಿಕೊಳ್ಳುವ ನಗದು ಶಿಲ್ಕಿನ ಮೊತ್ತಕ್ಕೂ ಯಾವ ಹೊಂದಿಕೆಯೂ ಇಲ್ಲ.

**ಎರಡು ಹಣದ ಪೇಟೆಗಳು.—** ಇಂಡಿಯಾದಲ್ಲಿ ಎರಡು ಬಗೆಯ ಹಣದ ಪೇಟೆಗಳಿವೆ ಎನ್ನಬಹುದು: ನಾಡಿನ ಸರಾಫರು ವ್ಯಾಪಾರಮಾಡುವ ಪೇಟೆಯೊಂದು; ಪಾಶ್ಚಾತ್ಯ ಪದ್ಧತಿಯಲ್ಲಿ ಕೆಲಸಮಾಡುವ ಮೇಲ್ಕಂಡ ಬ್ಯಾಂಕ್ ಪ್ರಪಂಚವೊಂದು. ಅವಕ್ಕೆ ಹತ್ತಿರದ ಸಂಬಂಧವನ್ನುಂಟು ಮಾಡುವ ವ್ಯಾಪಾರದ ಹುಂಡಿ ಚಲಾವಣೆ, ಪಟ್ಟದ ವ್ಯಾಪಾರ, ಹೊಣೆ

---

* ಒಳ ವ್ಯಾಪಾರದ ಮೊತ್ತ ಸುಮಾರು ೩,೫೦೦ ಕೋಟಿ ರೂಪಾಯಿ.

ಒಪ್ಪಿಕೆಯ ದಲ್ಲಾಳಿ, ಎರಡನೆಯ ವಟ್ಟದ ಸೌಕರ್ಯ ಮುಂತಾದುವಿಲ್ಲದ ಕಡೆ ಅವುಗಳ ಪ್ರಯೋಜನ ಕಡಮೆ. ಇಲ್ಲಿ ಒಂದೊಂದಕ್ಕೆ ಅಷ್ಟು ಸಂಪರ್ಕವಿಲ್ಲ. ಬ್ಯಾಂಕಿನ ಪೇಟೆ ಈವರೆಗೂ ಮೇಲೆ ಸರಕಾರ, ಇಂಪೀರಿಯಲ್ ಬ್ಯಾಂಕು ಎರಡಕ್ಕೂ ಅಧೀನವಾಗಿತ್ತು. ಎರಡು ಪೇಟೆಗಳ ಪ್ರತಿನಿಧಿಗಳೂ ಶಾಖೆಗಳೂ ಬಡ್ಡಿಯ ದರಗಳೂ ಇರುತ್ತಿದ್ದುವು. ನಮ್ಮ ಹಣದ ಪೇಟೆಯಲ್ಲಿ ಸಾಮಾನ್ಯವಾಗಿ ಬಡ್ಡಿಯ ದರದಲ್ಲಿ ಇರುವಷ್ಟು ವ್ಯತ್ಯಾಸ ಪ್ರಪಂಚದಲ್ಲಿ ಇನ್ನೆಲ್ಲಿಯೂ ಇಲ್ಲವೆನ್ನಬಹುದು. ಬ್ಯಾಂಕ್ ರೇಟೇ ೪ರಿಂದ ೮ರವರೆಗೆ ಏರಿಳಿಯುತ್ತಿದ್ದುದುಂಟು. ಪೇಟೆಯ ದರ ೧೬ಕ್ಕೆ ಏರಬಹುದಾಗಿತ್ತು. ಎಂದರೆ ಈ ವ್ಯತ್ಯಾಸದ ಹಾವಳಿಯನ್ನು ಬೇರೆಯಾಗಿ ವರ್ಣಿಸಬೇಕಾಗಿಲ್ಲ.

ಹೆಚ್ಚು ವ್ಯಾಪಾರದ ಕಾಲದಲ್ಲಿ ಹೆಚ್ಚು ಹಣವನ್ನು ಒದಗಿಸಬೇಕಾದಾಗ ಬ್ಯಾಂಕ್ ರೇಟು ಬಹಳವಾಗಿ ಏರದಂತೆ ಕೆಲಸಮಾಡುವುದು ಆಗತ್ಯವೆಂದು ಇತರ ದೇಶಗಳಲ್ಲಿ ನಂಬಿರುವರು. ಇಲ್ಲಿ ಹಾಗಿಲ್ಲ. ಬ್ಯಾಂಕ್ ರೇಟ್ ಏರದಿದ್ದರೆ ಸರಕಾರದವರು ಈ ಹೆಚ್ಚು ಹಣವನ್ನು ಒದಗಿಸುವ ಹಾಗೆಯೇ ಇರಲಿಲ್ಲ. ಇದರಿಂದ ವ್ಯಾಪಾರ, ಕೈಗಾರಿಕ ಪ್ರಪಂಚದವರಿಗೆ ಬಹಳ ತೊಂದರೆ. ಇವೆಲ್ಲಕ್ಕೂ ಇಂಪೀರಿಯಲ್ ಬ್ಯಾಂಕಿನ ಇಬ್ಬಗೆಯ ಸ್ಥಿತಿ ಕಾರಣವಾಗಿತ್ತು: ಅದು ಒಂದು ಕಡೆ ಸರಕಾರದ ಬ್ಯಾಂಕಾಗಿತ್ತು; ಆದರೆ, ಹಣದ ಪ್ರಮಾಣವನ್ನು ಗೊತ್ತುಮಾಡುವುದು, ಮಾರುವೆ ದರವನ್ನು ನಿರ್ಣಯಿಸಿ ನಡೆಸುವುದು, ತಾನೇ ಮಾರುವೆಯ ಕಾರ್ಯವನ್ನು ಮಾಡಿಕೊಳ್ಳುವುದು, ಮಾರುವೆ ಕೆಲಸವನ್ನು ಈ ಬ್ಯಾಂಕು ಮಾಡಿಕೊಡದೆನ್ನುವುದು, ಬ್ಯಾಂಕ್ ರೇಟನ್ನು ಗೊತ್ತುಮಾಡುವುದು ಮುಂತಾದ ಕೆಲಸಗಳು ಸರಕಾರಕ್ಕೆ ಸೇರಿದವುಗಳಾಗಿರಲು ಈ ಬ್ಯಾಂಕು ಒಳವ್ಯಾಪಾರದಲ್ಲಿ ಸ್ವೇಚ್ಛೆಯಾಗಿ ಪ್ರವರ್ತಿಸುತ್ತ ಮೊದಲೇ ದುರ್ಬಲವಾದ ದೇಶಿ ಬ್ಯಾಂಕುಗಳೊಡನೆ ಪೈಪೋಟಿಮಾಡಿ ಅವುಗಳ ಏಳಿಗೆಗೆ ಬೇಕಾದಷ್ಟು ತಡೆಯಾಗಲು ಅವಕಾಶವಿತ್ತು. ನಾಣ್ಯದ ಚಲಾವಣೆಯ ಹೊಣೆಗಾರಿಕೆಯಿಲ್ಲದ್ದರಿಂದ ಬ್ಯಾಂಕಿಗೆ ಹೆಚ್ಚು ನಗದು ನಿಧಿಯನ್ನು ಇಟ್ಟುಕೊಳ್ಳಬೇಕಾದ ಆಗತ್ಯವಿರಲಿಲ್ಲ. ಆ ರೀತಿ ಒಳವ್ಯಾಪಾರಕ್ಕೆ ಹಣವನ್ನು ಒದಗಿಸುತ್ತಿರುವಾಗ ವ್ಯಾಪಾರ ಹೆಚ್ಚಿದ ತಿಂಗಳಲ್ಲಿ ಹೆಚ್ಚು ಹಣ ಬೇಕಾದರೆ ಬ್ಯಾಂಕ್ ರೇಟನ್ನು ಏರಿಸದೆ

ಸಮಯವನ್ನು ನಿರ್ವಹಿಸಲಾಗುತ್ತಿರಲಿಲ್ಲ. ಸರಕಾರಕ್ಕೂ ಹಣದ ಪೇಟೆಗೂ ಈವರೆಗೂ ಇನ್ನೊಂದು ಬಗೆಯ ಸಂಬಂಧವಿರುತ್ತಿತ್ತು: ಸರಕಾರದವರು ಬ್ಯಾಂಕ್ ರೇಟನ್ನು ನಿರ್ಧರಿಸಿ ಪೇಟೆಯ ಕಷ್ಟ ಸುಖಗಳಿಗೆ ಕಾರಣರಾಗು ತಿದ್ದುದೊಂದು; ಅಲ್ಲದೆ ತಮಗೆ ಬೇಕು ಬೇಕಾದಾಗ ಖಜಾನೆ ಹುಂಡಿಗಳನ್ನು ಮಾರಿ ಪೇಟೆಯಲ್ಲಿ ಪ್ರಬಲಿಸುತ್ತಿದ್ದುದೊಂದು. ಇದರ ಪರಿಣಾಮವಿನ್ನೊ ಒಂದುಂಟು. ಇದುವರೆಗಾಗಲೇ ಜನರು ಕೊಂಡಿರುವ ಸರಕಾರದ ನಿಡು ಸಾಲಪತ್ರಗಳ ಬೆಲೆ ಬಹಳ ಮಟ್ಟಿಗೆ ಅಸ್ಥಿರ್ಯವಾಗುತ್ತಿತ್ತು. ಕೈಗಾರಿಕೆ ಪತ್ರಗಳ ಮೇಲೆ ಈ ಸ್ಥಿತಿಯ ಪರಿಣಾಮವೇನೆಂದು ಹೇಳುವುದು ಕಷ್ಟ ವಾದರೂ ಇಷ್ಟು ಹೇಳಬಹುದು: ಸರಕಾರದ ಸಾಲಪತ್ರಗಳ ಮೇಲಿನ ಬಡ್ಡಿಯ ದರವೇ ಹೆಚ್ಚಾಗಿರುವಾಗ ಖಾಸಗಿ ಕೈಗಾರಿಕೆಯ ಸಾಲಪತ್ರಗಳಿಗೆ ಇನ್ನೂ ಹೆಚ್ಚಿನ ಬಡ್ಡಿಯನ್ನು ಕೊಟ್ಟ ಹೊರತು ಸಾಲ ಹುಟ್ಟುತ್ತಿರಲಿಲ್ಲ. ಅಲ್ಲದೆ ಅವುಗಳ ಮೂಲಕವೇ ತಕ್ಕಮಟ್ಟಿಗೆ ಸಂಪಾದನೆ ಆಗುವುದರಿಂದ ಅನೇಕರಿಗೆ ಸರಕಾರ ಪತ್ರಗಳನ್ನು ಕೊಳ್ಳುವ ಪ್ರವೃತ್ತಿ ಬಹಳ. ಕೈಗಾರಿಕೆಗೆ ಹಣವೊದಗುವ ಅವಕಾಶ ಆ ಮಟ್ಟಿಗೆ ಕಡಮೆಯಾದಂತಾಯಿತು. ಒಟ್ಟಿನಲ್ಲಿ ಈ ಎಲ್ಲ ಸೇರಿ ಬಡ್ಡಿಯ ದರಗಳನ್ನೇರಿಸಿ ಒಳವ್ಯಾಪಾರ ಕೈಗಾರಿಕೆಗೆ ಕುಂದನ್ನು ತಂದುವೆಂದು ಹೇಳಬೇಕು.

## ಸ್ವದೇಶಿ ಲೇವಾದೇವಿ ಪದ್ಧತಿ

**ಸರಾಫರು, ಇತ್ಯಾದಿ.**—ದೇಶದಲ್ಲಿ ಅನೇಕ ಕಡೆ ಸರಾಫರು ಮತ್ತು ಮುಲ್ತಾನಿ ಸೇಟುಗಳಿಂದಲೇ ವ್ಯಾಪಾರಕ್ಕೂ ವರ್ತಕರಿಗೂ ಹಣಸಹಾಯ ದೊರೆಯಬೇಕು. ಸಾಹುಕಾರರಿಗೂ ಇವರಿಗೂ ಒಂದು ವ್ಯತ್ಯಾಸವಿದೆ; ಸಾಹುಕಾರರು ಸ್ವಂತ ಆಸ್ತಿಯಿಂದ ಸಾಲಗಳನ್ನು ಒದಗಿಸುವರು. ಸರಾಫರು ಇತರ ಬ್ಯಾಂಕುಗಳಂತೆ ಅನೇಕ ವೇಳೆ ಹೊರಗಡೆಯಿಂದ ಹಣ ವನ್ನು ಕೂಡಿಸಿ ತಮ್ಮ ಕುಳಕ್ಕೆ ಸಾಲ ಕೊಡುವರು. ಡಿಪಾಸಿಟ್ಟುಗಳನ್ನು ಸ್ವೀಕರಿಸುವರು; ಅಥವಾ ಹುಂಡಿಗಳನ್ನು ಬರಸಿಕೊಂಡು ಸಾಲ ಕೊಡು ವರು; ಅವನ್ನು ಬ್ಯಾಂಕುಗಳಲ್ಲಿ ಕುದುವಿಟ್ಟು ಹಣ ಮಾಡಿಕೊಳ್ಳುವರು; ತಮ್ಮ ಕೆಲಸಕ್ಕೆ ಬೇಕಾದಷ್ಟು ಹಣವನ್ನು ಆಕರ್ಷಿಸಿಕೊಳ್ಳುವರು. ಆದರೆ

ಬ್ಯಾಂಕುಗಳಂತೆ ತಮ್ಮ ಲೇಣೆದೇಣೆ ಪರಿಸ್ಥಿತಿಯನ್ನು ಪ್ರಕಟಿಸುವುದಿಲ್ಲ. ಅವರ ಅಂಗಡಿಗಳ ಒಡೆತನ ಯಾರೋ ಒಬ್ಬರ ಕೈಯಲ್ಲಿಯೋ ಒಂದು ಭಾಗಸ್ಥ ಕಂಪನಿಯ ಕೈಯಲ್ಲಿಯೋ ಇರುವುದು.

ಒಂದು ಬಗೆಯಲ್ಲಿ ಸರಾಫರು ಒಳದೇಶದ ಉತ್ಪತ್ತಿಕಾರರಿಗೂ ವರ್ತಕರಿಗೂ, ದೊಡ್ಡ ಪಟ್ಟಣಗಳಲ್ಲಿರುವ ಬ್ಯಾಂಕು ಮಂಡಲಕ್ಕೂ ಸಂಬಂಧವನ್ನು ಹೊಂದಿಸುವ ಕೊಂಡಿಯಂತಿರುತ್ತಾರೆ. ಇವರು ದಲ್ಲಾಳರೂ ಹೌದು. ವ್ಯಾಪಾರಸ್ಥರೂ ಅಂಗಡಿಗಳವರೂ ಬಳಿಗೆ ಬಂದರೆ ಅವರ ಸ್ಥಿತಿಗತಿ ವಿಚಾರಿಸಿ, ಸಾಲಕೊಡುವುದು ಯೋಗ್ಯವೆಂದೂ ಕ್ಷೇಮವೆಂದೂ ಕಂಡರೆ ಯಾರಾದರೊಬ್ಬ ಹುಂಡಿಯ ದಲ್ಲಾಳನ ಮೂಲಕ ಸಾಲ ಕೊಡುವ ಏರ್ಪಾಡು ಮಾಡುವರು. ಹುಂಡಿಯ ವಾಯಿದೆ ಸಾಧಾರಣವಾಗಿ ಎರಡು ತಿಂಗಳು. ಇದರಮೇಲೆ ಬಡ್ಡಿಯೂ ಸುಮಾರು ಹೆಚ್ಚಾಗಿಯೇ ಇರುತ್ತದೆ. ದಲ್ಲಾಳಿ ಬೇರೆ ತೆರಬೇಕು. ವ್ಯಾಪಾರದ ಜೋರು ಹೆಚ್ಚಾಗಿರುವ ತಿಂಗಳಲ್ಲಿ ಇವರ ಸ್ವಂತ ಹಣ ಸಾಲದಾಗಿ ಬ್ಯಾಂಕುಗಳಿಂದ ಕಡ ತೆಗೆದುಕೊಳ್ಳುವರು. ಸ್ವಂತ ಹಣವೆಲ್ಲ ಮುಗಿದ ಹೊರತು ಇವರು ಬ್ಯಾಂಕುಗಳಿಂದ ಸಾಲತೆಗೆಯರು. ಸರಾಫರಲ್ಲಿ ಪರಸ್ಪರ ಸಹಕಾರವುಂಟು. ಒಬ್ಬರ ಅಂಗಡಿಗೇ ಹತ್ತಾರು ಕಡೆ ಶಾಖೆಗಳಿರುವುವು. ಒಂದು ಅಂಗಡಿಯಲ್ಲಿ ಕಡಮೆಯಾದ್ದನ್ನು ಇನ್ನೊಂದರಿಂದ ತರಿಸಿಕೊಳ್ಳುವರು. ಪ್ರಾಂತ ಪಟ್ಟಣಗಳಲ್ಲಿರುವ ದೊಡ್ಡ ಸರಾಫರು ತಮ್ಮ ಹಣವನ್ನೆಲ್ಲಾ ಚಿಕ್ಕಪುಟ್ಟ ಸಣ್ಣ ಸರಾಫರ ಕೈಹುಂಡಿಗಳನ್ನೆಲ್ಲಾ ಕೊಂಡಮೇಲೆ, ಇನ್ನೂ ಹಣ ಬೇಕಾದರೆ ಅವುಗಳನ್ನು ಕುದುವಿಟ್ಟು ಇಂಪೀರಿಯಲ್ ಬ್ಯಾಂಕಿಂದ ಸಾಲ ತರುವರು. ಈ ಹುಂಡಿಗಳನ್ನು ದೊಡ್ಡ ಸರಾಫರು ತಂದು, ತಮ್ಮ ಹೊಣೆಗಾರಿಕೆಯ ಮುದ್ರೆಯನ್ನೊತ್ತಿಕೊಡುವುದರಿಂದ ಬ್ಯಾಂಕು ಸಂಜಿ ಸಾಲವನ್ನು ಕೊಡಲು ಒಪ್ಪುವುದು. ಎಷ್ಟು ಮೊತ್ತದವರೆಗೆ ಸರಾಫರಿಗೆ ಇಂತಹ ಸಾಲ ಕೊಡುವುದೆಂಬುದನ್ನು ಬ್ಯಾಂಕು ಆಯಾ ಕುಳದ ಯೋಗ್ಯತೆ ಮತ್ತು ವ್ಯಾಪಾರಕ್ಕೆ ತಕ್ಕಂತೆ ಗೊತ್ತುಮಾಡುವುದು. ಆಗಲೂ ಯಾರ ಹುಂಡಿಗಳನ್ನು ಸರಾಫರು ಕೊಳ್ಳುತ್ತಿರುವರು, ಅವರ ವ್ಯಾಪಾರದ ಸ್ವರೂಪ ಯಾವುದು ಎಂಬುದನ್ನು ಮೊದಲು ತಿಳಿದುಕೊಂಡು ಹೆಚ್ಚು

ತಿರುಳಿಲ್ಲದ 'ಆಸಾಮಿ'ಯ ಹುಂಡಿಗಳನ್ನು ಸರಾಫನು ತಮ್ಮಲ್ಲಿಗೆ ತರುತ್ತಿರುವುದನ್ನು ಕಂಡರೆ ಆ ಸರಾಫನಮೇಲೆ ಕಣ್ಣಿಟ್ಟು ಅವನಿಗೆ ಸಾಲ ಕೊಡುವ ಕೈ ಬಿಗಿಹಿಡಿಯುವುದು.

**ಕೈಹುಂಡಿ–ವ್ಯಾಪಾರದ ಹುಂಡಿ.**— ಈ ಹುಂಡಿಗಳು ಎರಡು ಬಗೆ: ಒಂದು ಕೈಹುಂಡಿ, ಇನ್ನೊಂದು ವ್ಯಾಪಾರದ ಹುಂಡಿ. ವ್ಯಾಪಾರದ ಹುಂಡಿಗಳ ಬೆಂಬಲವಾಗಿ ಯಾವ ದವಸವೊ ಆಸ್ತಿಯೊ ವ್ಯಾಪಾರದ ಗಿರವಿಯಾಗಿರುವುದೆಂಬುದು ಅವರಿಗೆ ಗೊತ್ತು. ಅಂಥ ಆಧಾರವಿದ್ದೇ ಇರುವುದರಿಂದ ಹೇಗಾದರೂ ತಮ್ಮ ಹಣ ಹಿಂದಕ್ಕೆ ಬಂದೇ ಬರುವುದೆಂಬ ನೆಚ್ಚಿಕೆ ಇರುತ್ತದೆ. ಹೊಣೆ ಹೊರುವ ಸರಾಫನ ರುಜುವೇ ಇವರಿಗೂ ಮುಖ್ಯಾಧಾರ. ಆದರೂ ಅದರ ಅಡಿಯ ನಂಬಿಕೆ ವಿಶೇಷ. ಕೈಹುಂಡಿಯ ಸಂಬಂಧದಲ್ಲಿ ಕುಳದ ನಂಬಿಕೆಯೇ ನಂಬಿಕೆ.

ಈ ಹುಂಡಿಗಳ ಮೇಲೆ ಹಾಕುವ ಬಡ್ಡಿಯ ದರ ಬ್ಯಾಂಕ್ ರೇಟನ್ನು ಅನುಸರಿಸುವುದು. ಆದರೂ — ಸಗಟು ಧಾರಣೆವಾಸಿಗೂ ಚಿಲ್ಲರೆ ಧಾರಣೆಗೂ ಇರುವ ಸಂಬಂಧದಂತೆ — ಅದು ಏರುವುದಕ್ಕೆ ಮೊದಲೇ ಇದು ಏರುವುದು, ಅದು ಇಳಿದಮೇಲೆ ಮಾತ್ರವೇ ಇದು ಇಳಿದೀತು. ಹೆಚ್ಚು ವ್ಯಾಪಾರವಿರುವ ಕಾಲದಲ್ಲಿ ಹುಂಡಿಯ ದರ ಮೊದಲೇ ಬ್ಯಾಂಕು ರೇಟಿಗಿಂತ ಹೆಚ್ಚಾಗಿರುವುದು; ಕಡಮೆಯಾದ ಕಾಲದಲ್ಲಿ ಇಳಿದಿರುವುದು. ಬ್ಯಾಂಕಿನ ಕೈಗೆ ಸಾಲಕ್ಕಾಗಿ ಬರುತ್ತಿರುವ ಹುಂಡಿಯ ಮೊತ್ತ ಕಡಮೆಯಾಗುತ್ತಿದೆಯೆಂದು ಅರಿತು ತಮ್ಮ ಹಣ ಪ್ರಯೋಜನವಿಲ್ಲದೆ ಬಿದ್ದಿದೆ ಎಂದು ತಿಳಿದರೆ ಬ್ಯಾಂಕು ಹುಂಡಿಯ ದರವನ್ನು ಇಳಿಸುತ್ತದೆ. ಹಾಗಲ್ಲದೆ ಅತಿಯಾಗಿ ಹುಂಡಿ ಬರುತ್ತಿದೆಯೆಂದೂ ತನ್ನ ಕೈಹಣವನ್ನು ಕಾಪಾಡಿಕೊಳ್ಳಬೇಕೆಂದೂ ತಿಳಿದಾಗ ಹುಂಡಿಯ ದರ ಏರಿಸುತ್ತದೆ. ಕೆಲವು ವೇಳೆ ಇನ್ನುಮುಂದೆ ಹುಂಡಿ ಕೊಳ್ಳುವುದಿಲ್ಲವೆಂದು ಕೂಡ ಹೇಳಬಹುದು; ಅಥವಾ ಅತಿ ಹೆಚ್ಚಿನ ಬಡ್ಡಿ ಕೇಳಿ ಸರಾಫರು ತಮ್ಮಲ್ಲಿಗೆ ಹುಂಡಿ ತಾರದಿರುವಂತೆಯೂ ಹಳೆಯ ಹುಂಡಿಯನ್ನು ಹೊಸ ವಾಯಿದೆಗೆ ಹಾಕಲು ಸಾಧ್ಯವಿಲ್ಲವೆಂದು ಹೇಳಿ ಅವರು ಹಣಕ್ಕೆ ಬೇರೆ ಕಡೆಗೆ ಹೋಗುವಂತೆಯೂ ಮಾಡುವರು. ರಿಸರ್ವ್ ಬ್ಯಾಂಕು ಇವರೊಡನೆ ನೇರವಾಗಿ ವ್ಯವಹರಿಸುವುದಿಲ್ಲ. ಆದರೆ ತಮ್ಮ

ಕುಳ ಬ್ಯಾಂಕುಗಳು ಕೊಂಡಿಟ್ಟಿರುವ ಇವರ ಹುಂಡಿಗಳನ್ನು ಎರಡನೆಯ ವಟ್ಟಕ್ಕೆ ಕೊಳ್ಳುವ ಏರ್ಪಾಡು ಮಾಡಿರುವರು.

ಸರಾಫರಲ್ಲದೆ ನಾಟುಕೋಟಿ ಶೆಟ್ಟರು, ಮಾರವಾಡಿಗಳು, ಹಳ್ಳಿಯ ಮಹಾಜನರು, ಸಾಹುಕಾರರು, ಮಂಡಿ ವರ್ತಕರು ಎಲ್ಲರೂ ಸಣ್ಣ ವ್ಯಾಪಾರಿಗಳಿಗೆ ಹಣ ಸಾಲ ಒದಗಿಸುವರು. ಇವರ ಬಡ್ಡಿಯ ದರ ಇನ್ನೂ ಹೆಚ್ಚು. ಕೆಲವು ವೇಳೆ ಶೇಕಡ ೨೦–೩೦ರ ವರೆಗೂ ಇರುವುದುಂಟು. ಇವರಲ್ಲಿ ಕೆಲವರು ವ್ಯಾಪಾರದ ದಲ್ಲಾಳರಾಗಿರುವರು. ಸಾಲಗಾರರ ಆಸ್ತಿಯ ಮೇಲೆ ಕೈಯಿಟ್ಟು ತಮ್ಮ ಅಸಲಿಗೆ ಯಾವ ಅಪೋಹವೂ ಬಾರದಂತೆ ನೋಡಿಕೊಳ್ಳುವರು.

## ಕೈಗಾರಿಕೆಗೆ ಹಣ ಒದಗುತ್ತಿರುವ ಬಗೆ

**ಬಂಡವಾಳದ ಪೇಟೆ ಇಲ್ಲ.** — ಕೈಗಾರಿಕೆಗೆ ಬೇಕಾಗಿರುವ ಹಣ ಎರಡು ಬಗೆಯಾಗಿರುವುದು: (೧) ಹೊಸದಾಗಿ ಸ್ಥಾಪಿತವಾದ ಕೈಗಾರಿಕೆಗಳಿಗೆ ನಿವೇಶನ, ಕಟ್ಟಡ, ಯಂತ್ರಸಾಮಗ್ರಿ ಮುಂತಾದ ಪ್ರಯೋಜನವನ್ನು ತರುವ ಗಟ್ಟಿ ಬಂಡವಾಳ ಬೇಕು; ಇರುವುದನ್ನು ವಿಸ್ತರಿಸಬೇಕಾದರೂ ಹಳೆಯದಕ್ಕೆ ಬದಲು ಹೊಸದನ್ನು ಕೊಳ್ಳಬೇಕಾದರೂ ಈ ಬಗೆಯ ಬಂಡವಾಳ ಬೇಕು. ಇದು ಖಾಯಂ ಬಂಡವಾಳ.* (೨) ಚಾಲ್ತಿ ಕೆಲಸಗಳಿಗಾಗಿ ಕೈಸಗದು, ಮೂಲವಸ್ತು ಕೊಳ್ಳುವುದು, ಪದಾರ್ಥಗಳ ರೂಪಾಂತರ ಮಾಡುವುದು, ಸ್ಟೋರ್ಸ್ ಕೊಳ್ಳುವುದು, ಕೂಲಿ ಸಂಬಳ; ತಯಾರಿಸಿದ ಸಾಮಾನನ್ನು ಪೇಟೆಗೆ ಸಾಗಿಸಿ ಮಾರುವುದು; ಕೊಂಡ ಸಾಮಾನಿಗೆ ಹಣ ತೆರುವುದು; ಇತರ ಚಿಲ್ಲರೆ ಕೆಲಸ, ಮುಂತಾದುವಕ್ಕೆ ಚಾಲ್ತಿ ಹಣ ಬೇಕು. ಇದೆಷ್ಟು ಅದೆಷ್ಟು ಬೇಕೆಂಬುದು ಆಯಾ ಕೈಗಾರಿಕೆಗೆ ತಕ್ಕಂತೆ

* ಕೈಗಾರಿಕೆ ಎಂಥದು ಎಂಬುದರ ಮೇಲೆ ಈ ಖಾಯಂ ಬಂಡವಾಳ ಮೊದಲೇ ಹೆಚ್ಚು ಬೇಕೊ ಕಡಮೆ ಬೇಕೊ ಎಂಬುದು ನಿರ್ಧರವಾಗುತ್ತದೆ. ವಿದ್ಯುಚ್ಛಕ್ತಿಯ ಕೆಲಸಗಳು, ರೈಲ್ವೆ ಕಂಪನಿ, ಹಡಗಿನ ಕಂಪನಿ, ನಾಲೆ, ಯಂತ್ರಗಳನ್ನು ತಯಾರುಮಾಡಿಸುವ ಕಂಪನಿ ಇಂಥವುಗಳಲ್ಲಿ ಕಾರ್ಖಾನೆ ಕಂಪನಿಗಳು ಸಂಪೂರ್ಣವಾಗಿ ಸಜ್ಜಾದ ಹೊರತು ಕೆಲಸವನ್ನು ಆರಂಭಿಸುವುದಕ್ಕೇ ಆಗುವುದಿಲ್ಲ. ಇನ್ನು ಕೆಲವು ಕಡೆ ಕೆಲಸವನ್ನು ಸ್ವಲ್ಪವಾಗಿ ಆರಂಭಿಸಿ ನಿದಾನವಾಗಿ ಬೆಳಸಲು ಅವಕಾಶವಿರುವುದರಿಂದ ಮೊದಲೇ ದೊಡ್ಡ ಬಂಡವಾಳವನ್ನು ಹೂಡಬೇಕಾಗುವುದಿಲ್ಲ.

ಬೀಳುವುದು. ಗುಡಿಸಿಲ ಕೈಗಾರಿಕೆಗಳಲ್ಲಿ (Cottage Industries) ಚಾಲ್ತಿ ಬಂಡವಾಳ ಹೆಚ್ಚು ಬೇಕಾಗುವುದು. ಯಂತ್ರ ಕಾರ್ಖಾನೆಗಳಲ್ಲಿ ಗಟ್ಟಿ ಬಂಡವಾಳ ಹೆಚ್ಚು ಬೇಕಾಗುವುದು. ಕೆಲವು ಕೈಗಾರಿಕೆಗಳಲ್ಲಿ ಸಂಪಾದನೆ ಬೇಗ ಬರುವುದು; ಇನ್ನು ಕೆಲವು ಕಡೆ (ಉದಾ: ಕಾಫೀ, ಟೀ ತೋಟ) ಸಂಪಾದನೆ ಕೈಗೆ ಬರಬೇಕಾದರೆ ಹಲವು ವರ್ಷಗಳ ಕಾಲ ಹಿಡಿಯುವುದು. ಆ ವರೆಗಿನ ಎಲ್ಲ ಕೆಲಸಗಳಿಗೂ ಕೈಯಲ್ಲಿ ಹಣವಿರಬೇಕು. ಬಹಳ ದೊಡ್ಡ ಕಂಪನಿಗಳಿಗೆ ಹಣ ಬೇಕಾದರೆ ಅವುಗಳ ಆಸ್ತಿಪತ್ರಗಳ ಆಧಾರದ ಮೇಲೂ ಡಿಬೆಂಚರುಗಳ ಆಧಾರದ ಮೇಲೂ ಧನಿಕರಿಂದಲೂ ಇತರ ಕಡೆಗಳಿಂದಲೂ ಬಂಡವಾಳವೂ ಸಾಲವೂ ಸಿಕ್ಕುವುವಾದರೂ ಈ ದೇಶದಲ್ಲಿ ಕೇವಲ ದೇಶಿ ಆದ ಹೊಸ ಕೈಗಾರಿಕೆಗಳಿಗೆ ಬಂಡವಾಳವನ್ನೊದಗಿಸುವ ಯಾವ ವಿಶೇಷ ಸಂಸ್ಥೆಗಳೂ ಸಾಲದ ಪೇಟೆಯೂ ಏರ್ಪಟ್ಟಿಲ್ಲ. ಇಲ್ಲಿನ ವ್ಯಾಪಾರದ ಪೇಟೆಯೂ ಬ್ಯಾಂಕ್ ವ್ಯವಹಾರವೂ ಇಂಗ್ಲಿಷ್ ಪದ್ಧತಿಯನ್ನನುಸರಿಸಿ ಅಲ್ಲಿನ ಎಲ್ಲ ಅನನುಕೂಲಗಳನ್ನೂ ತನ್ನ ಪದ್ಧತಿಗೆ ಇಳಿಸಿಕೊಂಡಿದೆ. ಆದರೆ ಕೈಗಾರಿಕೆಗೆ ಅಲ್ಲಿ ಬಂಡವಾಳವನ್ನೊದಗಿಸುವ ಕೆಲಸಕ್ಕೆ ನೆರೆಯುವ ಇಶ್ಯೂ ಅಂಗಡಿಗಳೂ ಅಂಡರ್‌ರೈಟಿಂಗ್ ಕೆಲಸಮಾಡುವವರೂ, ಸ್ಟಾಕ್ ದಲ್ಲಾಳರೂ, ಕಂಪನಿ ಪ್ರಮೋಟರುಗಳೂ ಇಲ್ಲಿಲ್ಲ. ಮೊದಮೊದಲು ಸ್ಥಾಪಿತವಾದ ಕೆಲವು (ಕೈಗಾರಿಕೆಯ) ಬ್ಯಾಂಕುಗಳು ಕೆಲವು ಕಾರ್ಯಗಳಲ್ಲಿ ತೊಡಗಿ ನಿಡುಸಾಲಗಳಿಗೆ ನೆರವಾಗಿ ಪೂರ್ತಿ ಕೈಕಚ್ಚಿಸಿಕೊಂಡುವು. ನಿಡುಸಾಲಗಳನ್ನು ಒದಗಿಸಲು ಬ್ಯಾಂಕುಗಳವರಿಗೆ ಒಂದು ಕಡೆ ಹೆದರಿಕೆ; ಇನ್ನೊಂದು ಕಡೆ ಅನುಭವವಿಲ್ಲ. ಆದುದರಿಂದ ಕೈಗಾರಿಕೆಯ ಬಂಡವಾಳವನ್ನೊದಗಿಸುವ ಅಂಡರ್‌ರೈಟಿಂಗ್ ಕೆಲಸಕ್ಕೆ ಕೈಹಚ್ಚುವುದಿಲ್ಲ. ಕಡೆಗೆ ಹೆಚ್ಚಾಗಿ ಷೇರು ಪತ್ರಗಳ ಮೇಲೆ ಕೂಡ ಮುಂಗಡ ಕೊಡಲು ಹಿಂದು ಮುಂದು ನೋಡುವರು. ಇಂಪೀರಿಯಲ್ ಬ್ಯಾಂಕಿಗೆ ಈ ಬಗೆಯ ನಿಡುಸಾಲಗಳನ್ನು ಕೊಡಲು ಈವರೆಗೂ ಸ್ವಾತಂತ್ರ್ಯವಿಲ್ಲವಾಗಿತ್ತು. ಚರಸ್ವತ್ತಿನ ಮೇಲೆ ಕಿರುವಾಯಿದೆ ಸಾಲವನ್ನು ಕೊಡಬೇಕಾದರೂ ನಿರ್ಬಂಧ ಬಹಳ. ಮೊದಲೇ ಈ ದೇಶದಲ್ಲಿ ಬಂಡವಾಳಕ್ಕೆ ದಾಷ್ಟಿಕವಿಲ್ಲ. ಬ್ಯಾಂಕುಗಳ ಈ ಚರ್ಯೆಯಿಂದ ಬಂಡವಾಳದ ಪುಕ್ಕಲುತನ ಮತ್ತಷ್ಟು ಹೆಚ್ಚುವುದು.

ಸಾಲವನ್ನು ತೆಗೆದುಕೊಳ್ಳುವವರ ಯೋಗ್ಯತೆಯನ್ನೂ ನಂಬಿಕೆಯನ್ನೂ ಹೆಚ್ಚಾಗಿ ಲೆಕ್ಕಿಸದೆ ಸಾಲದ ಪೂರ್ತಿಗೂ ಚರಸ್ವತ್ತು, ಆಸ್ತಿ ಕುದುವಾಗ ಬೇಕೆಂದು ಬ್ಯಾಂಕುಗಳು ಒತ್ತಾಯ ಮಾಡುವುವು. ಮೊದಮೊದಲು ಚಾಲಕರು ಸರಿಯಾಗಿ ಕೆಲಸಮಾಡದ್ದರಿಂದ ಕೈಗಾರಿಕೆ ಕಂಪನಿಗಳು ಒಡೆದುಬಿದ್ದುವು. ಅವಕ್ಕೆ ಸಾಲವನ್ನು ಕೊಟ್ಟಿದ್ದ ಬ್ಯಾಂಕುಗಳೂ ಜನರೂ ನಷ್ಟಪಟ್ಟಿದ್ದರಾದಕಾರಣ ಈ ಕೆಲಸವನ್ನು ಕಂಡರೆ ಅವರಿಗೆ ಬಹಳ ಭಯ. ಕಷ್ಟಕಾಲಗಳಲ್ಲಿ ಇಂಗ್ಲಂಡಿನ ಬ್ಯಾಂಕುಗಳು ಕೂಡ—ಕೆಲವು ವರ್ಷಗಳ ಹಿಂದೆ ಮ್ಯಾಂಚೆಸ್ಟರ್ ಹತ್ತಿಯ ಕಂಪನಿಗಳಿಗೆ ಸಹಾಯಕೊಟ್ಟಂತೆ—ಕಂಪನಿಗಳ ಕೈಹಿಡಿದು ಸಮಯವನ್ನು ದಾಟಿಸುವುದೂ ಕಾಪಾಡುವುದೂ ಉಂಟು. ನಮ್ಮ ದೇಶದಲ್ಲಿ ಹಾಗಲ್ಲ. ಹಲವು ವೇಳೆ ಕೈಗಾರಿಕೆಗಳ ಸ್ಥಿತಿ ಗತಿಯ ತಿಳಿವಳಿಕೆ ಮತ್ತು ಅನುಭವ ಬ್ಯಾಂಕಿಗೆ ಇಲ್ಲದಿರುವುದರಿಂದ ಅವಕ್ಕೆ ಬೆಲೆಗಟ್ಟಲು ಶಕ್ತಿಯಿರುವುದಿಲ್ಲ. ತಮ್ಮಲ್ಲಿರುವ ಕಿರುವಾಯಿದೆ ಹಣಗಳಿಂದ ಕೈಗಾರಿಕೆಯವರಿಗೆ ಚಾಲ್ತಿ ಸಾಲಗಳನ್ನು ಸಣ್ಣ ಸಣ್ಣ ವಾಯಿದೆಗಳಿಗೆ ಕೊಡುವುದುಂಟು. ಅಲ್ಲಿ ಕೆಲಸ ಚೆನ್ನಾಗಿ ನಡೆಯುತ್ತಿರುವವರೆಗೂ ಈ ವಾಯಿದೆಯನ್ನು ಮುಂದಕ್ಕೆ ಹಾಕಿ ಹಾಕಿ ಸಾಲವನ್ನು ನಡಸುವರು. ಆದರೂ ಕಂಪನಿಗೆ ಹೀಗೆ ಎಷ್ಟು ದಿನ ನಡೆಯುತ್ತದೆಯೊ ಯಾವಾಗ ಈ ಸಹಾಯ ನಿಂತುಹೋಗುತ್ತದೆಯೊ ಎಂಬ ಭಯವೂ ಅನಿಶ್ಚಯವೂ ಇರುವುವು. ಹತ್ತಿಯಂಥ ಕೈಗಾರಿಕೆಯೊಳಗೆ ಬೇಕಾದ ಹಣದಲ್ಲಿ ಬಹು ಭಾಗ ಖಾಸಗಿ ಜನರ ಡಿಪಾಸಿಟ್ಟಿನ ರೂಪದಲ್ಲಿ ಒದಗುವುದುಂಟು. ಆದರೆ ಕಷ್ಟ ಕಾಲದಲ್ಲಿ ಕಂಪನಿಯ ಸ್ಥಿತಿ ಹೇಗಿದೆ? ಒಡ್ಡಿದ ಕಷ್ಟಕ್ಕೆ ಕಂಪನಿ ಹೊಣೆಯೆ? ಅದು ಹೊರಗಡೆ ಸ್ಥಿತಿಯ ಸನ್ನಿವೇಶದಿಂದ ಉಂಟಾದುದೆ? ಈ ಕಷ್ಟ ಸ್ವಲ್ಪ ಕಾಲ ಮಾತ್ರ ನುಳಿದು ಹೋಗುವುದೆ? ಅಥವಾ ಬಹುಕಾಲ ನಿಲ್ಲುವುದೆ ಎಂದು ಪರ್ಯಾಲೋಚಿಸದೆ ಡಿಪಾಸಿಟ್ಟುದಾರರು ಹಣವನ್ನು ಹಿಂದಕ್ಕೆ ತೆಗೆದುಕೊಳ್ಳುವರು. ಆದ್ದರಿಂದ ಈ ಬಗೆಯ ಹಣದ ಪ್ರಯೋಜನವೂ ಕಡಮೆ. ಇಂಪೀರಿಯಲ್ ಬ್ಯಾಂಕಿನವರೂ ಇತರ ದೊಡ್ಡ ಬ್ಯಾಂಕುಗಳವರೂ ದೇಶಿ ಕೈಗಾರಿಕೆಗಳವರಿಗೆ ನೆರವು ಕೊಡುವುದಕ್ಕಿಂತ ಮೇಲಾಗಿ, ಜಾಗ್ರತೆಯಾಗಿ, ವಿದೇಶಿ ಕಂಪನಿಗಳವರಿಗೂ ವಿದೇಶಿ ಚಾಲಕರಿರುವ ಕಂಪನಿ

ಗಳಿಗೂ ಸಹಾಯಮಾಡುವರೆಂಬ ಆಕ್ಷೇಪಣೆಗೂ ಬುಡವಿಲ್ಲದೆ ಇಲ್ಲ. ಸಾಲ ಎಲ್ಲಿಂದಲೇ ಬರಲಿ, ಮುಂಗಡವನ್ನು ಯಾರಿಂದಲೇ ತೆಗೆಯಲಿ, ತೆರಬೇಕಾಗಿರುವ ಬಡ್ಡಿಯ ದರ ಬಹಳ ಹೆಚ್ಚು. ಡಿಬೆಂಚರ್ ಪತ್ರಗಳ ಮೂಲಕವಾಗಿ ನಿಡುವಾಯಿದೆಯ ಸಾಲಗಳನ್ನು ತೆಗೆಯುವುದಂತೂ ಈ ದೇಶದಲ್ಲಿ ಬಹಳ ಕಷ್ಟ. ಜನರಿಗೆ ಸಾಮಾನ್ಯವಾಗಿ ಹಣವನ್ನು ಹೇಗೆ ಹೇಗೆ ಹೂಡಬೇಕೆಂದು ತಿಳಿಸಳಿಕೆಕೊಡುವ ಸಂಸ್ಥೆಗಳೂ ಮಾರ್ಗಗಳೂ ಇನ್ನೂ ಇಲ್ಲವೇ ಇಲ್ಲವೆನ್ನಬೇಕು. ಬ್ಯಾಂಕು ಕುಳಗಳಿಗೆ ಅಲ್ಲಿ ಇಲ್ಲಿ ಈ ಬಗೆಯ ಸಹಾಯ ಸ್ವಲ್ಪ ದೊರೆಯಬಹುದಾದರೂ ಅದೂ ಅಷ್ಟು ಪ್ರಯೋಜನಕಾರಿಯಾಗದು. ಎಷ್ಟೋ ಊರುಗಳಲ್ಲಿ ದೊಡ್ಡದೊಂದು ಬ್ಯಾಂಕಿರುವುದೇ ಅಪರೂಪ.* ಪ್ರಾಂತ ಪಟ್ಟಣಗಳಲ್ಲಿ ಸ್ಟಾಕ್-ಎಕ್ಸ್‌ಛೇಂಜುಗಳಿವೆ. ಆದರೆ ಒಳದೇಶದಲ್ಲಿರುವ ಬಂಡವಾಳಸ್ಥನಿಗೆ ಅಲ್ಲಿನ ಮೆಂಬರುಗಳ ಪರಿಚಯವೂ ಸಂಬಂಧವೂ ಸುಲಭವಾಗಿ ದೊರೆಯವು. ಇರುವ ಜನರು ಪೋಸ್ಟ್ ಆಫೀಸ್ ಸೇವಿಂಗ್ಸ್ ಬ್ಯಾಂಕುಗಳಲ್ಲಿಟ್ಟೊ, ಕ್ಯಾಷ್ ಸರ್ಟಿಫಿಕೇಟ್, ಸರಕಾರಿ ಸಾಲಪತ್ರ ಇವುಗಳನ್ನು ಕೊಂಡೊ ಹಣವನ್ನು ಭದ್ರಮಾಡಿಕೊಳ್ಳುತ್ತಾರೆ. ಇತರ ದೇಶಗಳಲ್ಲಿ ವಿಮೆ ಕಂಪನಿಗಳು ತಮ್ಮ ಹಣದ ಬಹು ಭಾಗವನ್ನು ಕೈಗಾರಿಕೆ ಕಂಪನಿಗಳ ಷೇರು ಪತ್ರಗಳನ್ನೂ ಡಿಬೆಂಚರುಗಳನ್ನೂ ಕೊಳ್ಳುವುದಕ್ಕೆ ಹೂಡುವರು. ಇಲ್ಲಿ ಸರಕಾರದ ಸುಂಕದ ನೀತಿಗೆ ಹೆದರಿಯೊ ಉತ್ತಮ ತರಗತಿಯ ಡಿಬೆಂಚರ್ ಪತ್ರ ಸಿಕ್ಕುವುದಿಲ್ಲವೆಂದೊ ವಿಮೆ ಕಂಪನಿಗಳೆಲ್ಲ ಸರಕಾರದ ಸಾಲಪತ್ರಗಳನ್ನು ಮಾತ್ರವೇ ಕೊಳ್ಳುವ ವಾಡಿಕೆಯಿದೆ. ಕೆಲವು ವೇಳೆ ದೊಡ್ಡ ಕಂಪನಿಗಳ ಡಿಬೆಂಚರುಗಳನ್ನು ಯಾರಾದರೂ ಧನಿಕ ವರ್ತಕ ಮಂಡಲಿಯೊ ಸಣ್ಣಪುಟ್ಟ ರಾಜರೊ ವಶಮಾಡಿಕೊಳ್ಳುವುದೂ ಉಂಟು. ಆಗ ಅವುಗಳಿಗೆ ಪೇಟೆಯಲ್ಲಿ ಸಂಚಾರವಿಲ್ಲದಾಗುವುದು. ಸಣ್ಣಪುಟ್ಟ ಕಂಪನಿಗಳ ಡಿಬೆಂಚರುಗಳಾದರೂ ನಂಬಿಕೆಗೆ ಅರ್ಹವಾದರೆ ಸ್ಟಾಕ್-ಎಕ್ಸ್‌ಛೇಂಜಿನಲ್ಲಿ ಅವನ್ನು ಸುಲಭವಾಗಿ ವ್ಯಾಪಾರಕ್ಕೆ ಇಟ್ಟು ಜನರ ಬಳಕೆಗೆ ತರಬಹುದು. ಹೀಗೆ ಡಿಬೆಂಚರುಗಳ ಅಭಾವದಿಂದ ನಷ್ಟ ಬಹಳ. ಇನ್ನು ಕೆಲವು ವೇಳೆ ಹೊಸದಾಗಿ ಸ್ಥಾಪಿತವಾಗುವ ನಾಡಿನ ಕಂಪನಿಗಳಿಗೆ ವಿದೇಶಿ ಪೈಪೋಟಿಯಿಂದ

* ೨,೪೦೦ ಪಟ್ಟಣಗಳಿರುವ ಈ ದೇಶದಲ್ಲಿ ೪೦೦ರಲ್ಲಿ ಮಾತ್ರ ಬ್ಯಾಂಕುಗಳಿವೆ.

ಕೇಡಾಗುತ್ತಿರುವಾಗ ಅದನ್ನು ತಪ್ಪಿಸಲು ಸರಕಾರದ ಸಹಾಯ ದೊರಕದೆ ಹೋಗುವುದು ಸಂಭವ. ಹೀಗೂ ಈ ಕಂಪನಿಗಳಿಗೆ ಬಂಡವಾಳ ಒದಗಲು ತಡೆಯುಂಟಾಗುತ್ತದೆ. ಹೊಸ ರಾಜ್ಯವ್ಯವಸ್ಥೆಯಲ್ಲಿ ಬಹುಶಃ ಇಂಗ್ಲಿಷ್ ಕಂಪನಿಗಳ ಪೈಪೋಟಿಯಿಂದ ಯಾವ ಕೇಡು ತಟ್ಟಿದರೂ ಈ ದೇಶದವರಿಗೆ ಯಾವ ಪರಿಹಾರವೂ ಇಲ್ಲವಾದೀತೆಂಬ ಭಯವಿದೆ.

**ಚಾಲಕ ದಲ್ಲಾಳರು.**—ಈ ದೇಶದ ಬಂಡವಾಳ ಪೇಟೆಗೇ ವಿಶೇಷವಾದ ಲಕ್ಷಣವೆಂದರೆ ಮ್ಯಾನೇಜಿಂಗ್ ಏಜೆನ್ಸಿ ಪದ್ಧತಿ ಎಂಬುದು. ಇತರ ದೇಶಗಳಲ್ಲಿ ಬೇರೆಬೇರೆ ಜನರು ಮಾಡುವ ಪ್ರೊಮೋಷನ್, ಅಂಡರ್‌ರೈಟಿಂಗ್, ಇಶ್ಯೂ ಕೆಲಸಗಳನ್ನೆಲ್ಲ ಈ ಚಾಲಕ ದಲ್ಲಾಳರು ಸ್ವಂತವಾಗಿ ಮಾಡುವರು. ಕಂಪನಿಗೆ ಬೇಕಾಗುವ ಹಣವನ್ನು ಸ್ವಂತವಾಗಿ ತಾವೊ ಸ್ನೇಹಿತರ ಮೂಲಕವೊ ಒದಗಿಸುವರು; ಬೇಕಾದ ಪದಾರ್ಥ ಕೊಳ್ಳುವರು; ತಯಾರಾದ ವಸ್ತುಗಳನ್ನು ಮಾರುವರು; ಪೇಟೆಯನ್ನೂ ಗಿರಾಕಿಯನ್ನೂ ಹುಡುಕಿಕೊಡುವರು; ಬ್ಯಾಂಕುಗಳಿಂದ ಕಂಪನಿಗೆ ಮುಂಗಡವೊ ಸಾಲವೊ ದೊರೆಯಬೇಕಾದಾಗ ಒಳ್ಳೆಯ ಹೆಸರಿರುವ ಈ ದಲ್ಲಾಳರ ಹೊಣೆಗಾರಿಕೆಯೂ ರುಜುವೂ ಅತ್ಯಾವಶ್ಯಕವಾಗುವುವು.*

ಎಲ್ಲಿಯವರೆಗೆ ಕಂಪನಿಗಳು ಲಾಭಕರವೊ ಅಲ್ಲಿನವರೆಗೂ ಇವರ ಸಹಾಯ ಹೆಚ್ಚು. ವ್ಯಾಪಾರದಲ್ಲಿ ನಷ್ಟವಾಗಿ ಆಗಲೆ ಹೆಚ್ಚು ಹಣ ಒದಗಿಸಬೇಕಾಗಿ ಬಂದರೆ ಅವರಿಗೂ ನಷ್ಟವಾಗಿರುವುದರಿಂದ ಹಣವನ್ನೊದಗಿಸು

---

* ಇವರು ಕ್ರಮವಾಗಿ ಮೊದಲು ಮುಂಗಡಗಳನ್ನು ಕೊಟ್ಟು ಕಡೆಗೆ ಕಂಪನಿಯ ಡಿಬೆಂಚರುಗಳನ್ನು ಷೇರುದಾರರ ಕೈಯಿಂದ ಆಕರ್ಷಿಸಿ ಕಂಪನಿಯನ್ನು ಸ್ವಂತಕ್ಕೆ ತೆಗೆದುಕೊಳ್ಳುವುದುಂಟು; ಹತ್ತು ಇಪ್ಪತ್ತು ವರ್ಷಗಳ ಕಾಲ ತಮ್ಮ ಅಧಿಕಾರ ನಡೆಯತಕ್ಕದ್ದೆಂದು ಒಪ್ಪಂದಮಾಡಿಕೊಂಡು ಷೇರುದಾರರ ಮತ್ತು ಕಂಪನಿ ಚಾಲಕ ಮಂಡಲಿಯವರ ಇಷ್ಟವನ್ನು ಗಮನಿಸದೆ ಕೆಲಸಮಾಡುವುದುಂಟು. ಈ ದಲ್ಲಾಳರು ವಂಶಾನುಕ್ರಮದಲ್ಲಿ ತಮ್ಮ ಮನೆಯವರ ಅಧಿಕಾರಕ್ಕೊ ತಮಗೆ ಬೇಕಾದ ಇತರರಿಗಾಗಿಯೊ ಕಂಪನಿಗಳ ಮೇಲಿನ ಏಜೆನ್ಸಿಗಳನ್ನು ಒಳಪಡಿಸಿಕೊಳ್ಳುವುದುಂಟು. ಷೇರುದಾರರಿಗೆ ಯಾವ ಲಾಭವೂ ಇಲ್ಲದ ಕಾಲದಲ್ಲಿಯೂ ಕಂಪನಿಗಾಗಿ ಕೊಳ್ಳುವ ಪದಾರ್ಥಗಳ ಮೇಲೂ ಕಂಪನಿ ಮಾರುವ ಪದಾರ್ಥಗಳ ಮೇಲೂ ದೊಡ್ಡ ದಲ್ಲಾಳಿ ಹಾಕಿ ಕೈತುಂಬ ಸಂಪಾದನೆ ಮಾಡಿಕೊಳ್ಳುವುದುಂಟು. ಅನೇಕ ಕಂಪನಿಗಳಿಗೆ ಏಜೆಂಟರಾಗಿ ಒಂದು ಕಂಪನಿಯ ಷೇರು ಸ್ಟಾಕುಗಳನ್ನು ಇನ್ನೊಂದಕ್ಕೆ ಬಂಡವಾಳವಾಗಿ ಮಾಡಿ ಎರಡರ ಕಾರ್ಯಗಳನ್ನೂ ತೊಡಕುಮಾಡುವುದುಂಟು. ಇವರ ಕಾರ್ಯಕಲಾಪಗಳನ್ನು ತಿದ್ದಿ ಹದ್ದಿನಲ್ಲಿಡುವುದಕ್ಕಾಗಿ ಹೊಸದಾಗಿ ಈಗ ಒಂದು ಕಾನೂನು ಏರ್ಪಡುತ್ತಿದೆ.

ವುದು ಸುಲಭವಲ್ಲವಾಗುವುದು. ಕಂಪನಿಗಳಿಗೂ ವ್ಯಾಪಾರದ ಬ್ಯಾಂಕುಗಳಿಗೂ ಹೆಚ್ಚು ಸಂಬಂಧವನ್ನು ಉಂಟುಮಾಡಿ, ಪ್ರತ್ಯೇಕವಾಗಿ ಖಾಸಗಿಯಾಗಿಯೊ ಸರಕಾರಿಯಾಗಿಯೊ ದೊಡ್ಡದೊಡ್ಡ ಕೈಗಾರಿಕೆ ಬ್ಯಾಂಕುಗಳನ್ನು ಸ್ಥಾಪಿಸಿ ಈಗಿರುವ ಕಂಪನಿ ಕಾನೂನಿನ ಅನನುಕೂಲಗಳನ್ನು ಸರಿಪಡಿಸಿ ಸರಕಾರದವರೂ ಬ್ಯಾಂಕುಗಳವರೂ ಕೈಗಾರಿಕೆಗಳ ನೆರವಿಗೆ ನಿಂತ ಹೊರತು ಅವರಿಗೆ ಸಾಕಾದಷ್ಟು ಹಣ ದೊರೆಯುದಾಗುವುದು.

**ಬಂಡವಾಳದ ಮೊತ್ತ.**—ಸುಮಾರು ೬,೦೦೦ ಕೂಡುಬಂಡವಾಳದ ಬ್ಯಾಂಕುಗಳ ಕೈಯಲ್ಲಿ ಸ್ವಲ್ಪ ಕಡಮೆ ೩೦೦ ಕೋಟಿ ರೂಪಾಯಿ ಬಂಡವಾಳವಿದೆ ಎನ್ನಬಹುದು. ಅದರಲ್ಲಿ ಅರ್ಧಭಾಗವಾದರೂ ಮಹಾಜನರ ಕೈಯಲ್ಲಿದೆ ಎಂದರೆ ತಪ್ಪಾಗಲಾರದು. ಸುಮಾರು ೭೫ ಕೋಟಿ ರೂಪಾಯಷ್ಟು ವಿಶೇಷ ಬಗೆಯ ಜನರ ಕೈಯಲ್ಲಿದೆ. ಸ್ಟಾಕ್ ಕಂಪನಿಗಳ ವಶದಲ್ಲಿರುವ ಡಿಬೆಂಚರುಗಳ ಮತ್ತು ಟಾಯಂ ಡಿಪಾಸಿಟ್ಟುಗಳ ರೂಪದಲ್ಲಿ ಕಡಮೆಯೆಂದರೆ ೩೦ ಕೋಟಿ ರೂಪಾಯಿ ಹಣವಿದೆ. ಇಂಡಿಯಾದಲ್ಲಿರುವ ಸರಕಾರದ ಪುಡಿಸಾಲಗಳ ಮೊತ್ತ ಸುಮಾರು ೩೫೦ ಕೋಟಿ; ಮ್ಯುನಿಸಿಪಲ್ ಮತ್ತು ಪೋರ್ಟ್ ಟ್ರಸ್ಟ್ ಸಾಲಗಳು ೭೦ ಕೋಟಿ; ಖಾಸಗಿ ಜನರು ಬ್ಯಾಂಕುಗಳಲ್ಲಿಟ್ಟಿರುವ ಡಿಪಾಸಿಟ್ ಮೊಬಲಗು ಪೋಸ್ಟಾಫೀಸುಗಳಲ್ಲಿ ಸೇವಿಂಗ್ಸ್ ರೂಪದಲ್ಲಿಯೂ ಕ್ಯಾಷ್ ಸರ್ಟಿಫಿಕೇಟ್ ರೂಪದಲ್ಲಿಯೂ ಸುಮಾರು ೩೦೦ ಕೋಟಿ, ಒಟ್ಟು ಸುಮಾರು ೧,೦೦೦ ಕೋಟಿ ರೂಪಾಯಿ ಅಥವಾ ಸರಕಾರದ ಸಾಲಗಳನ್ನು ಲೆಕ್ಕಮಾಡದಿದ್ದರೆ ೭೦೦ ಕೋಟಿ ರೂಪಾಯಿ ಬಂಡವಾಳ—ವಿದೇಶಿಯರು ಇಲ್ಲಿ ಹೂಡಿರುವಷ್ಟು ಮೊತ್ತದ ಹಣ—ಪೇಟೆಯಲ್ಲಿದೆ. ಆ ಸಾಲವನ್ನು ತೀರಿಸಿ ಬಂಡವಾಳವನ್ನು ಪೂರ್ತಿ ಸ್ವದೇಶಿ ಮಾಡಿಕೊಂಡರೆ ಕಡೆಗೆ ವರ್ಷಕ್ಕೆ ೩೫–೪೦ ಕೋಟಿ ರೂಪಾಯಿ ಬಡ್ಡಿಯಾದರೂ ಉಳಿದೀತು.

ಇನ್ನೆರಡು ಬಗೆಯಲ್ಲಿ ಬಂಡವಾಳದ ಪೇಟೆಗೆ ಹಣ ಸೇರೆಯುಬಲ್ಲದು; (೧) ಬಡ್ಡಿಗೆ ಹೂಡದೆ ಒಂದುಕಡೆ ಅಲಸವಾಗಿರುವ ಹಣ; (೨) ವಿದೇಶಿ ಬಂಡವಾಳ ಪೇಟೆಗಳಿಂದ ತೆಗೆಯಬಹುದಾದ ಎರವಲು.

(೧) ಒಡವೆ, ವಸ್ತು, ಪಾತ್ರೆಗಳ ರೂಪದಲ್ಲಿರುವುದನ್ನು ಹೊರಕ್ಕೆ ತೆಗೆಯುವುದು ಅಸಾಧ್ಯ. ಸಾಮಾಜಿಕ ಪದ್ಧತಿಗಳಲ್ಲಿಯೂ ಹಣ ಕೂಡಿಸುವ ವಿಧಾನಗಳಲ್ಲಿಯೂ ಬದಲಾವಣೆ ಬಂದು ಬ್ಯಾಂಕ್ ವ್ಯವಹಾರ ಜನರಲ್ಲಿ ಹಬ್ಬುವಂತಾದರೆ ಅದೆಲ್ಲ ಬಂಡವಾಳದ ಪೇಟೆಗೆ ಬರಬಹುದು. ಈ ೩೦ ವರ್ಷಗಳಲ್ಲಿ ಒಳಬಳಕೆಗಾಗಿ ತರಿಸಿಕೊಂಡು ಸಮ್ಮಲ್ಲಿಟ್ಟುಕೊಂಡಿರುವ ಚಿನ್ನದ ಬೆಲೆ ಸುಮಾರು ೫೦೦ ಕೋಟಿ ರೂಪಾಯಿ.* ಸಂಚಾರಕ್ಕೆ ಒದಗದೆ ಜನರ ಪೆಟ್ಟಿಗೆಗಳಲ್ಲಿ ಸೆರೆಯಾಗಿರುವ ಬೆಳ್ಳಿಯ ರೂಪಾಯಿಗಳ ಮೊತ್ತ ಸುಮಾರು ೨೦೦–೩೦೦ ಕೋಟಿ.† ಆ ಮೊತ್ತವಾದರೂ ಬಂಡವಾಳದ ಪೇಟೆಗೆ ಬಂದರೆ ಎಷ್ಟೋ ಉಪಕಾರವಾದೀತು. ಕಡಮೆಯೆಂದರೆ ಈಗ ವಿದೇಶಿಯರ ಕೈಯಲ್ಲಿರುವ ಕೈಗಾರಿಕೆಯೆಲ್ಲ ಸಂಪೂರ್ಣವಾಗಿ ನಾಡಿನವರ ಕೈಗೇ ಬರಲು ಅವಕಾಶವುಂಟು.

(೨) **ಕ್ಷೇತ್ರಗಳು.**—ವಿದೇಶಿ ಹಣದ ಪೇಟೆಗಳಿಂದ ಹಣವನ್ನೊದಗಿಸಿ ಕೊಳ್ಳುವುದು ಸರಿಯೆಂದು ತೋರಿದರೆ ಆ ಬಂಡವಾಳಸ್ಥರಿಗೆ ಹಲವು ಅನುಕೂಲಗಳನ್ನು ಕಲ್ಪಿಸಿಕೊಡಬೇಕಾಗುವುದು: ಬಂಡವಾಳ ಬೇಕಾಗಿರುವ ಕೆಲವು ಕ್ಷೇತ್ರಗಳನ್ನು ಇಲ್ಲಿ ಸೂಚಿಸಬಹುದು:—

೧. ಈ ದೇಶದ ಕೇಂದ್ರ ಸರಕಾರಕ್ಕೆ—ರೈಲ್ವೆ ವಿಸ್ತರಣಕ್ಕೂ ಸಂಪದಭಿವೃದ್ಧಿ ಕಾರ್ಯಗಳಿಗೂ ಪ್ರಾಂತ ಸರಕಾರಗಳವರಿಗೂ ಸ್ಥಳೀಯ ಮಂಡಲಿ, ಬಂದರು ನಿರ್ಮಾಣ, ಉದ್ಯೋಗ ಕಲ್ಪನೆ ಮುಂತಾದುವುಗಳಿಗೂ ಬಹಳ ಹಣ ಬೇಕಾಗಿರುವುದು. ಈಗ ಸರಕಾರದವರು ಎತ್ತುತ್ತಿರುವ ಸಾಲದಲ್ಲಿ ಬಹು ಭಾಗ ಉತ್ಪತ್ತಿ ಕಾರ್ಯಗಳಿಗೇ, ಸಮಾಜದ ಉಪಯೋಗ ಕಾರ್ಯಗಳಿಗೇ ಆಗಿದೆ. ಆ ಕೆಲಸವನ್ನು ಸರಕಾರದವರು ಮಾಡದಿದ್ದರೆ ಖಾಸಗಿ ಜನರು ಕೈಕೊಳ್ಳಬೇಕಾಗಿತ್ತು. ಅವರಾದರೂ ಇದೇ ಬಂಡವಾಳದ ಪೇಟೆಗೆ ಬರಬೇಕಾಗುತ್ತಿತ್ತು.

---

* ೧೯೨೯ಕ್ಕೆ ಹಿಂದಿನ ಬೆಲೆಯಂತೆ.

† ಸಹಕಾರ ಸಂಘಗಳು ಕೂಡಿಸಿರುವ ಸೇವಿಂಗ್ಸ್ ಹಣ, ವಿದೇಶಿಯರು ಹೂಡಿರುವ ಸುಮಾರು ೭೦೦–೧,೦೦೦ ಕೋಟಿ ರೂಪಾಯಿ ಬಂಡವಾಳ, ಜನರ ಕೈಯಲ್ಲಿನ ನಿಕ್ಷೇಪ, ಸಣ್ಣ ಲೇವಾದೇವಿಗಳಲ್ಲಿ ಓಡಿಯಾಡುವ ಹಣಗಳನ್ನು ಇಲ್ಲಿ ಸೇರಿಸಿಲ್ಲ.

೨. ಈಗಿನಂತೆ ಫಿಕ್ಸೆಡ್ ಡಿಪಾಸಿಟ್ ರೂಪದಲ್ಲಿ ಕೈಗಾರಿಕೆ ಕಂಪನಿ ಗಳಿಗೆ ನಿಡುಸಾಲ ಕೊಡುವುದಕ್ಕಿಂತ ಅವುಗಳ ಡಿಬೆಂಚರ್ ಪತ್ರಗಳನ್ನು ಕೊಳ್ಳುವುದರ ಮೂಲಕ ಹಣವೊದಗಿಸುವುದು ಮೇಲಾದ್ದರಿಂದ ಅಂತಹ ಸಂಸ್ಥೆಗಳ ಡಿಬೆಂಚರನ್ನು ಕೊಳ್ಳಲು ಬಂಡವಾಳ ಬೇಕು.

೩. ವ್ಯವಸಾಯ ಪ್ರಪಂಚದ ಉದ್ಧಾರಕ್ಕೆ ಜಮೀನು ಅಡಮಾನದ ಬ್ಯಾಂಕುಗಳು ಅನೇಕವಾಗಿ ಏರ್ಪಟ್ಟು ಅವುಗಳ ಡಿಬೆಂಚರನ್ನು ಕೊಂಡು ಹಂಚಲು ಬಂಡವಾಳ ಬೇಕು.

೪. ಈಗ ಕೆಲಸವಿಲ್ಲದೆ ಸಂಪಾದನೆಯಿಲ್ಲದೆ ಇರುವ ಎಲ್ಲರಿಗೂ ಉದ್ಯೋಗ ಕಲ್ಪಿಸಿ ದೇಶದಲ್ಲಿ ಸಾಧ್ಯವಾಗುವ ಎಲ್ಲ ಉತ್ಪತ್ತಿ ಯನ್ನು ತೆಗೆಯಲು ಬಂಡವಾಳ ಬೇಕು.

ಈ ಎಲ್ಲ ಸಂಬಂಧದಲ್ಲಿಯೂ ಜನರ ತಿಳಿವಳಿಕೆ ಹೆಚ್ಚಿ ಅವರೇ ಮುಂದೆ ಬರುವಂತಾಗಬೇಕೇ ಹೊರತು ಯಾವ ಬ್ಯಾಂಕೇ ಆಗಲಿ ಜನದಲ್ಲಿ ಇಲ್ಲದ ಪ್ರವೃತ್ತಿಗಳನ್ನು ಉಂಟುಮಾಡಲಾರದು. ಯಾವ ಬಲಾತ್ಕಾರಗಳೂ ಪ್ರಯೋಜನವಾಗವು. ಇಂಡಿಯಾ ದೇಶದಲ್ಲಿ ಈಗ ಕೈಗಾರಿಕೆ ಬ್ಯಾಂಕು ಗಳಿಗಿರುವಷ್ಟು ಆವಶ್ಯಕತೆ ಬೇರೆ ಎಲ್ಲಿಯೂ ಇಲ್ಲ. ಹೊಸ ಕೈಗಾರಿಕೆ ಗಳನ್ನು ಸ್ಥಾಪಿಸಿ ಬೆಳಸಬೇಕು; ಉದ್ಯೋಗಗಳನ್ನು ವಿವಿಧವಾಗಿ ಮಾಡಿ ನಾಡಿನಲ್ಲಿ ಹರಡಬೇಕು; ಹಳೆಯವಕ್ಕೆ ಚೈತನ್ಯವಿತ್ತು ಹೊಸ ವಿಧಾನಗಳಲ್ಲಿ ನಡಸಬೇಕು; ನಿರ್ಜೀವವಾಗಿರುವ ಸಂಸ್ಥೆಗಳನ್ನು ಅಳಿಸಿ, ಶಕ್ತಿ, ವ್ಯವಸ್ಥೆ, ದಕ್ಷತೆ ಹೆಚ್ಚುವಂತೆ ಮಾಡಬೇಕು; ಕೆಲಸ ದೊಡ್ಡ ಪ್ರಮಾಣದಲ್ಲಿ ನಡೆಯುವ ಸಾಹಸಕ್ಕೂ ಸಂವಿಧಾನಕ್ಕೂ ಅನುಕೂಲವಾದ ಆವರಣ ಕಲ್ಪಿಸಬೇಕು. ಜರ್ಮನಿ ಜಪಾನ್ ಮೊದಲಾದ ದೇಶಗಳಲ್ಲಿ ಬ್ಯಾಂಕುಗಳು ಕೈಗಾರಿಕೆಯ ಅಭಿವೃದ್ಧಿಗೆ ನೆರವು ಕೊಡುವಂತೆ ನಮ್ಮ ಬ್ಯಾಂಕುಗಳು ನೆರವು ಕೊಡು ವಂತಾಗಬೇಕು; ಹೊಸ ಕಂಪನಿಗಳು ಎಳೆಯವಾಗಿ ಹೊರಗಿನ ಬಲಿಷ್ಠರ ಪ್ರೈಪೋಟಿಯಲ್ಲಿ ಉಳಿಯಲಾರದಿರುವಾಗ ಸಕಾಲಕ್ಕೆ ಬೇಕಾಗುವ ಎಲ್ಲ ರಕ್ಷಣೆ ಪೋಷಣೆಗಳನ್ನೂ ಸರಕಾರ ಉಂಟುಮಾಡಬೇಕು; ಹೊಸ ಕಾರ್ಯ ವಿಧಾನಗಳನ್ನೂ ಶಾಸ್ತ್ರಪರೀಕ್ಷಣಗಳನ್ನೂ ಯಂತ್ರನಿರ್ಮಾಣವನ್ನೂ

ಮಾಡುವ ಸಾಹಸಿಗಳಿಗೆ ಉತ್ತೇಜನಕೊಡಬೇಕು. ಎಲ್ಲ ವಿಧದಲ್ಲಿಯೂ ಅವರ ಬೆನ್ನ ಹಿಂದೆ ನಿಲ್ಲಬೇಕು. ನಾಡಿನ ಸಂಪತ್ತು ಹೆಚ್ಚಿ ಜನರ ಉದ್ಯೋಗ ಬುದ್ಧಿಯೂ ಕಾರ್ಯಸಾಹಸವೂ ನಾನಾಮುಖವಾಗಿ ಬೆಳೆಯುವಂತೆ, ಸರಕಾರ ಕೇವಲ ಈ ನಾಡಿನದಾಗಿ ವ್ಯವಸ್ಥೆಗೊಂಡು, ಇಲ್ಲಿನವರ ಶ್ರೇಯ ಸ್ಸಾಧನೆಗೆ ಮೊದಲು ಗಮನ ಕೊಡುವಂತಾದ ಹೊರತು ಯಾವ ಬಗೆ ಯಲ್ಲಿಯೂ ಬಿಡುಗಡೆಯಿಲ್ಲ.

## ವ್ಯವಸಾಯಕ್ಕೂ ಪುಡಿ ಕೈಗಾರಿಕೆಗಳಿಗೂ ಬಂಡವಾಳ

**ಪರಿಸ್ಥಿತಿ.**—ಇಲ್ಲಿನ ಮೂರು ಪಾಲು ಜನರಿಗೆ ವ್ಯವಸಾಯ ಬದುಕಾಗಿದೆ. ವ್ಯವಸಾಯದ ವಾರ್ಷಿಕ ಉತ್ಪತ್ತಿ ಬಹಳವೆಂದರೆ ೧,೨೦೦ ಕೋಟಿ ರೂಪಾಯಿ. ಇತರ ದೇಶಗಳೊಂದಿಗೆ ಹೋಲಿಸಿ ನೋಡಿದರೆ ಉತ್ಪತ್ತಿ ಬಹು ಕಡಮೆ. ರೈತನ ಬಡತನವೂ, ಅಜ್ಞಾನವೂ, ಸಾಲ ಗಾರಿಕೆಯೂ, ಅಲ್ಪ ತೃಪ್ತಿಯೂ ಈ ಸ್ಥಿತಿಗೆ ಮುಖ್ಯ ಕಾರಣ. ಇವುಗಳ ಜೊತೆಗೆ ಹುಚ್ಚು ಮಳೆ, ಕ್ಷಾಮ, ಮುಂತಾದುವುಗಳ ಬಾಧೆ; ಭೂಮಿಯ ಸಾಗುವಳಿಯಲ್ಲಿರುವ ವಿವಿಧ ಪದ್ಧತಿಗಳು ; ಭೂಮಿ ಅನೇಕ ತುಕಡಿಗಳಾಗಿ ಒಡೆದು ಚೆದರಿರುವಿಕೆ; ಕೂಡು ಕುಟುಂಬದ ಪದ್ಧತಿ; ಬೆಳಸನ್ನು ಮಾರಲು ಹೆಚ್ಚು ಅನುಕೂಲಗಳಿಲ್ಲದಿರುವುದು ; ರೈತನ ಸಹಾಯಕ್ಕೆ ಸರಕಾರವಾಗಲಿ ಸಮಾಜವಾಗಲಿ ಬ್ಯಾಂಕ್ ಮಂಡಲವಾಗಲಿ ಒದಗದಿರುವಿಕೆ—ಮುಂತಾ ದುವು ಸೇರಿ ಬೇಸಾಯಗಾರನ ಬಾಳಿನಲ್ಲಿ ಸುಖವಿಲ್ಲವಾಗಿದೆ. ಮುಖ್ಯ ವಾಗಿ ಅವನಿಗೆ ಮನೆಯ ಖರ್ಚಿಗೂ, ಬೇಸಾಯದ ವೆಚ್ಚಕ್ಕೂ, ಜಮೀನಿನ ವಿಸ್ತರಣ ಮತ್ತು ಸಂಸ್ಕರಣಕ್ಕೂ, ಹಿಂದಿನ ಸಾಲಗಳನ್ನು ಹರಿಸುವುದಕ್ಕೂ ಹಣ ಬೇಕಾಗುವುದು. ಆ ಹಣ ಸುಲಭವಾಗಿ ದೊರೆಯುವುದಿಲ್ಲ. ದೊರೆಯು ವಾಗ ಸಾಕಾದಷ್ಟು ಮೊತ್ತ ದೊರೆಯದು ; ಬಡ್ಡಿ ಬಹಳ ಹೆಚ್ಚು ; ಒಂದು ಸಲ ಸಾಲದ ರಾಟೆಗೆ ಸಿಕ್ಕಿದ ರೈತನು ಅದರಿಂದ ಬಿಡಿಸಿಕೊಳ್ಳಲು ಅಶಕ್ತ ನಾಗುವನು. ಒಂದು ಕಡೆ ಸಾಲ ಹರಿದು ಇನ್ನೊಂದು ಕಡೆ ಅವನ ಬೇಸಾಯದ ಉತ್ಪತ್ತಿ ವರ್ಷೇ ವರ್ಷೇ ಹೆಚ್ಚಿದ ಹೊರತು ವ್ಯವಸಾಯ ಕ್ಕಾಗಲಿ ರೈತನ ಬದುಕಿಗಾಗಲಿ ಭವಿಷ್ಯವಿಲ್ಲ.

ರೈತನು ಬೇರೆಯವರಲ್ಲಿ ಸಾಲಕ್ಕೆ ಹೋಗದಂತೆಯೂ ಇರುವ ಸಾಲವನ್ನು ಚಿಕ್ಕ ಕಂತುಗಳಲ್ಲಿ ನಿಧಾನವಾಗಿ ಸುಲಭವಾಗಿ ಇಳಿಸಿಕೊಳ್ಳುವಂತೆಯೂ ವ್ಯವಸಾಯದಲ್ಲಿ ಅವನು ನಿಂತು ಅವನಿಂದ ಹೆಚ್ಚು ಉತ್ಪತ್ತಿಯಾಗುವಂತೆಯೂ ಸ್ಥಿತಿಗತಿ ಏರ್ಪಟ್ಟ ಹೊರತು ಪ್ರಯೋಜನವಿಲ್ಲ. ವರ್ಷಕ್ಕೆ ೫೦ ರೂಪಾಯಿ ಕೂಡ ವರಮಾನವಿಲ್ಲದ ರೈತವರ್ಗದ ಒಟ್ಟು ಸಾಲ ೯೦೦ ಕೋಟಿ ರೂಪಾಯಿಷ್ಟಿದೆಯೆಂದರೆ ಆ ಭಾರ ಹೊರುವ ಕಷ್ಟವನ್ನು ಊಹಿಸಿಕೊಳ್ಳಬಹುದು. ಸಹಕಾರ ಸಂಘಗಳಿಂದಲಾಗಲಿ, ಸ್ಥಳದ ಸಾಹುಕಾರರಿಂದಲಾಗಲಿ, ವ್ಯಾಪಾರದ ಬ್ಯಾಂಕುಗಳಿಂದಾಗಲಿ ಅವರಿಗೆ ಈವರೆಗೆ ಯಾವ ಹೆಚ್ಚು ಸಹಾಯವೂ ದೊರೆತಿಲ್ಲ; ಈಗಿರುವಂತೆಯೇ ಇದ್ದರೆ ದೊರೆಯುವ ಹಾಗೆಯೂ ಇಲ್ಲ. ಉಳಿದುದು ಒಂದೇ ಮಾರ್ಗ: ಜಮೀನು ಅಡಮಾನದ ಪದ್ಧತಿಯ ಮೇರೆಗೆ ನಿಡುಸಾಲಗಳನ್ನು ಏರ್ಪಡಿಸುವುದು. ಒಂದು ಪ್ರಧಾನ ವ್ಯವಸಾಯ ಬ್ಯಾಂಕಿನ ಮೂಲಕವೊ ಜಮೀನು ಅಡಮಾನದ ಬ್ಯಾಂಕಿನ ಮೂಲಕವೊ ಸಹಕಾರ ಸಂಘಗಳ ಮೂಲಕವೊ ಉತ್ತಮವಾದ ವ್ಯವಸಾಯದ ಬಡ್ಡಿಯ ಪತ್ರಗಳನ್ನೂ ಸಾಲದ ಪತ್ರಗಳನ್ನೂ ಉಂಟುಮಾಡಿ ಪ್ರಚಾರಕ್ಕೆ ತಂದು ಅವಕ್ಕೆ ಪೇಟೆಯಲ್ಲಿ ಧಾರಾಳವಾದ ಸಂಚಾರವಾಗುವಂತೆ ಮಾಡಿ ವ್ಯವಸಾಯಕ್ಕೂ ಹಣದ ಪೇಟೆಗೂ ಸಂಬಂಧ ಕಲ್ಪಿಸಿದ ಹೊರತು ತೊಡಕಿನಿಂದ ಉದ್ಧಾರವಾಗುವಂತಿಲ್ಲ. ಅಲ್ಲದೆ ರೈತನ ಬೆಳಸು ಪೇಟೆಯಲ್ಲಿ ಉತ್ತಮವಾಗಿ ಮಾರಾಟವಾಗುವಂತೆ ಸುವ್ಯವಸ್ಥಿತವಾದ ದವಸದ ಪೇಟೆಯೊಂದನ್ನು ನಿರ್ಮಾಣಮಾಡಿ ಅವನ ಶ್ರಮದ ಫಲ ಪರಮಾವಧಿ ದೊರೆಯುವಂತೆಯೂ ಆಗಬೇಕು.

ದೊಡ್ಡ ರೈತರು ಸ್ವಂತವಾಗಿಯೊ ನಾಲ್ಕಾರು ಜನ ಸಹಕರಿಸಿಯೊ ಸಾಮಾನುಗಳ ಮಳಿಗೆಗಳನ್ನು ಏರ್ಪಡಿಸಿಕೊಂಡು ಅವುಗಳ ಆಧಾರದ ಮೇಲೆ ಆರು ತಿಂಗಳ ವಾಯಿದೆ ಹುಂಡಿಗಳ ಮೂಲಕವಾಗಿ ಊರಿನ ಮಹಾಜನ ಸಾಹುಕಾರರಿಂದ ಕಡವನ್ನು ತೆಗೆಯುವುದು ಸಾಧ್ಯವಾದರೆ ಆ ಹುಂಡಿಯನ್ನು ಹಣದ ಪೇಟೆಯಲ್ಲಿ ಪಟ್ಟಕ್ಕೆ ಕೊಂಡು ಬ್ಯಾಂಕುಗಳವರು ಹಣವನ್ನು ಒದಗಿಸಿಯಾರು. ಕಡೆಗೆ ರಿಸರ್ವ್ ಬ್ಯಾಂಕು ಕೂಡ ಈ ಹುಂಡಿಯನ್ನು ಪಟ್ಟಕ್ಕೆ ಕೊಳ್ಳಲು ಅವಕಾಶವಾದೀತು. ರಿಸರ್ವ್ ಬ್ಯಾಂಕು

ಒಂಬತ್ತು ತಿಂಗಳ ವ್ಯವಸಾಯ ಪತ್ರಗಳ ಮೇಲೆ ಸಾಲ ಕೊಡಬಹುದೆಂದು ಆಗಿರುವ ಏರ್ಪಾಡೂ ವ್ಯವಸಾಯ ಶಾಖೆಯನ್ನು ಏರ್ಪಡಿಸಿ ಸ್ಥಿತಿ ಪರಿಶೀಲನೆ ಮಾಡತಕ್ಕದ್ದೆಂಬ ಏರ್ಪಾಡೂ ಈ ವಿಷಯದಲ್ಲಿ ಮುಂದೆ ಬಹುವಾಗಿ ಉಪಕಾರ ಮಾಡಬಹುದು.

**ಪುಡಿ ಕೈಗಾರಿಕೆಗಳು.** — ಹಳ್ಳಿಗಳಲ್ಲಿಯೂ ಸಣ್ಣ ಊರುಗಳಲ್ಲಿಯೂ ನಡೆಯುವ ಕೈಮಗ್ಗಗಳು; ಬಿದ್ದರ್ ಕೆಲಸ, ಚಿನ್ನ ಬೆಳ್ಳಿ ದಾರ ತೆಗೆಯುವ ಕೆಲಸ, ರೇಷ್ಮೆ ಉದ್ಯೋಗ, ಹಿತ್ತಾಳೆ ತಾಮ್ರದ ಸಾಮಾನುಗಳ ತಯಾರಿಕೆ, ಬೀಡಿ ಸಿಗರೆಟ್ಟುಗಳ ಕೆಲಸ, ಚಿತ್ರ, ಚಾಪೆ ಹೆಣಿಗೆ, ಜಮಖಾನ, ಆಟದ ಸಾಮಾನುಗಳ ಕೆಲಸ, ಹಾಲು ಬೆಣ್ಣೆಯ ಕೆಲಸ, ಜೇನು ತಯಾರಿಕೆ, ಕೋಳಿ ಸಾಕುವ ಕೆಲಸ, ಗೋರಕ್ಷಣೆ ಮುಂತಾದ ಅನೇಕ ಕೆಲಸಗಳು ಊರುಗಳಲ್ಲಿಯೂ ಹಳ್ಳಿಗಳಲ್ಲಿಯೂ ಅನೇಕರ ಮುಖ್ಯೋದ್ಯೋಗವಾಗಿರುತ್ತವೆ. ಉಪವೃತ್ತಿಯಾಗಿಯೂ ಇರುತ್ತವೆ. ಇವುಗಳೆಲ್ಲಕ್ಕೂ ಗಿರಾಕಿ ಬೇಕು; ವ್ಯಾಪಾರ ಸೌಕರ್ಯ ಬೇಕು; ಅವು ಉತ್ತಮಗೊಳ್ಳಲು ಬಂಡವಾಳ ಬೇಕು; ಹೊರಗಿನಿಂದ ಆಮದಾಗುವ ವಸ್ತುಗಳ ಪೈಪೋಟಿಯಿಂದ ರಕ್ಷಣೆ ಬೇಕು; ಅವುಗಳಿಗೆ ಹೆಚ್ಚು ಹಸನು ಬರುವಂತೆಯೂ ಗಿರಾಕಿ ಹೆಚ್ಚಿದಷ್ಟು ಅವು ಹೆಚ್ಚು ಪರಿಮಾಣದಲ್ಲಿ ತಯಾರಾಗುವಂತೆಯೂ ಏರ್ಪಡಿಸಬೇಕಾಗುವುದು. ಇವರಿಗೆ ಸರಬರಾಯಾಗುವ ಮೂಲಸಾಮಗ್ರಿ ಒಂದೇ ಯೋಗ್ಯತೆಯುಳ್ಳದ್ದಾಗಿರುವಂತೆ ವ್ಯವಸ್ಥೆ ಮಾಡಬೇಕು. ಕೆಲಸಕ್ಕೆ ಬೇಕಾದ ಚಿತ್ರ, ಯಂತ್ರೋಪಕರಣಗಳು ಮುಂತಾದುವನ್ನೂ ಕೆಲಸದ ಕಾಲದಲ್ಲಿ ಬೇಕಾಗುವ ಎಲ್ಲ ಹಣವನ್ನೂ ಶಾಸ್ತ್ರಜ್ಞಾನ ಸಹಾಯಗಳನ್ನೂ ಒದಗಿಸಬೇಕು. ಈ ಉದ್ಯೋಗಗಳಲ್ಲಿಯೂ ಕೆಲಸಗಾರರ ಸಾಲಗಾರಿಕೆ, ಪರಸ್ಪರ ಸಹಕಾರವಿಲ್ಲದಿರುವಿಕೆ, ಪೇಟೆಯ ಕಷ್ಟಗಳು ಇವೇ ಮುಖ್ಯವಾದುವು. ಮೂಲಸಾಮಗ್ರಿ ಕೊಳ್ಳಲು ಇವರಿಗೆ ಬೇಕಾಗುವ ಹಣ, ಉತ್ಪತ್ತಿಯ ವೆಚ್ಚ, ಉತ್ಪತ್ತಿಯ ಕಾಲದಿಂದ ಹಿಡಿದು ಪೇಟೆಯಲ್ಲಿ ಪದಾರ್ಥ ಮಾರಾಟವಾಗಿ ಕೈಗೆ ಹಣ ಬರುವವರೆಗೂ ಅವರ ಜೀವನಕ್ಕೆ ಬೇಕಾಗುವ ಹಣ ಇವನ್ನು ನಾನಾಬಗೆಯ ಜನರೂ ಸಂಸ್ಥೆಗಳೂ ಒದಗಿಸುತ್ತಿರುವರು. ಸಾಹುಕಾರರು, ವರ್ತಕರು, ಮಳಿಗೆಗಳವರು, ಸಹಕಾರದ ಬ್ಯಾಂಕುಗಳು,

ಉತ್ಪತ್ತಿ ಸಂಘಗಳು, ವಿಶೇಷವಾಗಿ ಇಂಪೀರಿಯಲ್ ಮತ್ತು ಕೂಡು ಬಂಡವಾಳದ ಬ್ಯಾಂಕುಗಳವರು, ಕೈಗಾರಿಕೆ ಶಾಖೆಯ ಮೂಲಕವೂ ಸಹಕಾರ ಶಾಖೆಯ ಮೂಲಕವೂ ಸರಕಾರದವರು—ಎಲ್ಲರೂ ಈ ಕೆಲಸಕ್ಕೆ ತಕ್ಕಮಟ್ಟಿಗೆ ನೆರೆಯುತ್ತಿರುವರು. ಇವುಗಳಿಗೆ ಬೇಕಾಗುವ ಸಾಲ ದೊಡ್ಡವಾಯಿದೆ ಸಾಲವಲ್ಲದ್ದರಿಂದಲೂ ಉತ್ಪತ್ತಿಯನ್ನೂ ಮಾರಾಟ ವನ್ನೂ ಬೇಕಾದಂತೆ ನಡಸಿ ಗಿರಾಕಿಗೆ ತಕ್ಕಂತೆ ಹೊಂದಿಸಿಕೊಳ್ಳಲು ಸುಲಭ ವಾಗಿರುವುದರಿಂದಲೂ ಈ ಸಣ್ಣ ಕೈಗಾರಿಕೆಗಳ ಪೋಷಣೆ ಮಾಡುವುದಕ್ಕೆ ಪೇಟೆ ಪಟ್ಟಣಗಳ ಹಣ ಮಂಡಲದವರು ಹೆಚ್ಚಾಗಿ ನೆರೆಯಲು ಸಾಧ್ಯ ವಾಗುವುದು.

## ಸಹಕಾರ ಪದ್ಧತಿ

ಈ ದೇಶದಲ್ಲಿ ಸುಮಾರು ೧೯೦೪ರಿಂದ ಸಹಕಾರ ಪದ್ಧತಿ ಬಳಕೆಗೆ ಒಂದಿರುತ್ತದೆ. ಸಹಕಾರ ಸಂಘಗಳ ರೀತಿ ರಚನೆ ನೀತಿ ವ್ಯವಹಾರಗಳನ್ನು ಸರಕಾರ ಅನೇಕ ಬಗೆಯಲ್ಲಿ ವ್ಯವಸ್ಥೆ ಮಾಡಿರುತ್ತದೆ.

**ಕೆಲಸ-ಪ್ರಯೋಜನ-ಸ್ವರೂಪ.**—ಮೂಲಸಂಸ್ಥೆಗಳು ಬಹುವಾಗಿ ವ್ಯವಸಾಯಗಾರರ ಅಭಿವೃದ್ಧಿಗಾಗಿಯೂ ಅವರಿಗೆ ಬೇಕಾದ ಸಾಲಗಳನ್ನು ಒದಗಿಸಿ, ಅವರಲ್ಲಿ ಸ್ವಾವಲಂಬನ ಮತ್ತು ಪರಸ್ಪರ ಸಹಾಯ ಬುದ್ಧಿ, ಹೊಸ ಕಾಲದ ಪೇಟೆ ಪ್ರಯೋಗ, ಕಾರ್ಯರೀತಿ ಇವುಗಳನ್ನು ತಿಳಿಸುವುದ ಕ್ಕಾಗಿಯೂ ಏರ್ಪಟ್ಟವು. ಆದರೆ ಅನೇಕ ಕಾರಣಗಳಿಂದ ವ್ಯವಸಾಯ ಗಾರರಿಗೆ ಈ ಸಂಘಗಳಿಂದ ಯಾವ ಮುಕ್ತಿಯೂ ಉದ್ಧಾರವೂ ದೊರೆತಿಲ್ಲ ವೆನ್ನಬೇಕು. ಪೇಟೆ ಪಟ್ಟಣಗಳಲ್ಲಿ ನಡೆಯುತ್ತಿರುವ ಸಂಘಗಳು ಅನೇಕ ಬಗೆಯ ಕೆಲಸಗಳನ್ನು ಮಾಡುತ್ತವೆ; ಸಣ್ಣ ಸಂಬಳಗಳವರ ಮತ್ತು ನಡು ತರಗತಿಯ ಜನರಿಗೆ ಬಹಳ ಸಹಾಯವಾಗಿವೆ. ಆದರೆ ಒಟ್ಟಿನಲ್ಲಿ ಆ ಜನರ ಸಾಲಗಾರಿಕೆ ಮೇಲಾಗಿದೆಯೊ ಕೀಳಾಗಿದೆಯೊ ಹೇಳುವುದು ಸುಲಭವಲ್ಲ. ಸಾಲ ಕೊಡುವ ಸಂಘಗಳೇ ಬಹಳ. ಅವುಗಳ ಕಾರ್ಯದಿಂದ ಸಾಧಾರಣರು ತೆರಬೇಕಾದ ಬಡ್ಡಿಯ ದರ ಬಹುವಾಗಿ ಇಳಿದು ಸಹಾಯವಾಗಿರುವುದು ಒಂದು ದೊಡ್ಡ ಸಂಗತಿ. ಪಟ್ಟಣಗಳಲ್ಲಿ ಸರಕು ಮಾರುವ (Stores) ಸಂಘಗಳು ಊರ್ಜಿತವಾಗುತ್ತಿವೆ. ಅಲ್ಲಲ್ಲಿ ಮನೆಗಳನ್ನು ಕಟ್ಟಲು ಹಣ

ಸಹಾಯ ಮಾಡುವ ಸಂಘಗಳು ಏಳುತ್ತಿವೆ. ವಿಮೆ ಅಥವಾ ಯಾನ ಸೌಕರ್ಯಗಳನ್ನು ಒದಗಿಸುವುವು ಕಡಮೆ. ಈಗೀಗ ಸಹಕಾರದ ಜಮೀನು ಅಡಮಾನದ ಸಂಘಗಳು ಆಗುತ್ತಿವೆ. ಉತ್ಪತ್ತಿ ಸಂಘಗಳು ಏಳಿಗೆಗೆ ಬಂದಿಲ್ಲ.

**ಸಹಕಾರ ಸಂಘಗಳ ರಚನೆ.**— ದೇಶದ ಎಲ್ಲ ಭಾಗದಲ್ಲಿಯೂ ಮೂಲ ಸಂಘಗಳು ಏರ್ಪಡುವುವು; ಇವುಗಳಿಗೆ ಮೇಲ್ಪಟ್ಟು ಸೆಂಟ್ರಲ್ ಸಂಘಗಳೂ ಅವುಗಳಿಗೆ ಮೇಲ್ಪಟ್ಟಂತೆ ಪ್ರಾಂತ ಅಥವಾ ಎಪೆಕ್ಸ್ ಸಂಸ್ಥೆಗಳೂ ಇವೆ. ಪ್ರಾಂತ ಸಂಸ್ಥೆಗಳು ಸೆಂಟ್ರಲ್ ಸಂಸ್ಥೆಗಳಿಗೆ ಬೇಕಾಗುವ ಹೆಚ್ಚು ಹಣವನ್ನು ಒದಗಿಸುವುವು; ಇವು ಮೂಲಸಂಸ್ಥೆಗಳಿಗೆ ಬೇಕಾದ ನೆರವನ್ನು ಕೊಡುವುವು. ಸೆಂಟ್ರಲ್ ಸಂಸ್ಥೆಗಳೂ ಪ್ರಾಂತ ಸಂಘಗಳೂ ಮಹಾಜನರಿಂದ ಡಿಪಾಸಿಟ್ಟುಗಳನ್ನು ಸಂಗ್ರಹಿಸುವುವು; ಸರಕಾರದಿಂದಲೂ ಹೊರಗಿನ ಹಣದ ಪೇಟೆಯಿಂದಲೂ ಕಡಗಳನ್ನು ತೆಗೆಯುವುವು. ಸಹಕಾರ ಮಂಡಲದಲ್ಲಿ ಸದಸ್ಯರಲ್ಲದ ಇತರರಿಗೆ ಸಾಲದ ಸಹಾಯ ದೊರೆಯದು.

**ಹಣದ ಪೇಟೆಗೂ ಇವಕ್ಕೂ ಸಂಬಂಧ.**— ಇಂಪೀರಿಯಲ್ ಬ್ಯಾಂಕಿನವರು ಸಹಕಾರದ ಪ್ರಾಂತ ಬ್ಯಾಂಕಿನವರಿಗೂ ಸೆಂಟ್ರಲ್ ಬ್ಯಾಂಕಿನವರಿಗೂ ನಗದು ಸಾಲಗಳನ್ನೂ ಓವರ್‌ಡ್ರಾಫ್ಟ್ ಸೌಕರ್ಯಗಳನ್ನೂ ಕಲ್ಪಿಸಿಕೊಡುತ್ತಿದ್ದರು. ಆದರೂ ಇಲ್ಲಿನ ಲೋಪದೋಷಗಳನ್ನು ನೋಡಿ ಧಾರಾಳವಾಗಿ ಇವರಮೇಲೆ ಹಣವನ್ನು ಹಾಕಲು ಹಿಂಜರಿಯುವರು. ಸಾಲ ತೆಗೆಯುವ ಸಂಘಗಳ ಪ್ರಾಮಿಸರಿ ನೋಟುಗಳು ಉತ್ತಮವಾದ ಆಧಾರಪತ್ರಗಳಾಗುವುದಕ್ಕೆ ಹೆಚ್ಚು ಉತ್ತೇಜನವಿಲ್ಲ. ವ್ಯಾಪಾರದ ಬ್ಯಾಂಕುಗಳಿಗೆ ಇವನ್ನು ಕಂಡರೆ ಕೆಲವು ವೇಳೆ ಅಸೂಯೆ. ಏಕೆಂದರೆ, ಡಿಪಾಸಿಟ್ಟುಗಳನ್ನು ಆಕರ್ಷಿಸುವುದರಲ್ಲಿಯೂ ಸೇವಿಂಗ್ಸ್ ಬ್ಯಾಂಕ್ ಕೆಲಸದಲ್ಲಿಯೂ ಅವರಿಗೂ ಇವಕ್ಕೂ ಪೈಪೋಟಿ ಇದೆ; ಅಲ್ಲದೆ ಸರಕಾರದ ಬೆಂಬಲವೂ ಇವಕ್ಕೆ ವಿಶೇಷವಾಗಿದೆ. ಇನ್ನೊಂದು ಕಡೆ ವರ್ತಕರ ಅಸಂತುಷ್ಟಿ ಬಹಳ: ಅವರ ವ್ಯಾಪಾರಕ್ಕೆ ಈ ಸಂಘಗಳ ಸ್ಪರ್ಧೆ ಅಡ್ಡಿ. ಆದ್ದರಿಂದ ರಿಸರ್ವ್ ಬ್ಯಾಂಕು ಸಹಕಾರದ ಪ್ರಾಂತ ಬ್ಯಾಂಕುಗಳನ್ನು ತಮ್ಮ ಕುಳವಾಗಿ ಮಾಡಿಕೊಂಡು ಅವರ ಲೇವಾದೇವಿಗೆ ನೆರವಾಗಲಿದ್ದಾರೆ.

**ಸರಕಾರದ ಸಹಾಯ.—** ಸರಕಾರದವರು ಅನೇಕ ಬಗೆಯಲ್ಲಿ ಸಹಕಾರಕ್ಕೆ ನೆರವು ಕೊಡುವುದಲ್ಲದೆ ಒಂದು ಇಲಾಖೆಯನ್ನೇರ್ಪಡಿಸಿ ಎಲ್ಲ ಹಣಕಾರ್ಯ ವ್ಯವಸ್ಥೆ, ಮೇಲ್ವಿಚಾರಣೆಗಳಲ್ಲಿಯೂ ಲೆಕ್ಕದ ತನಿಖೆ ಮತ್ತು ಪ್ರಚಾರ ಕಾರ್ಯಗಳಲ್ಲಿಯೂ ಸಹಾಯಮಾಡುತ್ತಿರುವರು. ಅವರ ಕೆಲವು ಪತ್ರಗಳಿಗೆ ಹೊಣೆಯಾಗುವರು. ಸ್ಟ್ಯಾಂಪು ತೆರಿಗೆ, ರಜಿಸ್ಟ್ರೇಷನ್ ತೆರಿಗೆ, ವರಮಾನದ ತೆರಿಗೆ ಮುಂತಾದ ಹೊರೆಗಳಿಂದ ಪೂರ್ತಿಯಾಗಿಯೊ ಸ್ವಲ್ಪ ವಾಗಿಯೊ ಬಿಡುಗಡೆ ಮಾಡಿರುವರು; ಸದಸ್ಯರಿಗೂ ಸಂಘಗಳಿಗೂ ರಿಯಾಯಿತಿಗಳನ್ನು ತೋರಿಸಿ ಸದಸ್ಯರ ಷೇರು ಜಫ್ತಿಯಾಗದಿರುವಂತೆಯೂ ಸಹಕಾರ ಸಂಘದ ಸಾಲ ಮೊದಲು ಬರುವಂತೆಯೂ ವ್ಯವಸ್ಥೆಮಾಡಿರುವರು. ಸಂಘಗಳು ಸಾಲಕೊಡುವ ವಿಧಾನ, ಹಂಚಿಕೆ, ಅದನ್ನು ಹಿಂದಕ್ಕೆ ಬರ ಮಾಡಿಕೊಳ್ಳುವ ರೀತಿ, ಅವುಗಳ ವ್ಯವಹಾರಕ್ಷೇತ್ರ, ಬಂಡವಾಳ, ಲಾಭ ಮತ್ತು ಆಪದ್ಧನಗಳ ವ್ಯವಸ್ಥೆ ಈ ಸಂಬಂಧಗಳಲ್ಲಿ ಅಂಕೆಯಿಟ್ಟು ಸಹಕಾರ ಮಂಡಲವನ್ನು ಮಂಗಳಕ್ಕೆ ನಡಸಲು ಸಹಾಯವಾಗುತ್ತಾರೆ.

**ಇತರ ಬಂಡವಾಳದ ಸಂಸ್ಥೆಗಳು—ಪೋಸ್ಟ್ ಆಫೀಸ್ ಸೇವಿಂಗ್ಸ್ ಬ್ಯಾಂಕುಗಳು.—** ನಡುತರಗತಿಯ ಮತ್ತು ಸಣ್ಣ ಸಂಬಳಗಳವರ ಉಳಿತಾಯ ಪೋಸ್ಟ್ ಆಫೀಸ್ ಸೇವಿಂಗ್ಸ್ ಬ್ಯಾಂಕುಗಳಲ್ಲಿ ಸೇವಿಂಗ್ಸ್ ಲೆಕ್ಕದಲ್ಲಿಯೂ ಕ್ಯಾಷ್ ಸರ್ಟಿಫಿಕೇಟು ಮುಂತಾದ ಲೆಕ್ಕದಲ್ಲಿಯೂ ಕೂಡಿ ಸುಮಾರು ೧೨೦ ಕೋಟಿ ರೂಪಾಯಿಷ್ಟಾಗುವುವು. ಇವುಗಳ ಮೂಲಕ ಜನರಲ್ಲಿ ಹಣ ಕೂಡಿಡುವ ಬುದ್ಧಿಯೂ ಬಡ್ಡಿಗೆ ಹೂಡುವ ಅಭ್ಯಾಸವೂ ಬೆಳೆಯು ವುದಕ್ಕೆ ಅವಕಾಶವಿರುವುದಲ್ಲದೆ ಬಂಡವಾಳದ ಪೇಟೆಯಲ್ಲಿ ದೊಡ್ಡ ಗಿರಾಕಿ ಯಾಗಿರುವ ಸರಕಾರದ ಬಿಡಿ ಸಾಲಗಳ ಲೆಕ್ಕಕ್ಕೂ ಕೆಲವೇಳೆ ಸಾಮಾನ್ಯ ವೆಚ್ಚಗಳಿಗೂ ಹಣ ಒದಗುವಂತಾಗಿದೆ.*

**ವಿಮೆ ಸಂಘಗಳು.—** ಈಗ ಈ ದೇಶದಲ್ಲಿ ಜೀವ, ಬೆಂಕಿ, ಸಮುದ್ರ ವ್ಯಾಪಾರ ಮುಂತಾದ ವಿಮೆ ಕೆಲಸವನ್ನು ಮಾಡುವ ವಿಮೆ ಸಂಘಗಳು ೩೮೯ ಇವೆ. ಅವುಗಳಲ್ಲಿ ೧೬೬ ಮಾತ್ರ ಭಾರತೀಯ.

* ಇದರ ಜೊತೆಗೆ ಪ್ರಾವಿಡೆಂಟು ಫಂಡುಗಳು, ಕ್ಷೇಮಾನದ ಹಣ ಅಥವಾ ಆಪದ್ಧನಗಳು, ಪ್ರಾಂತ ಸರಕಾರಗಳ ಶಿಲ್ಕು ಮುಂತಾದ ಬಾಬುಗಳಲ್ಲಿ ಒಟ್ಟು ಸುಮಾರು ೯೦ ಕೋಟಿ ರೂಪಾಯಿ ತಣಪಿದೆ. ಅದೂ ಸರಕಾರದ ಪ್ರಯೋಜನಕ್ಕೆ ಒದಗುವುದು.

ಜನರು ಕೊಟ್ಟ ಕಂತು ಹಣ ಬಹು ಕಾಲ ಒಂದು ಕಡೆ ಹೂಡಲು ಒದಗುವುದಾದ್ದರಿಂದ ವಿಮೆ ಕಂಪನಿಗಳ ಹಣ ಬಂಡವಾಳದ ಪೇಟೆಗೆ ಬಹು ಮುಖ್ಯವಾದ ಸಹಾಯವಾಗಬಲ್ಲುದು. ಎಲ್ಲ ಬಗೆಯ ವಿಮೆ ಕಂಪನಿಯವರೂ ಈ ದೇಶದಲ್ಲಿ ಮಾಡುವ ಕೆಲಸದಿಂದ ಕಂತಿನ ರೂಪದಲ್ಲಿ ವರ್ಷವೊಂದಕ್ಕೆ ತೆಗೆಯುವ ಹಣ ಸುಮಾರು ೧೦ ಕೋಟಿ ರೂಪಾಯಿನಷ್ಟಾಗುತ್ತದೆ. (ಅದರಲ್ಲಿ ೫ ಕೋಟಿಗೆ ಮೇಲ್ಪಟ್ಟು ವಿದೇಶಿ ಕಂಪನಿಗಳ ಕೈಗೆ ಹೋಗುವುದು.) ತಮ್ಮ ಹಣದಲ್ಲಿ ಸ್ವಲ್ಪ ಭಾಗದಿಂದ ಪಾಲಿಸಿದಾರರಿಗೆ ಸಾಲವಾಗಿ ಕೊಟ್ಟರೂ ಬಹು ಭಾಗವನ್ನು ಸರಕಾರಿ ಸಾಲಪತ್ರಗಳನ್ನೂ ಖಜಾನೆ ಹುಂಡಿಗಳನ್ನೂ ಕೊಂಡು ಬಡ್ಡಿಗೆ ಹಾಕುವರು. ಕೆಲವು ಭಾರತೀಯ ವಿಮೆ ಕಂಪನಿಗಳು ಭೂಮಿಕಾಣಿಗಳ ಅಡಮಾನದ ಮೇಲೆಯೂ ಸಹಕಾರ ಬ್ಯಾಂಕುಗಳ ಮತ್ತು ಕೈಗಾರಿಕೆ ಕಂಪನಿಗಳ ಡಿಬೆಂಚರು ಷೇರು ಪತ್ರಗಳ ಮೇಲೆಯೂ ಹಣ ಹಾಕುವುದುಂಟು. ಕೆಲವರು ಒಳದೇಶದ ಬ್ಯಾಂಕುಗಳಿಗೂ, ಸ್ವಲ್ಪಮಟ್ಟಿಗೆ ಲೇವಾದೇವಿ ಸಂಘಗಳಿಗೂ ಕೈಸಾಲ ಕೊಡುವರು. ಅವರಲ್ಲಿ ಡಿಪಾಸಿಟ್ ಇಡುವರು. ಆದರೆ ವಿದೇಶಿ ಕಂಪನಿಗಳವರು ಸಂಗ್ರಹಿಸುವ ಕಂತು ಹಣದಲ್ಲಿ ಯಾವ ಭಾಗವೂ ಇಲ್ಲಿನ ಕೈಗಾರಿಕೆಗೆ ಒದಗದು. ಬೆಂಕಿಯ ವಿಮೆ, ಕಡಲು ವ್ಯಾಪಾರಕ್ಕೆ ಸಂಬಂಧಪಟ್ಟ ವಿಮೆ ಇವೆರಡೂ ಪರಕೀಯರ ಕೈಯಲ್ಲಿಯೇ ಇವೆ. ಇಲ್ಲಿ ಸಂಚಯಮಾಡಿದ ಹಣದಲ್ಲಿ ಸ್ವಲ್ಪ ಭಾಗವನ್ನಾದರೂ ಅವರು ಇಲ್ಲಿನ ಪೇಟೆಗೆ ವಿನಿಯೋಗಿಸುವುದಾದರೆ ಎಷ್ಟೋ ಉಪಕಾರವಾದೀತು.

**ಸರಕಾರದ ಸಹಾಯ.**—ಧನಮಂಡಲಕ್ಕೆ ಸರಕಾರದವರು ಕೊಡುವ ಸಾಲ ನಾನಾಬಗೆಯಾಗಿದೆ:—

೧. ವ್ಯವಸಾಯಗಾರರಿಗೆ ಬೇಸಾಯದ ಕೆಲಸಕ್ಕಾಗಿ ಭೂಮಿಯನ್ನು ಉತ್ತಮಗೊಳಿಸುವ ಕೆಲಸಕ್ಕೂ ಇತರ ನಿಯತವಾದ ಕೆಲಸಗಳಿಗೂ ತಕಾವಿ ಸಾಲವನ್ನು ಕೊಡುತ್ತಾರೆ.

೨. ಸ್ವದೇಶಿ ಕೈಗಾರಿಕೆಗಳನ್ನು ಸ್ಥಾಪಿಸುವ, ಪೋಷಿಸುವ, ರಕ್ಷಿಸುವ ಉದ್ದೇಶದಿಂದ ಕೈಗಾರಿಕೆಗಳಿಗೆ ನೇರವಾಗಿಯೊ ಇತರ ಸಂಸ್ಥೆಗಳ ಮೂಲಕವಾಗಿಯೊ ಸಾಲವನ್ನು ಕೊಡುತ್ತಾರೆ.

೩. ಜಮೀನಾಸಿನ ಅಡಮಾನದ ಬ್ಯಾಂಕುಗಳವರ ಡಿಬೆಂಚರ್ ಪತ್ರಗಳನ್ನು ಕೊಳ್ಳುತ್ತಾರೆ.

೪. ಸಹಕಾರ ಸಂಘಗಳಿಗೆ ಹಣಗಳನ್ನು ಒದಗಿಸುತ್ತಾರೆ. ವ್ಯಾಪಾರ ಪ್ರಪಂಚಕ್ಕೂ ಬೆಳಸು ಪೇಟೆಗೆ ಸಾಗಿ ಮಾರಾಟವಾಗುವುದಕ್ಕೂ ಒದಗುವಂತೆ ಸುಗ್ಗಿಯ ಕಾಲದಲ್ಲಿಯೂ ವ್ಯಾಪಾರ ಹೆಚ್ಚಾಗಿರುವ ಕಾಲದಲ್ಲಿಯೂ ಹೆಚ್ಚು ಹಣವನ್ನು ಅಚ್ಚು ಮಾಡಿ ಇಂಪೀರಿಯಲ್ ಬ್ಯಾಂಕಿನ ಮೂಲಕವೂ ಹಣಶಾಖೆಯ ಮೂಲಕವೂ ಈವರೆಗೂ ಪ್ರಚಾರಕ್ಕೆ ತರುತ್ತಿದ್ದರು. (ಉದಾ: ಬರ್ಮಾ ದೇಶದ ಅಕ್ಕಿ, ಬಂಗಾಳದ ಸಣಬು, ಬೊಂಬಾಯಿ, ಬೆರಾರ್ ಮತ್ತು ಮಧ್ಯಪ್ರಾಂತಗಳ ಹತ್ತಿಯ ಉತ್ಪತ್ತಿಗೆ, ಮಾರಾಟಕ್ಕೆ.)

೫. ಮ್ಯುನಿಸಿಪಾಲಿಟಿ ಜಿಲ್ಲಾ ಸಂಸ್ಥೆ ಮುಂತಾದ ಸ್ಥಳೀಯ ಮಂಡಲಿಗಳಿಗೆ ಅಭಿವೃದ್ಧಿ ಕಾರ್ಯಗಳಿಗಾಗಿ ಬಂಡವಾಳವನ್ನೂ ಸಾಲವನ್ನೂ ಕೊಡುವರು. ಸ್ವಂತ ನೌಕರರಿಗೆ ಅವರ ಪ್ರಾವಿಡೆಂಟ್ ಫಂಡಿನ ಆಧಾರದಮೇಲೂ ಕುಳದ ಆಧಾರದಮೇಲೂ ವಾಹನಗಳನ್ನು ಕೊಳ್ಳುವುದಕ್ಕೂ ಮನೆ ಮಠ ಕಟ್ಟಿಕೊಳ್ಳುವುದಕ್ಕೂ ವಿದೇಶಿ ಶಿಕ್ಷಣ ವ್ಯಾಸಂಗಗಳಿಗೂ ಸಾಲವನ್ನೂ ವೇತನಗಳನ್ನೂ ಏರ್ಪಡಿಸುವರು. ಬಿಡಿಸಾಲದ ರೂಪದಲ್ಲಿಯೂ ಗಟ್ಟಿಸಾಲದ ರೂಪದಲ್ಲಿಯೂ ಜನರಿಂದ ಸಾಲವೆತ್ತಿ, ಆರ್ಥಿಕ ಪ್ರಪಂಚಕ್ಕೆ ಉಪಯೋಗವಾಗುವ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಕೊಂಡು, ಜನರ ಸಂಪತ್ತನ್ನೂ ವರಮಾನವನ್ನೂ ಹಣ ಕೂಡಿಸಿ ಬಡ್ಡಿಗೆ ಹೂಡುವ ಶಕ್ತಿಯನ್ನೂ ಪರೋಕ್ಷವಾಗಿ ಹೆಚ್ಚು ಮಾಡುವ ಪ್ರಯತ್ನ ಮಾಡುತ್ತಿದ್ದಾರೆ.

## ಸರಕಾರದ ಹಣಕಾರ್ಯಗಳು

ಈ ದೇಶದ ತೆರಿಗೆಯ ಪದ್ಧತಿಯನ್ನೂ ಇಲ್ಲಿಯ ಸರಕಾರದ ಆಯವ್ಯಯ ಸ್ಥಿತಿಯನ್ನೂ ತಿಳಿಯಬೇಕಾದರೆ ಇಲ್ಲಿನ ಕೆಲವು ವಿಶೇಷ ಲಕ್ಷಣ

ಗಳನ್ನು ತಿಳಿಯಬೇಕು. ದೇಶದಲ್ಲಿ ಗ್ರಾಮಗಳೂ ಗ್ರಾಮಜೀವನವೂ ಹೆಚ್ಚು. ಹಳ್ಳಿಗಳು ಸಣ್ಣವು; ಜನರಲ್ಲಿ ಬಹುಭಾಗಕ್ಕೆ ವ್ಯವಸಾಯದಿಂದ ಜೀವನ; ಜೀವನ ಸುಖದ ಮಟ್ಟ ಕೀಳು; ಬಡತನ ಹೆಚ್ಚು; ಮೊದಮೊದಲು ಹಳ್ಳಿಯ ಬದುಕಿನಲ್ಲಿ ಹೆಚ್ಚು ಸ್ವಾಧೀನತೆಯೂ ಸ್ವಸಂಪೂರ್ಣತೆಯೂ ಇದ್ದರೂ ಬಹುಕಾಲದಿಂದ ಒಂದು ಕೇಂದ್ರ ಸರಕಾರದ ಆಧಿಪತ್ಯವೂ ಪ್ರಭಾವವೂ ಸಂಪ್ರದಾಯವಾಗಿ ನಡೆದುಬಂದಿವೆ. ಈಗ ಇಲ್ಲಿ ಕೈಗಾರಿಕೆಗಳ ಏಳಿಗೆಯೂ ತಕ್ಕಮಟ್ಟಿಗಿದ್ದರೂ ಹತ್ತರಲ್ಲಿ ಏಳುಜನ ವ್ಯವಸಾಯಕ್ಕೂ ಅದಕ್ಕೆ ಸಂಬಂಧಪಟ್ಟ ಉಪವೃತ್ತಿಗಳಿಗೂ ಸೇರಿದವರು. ಇಲ್ಲಿಂದ ರಫ್ತಾಗುವ ಪದಾರ್ಥಗಳೆಲ್ಲ ಬಹುವಾಗಿ ವ್ಯವಸಾಯದಿಂದ ಉತ್ಪತ್ತಿಯಾದ ಪದಾರ್ಥಗಳೇ. ಆಮದು ಪದಾರ್ಥಗಳಲ್ಲಿ ಯಂತ್ರಾದಿಗಳೂ ತಯಾರಾದ ಪದಾರ್ಥಗಳೂ ಮುಖ್ಯ.

ಮುಂಗಾರು ಹಿಂಗಾರು ಯಾವ ರೀತಿ ನಡೆಯುವುವೊ ಆ ರೀತಿ ವ್ಯವಸಾಯದ ಉತ್ಪತ್ತಿ ಮೇಲುಕೀಳಾಗುವುದು. ಮಳೆ ಹೋಯಿತೆಂದರೆ ಬೆಳೆ ಹೋಯಿತು; ಎಲ್ಲೆಲ್ಲಿಯೂ ನಷ್ಟ, ಕ್ಷಾಮ. ಜನರಿಗೂ ರೈತರಿಗೂ ಮಾತ್ರವೇ ಅಲ್ಲದೆ ಸರಕಾರದವರಿಗೂ ಕಾತರ, ಬಡತನ. ಎಷ್ಟೇ ನೀರಾವರಿ ಕೆಲಸ ನಡೆದಿರಲಿ, ಕ್ಷಾಮನಿವಾರಕ ಕಾರ್ಯಗಳು ಏರ್ಪಟ್ಟಿರಲಿ, ಎಷ್ಟೇ ಆಹಾರಪದಾರ್ಥಗಳನ್ನು ತಂದು ರೈಲು ಒದಗಿಸಲಿ, ಸಾಗುವಳಿಯಾದ ಭೂಮಿಯಲ್ಲಿ ⅘ ಭಾಗ ಮಳೆಗೆ ಅಧೀನವಾಗಿ ಇದೆಯಾದ್ದರಿಂದ ರೈತರೂ ಸರಕಾರದವರೂ ಚಾತಕ ಪಕ್ಷಿಗಳಂತೆ ಮಳೆಗಳನ್ನು ಎದುರುನೋಡುತ್ತಿರುತ್ತಾರೆ. ರೈತರಿಗೆ ಬೆಳೆ ಹೇಗೆ ಎಂದು ಯೋಚನೆ; ಅಧಿಕಾರಿಗೆ ಕ್ಷಾಮ ನಿವಾರಣೆ ಕಾರ್ಯದ ಯೋಚನೆ; ಕೋಶಾಧಿಕಾರಿಗೆ ಸರಕಾರದ ವರಮಾನಕ್ಕೆ ಕಲ್ಲುಬಿದ್ದಿತಲ್ಲಾ ಎಂದು ಯೋಚನೆ. ಸರಕಾರದ ವರಮಾನ ಮಳೆಗೆ ಅಧೀನವಾದ ಜೂಜು ಎಂದು ಒಬ್ಬ ಕೋಶಾಧಿಕಾರಿಗಳು ಹಿಂದೆ ಹೇಳಿದರು. ಅದರ ಧನ ಸಂಗ್ರಹಾದಿ ಕಾರ್ಯವೂ ಎಣಿಕೆಯೂ ಎಲ್ಲವೂ ತಲೆಕೆಳಗಾಗುವುವು. ಈ ಕಷ್ಟಕ್ಕೆ ಕೇಂದ್ರ ಸರಕಾರವೂ ಪ್ರಾಂತ ಸರಕಾರವೂ ಎರಡೂ ಈಡಾಗುವುವು. ಮುಂಗಾರು ಕೆಟ್ಟರೆ ಪ್ರಾಂತ ಸರಕಾರಕ್ಕೆ ಯೋಚನೆ,—ಕ್ಷಾಮವನ್ನು ನಿವಾರಿಸುವ ಕಾರ್ಯಗಳಿಗೆ ಹೇಗೆ ಹಣ

ಒದಗಿಸುವುದು ಎಂದು.* ಈಗೀಗ ಕೇಂದ್ರ ಸರಕಾರದವರು ಮಳೆಗೆ ತೀರ ಶರಣಲ್ಲದಿದ್ದರೂ ಎಲ್ಲೆಲ್ಲಿಯೂ ಜನರ ಕೈಕಟ್ಟಿ ಸ್ಥಿತಿ ಬೀಳಾಗುವುದು. ದೇಶದೊಳಕ್ಕೆ ಅವರು ತರಿಸಿಕೊಳ್ಳುವ ಆಮದುಗಳ ಪರಿಮಾಣವೂ ವಾಣಿಜ್ಯ ವ್ಯಾಪಾರಗಳ ಮತ್ತು ರೈಲ್ವೆ ಮುಂತಾದ ಯಾನ ಸಂಸ್ಥೆಗಳ ವರಮಾನವೂ ಕಡಮೆಯಾಗುವುವು. ಆದ್ದರಿಂದ ಸುಂಕ, ವರಮಾನದ ತೆರಿಗೆ, ರೈಲ್ವೆ ಸಂಪಾದನೆ ಎಲ್ಲವೂ ಕಡಮೆಯಾಗುವುವು. ಮುಂಗಾರು ಕೆಟ್ಟ ವರುಷ ಈ ರೀತಿ ವರಮಾನ ಕಡಮೆಯಾಗುವುದಲ್ಲದೆ ಮುಂದಿನ ವರುಷದ ಹಣ ಸ್ಥಿತಿ ಕೆಡುವುದು.

**ಪರಿಸ್ಥಿತಿ.**—ನಮ್ಮ ಜನದ ವರಮಾನ ಬಹು ಕಡಮೆ. ಹೆಚ್ಚೆಂದು ಲೆಕ್ಕಮಾಡುವ ಒಬ್ಬರ ಅಂಕಿಗಳನ್ನು ಆಧಾರವಾಗಿಟ್ಟುಕೊಂಡರೂ ಜನರ ಸರಾಸರಿ ವಾರ್ಷಿಕ ವರಮಾನ ಸುಮಾರು ೧೦೭ ರೂಪಾಯಿ.† ಜನವರ್ಗದಲ್ಲಿ ವರಮಾನದ ತಾರತಮ್ಯಗಳೂ ಬಹಳ. ತೆರಿಗೆಯು ಹೊರೆ ಕೆಲವು ವರ್ಗಗಳ ಮೇಲೆ ಅತಿಯಾಗಿ ಬೀಳುವುದೆನ್ನಬಹುದು. ಸಾಮಾನ್ಯ ಕೃಷಿಕನೊಬ್ಬನು ಭೂಮಿಯಿಂದ ಬರುವ ತನ್ನ ವರಮಾನದಿಂದ ಭೂಗಂದಾಯವನ್ನು ತೆರುವುದರ ಜೊತೆಗೆ ಉಪ್ಪು, ಸೀಮೆಯೆಣ್ಣೆ, ಸಕ್ಕರೆ, ಇತರ ಆಹಾರ ಪದಾರ್ಥ ಮುಂತಾದುವುಗಳ ಮೇಲೆ ಹಾಕಿದ ತೆರಿಗೆ ತೆರಬೇಕು. ಆದರೆ ಖಾಯಂ ಜಮೀನುದಾರಿ ಪದ್ಧತಿಗೆ ಒಳಪಟ್ಟಿರುವ ಬಂಗಾಳದ ಜಮೀನುದಾರಸಂಘದವರು ಅಮಿತವಾಗಿ ವಿಸ್ತಾರವಾದ ತಮ್ಮ ಭೂಮಿಯಮೇಲೆ ನೂರು ವರ್ಷಗಳಿಗೆ ಹಿಂದೆ ಸರಕಾರಕ್ಕೆ ಯಾವ ಗುತ್ತಿಗೆ ಸಲ್ಲಿಸುತ್ತಿದ್ದರೋ ಅದನ್ನೇ ಈಗಲೂ ಸಲ್ಲಿಸುತ್ತಿದ್ದಾರೆ. ವ್ಯವಸಾಯದಿಂದ ಬರುವ ವರಮಾನದ

---

* ಭೂಗಂದಾಯದ ಹಣ ಬಾರದೆ ಹೋಗುವುದು. ಅದರ ತೆರಾಣೆಯಲ್ಲಿ ರೈತರಿಗೆ ರಿಯಾಯಿತಿ ತೋರಿಸಬೇಕು, ಕೆಲವು ವೇಳೆ ಪೂರ್ತಿ ಬಿಟ್ಟುಕೊಡಬೇಕು. ಅಬ್ಕಾರಿ ವರಮಾನವೂ ಕಡಮೆಯಾಗುವುದುಂಟು.

† ಇಂಗ್ಲಂಡಿನವರದು ೧,೨೬೭ ರೂಪಾಯಿ (£೯೫). ಇಂಡಿಯಾದವರ ವರಮಾನವನ್ನು ಸುಮಾರು ೪೫ರಿಂದ ಹಿಡಿದು ೧೨೦ರವರೆಗೂ ಇದೆಯೆಂದು ಅನೇಕರು ಅನೇಕ ಬಗೆಯಾಗಿ ಲೆಕ್ಕಮಾಡಿದ್ದಾರೆ. ದೇಶದ ಒಟ್ಟು ವಾರ್ಷಿಕ ಉತ್ಪತ್ತಿಯನ್ನು ೨,೫೦೦ ಕೋಟಿ ಎಂದರೆ ಸ್ಥೂಲ ವರಮಾನ ೭೧ ರೂಪಾಯಿ ಆಗುತ್ತದೆ. ವ್ಯವಸಾಯದ ಉತ್ಪತ್ತಿ ೧,೨೦೦ ಕೋಟಿಯೆಂದೂ ರೈತರ ಉಪವೃತ್ತಿಗಳ ವರಮಾನ ಅದರ ಶೇಕಡ ೨೦ (ಎಂದರೆ ೨೫೦ ಕೋಟಿ) ಜನರಿಗೆ ತಲೆಯೊಂದಕ್ಕೆ ಸುಮಾರು ೫೨ ರೂಪಾಯಿ ಆಗುವುದು.

ಮೇಲೆ ವರಮಾನದ ತೆರಿಗೆ ಹಾಕದಿರುವುದರಿಂದ ಆ ಜಮಿಾನುದಾರರಿಗೆ ಈ ಅನುಕೂಲ ಮತ್ತಷ್ಟು ಕೂಡಿಬರುತ್ತದೆ.* ಜನರು ಬಹಳ ಬಡವರಾದ್ದರಿಂದಲೂ ವ್ಯವಸಾಯಕ್ಕೆ ಅಧೀನರಾದ್ದರಿಂದಲೂ ಅವರು ಕೊಂಡು ತಿನ್ನುವ ಪದಾರ್ಥಗಳಮೇಲೆಯೇ ಬಹುತರ ತೆರಿಗೆಯೆತ್ತಬೇಕಾಗುತ್ತದೆ. ಹಳ್ಳಿಗಳು ಈಗಲೂ ಬಹುಮಟ್ಟಿಗೆ ಸ್ವಸಂಪೂರ್ಣವಾಗಿರುವುದರಿಂದ ಆಬ್ಕಾರಿ ಬಾಬುಗಳಿಂದ ಬರುವ ಹುಟ್ಟುವಳಿಯೆಲ್ಲ ಉಪ್ಪು, ಸೀಮೆಯೆಣ್ಣೆ, ಮಾದಕದ್ರವ್ಯಗಳು, ಬೆಂಕಿಯ ಪೆಟ್ಟಿಗೆ, ಗಾಜಿನ ಸಾಮಾನು ಮುಂತಾದುವುಗಳಿಂದ ಬರಬೇಕಾಗಿರುತ್ತದೆ. ಇತರ ಕೈಗಾರಿಕೆ ಮತ್ತು ವ್ಯಾಪಾರ ರಾಷ್ಟ್ರಗಳಲ್ಲಿ ನೇರವಾಗಿ ಎತ್ತುವ ತೆರಿಗೆಗಳು ಹೆಚ್ಚು.†

ಯಾವ ಅನುಕೂಲ ಬೇಕಾದರೂ ಜನರು ಸರಕಾರಕ್ಕೆ ಮೊರೆಯಿಡುವುದೇ ವಾಡಿಕೆ. ಆದರೆ ಸರಕಾರದವರು ರಾಜ್ಯದ ಶಾಂತಿ ಸಂರಕ್ಷಣೆಗಳಷ್ಟಕ್ಕಲ್ಲದೆ ಹೆಚ್ಚಿನ ತಂಟೆಗೆ ಹೋಗದೆ ಅನೇಕ ರಾಷ್ಟ್ರಾಭಿವರ್ಧಕ ಕಾರ್ಯಗಳಲ್ಲಿ ತಟಸ್ಥರಾಗಿರುವುದು ವಿಚಿತ್ರಪರಿಣಾಮಕಾರಿಯಾಗಿರುವುದು. ಈಗೀಗ ಜನರ ಒತ್ತಾಯದಿಂದ ಸರಕಾರವೂ ಸಂಪದಭಿವೃದ್ಧಿ ಕಾರ್ಯಗಳನ್ನು‡ ಪ್ರೋತ್ಸಾಹಿಸುವ ಆಸಕ್ತಿಯನ್ನು ಸೂಚಿಸುತ್ತಿದೆ; ಇತ್ತ ಸ್ಥಳಮಂಡಲಿಗಳು ತಮ್ಮ ಆದಾಯ ವೆಚ್ಚಗಳನ್ನು ತಾವೇ ಮಾಡಿಕೊಳ್ಳಲು ಯೋಚಿಸುತ್ತಿವೆ. ಆದರೆ ಅವರ ಉಪಪತ್ತಿ ಸ್ವಲ್ಪವಾದ್ದರಿಂದ ಅವರ ಬೆಳವಣಿಗೆಗೆ ಬೇಕಾದುದನ್ನೂ ಸರಕಾರವೇ ಒದಗಿಸಬೇಕಾಗುವುದು.§

**ಕೇಂದ್ರ ಸರಕಾರದ ಆಯವ್ಯಯ.**— ಸರಕಾರದ ಆಯವ್ಯಯ ಲೆಕ್ಕಗಳನ್ನು ಕೇಂದ್ರ ಸರಕಾರದ ಲೆಕ್ಕ, ಪ್ರಾಂತ ಸರಕಾರಗಳ ಲೆಕ್ಕ ಎಂದು ವಿಂಗಡಿಸಬಹುದು. ಇವರಿವರ ಆದಾಯ ವೆಚ್ಚ ಹೀಗೆ ಹೀಗೆಯೇ ಆಗ

* ಇಲ್ಲಿನ ಬಡ್ಡಿ ಲಾಭ ಆದಾಯಗಳ ಉತ್ಪತ್ತಿಯನ್ನು ವಿಲಾಯಿತಿಯಲ್ಲಿ ಕುಳಿತು ತಿನ್ನುವವರಿಂದಲೂ ನಮ್ಮ ಸರಕಾರಕ್ಕೆ ವರಮಾನದ ತೆರಿಗೆ ಬರುವುದಿಲ್ಲ.

† ಕೇಂದ್ರ ಸರಕಾರಕ್ಕೆ ಬರುವ ೧೨೦ ಕೋಟಿ ರೂಪಾಯಿ ಉತ್ಪತ್ತಿಯಲ್ಲಿ ವರಮಾನದ ತೆರಿಗೆಯ ಭಾಗ ೧೬ ಕೋಟಿ ರೂ. ಮಾತ್ರ.

‡ ೧೯೩೫ರಲ್ಲಿ ಗ್ರಾಮಾಭಿವೃದ್ಧಿಕಾರ್ಯಗಳಿಗೆಂದು ೧ ಕೋಟಿ ರೂಪಾಯಿ ತೆಗೆದಿಟ್ಟಿರುವರು.

§ ಇಲ್ಲಿನ ಗ್ರಾಮ ಮಂಡಲಿಗಳ ವರಮಾನವೆಲ್ಲಾ ಸೇರಿ ೫೩೦ ಲಕ್ಷ ರೂಪಾಯಿ ಇಂಗ್ಲಂಡಿನದು ೩,೬೦೦ ಲಕ್ಷ. ಆದರ ೧೫ರಷ್ಟು ದೊಡ್ಡ ದೇಶ ನಮ್ಮದು.

ಬೇಕೆಂದು ವಿಧಿಯುಂಟು.* ಕೇಂದ್ರ ಸರಕಾರಕ್ಕೆ ಸೇರುವ ಬಾಬುಗಳು: ವಿದೇಶಿ ವ್ಯಾಪಾರದ ಮೇಲಿನ ಸುಂಕ, ವರಮಾನದ ತೆರಿಗೆ, ಉಪ್ಪಿನ ತೆರಿಗೆ, ಅಫೀಮಿನ ಉತ್ಪತ್ತಿ, ರೈಲ್ವೆ, ಅಂಚೆ, ತಂತಿಗಳ ಹುಟ್ಟುವಳಿ (ಮತ್ತೊಂದೆರಡು ಬಾಬುಗಳು). ಕಡೆಯ ಮೂರು ಕಾರ್ಯಗಳ ವ್ಯವಸ್ಥೆಯೂ ನಿರ್ವಾಣವೂ ಕೇಂದ್ರ ಸರಕಾರಕ್ಕೇ ಸೇರಿವೆಯಾದ್ದರಿಂದ ಅಲ್ಲಿನ ವೆಚ್ಚನಷ್ಟ ಅವರ ಪಾಲಿಗೇ ಬೀಳುವುವು. ಕ್ಷಾಮಡಾಮರ ಇಲ್ಲದೆ ಇದ್ದರೆ ಸುಂಕದಿಂದಲೂ ರೈಲ್ವೆ ಹುಟ್ಟುವಳಿಯಿಂದಲೂ ವರಮಾನದ ತೆರಿಗೆಯಿಂದಲೂ ಮಾತ್ರವೇ ಹೆಚ್ಚು ಹಣ ಒರುವ ಅವಕಾಶ. ಮಳೆ ಕೆಡದೆ, ಸರಕಾರದ ವ್ಯಾಪಾರನೀತಿಯೂ ಕರನೀತಿಯೂ ಈಗಿನಂತೆಯೇ ಇದ್ದು ಹೊಸದಾಗಿ ಏರ್ಪಟ್ಟಿರುವ ನೀರಾವರಿ ಕೆಲಸಗಳ ಫಲವಾಗಿ, ಸಿಂಧ್, ಪಂಜಾಬ್, ಮದರಾಸ್ ಪ್ರಾಂತಗಳಲ್ಲಿ ಹೆಚ್ಚು ಜಮೀನು ಸಾಗುವಳಿಯಾಗಿ ಈಗ ನಡೆಯುತ್ತಿರುವ ತುತ್ತುಕುಡಿ, ಕೊಚ್ಚಿ, ವಿಶಾಖಪಟ್ಟಣಗಳ ಬಂದರು ಕೆಲಸ ವ್ಯಾಪಾರಕ್ಕೆ ಪೂರ್ತಿಯಾಗಿ ತೆರೆದು ದೊಡ್ಡ ಜಮೀನುದಾರರೂ ವರಮಾನದ ತೆರಿಗೆ ತೆರುವಂತಾದರೆ ಸರಕಾರದ ಆದಾಯಕ್ಕೆ ಪೋಷಣೆ ಬಂದೀತು.

**ವೆಚ್ಚಗಳು — ಸೈನ್ಯಶಾಖೆ.** — ವೆಚ್ಚದ ವ್ಯವಸ್ಥೆಯಲ್ಲಿ ಅತಿದೊಡ್ಡದಾಗಿ ಕಾಣುವ ಬಾಬು ಸೈನ್ಯಶಾಖೆಯದು. ಕೇಂದ್ರ ಸರಕಾರದ ಒಟ್ಟು ವೆಚ್ಚದಲ್ಲಿ ಸೈನ್ಯದ ವೆಚ್ಚ ಶೇಕಡ ೬೨! ಇತರ ಯಾವ ದೇಶದಲ್ಲಿಯೂ ರಾಜಾದಾಯದ ಇಷ್ಟು ಭಾಗ ಸೈನ್ಯ ಸಂರಕ್ಷಣೆಗೆ ವಿನಿಯೋಗವಾಗುತ್ತಿಲ್ಲ. ಇತರ ಬಾಬುಗಳಲ್ಲಿ ವೆಚ್ಚ ಅತಿ ಕಡಮೆಯಾಗಿರುವುದರಿಂದಲೂ ಮುಂದುವರಿದ ಸರಕಾರಗಳು ಮಾಡುವ ಅನೇಕ ಬಗೆಯ ಸಮಾಜಹಿತ ಕಾರ್ಯಗಳನ್ನು ಈ ಸರಕಾರ ಮಾಡುತ್ತಿಲ್ಲವಾದ್ದರಿಂದಲೂ ಈ ವೆಚ್ಚ ಮತ್ತಷ್ಟು ಭಾರವಾಗಿ ಕಾಣುತ್ತದೆ. ದೇಶದಲ್ಲಿ ಸುರಕ್ಷಣೆಯಿಲ್ಲದಿದ್ದರೆ ಯಾವ ಆರ್ಥಿಕ ಏಳಿಗೆಯೂ ಸಾಧಿತವಾಗುವುದಿಲ್ಲವೆಂಬುದು ನಿಜವಾದರೂ ಸೈನ್ಯ ಶಾಖೆಗಾಗಿ ವೆಚ್ಚಮಾಡುವ ಹಣ ಜನರಿಗೆ ಬಹುವಾಗಿ ಹಿಂದಕ್ಕೆ ಹಂಚಿ

* ಕೆಲವು ವರ್ಷಗಳಿಗೆ ಹಿಂದೆ ರೈಲ್ವೆ ಶಾಖೆಯ ಲೆಕ್ಕಾಚಾರಗಳನ್ನು ಸಾಧಾರಣ ಲೆಕ್ಕಗಳಿಂದ ಬೇರೆಮಾಡಿ ಅದರ ಆದಾಯದಲ್ಲಿ ಇಷ್ಟು ಭಾಗವನ್ನು ಕೇಂದ್ರ ಸರಕಾರಕ್ಕೆ ಸಲ್ಲಿಸತಕ್ಕದ್ದು ಎಂದು ಶಾಸನವೇರ್ಪಟ್ಟಿತು. ಅದು ೧೯೨೪ರಿಂದ ೧೯೩೧ರ ವರೆಗೆ ೪೭ ಕೋಟಿ ರೂಪಾಯಿ ಹಣವನ್ನು ಕೊಟ್ಟಿತು. ಮುಗ್ಗಟ್ಟು ಆರಂಭವಾದಂದಿನಿಂದ ಅದರ ವೆಚ್ಚಕ್ಕೇ ಹಣ ಸಾಲದು.

ಬರುವುದೆಂದಾಗಲಿ, ಇದರಿಂದ ಜನರ ಉತ್ಪತ್ತಿಶಕ್ತಿ ಹೆಚ್ಚುವುದೆಂದಾಗಲಿ ಯಾರು ಹೇಳಿಯಾರು?

ಸೈನ್ಯ ಇಷ್ಟು ಬೇಡವೆ? ಅದರ ವೆಚ್ಚ ಅಗತ್ಯ, ದೇಶದ ಸುರಕ್ಷಣೆಗೆ ಅತ್ಯಾವಶ್ಯಕ ಎಂದು ಹೇಳುವವರ ಮಾತಾಗಲಿ ಇಲ್ಲಿನ ಸೈನ್ಯದಿಂದ ಭಾರತೀಯರಿಗೆ ದೊರಕುವ ಪ್ರಯೋಜನಕ್ಕಿಂತ ಬ್ರಿಟಿಷ್ ಸಾಮ್ರಾಜ್ಯಕ್ಕೆ ಹೆಚ್ಚು ಲಾಭವಾದ್ದರಿಂದ ಇದರಲ್ಲಿನ ಹೆಚ್ಚು ಭಾಗವನ್ನು ಬ್ರಿಟಿಷ್ ಸರಕಾರದವರೇ ತೆರಬೇಕು ಎಂಬ ಮಾತಾಗಲಿ ಈಗ ನಮ್ಮ ವಿಚಾರಕ್ಕೆ ವಿಷಯವಲ್ಲ. ಒಟ್ಟು ಮೊತ್ತವನ್ನೇ ತೆಗೆದುಕೊಳ್ಳಲಿ ದೇಶದ ವರಮಾನದಲ್ಲಿ ಎಷ್ಟು ಭಾಗ ಈ ಬಾಪಿನಲ್ಲಿ ವೆಚ್ಚವಾಗುತ್ತಿದೆ ಎಂಬ ಪ್ರಮಾಣದಲ್ಲಿಯಾಗಲಿ, ಸೈನಿಕರಲ್ಲಿ ಇಲ್ಲಿನವರ ಸಂಬಳಸಾರಿಗೆಗೂ ಬ್ರಿಟಿಷರ ಸಂಬಳಸಾರಿಗೆಗೂ ಇರುವ ಅಂತರದ ದೃಷ್ಟಿಯಿಂದಾಗಲಿ ತೂಗಿದರೆ ಈ ವೆಚ್ಚ ಅತಿಯೆಂಬ ಅಂಶ ಮಾತ್ರ ಇಲ್ಲಿ ಮುಖ್ಯ. ಇದರಲ್ಲಿ ಉಳಿಸಿದ ಹಣವನ್ನು ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸಿದರೆ ದೇಶದ ಬದುಕು ಹೆಚ್ಚು ಪುಷ್ಟಿಗೊಂಡೀತು.

**ಸಾಲಗಳ ಮೇಲೆ ವೆಚ್ಚ.**—ಎರಡನೆಯದು ಸಾಲಗಳ ಮೇಲಿನ ವೆಚ್ಚ: ಈವರೆಗೆ ವರ್ಷವೊಂದಕ್ಕೆ ಸಾಲದ ವೆಚ್ಚಕ್ಕಾಗಿ ೧೪ ಕೋಟಿ ರೂಪಾಯಿಗೆ ಮೇಲ್ಪಟ್ಟು ಹಿಡಿಯುತ್ತಿದೆ. ಈಗ ಎಲ್ಲೆಲ್ಲೂ ಬಡ್ಡಿಯ ದರ ಇಳಿಯುತ್ತಿದೆ; ಇಂಡಿಯಾ ದೇಶದ ಕೀರ್ತಿಗೆ ಪೇಟೆಯಲ್ಲಿ ಯಾವ ಕುಂದೂ ಬಾರದೆ, ಸರಕಾರ ಅತಿಯಾಗಿ ಸಾಲ ತೆಗೆಯದಿದ್ದರೆ ಕಡಮೆ ಬಡ್ಡಿಯ ಸಾಲಪತ್ರಗಳನ್ನು ಹೊರಡಿಸಿ ಈಗಿರುವ ಸಾಲದ ಹೊರೆಯನ್ನು ಬಹು ಮಟ್ಟಿಗೆ ಕಡಮೆಮಾಡಿಕೊಳ್ಳುವ ಅವಕಾಶವಿದೆಯೆನ್ನಬೇಕು.

**ಆಡಳಿತದ ವೆಚ್ಚ.**—ಆಡಳಿತದ ವೆಚ್ಚ ಮೂರನೆಯದು: ಇದಕ್ಕೆ ವರ್ಷಂಪ್ರತಿ ೧೨½ ಕೋಟಿ ರೂಪಾಯಿ ಹಿಡಿಯುವುದೆನ್ನಬಹುದು. ಸಣ್ಣ ಪ್ರಾಂತಗಳಲ್ಲಿ ಆರರಲ್ಲಿ ಐದರ ಆಡಳಿತ ನೇರವಾಗಿ ಕೇಂದ್ರ ಸರಕಾರಕ್ಕೆ ಒಳಪಟ್ಟಿರುವುದರಿಂದ, ಈ ವೆಚ್ಚಕ್ಕೆ ಇಷ್ಟು ಹಣ ಬೇಕಾಗುತ್ತಿದೆ.* ವಿದೇಶಿ ಮತ್ತು ರಾಜಕೀಯ ಇಲಾಖೆಯ ವೆಚ್ಚ, ಶಾಸ್ತ್ರಸಂಶೋಧನ ಶಾಖೆ,

* ವಾಯುವ್ಯ ಪ್ರಾಂತ, ಬ್ರಿಟಿಷ್ ಬಲೂಚಿಸ್ಥಾನ್, ದೆಹಲಿ, ಅಜ್ಮೀರ್—ಮಾರ್ವಾರ, ಅಂಡಮಾನ್ ದ್ವೀಪ ಇವು ಈ ಐದು ಪ್ರಾಂತಗಳು.

ವಾಯುಮಾರ್ಗಗಳ ಶಾಖೆ, ವಾಯು ಪರೀಕ್ಷಣ ಶಾಖೆ ಮುಂತಾದುವುಗಳ ವೆಚ್ಚವೆಲ್ಲ ಕೇಂದ್ರ ಸರಕಾರದ ಆಡಳಿತಕ್ಕೇ ಸೇರುವುದು.

ಆಡಳಿತದ ವೆಚ್ಚದಲ್ಲಿ ಹೆಚ್ಚು ಸಂಬಳದ ಹುದ್ದೇದಾರರಿಗೆ ಬಟವಾಡೆಯಾಗುವ ಭಾಗ ಹೆಚ್ಚು. ಅಲ್ಲದೆ ವರ್ಷಕ್ಕೆ ಇಷ್ಟರಂತೆ ಬಡತಿಯನ್ನು ಕೊಡುತ್ತೇವೆಂದು ಒಪ್ಪಂದಮಾಡಿಕೊಂಡು ಸಂಬಳಕ್ಕಿಟ್ಟುಕೊಂಡಿರುವ ಹುದ್ದೇದಾರರ ಸಂಖ್ಯೆ ಹೆಚ್ಚಾಗಿರುವುದರಿಂದ ಈ ಸಂಬಳಗಳು ವರ್ಷವೊಂದಕ್ಕೆ ಸುಮಾರು ೫೫ ಲಕ್ಷದಂತೆ ಬೆಳೆಯುತ್ತವೆಯೇ ಹೊರತು ಕಡಮೆಯಾಗುವ ಅವಕಾಶವಿಲ್ಲ.

## ಪ್ರಾಂತಗಳ ಆದಾಯ ವೆಚ್ಚ

**ದುಗುಣಿ ಹೊಣೆಗಾರಿಕೆ, ವರಮಾನದ ಬಾಬುಗಳು.**—ಪ್ರಾಂತಗಳ ಹಣಸ್ಥಿತಿಯ ವಿಷಯದಲ್ಲಿ ಒಂದು ಮಾತನ್ನು ಹೇಳುವುದು ಮೊದಲು ಆವಶ್ಯಕ. ಅವುಗಳ ಸ್ಥಿತಿಯಲ್ಲಿ ಈಗ ಸುಮಾರು ೧೦—೧೫ ವರ್ಷಗಳಿಂದ ಒಂದು ಬಗೆಯ ದುಗುಣಿ ಹೊಣೆಗಾರಿಕೆಯಿದೆ. ಆದಾಯ ಈ ಈ ಬಾಬುಗಳಲ್ಲಿ ಬರುತ್ತದೆಯೆಂದು ಅವಕ್ಕೆ ಗೊತ್ತಾಗಿದ್ದರೂ ವೆಚ್ಚದ ವಿಚಾರದಲ್ಲಿಯೂ ಸಾಲಗಳ ಸಂಬಂಧಗಳಲ್ಲಿಯೂ ಅವಕ್ಕೆ ಎರಡು ಬಗೆಯ ಹೊಣೆಗಾರಿಕೆಯಿದೆ. ಒಂದು ಕೇಂದ್ರ ಸರಕಾರಕ್ಕೆ; ಇನ್ನೊಂದು ಜನರ ಪ್ರತಿನಿಧಿಗಳಾದ ಮಂತ್ರಿ ಮಂಡಲಿಗೆ. ಪ್ರಾಂತಗಳ ವೆಚ್ಚದ ಅಧಿಕಾರಿಗಳು ಕಾದಿರಿಸಿಕೊಂಡಿರುವ (Reserved Subjects) ಬಾಬುಗಳು; ಪ್ರತಿನಿಧಿಗಳ ಆಡಳಿತಕ್ಕೆ ಒಪ್ಪಿಸಿರುವ (Transferred Subjects) ಬಾಬುಗಳು ಎಂಬ ಎರಡು ಬಾಬುಗಳುಂಟು. ಒಂದಕ್ಕೆ ಹೆಚ್ಚು ವೆಚ್ಚವೂ ಇನ್ನೊಂದಕ್ಕೆ ಕಡಮೆ ವೆಚ್ಚವೂ ಆಗುವುದುಂಟು. ಯಾವ ಬಾಬಿನಲ್ಲಿ ಹೆಚ್ಚು ವೆಚ್ಚ ಅಗತ್ಯವೊ ಅದಕ್ಕೆ ಕಡಮೆಯಾಗಿಯೂ ಯಾವುದಕ್ಕೆ ಕಡಮೆಯಾಗಬೇಕೊ ಅದಕ್ಕೆ ಹೆಚ್ಚಾಗಿಯೂ ಇರುವುದು ವಾಡಿಕೆ. ಪ್ರಾಂತಗಳ ಆದಾಯ ಭೂಗಂದಾಯ, ಆಬ್ಕಾರಿ, ಸ್ಟಾಂಪು ತೆರಿಗೆ, ನೀರಾವರಿ ಕಾರ್ಯಗಳು, ಅರಣ್ಯಶಾಖೆ, ಇತರ ಚಿಲ್ಲರೆ ವರಮಾನದ ಬಾಬುಗಳು ಈ ಮೂಲಕ ಬರುತ್ತದೆಯೆನ್ನಬಹುದು. ಪ್ರಾಂತಗಳೆಲ್ಲವನ್ನೂ ಕೂಡಿಸಿ ನೋಡಿದರೆ

ಈವರೆಗೆ ಭೂಗಂದಾಯದಿಂದ ಬರುವ ಆದಾಯವೇ ಹೆಚ್ಚು. ಕ್ರಮಕ್ರಮ ವಾಗಿ ದೇಶದಲ್ಲಿ ಭೂಗಂದಾಯದ ಹುಟ್ಟುವಳಿ ಒಟ್ಟು ಪ್ರಮಾಣದಲ್ಲಿ ಕಡಮೆಯಾಗುತ್ತಿದೆ. ಈ ಬಾಬಿನಲ್ಲಿ ಹೆಚ್ಚು ಹುಟ್ಟುವಳಿಯನ್ನು ಸಂಪಾದಿಸಲು ಸಾಧ್ಯವಿರುವುದಿಲ್ಲ. ಇದರಲ್ಲಿ ಕೂಡ ಹೆಚ್ಚು ಸಾಗುವಳಿಯಿಂದ ಬಂದ ಹಣವೇ ಬಹಳ; ಕಂದಾಯ ಏರಿದ್ದರಿಂದ ಅಲ್ಲ. ಭೂಗಂದಾಯ ಗುತ್ತಿಗೆಯೆ? ತೆರಿಗೆಯೆ ಎಂಬ ವಿಷಯದಲ್ಲಿ ಬಹಳ ಚರ್ಚೆ ನಡೆದಿದೆ. ಅದು ತೆರಿಗೆ ಎಂದು ಜನರೂ ಗುತ್ತಿಗೆ ಎಂದು ಸರಕಾರದವರೂ ವಾದಿಸುವರು. ಹೇಗೆಯೇ ಆಗಲಿ ಅದರ ಹುಟ್ಟುವಳಿ ಹೆಚ್ಚಿಲ್ಲ. ಜನರ ವರಮಾನಕ್ಕೆ ಹೋಲಿಸಿ ನೋಡಿದಲ್ಲಿ, ಈಗ ಎತ್ತುವ ತೆರಿಗೆಯ ದರವೇ ಹೊರಲಾರದಷ್ಟಿದೆಯಾದ್ದರಿಂದ ದರವನ್ನು ಏರಿಸಿ ಇನ್ನುಮುಂದೆ ಹೆಚ್ಚು ಉತ್ಪತ್ತಿಯನ್ನು ಸರಕಾರದವರು ಉಂಟುಮಾಡಿಕೊಳ್ಳುವಹಾಗಿಲ್ಲ. ಅಬ್ಕಾರಿ ಬಾಬೂ ಕಾಲಕ್ರಮದಲ್ಲಿ ಕಡಮೆಯಾಗುವ ಬಾಬೇ. ಸ್ಟಾಂಪುಗಳ ತೆರಿಗೆಯೊಂದು ಸುಮಾರು ಹೆಚ್ಚುತ್ತಿದೆಯೆನ್ನಬೇಕು. ಭೂಮಿಯ ಒಡೆತನವನ್ನು ಬದಲಾಯಿಸುವಹಾಗಿಲ್ಲ ಹೊಸ ಸ್ಟಾಂಪು ಖರ್ಚನ್ನು ಕೊಡಬೇಕು. ಜೊತೆಗೆ ನ್ಯಾಯಸ್ಥಾನಗಳಿಗೆ ವ್ಯಾಜ್ಯಗಳನ್ನು ತೆಗೆದುಕೊಂಡು ಹೋದಾಗಲೂ ಹೀಗೆಯೇ. ರೆಜಿಸ್ಟ್ರೇಷನ್ ವೆಚ್ಚಗಳನ್ನೂ ಇಟ್ಟುಕೊಳ್ಳಬೇಕು. ನೀರಾವರಿ ಮತ್ತು ಅರಣ್ಯಶಾಖೆಗಳ ಉತ್ಪತ್ತಿಯೇನೂ ಹೇಳಿಕೊಳ್ಳುವ ಹಾಗಿಲ್ಲ. ಇತರ ಚಿಲ್ಲರೆ ಬಾಬುಗಳಲ್ಲಿ ಎಂದರೆ ಪ್ರಾಂತಗಳು ಎತ್ತಬಹುದೆಂದು ಅಪ್ಪಣೆಯಿರುವ (Other Scheduled Taxes) ಆದಾಯಗಳಲ್ಲಿಯೂ ದೊಡ್ಡವು ಯಾವುವೂ ಇಲ್ಲ. ಜೂಜು ಮತ್ತು ವಿನೋದದ ತೆರಿಗೆಗಳು ನಾಲ್ಕು ಪ್ರಾಂತಗಳಲ್ಲಿ ಬಳಕೆಯಲ್ಲಿವೆ. ದೊಡ್ಡ ಪಟ್ಟಣಗಳಲ್ಲಿ ಅವುಗಳಿಂದ ಸ್ವಲ್ಪ ಉತ್ಪತ್ತಿ ಬಂದರೂ ಅದರ ಮೊತ್ತ ಹೆಚ್ಚಿಲ್ಲ. ರಸ್ತೆ ಸುಂಕ ಒಂದೆರಡು ವ್ಯಾಪಾರದ ತೆರಿಗೆ ಸ್ವಲ್ಪ ಹಣ ತರುವುವು; ಅಷ್ಟೇ. ಹೀಗೆ ಸ್ಟಾಂಪು ರೆಜಿಸ್ಟ್ರೇಷನ್ ಬಾಬುಗಳನ್ನು ಬಿಟ್ಟರೆ ಉಳಿದ ಯಾವ ರೀತಿಯಲ್ಲಿಯೂ ಪ್ರಾಂತ ಸರಕಾರಗಳ ಆದಾಯ ಹೆಚ್ಚಲು ಅವಕಾಶವಿಲ್ಲ.

ಬೇರೆ ಬೇರೆ ಪ್ರಾಂತಗಳಲ್ಲಿ ಬೇರೆ ಬೇರೆ ಹುಟ್ಟುವಳಿಯ ಬಾಬುಗಳಿಂದ ಹೊಟ್ಟೆ ಹೊರೆಯಲಾಗುತ್ತಿದೆಯೆನ್ನಬೇಕು. ಬಂಗಾಳಾದಲ್ಲಿ ಸ್ಟಾಂಪುಗಳ

ಉತ್ಪತ್ತಿ— ಆದರಲ್ಲಿಯೂ ವ್ಯಾಜ್ಯಗಳಲ್ಲಿ ಕೋರ್ಟುಗಳಿಗೆ ತೆರುವವು— ಹೆಚ್ಚು. ವಿನೋದಗಳ ಮೇಲೆತ್ತಿದ ತೆರಿಗೆಯೂ ರೆಜಿಸ್ಟ್ರೇಷನ್ ಹುಟ್ಟುವಳಿಯೂ ಜೊತೆಗೆ ಸೇರುವುವು. ಮದರಾಸ್, ಬಿಹಾರ್, ಒರಿಸ್ಸಾ ಪ್ರಾಂತಗಳಲ್ಲಿ ಆಬ್ಕಾರಿ ವರಮಾನದ ಭಾಗ ಬಹಳ. ಖಾಯಂ ಜಮಾಸುದಾರಿ ಪದ್ಧತಿಯ ಫಲವಾಗಿ ಬಂಗಾಳದಲ್ಲಿಯೂ ಬಿಹಾರ ಒರಿಸ್ಸಾಗಳಲ್ಲಿಯೂ ಭೂಗಂದಾಯದ ಭಾಗ ಕಡಮೆ. ಇತರ ಪ್ರಾಂತಗಳಲ್ಲಿ ಭೂಗಂದಾಯದ ಭಾಗ ಹೆಚ್ಚು. ಸಂಯುಕ್ತ ಪ್ರಾಂತದ ವರಮಾನದಲ್ಲಿ ಅದರ ಭಾಗ ೫೦%; ಪಂಜಾಬಿನಲ್ಲಿ ೬೦%.

ಈಗ್ಗೆ ಕೆಲವು ವರ್ಷಗಳವರೆಗೂ ಪ್ರಾಂತ ಸರಕಾರದವರು ಪ್ರಧಾನ ಸರಕಾರಕ್ಕೆ ಒಂದು ಗೊತ್ತಾದ ಮೊತ್ತದಲ್ಲಿ ಹಣವನ್ನು ತೆರಬೇಕಾಗಿತ್ತು. ೭–೮ ವರ್ಷಗಳಿಂದ ಅದು ನಿಂತು ಹಿಂದಿಗಿಂತಲೂ ಸ್ವಲ್ಪ ಹೆಚ್ಚು ಹಣ ಈಗ ಕೈಯಲ್ಲಿ ನಿಲ್ಲುತ್ತದೆಯೆನ್ನಬಹುದು. ಆದರೂ ಪ್ರಾಂತಗಳ ವೆಚ್ಚವನ್ನೂ ವೆಚ್ಚದ ಬಾಬುಗಳನ್ನೂ ಪರಿಶೀಲಿಸಿದರೆ ಆ ವೆಚ್ಚ ಎಷ್ಟು ಹೆಚ್ಚಬೇಕೊ ಅಷ್ಟಕ್ಕೆ ತಕ್ಕಂತೆ ಅವರ ವರಮಾನ ಬೆಳೆಯುವ ಮಾರ್ಗವಿಲ್ಲವೆಂದು ಗೊತ್ತಾಗುವುದು.

**ವೆಚ್ಚಗಳು.**— ವೆಚ್ಚಗಳಲ್ಲಿ ಎರಡು ಶಾಖೆಗಳಿವೆ: ಒಂದು ಅಧಿಕಾರಿಗಳು ಕಾದಿರಿಸಿಕೊಂಡಿರುವ ಭಾಗ; ಭೂಗಂದಾಯ ಮತ್ತು ಸಾಮಾನ್ಯ ಆಡಳಿತ, ಪೋಲೀಸ್ ಶಾಖೆ, ಸೆರೆಮನೆ ಮತ್ತು ನ್ಯಾಯ ಶಾಖೆ; ಸಾಲದ ವೆಚ್ಚ, ವಿಶ್ರಾಂತಿ ವೇತನ ಮುಂತಾದ ಇತರ ಬಾಬುಗಳು. ಪ್ರಜಾಪ್ರತಿನಿಧಿಗಳ ಆಡಳಿತಕ್ಕೂ ಅಂಕೆಗೂ ಒಳಪಡುವ ಬಾಬುಗಳೆಂದರೆ: ವಿದ್ಯಾಭ್ಯಾಸ, ಆರೋಗ್ಯ ಚಿಕಿತ್ಸೆ, ಕಟ್ಟಡಗಳು, ಇತರ ಬಾಬುಗಳು. ಮುಖ್ಯವಾಗಿ ವಿದ್ಯಾಶಾಖೆ ಮತ್ತು ಆರೋಗ್ಯ ಚಿಕಿತ್ಸಾ ಶಾಖೆಗಳಲ್ಲಿಯೂ ಇತರ ಸಂಪದಭಿವೃದ್ಧಿ ಕಾರ್ಯಗಳಲ್ಲಿಯೂ ಎಷ್ಟೋ ವಿಸ್ತರಣವಾಗಬೇಕಾಗಿರುವಾಗ ಅವಕ್ಕೆ ಸಾಕಾಗುವಷ್ಟು ಹಣ ಒದಗುವುದಿಲ್ಲ.*

* ಎಲ್ಲ ಪ್ರಾಂತಗಳೂ ಒಟ್ಟಿಗೆ ಸೇರಿ ೨೮ ಕೋಟಿ ರೂಪಾಯಷ್ಟನ್ನು ಈ ಬಾಬುಗಳಲ್ಲಿ ಖರ್ಚುಮಾಡುತ್ತಿವೆ ಎಂದರೆ ಅವುಗಳ ಪ್ರಯೋಜನ ದೇಶಕ್ಕೆ ಯಾವ ಮಟ್ಟಿಗೆ ದೊರೆಯಬಹುದೆಂಬುದನ್ನು ಊಹಿಸಬಹುದು.

ಇಡಿಯ ಭರತಖಂಡಕ್ಕೆ ಸಂಬಂಧಿಸಿದ ಅನೇಕ ಕಾರ್ಯಗಳನ್ನು ಇನ್ನು ಮುಂದೆಯೂ ಪ್ರಧಾನ ಸರಕಾರವೇ ಮಾಡಬೇಕಾಗಿರುವುದು; ರೈಲ್ವೆ, ಬಂದರು ರೇವುಗಳ ಕೆಲಸ, ವಾಯುಮಾರ್ಗದ ರಚನೆ ಮುಂತಾದ ಕೆಲಸವೆಲ್ಲ ಅವರ ಭಾಗಕ್ಕೆ ಬೀಳುವುದು. ಆದರೂ ಇತರ ಭಾಗಗಳಲ್ಲಿ ಅದರ ವೆಚ್ಚ ಪ್ರಾಂತ ಸರಕಾರಗಳ ವೆಚ್ಚಗಳಷ್ಟು ಹೆಚ್ಚಾಗಬೇಕಾಗಿರುವುದಿಲ್ಲ. ಏಳಿಗೆಗೆ ಬರುತ್ತಿರುವ ಯಾವ ದೇಶದಲ್ಲಿಯೇ ಆಗಲಿ ಸರಕಾರದ ಹೆಚ್ಚು ಹುಟ್ಟುವಳಿ ಬರಬೇಕಾದ್ದು ವರಮಾನದ ತೆರಿಗೆಗಳಿಂದ; ವಿದೇಶಿ ವ್ಯಾಪಾರ ಸುಂಕಗಳಿಂದ. ಆದರೆ ಆ ಎರಡು ಬಾಬುಗಳ ವರಮಾನವೂ ಪ್ರಧಾನ ಸರಕಾರಕ್ಕೆ ಹೋಗುವುದು. ಪ್ರಾಂತದ ಪಾಲಿಗೆ ಬರುವ ಆದಾಯಗಳು ಹೆಚ್ಚುವ ಸಂಭವ ಕಡಮೆ. ಪ್ರಧಾನ ಸರಕಾರದ ವೆಚ್ಚಗಳು ಬಹುಮಟ್ಟಿಗೆ ಈಗಿನ ಹಾಗೆಯೇ ಇರಬೇಕಾದಂಥವು; ಪ್ರಾಂತಗಳ ವೆಚ್ಚ ಹಿಗ್ಗಬೇಕಾದುದು. ವಿದ್ಯಾ ಪ್ರಚಾರಣೆ, ಆರೋಗ್ಯ ಮತ್ತು ನೈರ್ಮಲ್ಯ ಸಾಧನೆ, ವ್ಯವಸಾಯ ಕೈಗಾರಿಕೆಗಳ ಅಭಿವೃದ್ಧಿ ಮುಂತಾದ ಸಮಾಜದ ಬೆಳವಣಿಗೆಗೆ ಬೇಕಾದ ವೆಚ್ಚಗಳು ಏರುತ್ತಹೋಗಬೇಕಾದುವು. ಕೈಯಲ್ಲಿ ಹಣವಿಲ್ಲದೆ ಈ ಕೆಲಸಗಳನ್ನು ಮಾಡುವುದು ಹೇಗೆ?

ಕೆಲವು ಕಾಲ ಪ್ರಾಂತ ಸರಕಾರಗಳು ತಮ್ಮ ವರಮಾನದಲ್ಲಿ ಗೊತ್ತಾದ ಸ್ವಲ್ಪ ಭಾಗವನ್ನು ಕೇಂದ್ರ ಸರಕಾರಕ್ಕೆ ತೆರಬೇಕಾಗಿತ್ತು. ಆ ತೆರಾಣೆಯಲ್ಲಿ ಅಸಮತೆಗಳಿದ್ದುವು. ಆ ಪದ್ಧತಿ ನಿಂತಾಗ ಅಷ್ಟು ಹಣ ಪ್ರಾಂತಗಳ ಕೈಯಲ್ಲಿಯೇ ಉಳಿಯುವಂತಾದರೂ ವರಮಾನದ ಬಾಬುಗಳ ಸ್ವಭಾವದಿಂದ ಉತ್ಪತ್ತಿ ಅನಿಶ್ಚಯವಾಗಿ ಪ್ರಾಂತಪ್ರಾಂತಗಳಲ್ಲಿ ವ್ಯತ್ಯಾಸ ಬಲಿಯುತ್ತಲೇ ನಡೆದಿದೆ. ಈಗಿನ ಧನವ್ಯವಸ್ಥೆಯನ್ನು ನೋಡಿದರೆ ಇನ್ನೆರಡು ಸಂಗತಿಗಳು ಒಡೆದು ಕಾಣುವುವು. ಕೈಗಾರಿಕೆ ಪ್ರಾಂತಗಳಿಗಿಂತಲೂ ವ್ಯವಸಾಯ ಪ್ರಾಂತಗಳಿಗೆ ಪ್ರಧಾನ ಸರಕಾರದ ಕಾರ್ಯದಿಂದಲೂ ಶಾಸನದಿಂದಲೂ ಹೆಚ್ಚು ಪ್ರಯೋಜನ ದೊರೆತಿದೆಯೆನ್ನಬಹುದು; ಅಲ್ಲದೆ ತೆರಿಗೆಯ ಹೊರೆಯೂ ತಲೆಯೊಂದಕ್ಕೆ ಒಂದೊಂದು ಪ್ರಾಂತಕ್ಕೆ ಒಂದೊಂದು ರೀತಿ ಬಿದ್ದು ಅಸಮತೆಗಳನ್ನು ಹೆಚ್ಚಿಸುತ್ತಿದೆ.

**ಸಾರಾಂಶ — ತೆರಿಗೆಯ ಪದ್ಧತಿ.** — ದೇಶದ ತೆರಿಗೆಯ ಸ್ಥಿತಿಯನ್ನು ಪರೀಕ್ಷಿಸುವಲ್ಲಿ ಕಾಣಬರುವ ಸಂಗತಿಗಳನ್ನು ಹೀಗೆ ಹೇಳಬಹುದು:— ಜನರ ವರಮಾನ ಕಡಮೆಯಾದ್ದರಿಂದ ಅವರ ತೆರಿಗೆ ತೆರುವ ಶಕ್ತಿಯೂ ತೆರಿಗೆಗಳ ಉತ್ಪತ್ತಿಯೂ ಕಡಮೆ. ಸೈನ್ಯ ಸಂರಕ್ಷಣೆ, ಶಾಸನ ಶಾಖೆ, ಆಡಳಿತ ವೆಚ್ಚಗಳಿಗಾಗಿ—ದೇಶದ ಸಂಪತ್ತೇನು, ಜನದ ವರಮಾನವೇನು, ತಮ್ಮ ಹುಟ್ಟುವಳಿ ಹೇಗಿದೆ ಎಂಬುದನ್ನು ನೋಡದೆ—ಪಾಶ್ಚಾತ್ಯ ದೇಶಗಳವರು ಮಾಡುವಂತೆ ವೆಚ್ಚಮಾಡುವರು. ಸಮಾಜಹಿತ ಸಾಧಕವಾದ ವೆಚ್ಚದ ಬಾಬುಗಳಲ್ಲಿ ಅವಕ್ಕೂ ಇಲ್ಲಿಗೂ ಸುತರಾಂ ಹೋಲಿಕೆ ಇಲ್ಲ. ಇತರ ದೇಶಗಳೊಡನೆ ಇದನ್ನು ಹೋಲಿಸಿದರೆ ಇಲ್ಲಿನ ತೆರಿಗೆ ಕಡಮೆ ಎನ್ನಬಹುದಾದರೂ ಅದನ್ನು ತೆರುವುದೂ ಜನರಿಗೆ ಬಹು ಕಷ್ಟ. ಧನಿಕರು ದೊಡ್ಡ ತೆರಿಗೆಗಳನ್ನು ತಪ್ಪಿಸಿಕೊಳ್ಳಲು ಅವಕಾಶ ಬೇಕಾದಷ್ಟಿದೆ. ಸರಕಾರದ ವೆಚ್ಚದ ನೀತಿ ಮಾರ್ಪಟ್ಟು ಹೆಚ್ಚು ಹೆಚ್ಚಾಗಿ ನೀರಾವರಿ ಕೆಲಸ, ಉತ್ತಮ ಬೇಸಾಯದ ರೀತಿ, ಯಂತ್ರೋತ್ಪತ್ತಿ ವಿಧಾನ, ಜನರ ಆರೋಗ್ಯ ಸಾಧನೆ, ನೀರಿನ ಸೌಕರ್ಯ ಕಲ್ಪನೆ, ಉದ್ಯೋಗ ನಿರ್ಮಾಣ ಮತ್ತು ವಿದ್ಯಾದಾನ ಮುಂತಾದ ಬಾಬುಗಳಲ್ಲಿ ವೆಚ್ಚಮಾಡುತ್ತಾ ಬಂದರೆ ಹೆಚ್ಚು ಉತ್ಪತ್ತಿಯನ್ನು ಸಾಧಿಸುವ ಅವಕಾಶವುಂಟು. ತೆರಿಗೆಗೆ ಈಗ ಒಳಪಡದಿರುವವರನ್ನು ಒಳಪಡಿಸಿ, ತಪ್ಪಿಸಿಕೊಳ್ಳುತ್ತಿರುವವರನ್ನು ಹಿಡಿದು, ಬಂದ ಹಣವನ್ನು ಸೈನ್ಯ ವೆಚ್ಚಕ್ಕೂ ಆಡಳಿತ ವೆಚ್ಚಕ್ಕೂ ವಿನಿಯೋಗಿಸದೆ ರಾಷ್ಟ್ರಾಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸುವ ಅಗತ್ಯ ಬಹಳವಿದೆ. ಆದರೆ ರಾಜಾದಾಯವೂ ತೆರಿಗೆಗಳೂ ಇಲ್ಲಿ ಹೆಚ್ಚದಿರಲು ವಿಶೇಷ ಕಾರಣಗಳುಂಟು. ಹೊಸ ತೆರಿಗೆಗಳನ್ನೆತ್ತಬೇಕಾದರೆ ಪ್ರಜಾಪ್ರತಿನಿಧಿಗಳ ಒಪ್ಪಿಕೆ ಬೇಕು; ಇಲ್ಲವಾದರೆ ತಮಗಿರುವ ಮೇಲಧಿಕಾರಬಲದಿಂದ ಸರಕಾರದವರು ಅವನ್ನು ಎತ್ತಬೇಕು; ಅಥವಾ ಇರುವವುಗಳ ದರ ಏರಿಸಬೇಕು. ಈ ರೀತಿ ತೆರಿಗೆಗಳನ್ನು ಹೆಚ್ಚಿಸಿ ಜನರಲ್ಲಿ ಅಪವಾದಕ್ಕೆ ಸಿಕ್ಕಲು ಇಬ್ಬರಿಗೂ ಇಷ್ಟವಿಲ್ಲ. ಪೊಲೀಸ್ ಸೈನ್ಯ ಶಾಖೆಗಳ ವೆಚ್ಚದ ಮೇಲೂ ರಾಜಕೀಯ ವೆಚ್ಚಗಳ ಮೇಲೂ ಜನರಿಗೆ ಕೈಯಿಲ್ಲ. ಅನೇಕ ಸಂಬಳಗಳು ಒಪ್ಪಂದದ ಮೇಲೆ ಏರ್ಪಟ್ಟು ಇಷ್ಟಿಷ್ಟು ಕಾಲಕ್ಕೆ ಹೀಗೆ ಹೀಗೆಯೇ ಹೆಚ್ಚಬೇಕೆಂಬ ಕ್ರಮದಲ್ಲಿ

ಸಲ್ಲಬೇಕಾಗಿವೆ. ಅಲ್ಲದೆ ಹೆಚ್ಚು ತೆರಿಗೆಯಿಂದ ವಸೂಲಾದ ಹಣ ಅಭಿವೃದ್ಧಿಯ ಬಾಬುಗಳಿಗೆ ವೆಚ್ಚವಾಗುವ ಸಂಭಕೆಯೇನು?

ಇನ್ನೊಂದುಕಡೆ ಪ್ರಾಂತ ಸರಕಾರಗಳಿಗೂ ಕೇಂದ್ರ ಸರಕಾರಕ್ಕೂ ಇರುವ ಹಣ ಸಂಬಂಧ ಅಷ್ಟೇನೂ ಸಮರ್ಪಕವಾಗಿಲ್ಲ. ಎಲ್ಲೆಲ್ಲಿ ಪ್ರಧಾನ ಸರಕಾರವೂ ಪ್ರಾಂತ ಸರಕಾರಗಳೂ ಸ್ಥಾಪಿತವಾಗಿವೆಯೊ ಅಲ್ಲೆಲ್ಲ ಅವರವರ ಭಾಗದ ಕೆಲಸದ ಸ್ವರೂಪಕ್ಕೂ ಗಾತ್ರಕ್ಕೂ ವೆಚ್ಚಕ್ಕೂ ತಕ್ಕಂತೆ ಆದಾಯದ ಬಾಬುಗಳನ್ನು (ಹುಟ್ಟುವಳಿಯ ದೃಷ್ಟಿಯಿಂದ) ಹಂಚುವುದು ಅವಶ್ಯಕ, ನ್ಯಾಯ ಎಂದು ತಿಳಿದಿದ್ದಾರೆ. ಆ ರೀತಿ ರಚಿಸಿದ್ದಾರೆ. ಇಲ್ಲಿ ಆ ಲಕ್ಷಣ ಸ್ವಲ್ಪವೂ ಕಾಣಿಸದು. ಅಗತ್ಯವಾಗಿ ಹೆಚ್ಚು ವೆಚ್ಚ ನಡೆಯಬೇಕಾದ ಕಾರ್ಯಶಾಖೆಗಳೆಲ್ಲ ಪ್ರಾಂತಸರಕಾರಗಳಿಗೆ ಒಳಪಟ್ಟಿವೆ. ಪ್ರಾಂತ ಪ್ರಾಂತಗಳ ಹಣಸ್ಥಿತಿಗಳಲ್ಲಿರುವ ಅನೇಕ ಅಸಮತೆಗಳನ್ನೂ (Inequalities) ಸಮಾಪಡಿಸುವ ಆವಶ್ಯಕತೆಯಿದೆ.

ಹೊಸ ತೆರಿಗೆ–ಹುಟ್ಟುವಳಿ ವಿಚಾರವೇತಕ್ಕೆ? ನಡೆಯುತ್ತಿರುವ ವೆಚ್ಚಗಳನ್ನು ನಿಷ್ಠುರವಾಗಿ ಕತ್ತರಿಸಿದರೆ—ಅವನ್ನು ಹೆಚ್ಚು ಪ್ರಯೋಜನ ತರುವ ಕಾರ್ಯಗಳಿಗೆ ಒದಗಿಸಲಾಗದೆ? ಎಂಬ ಪ್ರಶ್ನೆಯನ್ನು ಕೇಳುವುದುಂಟು. ಇನ್ನೂ ಹಾಳತವಾಗಿ ಖರ್ಚುಮಾಡಿ ಕೆಲವು ಶಾಖೆಗಳು ಇನ್ನೂ ದಕ್ಷವಾಗಿ ಕೆಲಸ ಮಾಡಿ, ಅತಿ ದೊಡ್ಡ ಸಂಬಳಗಳನ್ನು ತಿನ್ನುವವರ ಸಂಖ್ಯೆಯನ್ನು ಇಳಿಸಿ, ಕಡಮೆ ಸಂಬಳಕ್ಕೆ ಆ ಹುದ್ದೆಗಳಿಗೆ ದೇಶೀಯರನ್ನೇ ನೇಮಿಸಿದರೆ ಹೆಚ್ಚಾಗಿ ಹಣ ಉಳಿಸುವುದು ಸಾಧ್ಯ. ಆದರೂ ಎಷ್ಟು ವೆಚ್ಚವನ್ನು ಇಳಿಸಿ, ಸ್ವಚ್ಛಂದ ವೆಚ್ಚವನ್ನು ಮೊಟಕುಮಾಡಿದರೂ—ಇನ್ನೂ ಹಲವು ವರ್ಷಗಳವರೆಗಾದರೂ ಆ ಕೆಲಸಕ್ಕೂ ಮಿತಿ ಉಂಟೆಂಬುದನ್ನೂ ಅಷ್ಟಾದಮೇಲೂ ಮುಂದೆ ರಾಷ್ಟ್ರಾಭಿವೃದ್ಧಿ ಕಾರ್ಯಗಳಿಗೆಲ್ಲ ಬೇಕಾಗುವ ಹಣವೆಲ್ಲ ಹುಟ್ಟಲಾರದೆಂಬುದನ್ನೂ ಜ್ಞಾಪಕದಲ್ಲಿಡುವುದು ಅಗತ್ಯ. ಆದ್ದರಿಂದ ಹೊಸ ವೆಚ್ಚಗಳನ್ನು ಯಾರು, ಯಾವ ಅಧಿಕಾರಿಗಳು–ಶಾಖೆಗಳು ಮಾಡಬೇಕಾಗುವುದೊ ಅವರೇ ಹೊಸ ತೆರಿಗೆಗಳನ್ನು ಹಾಕುವ ಹೊಣೆಗಾರಿಕೆಯನ್ನು ಹೊರುವುದು ಒಳ್ಳೆಯದಾದೀತು. ಆಯಾ ಆವಶ್ಯಕತೆಗೆ ತಕ್ಕಂತೆ ಹುಟ್ಟುವಳಿಯನ್ನುಂಟುಮಾಡಿಕೊಳ್ಳಲು ಬೇಕಾಗುವ ಆದಾಯದ ಬಾಬುಗಳನ್ನು ಅವರ ವಶಕ್ಕೇ ಉಳಿಸಬೇಕು. ದೇಶದ ಎಲ್ಲ ಭಾಗಗಳವರೂ

ಅವರವರ ಸ್ಥಿತಿಗೂ ಯೋಗ್ಯತೆಗೂ ತಕ್ಕಂತೆ ಇಡಿಯ ದೇಶದ ಹಿತಕ್ಕಾಗಿ ಕೇಂದ್ರ ಸರಕಾರಕ್ಕೆ ಹಣ ಒದಗಿಸುವ ಏರ್ಪಾಡಾಗಬೇಕು. ರಾಜಕೀಯ ವ್ಯವಸ್ಥೆ ಹೇಗೇ ಏರ್ಪಡಲಿ ಒಂದು ಕಡೆ ಕೇಂದ್ರ ಸರಕಾರದ ಗೌರವವೂ ಬಿಗುವೂ ಕಡಮೆಯಾಗದಂತೆಯೂ ಇನ್ನೊಂದು ಕಡೆ ರಾಷ್ಟ್ರಾಭಿವೃದ್ಧಿ ಕಾರ್ಯಗಳಿಗಾಗಿ ತೆರೆಯುವ ಕೈಕಟ್ಟದಂತೆಯೂ ಸರಕಾರದ ಸುಂಕದ ನೀತಿ ಮಾರ್ಪಡಬೇಕಾಗುವುದು.

**ಪ್ರಾಂತಗಳಿಗೆ ಹೆಚ್ಚು ಸ್ವಾತಂತ್ರ್ಯ ಬೇಕು.—** ಮುಖ್ಯವಾಗಿ ರಾಷ್ಟ್ರಾಭಿವೃದ್ಧಿಯ ಸಾಧನೆ ಮಾಡಬೇಕಾಗಿರುವ ಪ್ರಾಂತ ಸರಕಾರಗಳವರಿಗೆ ಹೆಚ್ಚು ತೆರಿಗೆ ಹಾಕುವ ಸ್ವಾತಂತ್ರ್ಯ ದೊರೆಯಬೇಕೆನ್ನಿಸುತ್ತದೆ. ಆದರೂ ಸ್ವಂತ ಉಪಪತ್ತಿಯನ್ನು ಹೆಚ್ಚಿಸಿಕೊಳ್ಳುವ ಒತ್ತಿನಲ್ಲಿ ತಮ್ಮ ಕೀರ್ತಿಯನ್ನೂ ದೇಶದ ಕೀರ್ತಿಯನ್ನೂ ಉಳಿಸಿಕೊಳ್ಳಬೇಕಾದ್ದು ಅಗತ್ಯ. ಅತ್ಯಾವಶ್ಯಕವಾಗಿ ಬೇಕಾಗುವ ಸಾಲಗಳನ್ನು ಧಾರಾಳವಾಗಿ ತೆಗೆಯುವ ಅವಕಾಶ ಅವರಿಗಿರಬೇಕಾದರೂ ಅತಿಯಾಗಿ ಸಾಲಮಾಡದಂತೆಯೂ ನೋಡಿಕೊಳ್ಳಬೇಕಾಗುವುದು. ಮಾಡಿದ ಸಾಲವನ್ನು ತೀರಿಸಲು ತಕ್ಕ ಆಢ್ಯತೆಯನ್ನು (Solvency) ಕಾಪಾಡಿಕೊಳ್ಳಲೇ ಬೇಕು. ಅವರ ಕಾರ್ಯಕ್ಷೇತ್ರಕ್ಕೆ ಸೇರಿಯುವ ಎಲ್ಲ ಅಧಿಕಾರಿಗಳ ವೇತನಗಳನ್ನೂ ಸ್ವಂತ ಸಾಲದ ಎಲ್ಲ ವೆಚ್ಚಗಳನ್ನೂ ಅವರೇ ಒದಗಿಸಿಕೊಳ್ಳುವಂತೆ ಆಗಬೇಕಾಗುವುದು. ಪ್ರಾಂತಗಳಿಗೆ ಈವರೆಗೂ ಹೆಚ್ಚು ಸ್ವಾತಂತ್ರ್ಯವಿರಲಿಲ್ಲ:—

೧. ಅಖಿಲ ಭಾರತದ ಅಧಿಕಾರಿಗಳ ಸಂಬಳ, ಬಡತಿ, ವಿಶ್ರಾಂತಿ ವೇತನ ಮುಂತಾದುವು; ಪ್ರಾಂತದ ಗವರ್ನರುಗಳ ವೆಚ್ಚ; ಅಧಿಕಾರಿಗಳು ಕಾದಿರಿಸಿಕೊಂಡಿರುವ ಆಡಳಿತ ಬಾಬುಗಳ ಸಿಬ್ಬಂದಿ ವೆಚ್ಚ; ಅವನ್ನು ವ್ಯತ್ಯಾಸಮಾಡುವ ವಿಚಾರ; ನೀರಾವರಿ ಮತ್ತು ಜಲಯಾನ ಕಾರ್ಯಗಳಿಗೆ ಸಂಬಂಧಿಸಿದ ಬಂಡವಾಳದ ವೆಚ್ಚಗಳು — ಮೊದಲಾದುವಕ್ಕೆ ಸಂಬಂಧಿಸಿದ ಸಂಗತಿಗಳನ್ನೆಲ್ಲ ಇಂಗ್ಲಂಡಿನಲ್ಲಿರುವ ಇಂಡಿಯಾಧಿಕಾರಿ ಆಳುತ್ತಿದ್ದನು. ಈ ವಿಷಯದಲ್ಲಿ ಇಂಡಿಯಾ ಸರಕಾರದ ಕೈಯೇನೂ ನಡೆಯುತ್ತಿರಲಿಲ್ಲ;

೨. ಸಂಯುಕ್ತ ಪ್ರಾಂತಗಳಲ್ಲಿ ಹೊರತು ಉಳಿದ ಕಡೆ ಪ್ರಾಂತಗಳ ಲೆಕ್ಕಗಳೆಲ್ಲ ಕೇಂದ್ರ ಸರಕಾರದ ಅಧಿಕಾರಿಯಾದ ಆಡಿಟರ್-ಜೆನರಲ್ ಎಂಬಾತನಿಗೂ ಆತನ ಕಚೇರಿಗೂ ಒಳಪಟ್ಟಿರುತ್ತವೆ;

೩. ಪ್ರಾಂತ ಸರಕಾರಗಳ ಶಿಲ್ಕನ್ನೆಲ್ಲ ಕೇಂದ್ರ ಸರಕಾರ ಸರಕಾರದ ಖಜಾನೆಗಳಲ್ಲಿ ಇಟ್ಟಿರುತ್ತದೆ.... ಇಷ್ಟಕ್ಕೆ ಕಡಮೆಯಿಲ್ಲದೆ ಈ ಶಿಲ್ಕು ಖಜಾನೆಗಳಲ್ಲಿ ಇದ್ದೇ ಇರಬೇಕೆಂಬ ವಿಧಿ ಇರುತ್ತದೆ;

೪. ಕೆಲವು ವರ್ಷಗಳ ಹಿಂದೆ ಪ್ರಾಂತಗಳ ಸಾಲದ ನಿಧಿ (Provincial Loans Fund) ಎಂಬ ನಿಧಿಯೊಂದು ಏರ್ಪಟ್ಟಿತು. ಕೆಲವು ಗೊತ್ತಾದ ಪ್ರಯೋಜನಗಳಿಗಾಗಿ ಪ್ರಾಂತಗಳವರು ಹಣದ ಪೇಟೆಯಿಂದಲೂ ಈ ನಿಧಿಯಿಂದಲೂ ಸಾಲವನ್ನು ತೆಗೆಯಬಹುದಾದರೂ ಹೊರಪೇಟೆಯಲ್ಲಿ ಸಾಲವೆತ್ತ ಬೇಕಾದರೆ ಕೇಂದ್ರ ಸರಕಾರದ ಒಪ್ಪಿಗೆ ಬೇಕು. ಸಾಲವನ್ನು ವಿದೇಶದಲ್ಲಿ ತೆಗೆಯಬೇಕಾದರೆ ಅದಕ್ಕೆ ಇಂಡಿಯಾಧಿಕಾರಿಯ ಅಪ್ಪಣೆಯಾಗಬೇಕು. ಸಾಲದ ಷರತ್ತುಗಳು, ಬಡ್ಡಿಯ ದರ, ಸಾಲವನ್ನು ತೀರಿಸುವ ರೀತಿ ಮುಂತಾದುವುಗಳಿಗೆ ಆತನ ಒಪ್ಪಿಗೆ ಆವಶ್ಯಕ. ನಿಧಿಯಿಂದ ಸಾಲ ತೆಗೆಯಬೇಕಾದರೆ, ಪ್ರಾಂತದ ಆಯವ್ಯಯದ ಅಂದಾಜು ಪಟ್ಟಿಯಲ್ಲಿ (Budget Estimates) ಸಾಲಕ್ಕೆ ಬಡ್ಡಿಯನ್ನೂ ತೇಮಾನದ ಹಣವನ್ನೂ ಹೇಗೆ ಒದಗಿಸಿದೆ ಎಂಬುದನ್ನು ತೋರಿಸಬೇಕು.

೫. ಈ ಲೆಕ್ಕಗಳೆಲ್ಲ ಕೇಂದ್ರ ಸರಕಾರದ ತನಿಖೆಯ ಅಧಿಕಾರಿಗಳ ಮೇಲ್ವಿಚಾರಣೆಗೆ ಒಳಪಟ್ಟಿರುತ್ತವೆ. ಪ್ರಾಂತದ ವೆಚ್ಚಗಳೆಲ್ಲ ಶಾಸನೋಕ್ತವಾಗಿ ನಡೆದಿವೆಯೆ ಇಲ್ಲವೆ? ಸಾಧಾರಣ ಆಡಳಿತಕ್ಕೆ ಸೇರಿದ ವೆಚ್ಚಗಳನ್ನು ಮಾಡುವುದರಲ್ಲಿ ಯೋಗ್ಯ ಪದ್ಧತಿಯನ್ನು ವಿಧಿಗೆ ತಕ್ಕಂತೆ ಪ್ರಾಂತ ನಡಸಿದೆಯೆ ಇಲ್ಲವೆ? ಎಂದು ವಿಚಾರಣೆಮಾಡಿ ಅವರು ಈ ಸರಕಾರಗಳನ್ನು ಬಹು ಎಚ್ಚರಿಕೆಯಲ್ಲಿ ಇಡುತ್ತಾರೆ.

ಈ ಎಚ್ಚರಿಕೆಗಳೆಲ್ಲ ನ್ಯಾಯವೇ, ಅಗತ್ಯವೇ; ಎಲ್ಲವೂ ಸುರಕ್ಷಿತವಾಗಿ ನಡೆಯಲೆಂದು ಏರ್ಪಟ್ಟವೇ; ಆದರೂ, ಅನೇಕ ವೇಳೆ ಕೇಂದ್ರ ಸರಕಾರದ ಪ್ರಯೋಜನಕ್ಕಾಗಿ ಪ್ರಾಂತದ ಪ್ರಯೋಜನ ಬಲಿಯಾಗುವುದುಂಟು. ಪ್ರಾಂತ ಸರಕಾರಕ್ಕೆ ಬೇಕಾಗುವ ಅವಕಾಶವೂ ಅನುಕೂಲವೂ ದೊರೆಯುವಂತಾದರೆ ಏರ್ಪಾಡು ಸಾರ್ಥಕವಾಗುವುದು.

**ಹೊಸ ರಾಜ್ಯವ್ಯವಸ್ಥೆಯಲ್ಲಿ.** — ೧೯೩೭ರಿಂದ ಸ್ಥಾಪಿತವಾಗಲಿರುವ ಸಂಯುಕ್ತ ರಾಜ್ಯಾಂಗಪದ್ಧತಿಯಲ್ಲಿ ಪ್ರಾಂತಗಳಿಗೆ ಬಹುತರ ಸ್ವಾಧೀನತೆ ಬರುತ್ತದೆ. ಆಗ ಅವು ತಮ್ಮ ಹಿತವನ್ನು ಅನುಸರಿಸಿ ಕೇಂದ್ರ ಸರಕಾರದ ನಿಯಮಗಳಿಗೆ ವಿರೋಧವಿಲ್ಲದೆ ಅಭಿವೃದ್ಧಿಕಾರ್ಯಗಳನ್ನು ಕೈಕೊಳ್ಳಬಹುದು, ಸಾಲಗಳನ್ನೂ ಎತ್ತಬಹುದು. ಸ್ವಾಧೀನತೆ ಉಳಿಸಿಕೊಳ್ಳಲು ಸಹಾಯವಾಗುವಂತೆ ಪಾರ್ಲಮೆಂಟಿನವರು ಪ್ರಾಂತಗಳ ಸಾಲಗಳಲ್ಲಿ ಕೆಲವು ಭಾಗಗಳನ್ನು — ಒಟ್ಟು ೧ ಕೋಟಿ ರೂಪಾಯಿಗೆ ವಿನಾ ಮನ್ನಿಸಿದ್ದಾರೆ. ಮದರಾಸ್, ಮುಂಬೈ, ಪಂಜಾಬ್ ಪ್ರಾಂತಗಳನ್ನು ಬಿಟ್ಟು ಉಳಿದುವಕ್ಕೆ ಮೂರು ಕೋಟಿ ರೂಪಾಯಿವರೆಗೆ ಸಹಾಯದ್ರವ್ಯ ಕೊಡುವುದೆಂದು ನಿರ್ಣಯಿಸಿದ್ದಾರೆ. ಮೊದಲು ಬಿಹಾರ್ ಮುಂಬೈಗಳ ಒಳಗಿದ್ದು ನಷ್ಟವುಂಟುಮಾಡುತ್ತಿದ್ದ ಒರಿಸ್ಸಾ ಮತ್ತು ಸಿಂಧ್ ಪ್ರಾಂತಗಳನ್ನು ಅವುಗಳಿಂದ ಒಡೆದು ಪ್ರತ್ಯೇಕ ಪ್ರಾಂತಗಳನ್ನಾಗಿ ಮಾಡಿದ್ದಾರೆ. ಕೇಂದ್ರ ಸರಕಾರದವರೇ ಎತ್ತುವ ಒಂದೆರಡು ಮುಖ್ಯ ತೆರಿಗೆಗಳಲ್ಲಿ ಪ್ರಾಂತಗಳಿಗೆ ಶೇಕಡ ಇಷ್ಟು ಎಂದು ಭಾಗಕೊಡಲು ಒಪ್ಪಿರುತ್ತಾರೆ.

ಸಂಯುಕ್ತ ಅಥವಾ ಕೇಂದ್ರ ಸರಕಾರಕ್ಕೂ ಪ್ರಾಂತ ಸರಕಾರಕ್ಕೂ ಇಂಥ ಇಂಥ ಬಾಬಿನಲ್ಲಿಯೇ ವರಮಾನ ಎಂದು ನಿರ್ಣಯವಾಗಿದೆ — ವಿದೇಶಿ ಸುಂಕ; ರೈಲ್ವೆ ಶಾಖೆಯವರು ಕೊಡುವ ಚಂದಾ; ಕೇಂದ್ರ ಸರಕಾರದವರೇ ನಡಸುತ್ತಿರುವ ವಾಣಿಜ್ಯ ಶಾಖೆಗಳ ಹುಟ್ಟುವಳಿ; ಟಂಕಸಾಲೆಯ ಲಾಭ, ರಿಸರ್ವ್ ಬ್ಯಾಂಕಿನವರ ಲಾಭದಲ್ಲಿ ಒಂದು ಭಾಗ; ಉಪ್ಪಿನ ತೆರಿಗೆ; ಹೊಗೆಸೊಪ್ಪಿನ ತೆರಿಗೆ; ಕೆಲವು ಸ್ಟ್ಯಾಂಪು ತೆರಿಗೆಗಳು; ವರಮಾನದ ತೆರಿಗೆ; ಕಾರ್ಪೊರೇಷನ್ ತೆರಿಗೆ — ಮುಖ್ಯವಾಗಿ ಇವು ಕೇಂದ್ರ ಸರಕಾರಕ್ಕೆ ಸೇರತಕ್ಕವು. ಈ ತೆರಿಗೆಗಳನ್ನು ಎತ್ತುವ ಅಧಿಕಾರವೆಲ್ಲ

ಅವರದು. ಆದರೆ ಉಪ್ಪು, ಹೊಗೆಸೊಪ್ಪು ಮತ್ತು ಒಂದೆರಡು ಅಬ್ಕಾರಿ ಬಾಬಿನ ತೆರಿಗೆಗಳಲ್ಲಿ ಪ್ರಾಂತಗಳವರಿಗೆ ಸ್ವಲ್ಪ ಭಾಗ ಕೊಡಬಹುದು. ಸ್ಟಾಂಪು ತೆರಿಗೆ, ಪ್ರಯಾಣಿಕರ ಮತ್ತು ವಸ್ತುಗಳ ಸಂಚಾರದ ಮೇಲೆ ಎತ್ತುವ ತೆರಿಗೆಗಳು (Terminal taxes) ಪ್ರಾಂತಗಳಿಗೆ ಸೇರಬೇಕಾದರೂ ಕೇಂದ್ರ ಸರಕಾರಕ್ಕೆ ಬೇಕಾದಾಗ ಅವುಗಳ ಮೇಲೆ ಮೇಲ್ತೆರಿಗೆಯನ್ನು (Federal Surcharge) ಎತ್ತಬಹುದು.

ಭೂಗಂದಾಯ; ಸೇಂದಿ, ಇತರ ಮಾದಕಪದಾರ್ಥಗಳು ಮುಂತಾದ ಅಬ್ಕಾರಿಯ ಬಾಬು; ಕೆಲವು ಸ್ಟಾಂಪು ತೆರಿಗೆಗಳು; ಅರಣ್ಯ ಶಾಖೆಯ ಮತ್ತು ಪ್ರಾಂತ ವಾಣಿಜ್ಯ ಶಾಖೆಗಳ ಹುಟ್ಟುವಳಿ; ಇತರ ಒಂದೆರಡು ಚಿಲ್ಲರೆ ಬಾಬುಗಳು ಕೇವಲ ಪ್ರಾಂತಗಳಿಗೇ ಸಲ್ಲತಕ್ಕವು. ಈ ಪಟ್ಟಿಗಳಲ್ಲಿ ಕಾಣದೆ ಇರುವ ಬಾಬುಗಳೆಲ್ಲ ಸಾಧಾರಣವಾಗಿ ಪ್ರಾಂತಗಳಿಗೇ ಹೋಗುವುವಾದರೂ ಗವರ್ನರ್-ಜನರಲ್ ಅವರಿಗೆ ಸರಿತೋರಿದಾಗ ಅವುಗಳಲ್ಲಿ ಯಾವುದನ್ನೇ ಆಗಲಿ ಕೇಂದ್ರ ಸರಕಾರದ್ದೆಂದು ತೀರ್ಮಾನಿಸುವ ಅಧಿಕಾರವುಂಟು.

ವರಮಾನದ ತೆರಿಗೆಯನ್ನೂ ಸಣಬಿನ ರಫ್ತು ಸುಂಕವನ್ನೂ ಆಯಾ ಪ್ರಾಂತಗಳಿಗೇ ಸಲ್ಲಿಸಬೇಕೆಂದು ವಾದ ನಡೆದು, ನಿವ್ವಳ ವರಮಾನದ ತೆರಿಗೆಯ ಶೇಕಡ ೫೦ನ್ನು, ಕ್ರಮ ಕ್ರಮವಾಗಿ, ಕೇಂದ್ರ ಸರಕಾರದ ಹಣಸ್ಥಿತಿ ಮೇಲಾಗಿ, ರೈಲ್ವೆಯವರ ಹುಟ್ಟುವಳಿಯಿಂದ ಬರಬೇಕಾದ ಚಂದಾ ಬರುವಂತಾದಮೇಲೆ, ಸುಮಾರು ಹತ್ತು ವರ್ಷಗಳ ಕಾಲದಲ್ಲಿ ಒಂದು ಗೊತ್ತಾದ ಶೇಕಡ ಲೆಕ್ಕದಂತೆ ಪ್ರಾಂತಗಳಿಗೆ ಹಂಚಬಹುದೆಂದೂ ಸಣಬಿನ ಪ್ರಾಂತಗಳಾದ ಬಂಗಾಳ, ಅಸ್ಸಾಂ, ಬಿಹಾರ, ಒರಿಸ್ಸಾಗಳಿಗೆ ಒಂದು ಕ್ರಮದಲ್ಲಿ ಆ ಸುಂಕದ ಒಟ್ಟು ಶೇಕಡ ೬೨½ ಭಾಗವನ್ನು ಹಂಚಬಹುದೆಂದೂ ನಿರ್ಣಯವಾಗಿದೆ.

ವಾಯವ್ಯ ಪ್ರಾಂತ, ಸಿಂಧ್, ಒರಿಸ್ಸಾ, ಸಂಯುಕ್ತ ಪ್ರಾಂತಗಳು, ಅಸ್ಸಾಂ ಪ್ರಾಂತಗಳಿಗೆ ಕೇಂದ್ರ ಸರಕಾರದಿಂದ ಹಣದ ಸಹಾಯ ಕೊಡತಕ್ಕದ್ದೆಂದು ತೀರ್ಮಾನವಾಗಿದೆ.

ಇಂಗ್ಲಂಡಿನಲ್ಲಿರುವ ಇಂಡಿಯಾ ಶಾಖಾಧಿಕಾರಿಗೆ ಇಲ್ಲಿನ ಒಳಆಡಳಿತದ ಮೇಲೆ ಇನ್ನುಮುಂದೆ ಮೊದಲಿದ್ದಷ್ಟು ಅಧಿಕಾರವಿಲ್ಲದೆ ಹೋಗುವುದು.

ಆದರೂ ಹೊಸ ಏರ್ಪಾಡುಗಳ ಲೆಕ್ಕದಲ್ಲಿ ಹೊರಕ್ಕೆ ಸಲ್ಲಬೇಕಾಗುವ ಹಣವನ್ನೆಲ್ಲ ಪ್ರಾಂತ ಸರಕಾರಗಳವರೂ ಕೇಂದ್ರ ಸರಕಾರದವರೂ ಆತನಿಗೆ ಸಲ್ಲಿಸಬೇಕು. ಪೌಂಡು ಸಾಲಗಳ ಹೊರತು ಮಿಕ್ಕ ಸಾಲಗಳನ್ನು ಒಳಗೆ ಬೇಕಾದಂತೆ ಎತ್ತಬಹುದು. ಪ್ರಾಂತ ಸರಕಾರಗಳವರು ಈವರೆಗಾಗಲೇ ಸಾಲಗಾರರಾಗದಿದ್ದರೆ ಒಳಗೆ ತಮ್ಮ ಆದಾಯವನ್ನೂ ಆಸ್ತಿಗಳನ್ನೂ ಆಧಾರಮಾಡಿ, ತಮ್ಮ ಅಭಿವೃದ್ಧಿಗೆ ಬೇಕಾದಹಾಗೆ ಸಾಲವೆತ್ತಿಕೊಳ್ಳಬಹುದೆಂದೂ ಋಣಗ್ರಸ್ತರಾಗಿದ್ದಾಗ ಮಾತ್ರ ಕೇಂದ್ರ ಸರಕಾರಕ್ಕೆ ತಿಳಿಸಿ ಅವರ ಒಪ್ಪಿಕೆ ಅಥವಾ ಪೋಷಣೆಯಲ್ಲಿ ಆ ಕಾರ್ಯ ನಡಸಬೇಕೆಂದೂ ವಿಧಾಯಕವಾಗಿದೆ.

## ಇಂಡಿಯಾ ಸರಕಾರದ ಸಾಲಗಳು

ಇಂಡಿಯಾ ದೇಶದ (ಸು. ೧,೨೦೦ ಕೋಟಿ ರೂಪಾಯಿ) ಸಾಲವನ್ನು ಎರಡು ಬಗೆಯಾಗಿ ವಿಂಗಡಿಸಬಹುದು: ಒಂದು, ರೂಪಾಯಿ ಲೆಕ್ಕದಲ್ಲಿರುವ ಸಾಲ; ಇನ್ನೊಂದು, ಪೌಂಡಿನ ಲೆಕ್ಕದಲ್ಲಿರುವುದು. ರೂಪಾಯಿ ಸಾಲದಲ್ಲಿ ಬಹುಭಾಗ ಇಲ್ಲಿನದೇ; ಪೌಂಡಿನ ಸಾಲದಲ್ಲಿ ಅತಿಭಾಗ ವಿದೇಶಿ.

ಇವುಗಳೆಲ್ಲ ಹೇಗೆ ಉಂಟಾದುವು? ಎಲ್ಲದರ ವೆಚ್ಚವೂ ಈ ಸರಕಾರದ ತಲೆಯಮೇಲೆಯೇ ಬೀಳುವುದು ನ್ಯಾಯವೆ? ಸರಕಾರದ ನಿರ್ಬಲತೆಯಿಂದಲೊ, ಪ್ರಭು ಸರಕಾರದ ಒತ್ತಾಯದಿಂದಲೊ ಮಾಡಿದ ಕೋಟ್ಯಂತರ ರೂಪಾಯಿನ ಸಾಲವನ್ನೂ ಸಂಭವಿಸಿದ ನಷ್ಟವನ್ನೂ ಈ ದೇಶದವರೇ ಏಕೆ ತೆರಬೇಕು? ಈವರೆಗೆ ಮಾಡಿ ತೀರಿಸಿರುವ ನೂರಾರು ಕೋಟಿ ರೂಪಾಯಿನ ಸಾಲದ ಸಮಾಚಾರವೇನು? ಸಾಲದ ಮೂಲಕ ಸ್ಥಾಪಿಸಿರುವ ಯಾವ ಉತ್ಪತ್ತಿಕಾರ್ಯದ ಬೆಲೆ ಎಷ್ಟು? ಅವುಗಳ ಆರ್ಥಿಕ ಯೋಗ್ಯತೆ ಎಷ್ಟು? ಎಂಬ ಅಂಶಗಳನ್ನು ಇಲ್ಲಿ ವಿಚಾರಮಾಡಿಲ್ಲ.

ಉತ್ಪತ್ತಿಕರವಾದ ಅಥವಾ ಸಫಲ (Productive) ಸಾಲಗಳು ಬಹುವಾಗಿ ರೈಲ್ವೆ, ನೀರಾವರಿಕಾರ್ಯಗಳು, ತಂತಿ, ಟೆಲೆಫೋನ್ ಮುಂತಾದುವನ್ನು ಏರ್ಪಡಿಸಲು ಹುಟ್ಟಿದುವು. ನಿರುಪಯೋಗವಾದ ಸಾಲದಲ್ಲಿ ಮುಖ್ಯವಾದ ಭಾಗ:

| | | | |
|---|---|---|---|
| ೧. ಯುದ್ಧ ಸಮಯದಲ್ಲಿ ಪ್ರಭು ಸರಕಾರಕ್ಕೆ ಕೊಟ್ಟ ರೂಪಾಯಿ ದಾನ* | .. | ರೂ. ೧೫೦ | ಕೋಟಿ |
| ೨. ಡೆಲ್ಲಿಯನ್ನು ಕಟ್ಟಲು ಆದ ಖರ್ಚು | .. | ,, ೮ | ,, |
| ೩. ಸರಕಾರದ ವೆಚ್ಚಕ್ಕೆ ಆದಾಯ ಸಾಲದಿರಲು ೧೯೧೯ರಿಂದ ಮುಂದಿನ ವರ್ಷಗಳಲ್ಲಿ ಮಾಡಿದ ಸಾಲಗಳು .. | .. | ,, ೯೮ | ,, |
| ಒಟ್ಟು | .. | ,, ೨೫೬ | ,, |

ಈ ಸಾಲಗಳ ಮೇಲೆ ಬೀಳುವ ಬಡ್ಡಿಯ ಭಾರವನ್ನು ಇಳಿಸಿಕೊಳ್ಳುವುದಕ್ಕಾಗಿ ಸರಕಾರದವರು ಆಗಾಗ ಪೇಟೆಯಲ್ಲಿ ಬಡ್ಡಿಯ ದರ ಇಳಿದಾಗ ಹಳೆಯ ಸಾಲಗಳನ್ನು ಕಡಮೆ ಬಡ್ಡಿಯ ಸಾಲದ ರೂಪಕ್ಕೆ ತಿರುಗಿಸಿಕೊಂಡಿರುವರು. ಆದರೆ ಒಟ್ಟಿನಲ್ಲಿ ಶೇಕಡ ೫ಕ್ಕೆ ಏರಿ ಬಡ್ಡಿ ಕೊಟ್ಟಿರುವ ಸಂದರ್ಭಗಳೇ ಈವರೆಗೆ ಅನೇಕವೆನ್ನಬೇಕು.

**ಕಡಗಳು.**—ಕಡಗಳಲ್ಲಿ ಗೊತ್ತಾದ ಒಂದು ವಾಯಿದೆಗೆ ತೀರುವ ಕಡ, ಹಾಗೆ ತೀರದ ಕಡ ಎಂದು ಎರಡು ಬಗೆಯುಂಟು. ವಾಯಿದೆ ಹಾಕದೆ ಎತ್ತುವ ಸಾಲವೆಂದರೆ, ಒಂದು ಅವಧಿಯನ್ನು ಗೊತ್ತುಮಾಡಿ ಅದರೊಳಗಾಗಿ ತೀರಿಸುವುದಕ್ಕಾಗುವುದಿಲ್ಲವೆಂದು ಹೇಳಿ ಎತ್ತುವ ಸಾಲ. ಆ ವಾಯಿದೆ ಕಳೆದಮೇಲೆ ಸರಕಾರಕ್ಕೆ ಖುಷಿ ಬಂದಾಗ ಅನುಕೂಲವೊದಗಿದಾಗ ಆ ಸಾಲವನ್ನು ತೀರಿಸುವರು. ವಾಯಿದೆಯ ಕಡಗಳೆಂದರೆ ಗೊತ್ತಾದ ಒಂದು ತಾರೀಖಿಗೋ ಅಥವಾ ಆ ಕಾಲದಿಂದ ಹಿಡಿದು ಇನ್ನೊಂದು ಗೊತ್ತಾದ ಕಾಲದೊಳಗೋ ತೀರಿಸುವೆವು ಎಂದು ಮಾತುಕೊಟ್ಟು ಎತ್ತುವ ಸಾಲ.

ಈ ದೇಶದ ಸಾಲವನ್ನೆಲ್ಲ ಇಲ್ಲಿನವರಿಂದಲೇ ತೆಗೆಯುವ ಏರ್ಪಾಡಿದ್ದರೆ ಬಡ್ಡಿಯ ರೂಪದಲ್ಲಿ ಹೊರಗಿನವರಿಗೆ ಹೋಗುವ ಬಹುಭಾಗ ಇಲ್ಲಿಯೇ ಉಳಿಯುತ್ತಿತ್ತು. ಆದರೆ ಅನೇಕ ನ್ಯಾಯವಾದ ಕಾರ್ಯಗಳಿಗೆ —ಅಥವಾ ಸಾಲವನ್ನು ಅಲ್ಲಿ ತೆಗೆಯುವುದು ಹೆಚ್ಚು ಪ್ರಯೋಜನವೆಂದು

* ಯುದ್ಧದ ಸಂಬಂಧದಲ್ಲಿ ಈ ಸರಕಾರ ಇನ್ನೂ ಬಹಳ ಹಣ ತೆತ್ತಿದೆ.

ಕಂಡದ್ದರಿಂದ—ವಿಲಾಯಿತಿಯಲ್ಲಿ ಸಾಲವನ್ನು ತೆಗೆದು ಸಮಯವನ್ನು ದಾಟುವುದೂ ಬಂಡವಾಳವನ್ನು ಒದಗಿಸಿಕೊಳ್ಳುವುದೂ ವಾಡಿಕೆಯಾಗಿದೆ. ಅನುಕೂಲ ಹೇಗೆಯೇ ಇರಲಿ ಆ ಮಟ್ಟಿಗೆ ದೇಶದ ವರಮಾನದಲ್ಲಿನ ಒಂದು ಭಾಗವನ್ನು ಇತರರಿಗೆ ಈಡುಮಾಡುವುದು ಇಲ್ಲಿನವರಿಗೆ ಇಷ್ಟವಿಲ್ಲದಿರುವುದೂ ಸಹಜವೇ. ಅದೂ ಅಲ್ಲದೆ ಅಂತಹ ಸಾಲಗಳ ಮೇಲೆ ವರಮಾನದ ತೆರಿಗೆಯನ್ನು ಎತ್ತದಿರುವುದರಿಂದ ಸರಕಾರಕ್ಕೆ ಯಾವ ಪ್ರತಿ ಪ್ರಯೋಜನವೂ ಬಾರದಂತಾಗುವುದು. ಇಲ್ಲಿನ ಕಷ್ಟ ಇನ್ನೊಂದು: ಜನರಿಗೆ ಬ್ಯಾಂಕಿನ ವ್ಯವಹಾರದ ಬಳಕೆ ಇಲ್ಲದಿರುವುದರಿಂದಲೂ ಹಣವನ್ನು ಬಟ್ಟಿಗೆ ಹಾಕುವ ವಿಷಯದಲ್ಲಿ ಹೆಚ್ಚು ಅವಕಾಶವಾಗಲಿ ಧೈರ್ಯವಾಗಲಿ ಇಲ್ಲದಿರುವುದರಿಂದಲೂ ಹಣವುಳ್ಳ ಹಳ್ಳಿಗಾಡಿನವರಲ್ಲಿ ಅನೇಕರಿಗೆ ಸರಕಾರಿ ಸಾಲಗಳಿಗೆ ದುಡ್ಡನ್ನು ಹೇಗೆ ಸಲ್ಲಿಸಬೇಕು? ಬಡ್ಡಿಯನ್ನು ತೆಗೆದುಕೊಳ್ಳುವ ವಿಧಾನ ಯಾವುದು? ಪ್ರಾಮಿಸರಿ ನೋಟುಗಳಿಗೆ ಷರಾ ಅಥವಾ ಸಲಿಕೆಹಾಕುವುದು (Endorse) ಹೇಗೆ? ಸಾಲಪತ್ರಗಳನ್ನು ಹೊಸ ವಾಯಿದೆಗೆ ಹೇಗೆ ಮುಂದುವರಿಸುವುದು? ತಿರುಗಿಸುವುದು? ಮುಂತಾದ ಸಂಗತಿಗಳು ಇನ್ನೂ ಅಷ್ಟಾಗಿ ತಿಳಿಯವು. ಸಾಲಪತ್ರ ಆಸ್ತಿಪತ್ರಗಳ ರೂಪದಲ್ಲಿ ಹಣವನ್ನು ಬಡ್ಡಿಗೆ ಹಾಕುವ ಅಭ್ಯಾಸ ಜನರಲ್ಲಿ ವಿಶೇಷವಾಗಿ ಬೆಳೆದು ಎಲ್ಲ ದೊಡ್ಡ ಪಟ್ಟಣಗಳಲ್ಲಿಯೂ ಸ್ಟಾಕ್-ಎಕ್ಸ್‌ಛೇಂಜುಗಳು ಏರ್ಪಟ್ಟರೆ ಈ ಕೊರತೆಗಳೆಲ್ಲ ತುಂಬಿಕೊಂಡಾವು.

**ಬಿಡಿಸಾಲಗಳು.**— ಇಂಡಿಯಾ ಸರಕಾರದ ಬಿಡಿಸಾಲ ಹಲವು ರೂಪಗಳಲ್ಲಿದೆ. ಕೈಸಾಲಗಳಲ್ಲಿ ವೇಸ್ ಅಂಡ್ ಮೀನ್ಸ್ ಎಂಬ ಹೆಸರಿನ ಮುಂಗಡಗಳನ್ನು ಈವರೆಗೆ ಇಂಪೀರಿಯಲ್ ಬ್ಯಾಂಕು ಸರಕಾರಕ್ಕೆ ಒದಗಿಸುತ್ತಿತ್ತು; ಈಗ ರಿಸರ್ವ್ ಬ್ಯಾಂಕು ಕೊಡುತ್ತದೆ. ಖಾಸಗಿ ಜನರೂ ವರ್ತಕರೂ ಬ್ಯಾಂಕುಗಳೂ ತಮ್ಮ ಅನುಕೂಲಕ್ಕೆ ತಕ್ಕಂತೆ ಖಜಾನೆ ಹುಂಡಿಗಳನ್ನು ಕೊಳ್ಳುವ ಅವಕಾಶವಿದೆ. ಅವುಗಳನ್ನೆತ್ತುವಾಗ ಹೆಸರಿಗೆ ಹುಂಡಿಯಲ್ಲಿ ಬರೆದಿರುವ ದರಕ್ಕಿಂತ ಸ್ವಲ್ಪ ಕಡಮೆಗೆ ಕೊಳ್ಳಲು ಅವಕಾಶವಿರುತ್ತದೆ (ಎಂದರೆ ೧,೦೦೦ ರೂಪಾಯಿ ಹುಂಡಿಯನ್ನು ಆ ಕಾಲದ ಬಡ್ಡಿಯ ಧಾರಣೆಗೆ ತಕ್ಕಂತೆ, ಉದಾ: ೯೯೭–೯೮–೯೯ಕ್ಕೆ ಕೊಳ್ಳುವುದು

ವಾಡಿಕೆ). ಜನರು ಕೊಡಬೇಕಾದ ಹಣಕ್ಕೂ ಹುಂಡಿಯ ಹೆಸರಿನಲ್ಲಿರುವ ಹಣಕ್ಕೂ ಇರುವ ಅಂತರವೇ ಅದನ್ನು ಕೊಳ್ಳುವವರಿಗೆ ಸಿಕ್ಕುವ ವರಮಾನ. ಯಾರಿಂದ ಅತಿ ಅಗ್ಗವಾಗಿ ಹಣವನ್ನು ಸ್ವೀಕರಿಸಬಹುದೋ ಅಂಥವರಿಂದ ಮಾತ್ರ ಸರಕಾರ ಹಣವನ್ನು ತೆಗೆದುಕೊಳ್ಳುವುದು. ಈ ಮೂಲಕವಾಗಿ ಸರಕಾರದವರು ಪೇಟೆಯಲ್ಲಿನ ಬಡ್ಡಿಯ ದರ ಯಾವ ರೀತಿಯಲ್ಲಿದೆಯೆಂದು ಸ್ಪಷ್ಟವಾಗಿ ತಿಳಿದುಕೊಳ್ಳುವುದಕ್ಕೂ ಹಣದ ಪುಷ್ಟಿ ಹೇಗಿದೆ ಎಂಬುದನ್ನು ತಿಳಿಯುವುದಕ್ಕೂ (Tap Rate) ಇದು ಸಹಾಯಮಾಡುತ್ತದೆ. ಈ ಹುಂಡಿಗಳನ್ನು ಸಾಧಾರಣವಾಗಿ ೫,೦೦೦ ರೂಪಾಯಿಗೆ ಕಡಮೆಯ ಮೊತ್ತಕ್ಕೆ ಮಾರುವುದಿಲ್ಲ. ಪೋಸ್ಟಾಫೀಸ್ ಕ್ಯಾಷ್ ಸರ್ಟಿಫಿಕೇಟುಗಳ ಮಾರಾಟ (ಈಗ ಒಟ್ಟು ಸುಮಾರು ೬೦ ಕೋಟಿ ಇದೆ) ಸಾಧಾರಣರಾದ ಸಣ್ಣ ಬಂಡವಾಳಸ್ಥರೂ ಹಣವನ್ನು ಹೂಡಲೆಂಬ ಉದ್ದೇಶದಿಂದ — ಕಡೆಗೆ ೧೦ ರೂಪಾಯಿನ ಮೊತ್ತಕ್ಕೆ ಕೂಡ — ನಡೆಯುವುದು. ಖಜಾನೆ ಅಥವಾ ಸರಕಾರದ ಸಾಲಪತ್ರಗಳನ್ನು (Bonds) ೩, ೫, ೧೦ ವರ್ಷಗಳ ವಾಯಿದೆ ಹಾಕಿ ಮಾರಿಸುವರು. ಗೊತ್ತಾದ ವಾಯಿದೆಯ ಡಿಬೆಂಚರುಗಳನ್ನು ಏರ್ಪಡಿಸಿ ಆ ವಾಯಿದೆ ಕಳೆದಮೇಲೆ ಅವನ್ನು ತೀರಿಸುವ ಒಪ್ಪಂದ ಮಾಡಿಕೊಳ್ಳುವರು. ಇಷ್ಟು ಕಾಲದ ಒಳಗಾಗಿ ಅದನ್ನು ಹಿಂದಿರುಗಿಸುವ ಸಂಭವವಿಲ್ಲ ಎಂದು ಹೇಳಿ ಡಿಬೆಂಚರ್ ಸಾಲಗಳನ್ನು ಎತ್ತಿರುವುದೇ ಬಹಳ.*

ಇಲ್ಲಿನ ಸರಕಾರಕ್ಕೆ ಬೇಕಾದಾಗ ಹೊರಗಿನ ಯಾವ ಅಧಿಕಾರಿಯ ಅಪ್ಪಣೆಯ ಅವಶ್ಯಕತೆಯೂ ಇಲ್ಲದೆ ರೂಪಾಯಿ ಲೆಕ್ಕದಲ್ಲಿ ಸಾಲವನ್ನು ತೆಗೆಯಬಹುದು. ಇಂಗ್ಲೆಂಡಿನಲ್ಲಿ ಪೌಂಡು ಸಾಲವನ್ನು ಎತ್ತಬೇಕಾದರೆ ಪಾರ್ಲಮೆಂಟಿನ ಒಪ್ಪಿಗೆ ಬೇಕು.† ಇದುವರೆಗೂ ಇಂಪೀರಿಯಲ್ ಬ್ಯಾಂಕು

---

* ಇವೇ ಅಲ್ಲದೆ ಪೋಸ್ಟ್ ಆಫೀಸ್ ಸೇವಿಂಗ್ಸ್ ಬ್ಯಾಂಕುಗಳ ಹಣ (ಸುಮಾರು ೫೦ ಕೋಟಿ), ಪ್ರಾವಿಡೆಂಟ್ ಫಂಡುಗಳು (ಸುಮಾರು ೮೦ ಕೋಟಿ), ಸಾಲದ ಇಳಿಮಾನದ ಹಣ (ಸುಮಾರು ೧೫ ಕೋಟಿ), ಪ್ರಾಂತಗಳ ಶಿಲ್ಕು (ಸುಮಾರು ೫ ಕೋಟಿ)— ಒಟ್ಟು ಸುಮಾರು ೧೫೦ ಕೋಟಿ ರೂಪಾಯಿ ಹಣ ಸರಕಾರದ ವೆಚ್ಚಗಳಿಗೆ ದೊರೆಯುತ್ತದೆ.

† ಈ ಒಪ್ಪಿಕೆಯು ವಾಡಿಕೆ ಇರುವುದರಿಂದ ಬ್ರಿಟಿಷ್ ಸರಕಾರದವರು ಇಂಡಿಯಾ ದೇಶದ ಪೌಂಡು ಸಾಲಪತ್ರಗಳನ್ನು ಟ್ರಸ್ಟೀ ಪತ್ರಗಳ ಗುಂಪಿಗೆ ಸೇರಿಸಿಕೊಂಡಿದ್ದಾರೆ. ಎಂದರೆ, ಟ್ರಸ್ಟೀ ಕಂಪನಿಗಳು ಇಂತಹ ಸಾಲಪತ್ರಗಳ ಮೇಲೆ ತಮ್ಮ ಹಣವನ್ನು ಬಡ್ಡಿಗೆ ಹಾಕಬಹುದೆಂಬ ಅವಕಾಶ ಕೊಟ್ಟಿದ್ದಾರೆ.

ಮಾಡುತ್ತಿದ್ದ ಸರಕಾರ ಸಾಲದ ಕೆಲಸಗಳನ್ನು ಇನ್ನುಮುಂದೆ ರಿಸರ್ವ್ ಬ್ಯಾಂಕಿನವರು ತಮ್ಮ ಪಬ್ಲಿಕ್ ಡೆಟ್ ಶಾಖೆಯ ಮೂಲಕ ನಡಸುವರು.

## ಸರಕಾರದ ವ್ಯಾಪಾರನೀತಿ

ಇಲ್ಲಿನ ಕೈಗಾರಿಕೆ ಇತರ ದೇಶಗಳ ಪೈಪೋಟಿಯಿಂದ ರಕ್ಷಿತವಾಗ ದಿದ್ದರೆ ಉಳಿಯಲಾರದೆಂಬ ಅಭಿಪ್ರಾಯದಿಂದ ಆಮದಾಗುವ ಕೆಲವು ವಸ್ತುಗಳ ಮೇಲೆ ಸರಕಾರದವರು ಆಮದು ತೆರಿಗೆ ಎತ್ತುವರು. ಒಳಗಿನ ಕೈಗಾರಿಕೆಗೇ ಮೂಲಸಾಮಗ್ರಿಯಾಗಿ ಉಳಿಯಲೆಂಬ ಉದ್ದೇಶದಿಂದ ಕೆಲವು ಪದಾರ್ಥಗಳ ಮೇಲೆ ರಫ್ತು ಸುಂಕವನ್ನು ಹಾಕುವರು. ಇಲ್ಲಿ ಏರ್ಪಟ್ಟು ನಡೆಯುತ್ತಿರುವ ಕೆಲವು ಕೈಗಾರಿಕೆಗಳಿಗೆ ಹಣದ ನೆರವನ್ನೂ ಇತರ ಬಗೆಯ ಪ್ರೋತ್ಸಾಹವನ್ನೂ ಕೊಡುವರು. ಎಷ್ಟು ಬಗೆಯಾಗಿ ಎಷ್ಟು ಪ್ರೀತಿ ಶ್ರದ್ಧೆಗಳಿಂದ ಸ್ವತಂತ್ರವಾದ ಸ್ವದೇಶಿ ಸರಕಾರವೊಂದು ಕೊಡಬಹು ದಾಗಿತ್ತೊ ಅಷ್ಟು ಶ್ರದ್ಧೆ ಪ್ರೀತಿಗಳಿಂದ ರಕ್ಷಣೆ ಪೋಷಣೆ ದೊರೆಯುತ್ತಿಲ್ಲ ವೆಂದು ಹೇಳಿದರೂ ಈಗೀಗ ಸ್ವಲ್ಪಮಟ್ಟಿಗೆ ನೆರವು ದೊರೆಯುತ್ತಿದೆ. ಕೆಲವು ವೇಳೆ ಇಲ್ಲಿನ ಕೈಗಾರಿಕೆಗೆ ಉತ್ತೇಜನ ದೊರೆಯಲೆಂದು ತಮ್ಮ ಉಪಯೋಗಕ್ಕೆ ಬೇಕಾಗುವ ಆ ಪದಾರ್ಥಗಳನ್ನು ಇಲ್ಲಿನ ಬೆಲೆಗೇ ಕೊಂಡು ಅವುಗಳ ತಯಾರಿಕೆಗೂ ಬೆಳವಣಿಗೆಗೂ ತಮ್ಮ ಕೈಯಲ್ಲಾದ ಸಹಾಯ ವನ್ನು ಮಾಡುವರು. ಆ ಮಟ್ಟಿಗೆ ಆ ಪದಾರ್ಥಗಳಿಗೆ ಗೊತ್ತಾದ ಪೇಟೆಯೂ ಗಿರಾಕಿಯೂ ದೊರೆತಂತಾಗಿ ಏಳಿಗೆಗೆ ಅವಕಾಶವಾಗುವುದು. ಅನೇಕ ವೇಳೆ ಇಲ್ಲಿಗೆ ಪದಾರ್ಥಗಳನ್ನು ಆಮದುಮಾಡಿಕೊಳ್ಳಬೇಕಾಗಿರು ವಾಗ ಇಂಗ್ಲಂಡಿನ ದರಗಳಿಗೂ ಇತರ ದೇಶದವರ ದರಗಳಿಗೂ ವ್ಯತ್ಯಾಸ ವಿದ್ದರೆ ಯಾವುದನ್ನು ಅಗ್ಗವಾಗಿ ಕೊಳ್ಳಬಹುದೊ ಅದನ್ನು ಎಲ್ಲಿಂದ ಬೇಕಾದರೆ ಅಲ್ಲಿಂದ ಆಮದುಮಾಡಿಕೊಳ್ಳುವ ಅಧಿಕಾರ ತತ್ವದಲ್ಲಿ ಇಂಡಿಯಾ ಸರಕಾರಕ್ಕೆ ದೊರೆತಿದೆ.

**ಸುಂಕದ ಸಮಿತಿ.**—ವ್ಯಾಪಾರ ಮತ್ತು ಸುಂಕದ ನೀತಿಯನ್ನು ವಿಮರ್ಶಿಸಿ ರಕ್ಷಣೆ ಪೋಷಣೆಗಳ ಏರ್ಪಾಡನ್ನು ಮಾಡಬೇಕಾದುದು ಅಗತ್ಯವೆ? ಅಗತ್ಯವಿದ್ದರೆ ಯಾವ ಕೈಗಾರಿಕೆಗಳಿಗೆ ಹೇಗೆ ಮಾಡಬೇಕು?

ಎಂಬುದನ್ನು ಪರ್ಯಾಲೋಚಿಸಿ ಸಲಹೆಯನ್ನು ಕೊಡಲು (೧೯೨೧–೨೨ರಲ್ಲಿ) ಒಂದು ಸುಂಕದ ಸಮಿತಿ ಏರ್ಪಟ್ಟಿತು.*

"ಯಾವ ಯಾವ ಕೈಗಾರಿಕೆಗೆ ರಕ್ಷಣೆ ಬೇಕೋ ಅದರ ಚಾಲಕರು ಸರಕಾರಕ್ಕೆ ದರಖಾಸ್ತು ಹಾಕಿಕೊಳ್ಳಬೇಕು; ಅದನ್ನು ಪರೀಕ್ಷಿಸಿ ತಮ್ಮ ಅಭಿಪ್ರಾಯವನ್ನು ತಿಳಿಸಲು ಟ್ಯಾರಿಫ್ ಬೋರ್ಡ್ ಎಂಬ ಒಂದು ಮಂತ್ರ ಮಂಡಲ ಏರ್ಪಡಬೇಕು; ಅದರಲ್ಲಿ ಸರಕಾರ ದವರಿಂದ ನಿಯಮಿತರಾದ ಮೂವರು ವಿದ್ವಾಂಸರಿರಬೇಕು; ಅವರು ಈ ರಕ್ಷಣೆಯನ್ನು ಯಾವ ರೀತಿ ಕೊಡಬೇಕು ಎಂಬುದರ ವಿಚಾರ ದಲ್ಲಿಯೂ ಈವರೆಗೆ ಕೊಟ್ಟಿರುವ ರಕ್ಷಣೆ ಯಾವ ರೀತಿ ಕಾರ್ಯಕಾರಿ ಯಾಗಿದೆ, ಮುಂದಕ್ಕೆ ಹೇಗೆ ಮಾಡಬೇಕು ಎಂಬ ಅಂಶಗಳಲ್ಲಿಯೂ ಸರಕಾರಕ್ಕೆ ಸಲಹೆಯನ್ನು ಕೊಡಬೇಕು; ಈ ಸಂಬಂಧದಲ್ಲಿ,—

(೧) ಕೈಗಾರಿಕೆಗೆ ಸಹಜವಾದ ಅನುಕೂಲಗಳಿವೆ;

(೨) ಸರಕಾರದ ಸಂರಕ್ಷಣೆಯಿಲ್ಲದಿದ್ದರೆ ಅದು ಖಂಡಿತ ಏಳಿಗೆಗೆ ಬರಲಾರದು;

(೩) ಇಂತಹ ಪೋಷಣೆಯಲ್ಲಿ ಕೆಲವು ಕಾಲ ಬೆಳೆದರೆ ಆಮೇಲೆ ಸರಕಾರದವರು ಸಹಾಯವನ್ನು ನಿಲ್ಲಿಸಿದರೂ ಹೊರಗಿನ ಪೈಪೋಟಿಯನ್ನು ಎದುರಿಸಿ ಜಯಿಸಿ ಸ್ವಾಧೀನವಾಗಿ ನಿಂತು ಕೈಗಾರಿಕೆ ಬದುಕಬಲ್ಲುದು

ಎಂದು ಗೊತ್ತಾದರೆ, ಅಂತಹ ಕೈಗಾರಿಕೆಗೆ ರಕ್ಷಣೆ ಕೊಡತಕ್ಕದ್ದು" ಎಂದು ಗೊತ್ತುಮಾಡಿದರು. ಈ ಮಂಡಲ ಸ್ಥಾಪಿತವಾದ ೧೯೨೪ರಿಂದ ಈವರೆಗೆ ಅನೇಕ ದರಖಾಸ್ತುಗಳನ್ನು ಪರಿಶೀಲಿಸಿ ರಕ್ಷಣೆಗೆ ಶಿಫಾರಸುಗಳನ್ನು ಮಾಡಿದೆ. ಕೆಲವಕ್ಕೆ ಆಮದು ತೆರಿಗೆಗಳ ಸಹಾಯ, ಕೆಲವಕ್ಕೆ ಒಳಗೇ ಇತರ ಬಗೆಯ ಹಣದ ನೆರವು—ಹೀಗೆ ಸರಕಾರದಿಂದ ಸಹಾಯ ದೊರೆತಿದೆ. ಆದರೆ ಈ ಮಂಡಲಿಯ ಸಲಹೆಗಳನ್ನು ನಡಸಿಕೊಡಲೇ ಬೇಕೆಂಬ ಕಡ್ಡಾಯವಾದ ನಿರ್ಬಂಧವನ್ನು ಸರಕಾರದವರು ಇಟ್ಟುಕೊಂಡಿಲ್ಲ. ಕೊಡುವ ರಕ್ಷಣೆ ಸಾಕಾಗದೆ ಪ್ರಯೋಜನ ಮಿತವಾದುದೂ ಉಂಟು. ಎಲ್ಲಕ್ಕೂ ಮೇಲಾಗಿ

* ೧೯೩೮ರಲ್ಲಿ ಅದನ್ನು ತೆಗೆದುಹಾಕಿದರು.

ಅಟ್ಟಾವಾ ಒಪ್ಪಂದವೆಂಬ ಒಡಂಬಡಿಕೆಯ ಮೇರೆಗೆ ಬ್ರಿಟಿಷ್ ಚಕ್ರಾಧಿಪತ್ಯದ ಒಳಗೆ ಸುಂಕದ ಸೌಲಭ್ಯದ ಮೂಲಕವೂ ವ್ಯಾಪಾರ ಸೌಕರ್ಯಗಳ ಕಲ್ಪನೆಯ ಮೂಲಕವೂ ಒಂದೊಂದು ಭಾಗವೂ ಇನ್ನೊಂದರೊಡನೆ ಸಹಕರಿಸತಕ್ಕದ್ದೆಂಬ ನಿಯಮ ಏರ್ಪಟ್ಟಿತು. ಇಂಗ್ಲೆಂಡ್ ಜಪಾನು ಗಳೊಡನೆ ಬೇರೆ ಬೇರೆ ಒಪ್ಪಂದಗಳೂ ಆದವು. ಆದ್ದರಿಂದ ರಕ್ಷಣೆಯ ಪ್ರಯೋಜನ ತೀರ ಕಡಮೆಯಾಯಿತು.

**ವಿದೇಶಿ ಬಂಡವಾಳ.**—ವಿದೇಶಿ ಬಂಡವಾಳ ಇಲ್ಲಿಗೆ ಬಂದಿರುವುದರ ಫಲವೇನು?—ಮುಂದೆ ಅದನ್ನು ತರಿಸಿಕೊಳ್ಳಬೇಕೆ ಬೇಡವೆ? ಬೇಕೆಂದರೆ ಯಾವ ಷರತ್ತುಗಳ ಮೇಲೆ ತರಿಸಿಕೊಳ್ಳಬೇಕು ಎಂಬುದು ಮುಂದಿನ ಪ್ರಶ್ನೆ. ಈಗ ಸುಮಾರು ೮೦೦—೧,೦೦೦ ಕೋಟಿ ರೂಪಾಯಿಗಳ ವಿದೇಶಿ ಬಂಡವಾಳ ಸರಕಾರಿ ಸಾಹುಕಾರಿ ಪತ್ರಗಳಲ್ಲಿ ಬಡ್ಡಿಗೂ ಉತ್ಪತ್ತಿಗೂ ಹೂಡಿದೆ. ಈ ಹಣದ ಮೇಲೆ ೫% ರಂತೆ ಬಡ್ಡಿ ಎಣಿಸಿದರೂ ವರ್ಷ ಒಂದಕ್ಕೆ ೪೦—೫೦ ಕೋಟಿ ರೂಪಾಯಿ ವಿದೇಶೀಯರ ಕೈಗೆ ಹೋಗುವುದು. ಆ ಹಣ ವನ್ನು ಅವರು ತಮ್ಮ ದೇಶಕ್ಕೆ ತರಿಸಿಕೊಂಡರೆ ಇಲ್ಲಿನ ಜನರಿಗಾಗಲಿ ಪೇಟೆ ಗಾಗಲಿ ವರ್ತಕತನಕ್ಕಾಗಲಿ ಉಪಯೋಗವಿಲ್ಲವಾಗುವುದು. ಸರಕಾರಕ್ಕೆ ಅದರಮೇಲೆ ಬಹು ವೇಳೆ ವರಮಾನದ ತೆರಿಗೆ ದೊರೆಯದು. ಆ ಮೊಬಲ ಗನ್ನು ಸಲ್ಲಿಸುವಾಗ ಮನೆವಾರ್ತೆಯ ಖರ್ಚುಗಳು (Home Charges) ಎಂದು ಹಿಂದೆ ವಿವರಿಸಿದ ಮೊತ್ತದ ಜೊತೆಗೆ ಮತ್ತಷ್ಟು ಸೇರಿ ನಾಣ್ಯದ ದರವನ್ನು ಆ ಮಟ್ಟಿಗೆ ಸಮಗೆ ವಿರೋಧಮಾಡುವುದು. ಅಥವಾ, ಆ ಹಣ ವನ್ನು ಇಲ್ಲಿಯೇ ಅವರು ಪುನಃ ಬಡ್ಡಿಗೆ ಹೂಡಿಯಾರು;—ಸರಕಾರದ ಸಾಲಪತ್ರಗಳನ್ನೋ, ಕಂಪನಿಗಳ ಡಿಬೆಂಚರನ್ನೋ ಕೊಂಡಾರು: ಆ ಮಟ್ಟಿಗೆ ಆಗ ದೇಶದ ವರಮಾನವೂ ಆಸ್ತಿಗಳೂ ಅವರಿಗೆ ಅಡವಾದಂತೆಯೇ ಲೆಕ್ಕ; ಬಡ್ಡಿಗೆ ಬಡ್ಡಿ ಮರಿಯಿಕ್ಕಿ ಬೆಳೆಯುವುದು. ಇತರ ಯಾವ ಬಗೆಯ ಜವಾಬ್ದಾರಿಯನ್ನೂ ತಲೆಯ ಮೇಲೆ ಹೊರದೆ, ಮೈ ಅಲುಗಿಸದಂತೆ, ಕುಳಿತ ಕಡೆಯಿಂದ ಹೊರಗಿನವರು ಈ ಹೆಚ್ಚು ಹಣವನ್ನು ಸಂಪಾದಿಸಿಕೊಳ್ಳುವರು. ಸಾಮಾನ್ಯವಾಗಿ ಇತರ ಕಡೆಗಳಿಗಿಂತಲೂ ಈ ದೇಶದಲ್ಲಿ ಬಡ್ಡಿಯ ದರ ಹೆಚ್ಚಾಗಿಯೇ ಇರುವುದರಿಂದಲೂ ಸರ್ವಪ್ರಕಾರದಿಂದಲೂ ಬ್ರಿಟಿಷ್ ಬಂಡ

ವಾಳಸ್ಥರ ಭದ್ರತೆಯನ್ನು ಬ್ರಿಟಿಷ್ ಸರಕಾರ ಕಾಪಾಡುವುದೆಂಬ ನೆಚ್ಚಿಕೆಯಿರುವುದರಿಂದಲೂ ಇಲ್ಲಿನ ವ್ಯಾಪಾರ ಕೈಗಾರಿಕೆ ಪೇಟೆಗಳ ವಿಚಾರದಲ್ಲಿ ಹೊರಗಿನವರಿಗೆ ನಂಬಿಕೆಯಿರುವುದರಿಂದಲೂ ಹೊರಗಿಂದ ಬರಬಲ್ಲ ಹಣದ ಪ್ರವಾಹಕ್ಕೆ ತಡೆಯಿಲ್ಲವೆನ್ನಬಹುದು. ವಿದೇಶಿ ಬಂಡವಾಳಸ್ಥರು ಕಂಪನಿಗಳಿಗೂ ಕೈಗಾರಿಕೆಗಳಿಗೂ ಬಂಡವಾಳವನ್ನೊದಗಿಸಿದರೆಂದರೆ, ಆಗ ಹಣದ ಮೇಲಿನ ಬಡ್ಡಿಯ ಜೊತೆಗೆ ಲಾಭವೂ ಅವರ ಕೈಸೇರುವುದು. ಕಂಪನಿ ಕೈಗಾರಿಕೆಗಳಲ್ಲಿ ಅವರ ಪ್ರಭಾವ ಹೆಚ್ಚುವುದು. ಅವು ಲಾಭಕ್ಕೆ ನಡೆಯುವಂತೆ ಅವುಗಳ ಯಂತ್ರ ಅವರಿಗೆ ಅಧೀನವಾಗುವುದು. ಅಲ್ಲಿನ ಮುಖ್ಯಾಧಿಕಾರಿಗಳೂ ಚಾಲಕರೂ ನಿಪುಣ ಕಾಮಗಾರರೂ — ವಿಶೇಷವಾಗಿ, ಹೆಚ್ಚು ಸಂಬಳವನ್ನು ತಿನ್ನುವ ಎಲ್ಲರೂ — ವಿದೇಶೀಯರಾಗುವುದೇ ಹೆಚ್ಚು. ಸಣ್ಣ ಕೂಲಿ ನೌಕರಿಗಳು ಮಾತ್ರ ಸಾಧಾರಣವಾಗಿ ದೇಶೀಯರಿಗೆ ಸಿಕ್ಕುವುವು. ಎಂದರೆ ಕೂಲಿ, ದುಡಿತ ಇಲ್ಲಿನವರ ಭಾಗ; ಬಡ್ಡಿ, ಲಾಭ, ಹೆಚ್ಚು ಸಂಬಳ, ಅಧಿಕಾರ, ಪ್ರಭುತ್ವ ಎಲ್ಲಾ ಅವರ ಭಾಗ. ಇದಲ್ಲದೆ ಅವರ ಕೈಗಾರಿಕೆಗಳಿಗೆ ಹೂಡುವುದೆಲ್ಲ ದೊಡ್ಡ ಬಂಡವಾಳ ಬೇಕಾಗುವ ಯಂತ್ರೋದ್ಯೋಗ; ಹೆಚ್ಚು ಜನ ಕೆಲಸಗಾರರ ಮೂಲಕ ಹೆಚ್ಚು ಪರಿಮಾಣದಲ್ಲಿ ಮಾಡುವ ಕೆಲಸ. ಅವಕ್ಕೆ ಅವರ ಬಗೆಯ ನಿಪುಣತೆಯೇ ಆವಶ್ಯಕ. ಕಡೆಗೆ ಅವರ ಯಂತ್ರಗಳನ್ನು ನಡೆಸುವ ವಿಧಾನ ಕೂಡ ಇಲ್ಲಿನವರಿಗೆ ತಿಳಿಯುವಹಾಗಿರುವುದಿಲ್ಲ. ಅವುಗಳ ರಚನೆಯು ತಿಳಿದಿರುವುದಿಲ್ಲ; ಕೆಟ್ಟ ಭಾಗವನ್ನು ಸರಿಪಡಿಸಬೇಕೆಂದರೂ ಹಲವು ವೇಳೆ ಅವರೇ ಬರಬೇಕು; ಯಂತ್ರದ ಭಾಗಗಳನ್ನು ಅವರೇ ಕಳುಹಿಸಿಕೊಡಬೇಕು; ಇಲ್ಲವಾದರೆ ಯಂತ್ರಗಳನ್ನು ಪುನಃ ಅವರ ದೇಶಕ್ಕೇ ಕಳುಹಿಸಿ ಸರಿಮಾಡಿಸಬೇಕು. ಇನ್ನೂ ಈ ದೇಶದಲ್ಲಿ ಅಂತಹ ಕಾರ್ಯದಕ್ಷತೆಯಾಗಲಿ ಸಂವಿಧಾನ ಕೌಶಲವಾಗಲಿ ಸಾಕಾದಷ್ಟು ಇಲ್ಲವಾದ್ದರಿಂದ ನಿಪುಣರಾದ ಅವರ ಕಾರ್ಯಕಾರಿಗಳಿಗೇ ಗಿರಾಕಿ; ಹೆಚ್ಚು ಸಂಬಳ. ಎಂದರೆ ಆ ದೇಶದ ಜನರಿಗೇ ಇಲ್ಲಿನ ಮೇಲುದ್ಯೋಗಗಳೆಲ್ಲ; ಅವರ ದೇಶದ ಯಂತ್ರಗಳಿಗೇ ಗಿರಾಕಿ; ಅವರ ಕೈಗಾರಿಕೆಗೇ ಪೇಟೆ. ಈ ಯಂತ್ರ ಕೈಗಾರಿಕೆಗಳಿಂದ ಹೆಚ್ಚು ಪ್ರಯೋಜನ ಅವರ ದೇಶಕ್ಕೆ. ಅವು ಸ್ವದೇಶಿ ಸಂಘಗಳಿಗೆ ಪೈಪೋಟಿ ನಿಂತರೆ ಸ್ವದೇಶಿ

ಪ್ರಯತ್ನಕ್ಕೂ ಪ್ರಾಣಕ್ಕೂ ಊನ ಬರುವ ಸಂಭವವೇ ಹೆಚ್ಚು. ವಿದೇಶೀಯರ ಸಂಪಾದನೆಯಲ್ಲಿ ಬಹು ಭಾಗ ಅವರ ದೇಶಕ್ಕೆ ಸಾಗುತ್ತದೆ, ಅಲ್ಲಿ ವೆಚ್ಚವಾಗುತ್ತದೆ; ಅವರ ಬ್ಯಾಂಕುಗಳಲ್ಲಿ ಡಿಪಾಸಿಟ್ ಆಗುತ್ತದೆ. ಅವರಿಂದ ಚಾಲಿತವಾದ ಕಂಪನಿಗಳ ಬಂಡವಾಳವಾಗುತ್ತದೆ. ಅವರು ಕೊಳ್ಳುವ ಪದಾರ್ಥಗಳಲ್ಲಿಯೂ ಅವರ ದೇಶದಿಂದ ತರಿಸಿದ ಆಮದು ಪದಾರ್ಥಗಳಿಗೇ ಗಿರಾಕಿ. ಅವರ ಮಕ್ಕಳ ವಿದ್ಯಾಭ್ಯಾಸ ಅವರ ದೇಶದಲ್ಲಿ. ಸಂಪಾದನೆ ನಡೆಯುವವರೆಗೂ ಅವರು ಇಲ್ಲಿದ್ದು ಆದಷ್ಟು ಹಣ ಮಾಡಿಕೊಂಡು ದೇಶಕ್ಕೆ ಹಿಂದಿರುಗಿಹೋಗಿ ವಿಶ್ರಾಂತಿಪಡೆಯುವರು. ಅನೇಕ ವೇಳೆ ಸರಕಾರದ ಒತ್ತಾಸೆ, ಬೆಂಬಲ, ಪ್ರೋತ್ಸಾಹ, ಪ್ರಸನ್ನತೆ ಇವರಿಗಿರುವಷ್ಟು ದೇಶೀಯರಿಗೆ ದೊರೆಯುವುದಿಲ್ಲ. ರಾಜಕೀಯ ಪ್ರಪಂಚದಲ್ಲಿಯೂ ಸಾಮಾಜಿಕ ವ್ಯವಹಾರದಲ್ಲಿಯೂ ಅವರಿಂದ ಒಂದು ಪ್ರತ್ಯೇಕ ವರ್ಗವೇರ್ಪಡುತ್ತದೆ. ಜೊತೆಗೆ ದೇಶದ ಸ್ವಾಧೀನತೆಗೂ ಸೌಹಾರ್ದಕ್ಕೂ ವಿರೋಧವಾದ, ದೇಶೀಯವಲ್ಲದ ವಿಷಮ ಪ್ರಭಾವ ಹುಟ್ಟುವುದೂ ಸಾಮಾನ್ಯ.

**ಪ್ರಯೋಜನ.**—ಈ ದುಷ್ಫಲಗಳಿಗೆಲ್ಲಾ ಪ್ರತಿಯಾಗಿ ಪ್ರಯೋಜನಗಳೂ ಉಂಟು. ಈ ದೇಶದಲ್ಲಿ ದೊಡ್ಡ ಕೈಗಾರಿಕೆಗಳ ಏಳಿಗೆಯಾಗಬೇಕಾದರೆ* ಹೆಚ್ಚು ಬಂಡವಾಳ ಬೇಕು, ಯಂತ್ರ ಸಹಾಯ ಬೇಕು, ಚಾಲಕಶಕ್ತಿ ಬೇಕು, ಕಾರ್ಯನಿಪುಣತೆ ಬೇಕು. ಇವು ನಮಗೆ ಸಾಕಾಗುವಷ್ಟು ಈಗ ದೇಶದ ಒಳಗೇ ಒದಗುತ್ತಿಲ್ಲ. ಹೊರಗಡೆಯವರು ಇವನ್ನು ಒದಗಿಸಬಲ್ಲರು. ಆ ಯಂತ್ರಗಳು ಇಲ್ಲಿ ತಯಾರಾಗಬೇಕಾದರೆ ಇನ್ನೂ ಒಂದೆರಡು ದಶಮಾನಗಳ ಶಾಸ್ತ್ರ ಶಿಕ್ಷಣವೂ ಯಂತ್ರ ನಿರ್ಮಾಣ ಕೌಶಲವೂ ಬೆಳೆದುಬರಬೇಕು. ಆ ನಿಪುಣತೆ ನಮ್ಮವರಿಗೆ ಬರುವವರೆಗೂ ಆ ಯಂತ್ರಗಳನ್ನು ನಾವೇ ತಯಾರುಮಾಡಿಕೊಳ್ಳುವವರೆಗೂ ಅವರನ್ನೂ ಅವನ್ನೂ ಇಲ್ಲಿಗೆ ಬರಮಾಡಿಕೊಂಡ ಹೊರತು ನಿಸ್ತಾರವಿಲ್ಲ. ಆ ವಿಧಾನಗಳನ್ನು ಕಲಿಯಬೇಕಾಗಲಿ ಆ ಶಾಸ್ತ್ರ ಪದ್ಧತಿಯ ಪರಿಚಯವಾಗ

* ಇಲ್ಲಿ ಪೂರ್ತಿ ಯಂತ್ರಾಲಯ ಮತ್ತು ದೊಡ್ಡ ಯಂತ್ರಗಳಿಂದ ಚಾಲಿತವಾದ ಕೈಗಾರಿಕೆಗಳ ವಿಚಾರವನ್ನು ಮಾತ್ರ ಹೇಳುತ್ತಿದೆ. ಆ ಬಗೆಯ ನಾಗರಿಕತೆ ಬೇಕೆ ಬೇಡವೆ? ಸರಿಯೆ ಅಲ್ಲವೆ ಎಂಬ ವಿಚಾರ ಪ್ರಕೃತವಲ್ಲ.

ಬೇಕಾಗಲಿ ಅವರ ಮೂಲಕವೇ ಆಗಬೇಕು. ಆ ಬಂಡವಾಳ ದೇಶದೊಳಕ್ಕೆ ಬಂದರೆ ನವನಾಗರಿಕ ಕಾರ್ಯವಿಧಾನ ಕೌಶಲಕ್ಕೆಲ್ಲ ನಾವು ಸ್ವಾಗತ ಕೊಟ್ಟಂತೆಯೇ ಅರ್ಥ. ಅವರು ಇಲ್ಲಿಗೆ ಬಂಡವಾಳವನ್ನು ಕಳುಹಿಸಬೇಕಾದರೆ — ಇಲ್ಲಿಗೆ ಬಂದು ದುಡಿಯಬೇಕಾದರೆ — ತಮ್ಮ ತಿಳಿವಳಿಕೆಯನ್ನೂ ಶಾಸ್ತ್ರಕ್ರಮವನ್ನೂ ಇಲ್ಲಿ ಪ್ರಯೋಗಿಸಬೇಕಾದರೆ — ಶ್ರಮಕ್ಕೆ ತಕ್ಕ ಪ್ರಯೋಜನವನ್ನು ಅಪೇಕ್ಷಿಸುವುದು ನ್ಯಾಯವೇ. ಆರುಸಾವಿರ ಮೈಲಿ ದೂರದಿಂದ ಇಲ್ಲಿಗೆ ಬಂದು ಅವರಿಗೆ ಹದವಲ್ಲದ ಹವದಲ್ಲಿ ಕೆಲಸಮಾಡುತ್ತಿರಲು ಕೆಲವು ಹೆಚ್ಚು ಸೌಕರ್ಯಗಳು ಬೇಕು ಎಂದು ಅವರು ಕೇಳುವುದು ಅನ್ಯಾಯವಲ್ಲ ಎಂದು ಆ ಕಡೆಯ ವಾದ. ಹಣ ಹೂಡಿ ಸೇವೇ ಕೆಲಸ ಮಾಡುತ್ತಿದ್ದರೆ ಇಂಥ ಅನುಕೂಲಗಳನ್ನು ಸಾಧಿಸಿಕೊಳ್ಳುತ್ತಿರಲಿಲ್ಲವೆ? ಎನ್ನುವರು. ಇದಕ್ಕೆ ಪ್ರತಿಯಾಗಿ ನಮ್ಮವರು ಸ್ವದೇಶದಲ್ಲಿ ಇಂತಹ ಶಾಸ್ತ್ರಜ್ಞತೆಯೂ ಕಾರ್ಯಕೌಶಲವೂ ಯಂತ್ರೋದ್ಯೋಗಗಳೂ ಏರ್ಪಡುವವರೆಗೂ ನಮ್ಮ ಲೋಹ ಭೂಗರ್ಭದಲ್ಲಿಯೇ ಇರಲಿ, ಉತ್ಪತ್ತಿಕ್ಷೇತ್ರಗಳು ಬೀಡಾಗಿಯೇ ಬಿದ್ದು ಇರಲಿ, ನಮ್ಮ ಸಂಪತ್ತನ್ನು ಇತರರು ದೂಡುವುದಕ್ಕಿಂತ ನಮಗೆ ದೂಟಿಸಿಕೊಳ್ಳುವ ಶಕ್ತಿ ಬರುವವರೆಗೂ ಬರಿದಾಗಿಯೇ ಇರಲಿ ಎಂದು ಹೇಳುವುದುಂಟು. ಈ ದೃಷ್ಟಿಗಳಲ್ಲಿನ ಅನುಕೂಲ ಪ್ರತಿಕೂಲಗಳನ್ನು ವಿಶಾಲವಾದ ಮನಸ್ಸಿಂದ ಪರೀಕ್ಷೆಮಾಡಿ, ಒಳಗಿನ ಪರಿಸ್ಥಿತಿ ಹೊರಗಿನ ಸ್ಥಿತಿಗತಿಗಳಿಂದ ಯಾವರೀತಿ ನಾವು ಬೇಡವೆಂದರೂ ಮೇಲಾಗಬಲ್ಲುದು ಬೀಳಾಗಬಲ್ಲುದು ಎಂಬುದನ್ನೂ ಮರೆಯದೆ ತೀರ್ಮಾನಿಸಬೇಕಾಗುತ್ತದೆ.

**ಇನ್ನೊಂದು ಮಾರ್ಗ.** — ಇಲ್ಲಿ ಏರ್ಪಟ್ಟ ಕಂಪನಿಗಳ ಮೂಲಧನವೆಲ್ಲ ರೂಪಾಯಿ ಲೆಕ್ಕದಲ್ಲಿಯೇ ಇರಬೇಕು; ಷೇರುದಾರರ ವರ್ಗದಲ್ಲಿ ಕಡೆಯಪಕ್ಷ ಶೇಕಡ ಇಷ್ಟುಮಾತ್ರವಾದರೂ ಭಾರತೀಯವಾಗಬೇಕು; ಚಾಲಕ ಮಂಡಲಿಯಲ್ಲಿ ಇಷ್ಟಂಶವಾದರೂ ದೇಶೀಯರಿರಬೇಕು; ಅಲ್ಲಿನ ಮುಖ್ಯ ಕಾರ್ಯಗಾರರು ಬಹುಮಟ್ಟಿಗೆ ಸ್ವದೇಶದವರಾಗಬೇಕು; ಹೊರಗಿನವರು ಕೆಲಸಮಾಡುತ್ತಿದ್ದರೆ ಆ ಕೆಲಸಗಳ ಗುಟ್ಟನ್ನು ಇಲ್ಲಿನವರಿಗೆ ಹೇಳಿಕೊಡುವಂತೆ ಏರ್ಪಡಿಸಬೇಕು; ಅದಕ್ಕೆ ತಕ್ಕಂತೆ ಸರಕಾರದ ಶಾಸನ ರಚಿತವಾಗ.

ಬೇಕು ಎಂಬ ವಾದವೊಂದುಂಟು. ಅದರಲ್ಲಿ ಬಹಳ ಪ್ರಯೋಜನವಿದ್ದರೂ ಅಷ್ಟೇ ತೊಡಕೂ ಇದೆ. ಸರಕಾರದ ಅಥವಾ ಸಾರ್ವಜನಿಕ ಹಣದಿಂದ ಯಾವ ವಿದೇಶಿ ಕೈಗಾರಿಕೆಗಳಿಗಾದರೂ ಸಹಾಯ ದೊರೆಯುತ್ತಿದ್ದರೆ ಅವಕ್ಕೆ ಈ ನಿರ್ಬಂಧಗಳನ್ನು ವಿಧಿಸಬಹುದು; ಇಲ್ಲದಿದ್ದರೆ ಸ್ವಂತ ದುಡ್ಡು ಖರ್ಚುಮಾಡಿಕೊಂಡು ಕೆಲಸಮಾಡುತ್ತಿರುವವರು ಈ ನಿರ್ಬಂಧಗಳಿಗೇಕೆ ಒಪ್ಪುವರು? ಇದಲ್ಲದೆ ಹೊರಗಿನವರು ಖಾಸಗಿ ಕಂಪನಿಗಳಂತೆ ನಡಸುತ್ತ ಕಂಪನಿಗಳನ್ನು ರೆಜಿಸ್ಟರ್ ಮಾಡಿಸದೆಯೇ ಇದ್ದರೆ ಯಾವ ನಿರ್ಬಂಧವೂ ಅವರಮೇಲೆ ನಡೆಯದಾಗುವುದು. ಎಲ್ಲಿ ದೇಶದ ಹಿತವೂ ಸರಕಾರದ ಹಣ ಸಹಾಯವೂ ಕಂಪನಿಗೆ ದೊರೆಯುತ್ತಿದೆಯೋ ಅಲ್ಲಿ ಈಗಲೂ ಈ ನಿಬಂಧನೆ ಗಳಿವೆ. ಆದರೆ ಈ ನಿಬಂಧನೆಗಳನ್ನು ನಡಸಬೇಕಾದವರು ಅವರು. ಮನಸ್ಸಿಲ್ಲದವರನ್ನು ಎಷ್ಟು ಬಲಾತ್ಕರಿಸಿದರೆ ತಾನೆ ಈಗಿನ ಸ್ಥಿತಿಯಲ್ಲಿ ಉತ್ಕೃಷ್ಟ ಪ್ರಯೋಜನ ದೊರತೀತು?*

**ಸದ್ಯಕ್ಕೆ ಸರ್ವೋತ್ತಮ ಮಾರ್ಗ.**—ಅದಕ್ಕೆ ಪ್ರತಿಯಾಗಿ ದಕ್ಷವಾಗಿ ಕಾರ್ಯಮಾಡುವ ದೇಶಿ ಸಂಸ್ಥೆಗಳು ಏರ್ಪಟ್ಟು, ಸ್ವಸತ್ವದಿಂದ ಬೆಳೆದು, ಕೀರ್ತಿಯನ್ನು ಸಂಪಾದಿಸಿ, ತಮ್ಮ ಹೆಸರಿನ ಬಲದಿಂದ ಬೇಕಾದಾಗ ಡಿಬೆಂಚರ್ ಮೂಲಕವೂ ಇತರ ವಿಧವಾಗಿಯೂ ವಿದೇಶಗಳಲ್ಲಿ ಕೂಡ ಸಾಲ ವನ್ನು ತೆಗೆದು ತಮ್ಮ ವರಮಾನವನ್ನೂ ದೇಶದ ಸಂಪತ್ತನ್ನೂ ಹೆಚ್ಚಿಸಿ ಕೊಂಡು, ಜನರಲ್ಲಿ ವಿದೇಶಿ ದ್ವೇಷಕ್ಕಿಂತಲೂ ಸ್ವದೇಶಿ ಪ್ರೋತ್ಸಾಹಕ ಬುದ್ಧಿ ಬೆಳೆಯುತ್ತಿರಲು ಅವರು ಈ ಸಾಮಾನುಗಳನ್ನೇ ಕೊಳ್ಳುವಂತೆ ಮಾಡಿಕೊಳ್ಳುವುದು ಸರ್ವೋತ್ತಮವಾದೀತು. ಅಂತಹ ಕೈಗಾರಿಕೆಗಳಿಗೆ ಸರಕಾರದಿಂದಲೂ ರಕ್ಷಣೆ ಪೋಷಣೆಗಳನ್ನು ದೊರಕಿಸಿಕೊಂಡು, ಒಳಗಿಂದ ತಿರುಳು ಬಲಿಸಿಕೊಂಡು ಶಕ್ತವಾಗುವ ವಿಧಾನ ಉತ್ತರೋತ್ತರ ಮಂಗಳ ದಾಯಕವಾಗುವುದು. ಒಳಗೆ ಬಲವಿಲ್ಲದಿದ್ದರೆ—ಅದನ್ನು ಬಲಿಸುವ ಪ್ರಯತ್ನವಿಲ್ಲದಿದ್ದರೆ—ಹೊರಗಿನವರ ಬಲಕ್ಕೆ ಎಷ್ಟು ತಡೆ ತಂದರೆ ತಾನೆ ಇದರ ಅಭಿವೃದ್ಧಿಯಾದೀತು?

* ಈ ದೇಶಕ್ಕೆ ಸಂಪೂರ್ಣ ರಾಜಕೀಯ ಸ್ವಾಧೀನತೆ ಬಂದಾಗ, ಅದರ ಮಾತು ಬೇರೆ.

ಒಟ್ಟಿನಲ್ಲಿ ಆಡಳಿತದ ಪರಿಸ್ಥಿತಿಯಿಂದ ಉತ್ಪನ್ನವಾಗಿರುವ ದೇಶದ ಆರ್ಥಿಕ ಅಸಹಾಯತೆ ನಿವಾರಣೆಯಾದರೆ ಈಗಿರುವ ಅನೇಕ ಅಡ್ಡಿ, ಅಡಚಣೆ ಮಾಯವಾಗುವುವು. ಸೈನ್ಯದ ವೆಚ್ಚ ಕಡಮೆಯಾಗಿ, ವಿದೇಶಿ ಮಾರುವೆಯ ವ್ಯಾಪಾರ ಇಲ್ಲಿನವರ ಭಾಗಕ್ಕೆ ಬಂದು, ದೇಶದ ಹಣ ಪದ್ಧತಿಯೂ ವ್ಯಾಪಾರ ಕೈಗಾರಿಕೆಗಳ ಸಾಲಪದ್ಧತಿಯೂ ಮಾರುವೆಯ ಸಾಧನೆ, ವ್ಯವಸ್ಥೆ ಮುಂತಾದುವೂ ಸಮರಸವಾಗಿ ನಡೆದು ಒಳದೇಶದವರ ಸಾಹಸದಿಂದಲೇ ಬ್ಯಾಂಕುಗಳು, ಹಡಗಿನ ವ್ಯಾಪಾರ, ವಿಮೆ ಕೆಲಸ, ಕೈಗಾರಿಕೆಗಳ ಚಾಲನೆ — ಇವು ಸರ್ವತೋಮುಖವಾಗಿ ನಡೆದು, ದೇಶದ ಸಂಪತ್ತಿನ ಬಹುಭಾಗ ದೇಶದೊಳಗೇ ಉಳಿದು ಇಲ್ಲಿನ ಏಳಿಗೆಗೇ ಹೂಡುವಂತಾಗಿ ರಾಜಕೀಯ ಪ್ರಪಂಚವೂ ಸರಕಾರದ ವ್ಯವಹಾರವೂ ಅರ್ಥಸಾಧನೆಯ ಕಾರ್ಯವೂ ಹೊಂದಿ ನಡೆಯುವಂತಾದರೆ ಆಗ ಈ ದೇಶದ ಧನಮಂಡಲದಲ್ಲಿರುವ ಅನೇಕ ಅಸಂಗತಗಳೂ ಅವ್ಯವಸ್ಥೆಗಳೂ ಕುಂದು ಕೊರತೆಗಳೂ ಕಷ್ಟನಷ್ಟಗಳೂ ನಿವಾರಿತವಾಗುವುವೆಂದು ನಿಶ್ಚಿತವಾಗಿ ಹೇಳಬಹುದು.



12

# ಅನುಬಂಧ ೧


ಹಣ
ಸರಕಾರದ ಹಣ
ಬ್ಯಾಂಕಿನ ಹಣ
ನಾಣ್ಯ
ನೋಟು
ನೋಟು
ಬ್ಯಾಂಕ್ ಡಿಪಾಸಿಟ್ಟು (ಚೆಕ್ಕು)
ಪ್ರಧಾನ ನಾಣ್ಯ
ಅಂಶ ನಾಣ್ಯ
ಲೋಹಕೋಶವಿದ್ದು ನಾಣ್ಯಕ್ಕೆ ಮುರಿಸಲಾಗುವುದು
ಲೋಹಕೋಶ ಇಲ್ಲದೆ ನಾಣ್ಯಕ್ಕೆ ಮುರಿಸಲಾಗದುದು
ಪ್ರಧಾನ ಅಥವಾ ಸರಕಾರಿ ಬ್ಯಾಂಕಿನದು
ಖಾಸಗಿ ಬ್ಯಾಂಕಿನದು
ನಗದು ಡಿಪಾಸಿಟ್ಟು
ಸಾಲದ ಡಿಪಾಸಿಟ್ಟು
ಓವರ್ ಡ್ರಾಫ್ಟು

## III ಧಾರಣೆವಾಸಿ

ಕಾರಣಗಳು—

೧ ಜನಸಂಖ್ಯೆಯಲ್ಲಿ ಹೆಚ್ಚು ಕಡಮೆ
೨ ಉದ್ಯೋಗ, ವರಮಾನಗಳಲ್ಲಿ ಹೆಚ್ಚು ಕಡಮೆ
೩ ಜೀವನ ವೆಚ್ಚದ ಮಟ್ಟದಲ್ಲಿ ಹೆಚ್ಚು ಕಡಮೆ
೪ ಪೇಟೆಯ ವಿಸ್ತಾರದಲ್ಲಿ ಹೆಚ್ಚು ಕಡಮೆ (ಇತರ ಕಾರಣಗಳಿಂದ)
೫ ಅದೇ ಬಯಕೆಯನ್ನು ತೀರಿಸುವ ಬೇರೆ ಪದಾರ್ಥಗಳ ನಿರ್ಮಾಣದಲ್ಲಿ ಹೆಚ್ಚು ಕಡಮೆ
೬ ಜನರ ಅಭ್ಯಾಸ, ದೃಷ್ಟಿರೀತಿಯ ಹೆಚ್ಚು ಕಡಮೆ

= ಕೊಳ್ಳುವ ಗಿರಾಕಿ

೧ ಮಳೆ ಬೆಳೆ ಪ್ರಕೃತಿ ಸಹಾಯಗಳ ಕಾರಣದಿಂದ ಉತ್ಪತ್ತಿಯಲ್ಲಿ (ಆಹಾರಪದಾರ್ಥ + ಮೂಲ ಸಾಮಗ್ರಿ) ವ್ಯತ್ಯಾಸ
೨ ಕೈಗಾರಿಕೆಗಳ ಉತ್ಪತ್ತಿ, ಕಾರ್ಯಪಟುತ್ವಗಳಲ್ಲಿ ವ್ಯತ್ಯಾಸಗಳು :—
ಕೆಲಸಗಾರರ ಉತ್ತಮ ಶ್ರಮ, ಕುಶಲತೆ
ಯಂತ್ರಾದಿಗಳ ಸಹಾಯ
ಹೊಸ ತಿಳಿವಳಿಕೆ, ಸುವ್ಯವಸ್ಥೆಗಳಿಂದ
೩ ಉತ್ಪತ್ತಿಯ ವೆಚ್ಚ ಇಳಿಯುವುದರಿಂದ, ಏರುವುದರಿಂದ
೪ ವರ್ತಮಾನ ಜನ ಪದಾರ್ಥಗಳಿಗೆ ವಾಹನ ಸೌಕರ್ಯಗಳ ಹೆಚ್ಚು ಕಡಮೆ
೫ ದೇಶದಿಂದ ದೇಶಕ್ಕೆ ಸಾಮಾನು ಧಾರಾಳವಾಗಿ ಹೋಗಿಬರಲು ಇರುವ ರಾಜಕೀಯ ಸೌಲಭ್ಯ, ಅಡ್ಡಿ, ಉತ್ತೇಜನ, ಇತ್ಯಾದಿ

= ಮಾರಾಟಕ್ಕೆ ಒದಗುವ ಸರಬರಾಯಿ



# ಅನುಬಂಧ ೨

I

## ಹಣದ ರಚನೆ ಮತ್ತು ಚಲನೆ

| ದೇಶ, ಹಣ (ಕೋಟಿ) | ವರ್ಷದ ಕೊನೆ | ಕೇಂದ್ರ ಬ್ಯಾಂಕು ಮತ್ತು ಖಜಾನೆ | | | | ವ್ಯಾಪಾರದ ಬ್ಯಾಂಕುಗಳು | | | | ಒಟ್ಟು ಹಣ | ಚಿಲ್ಲರೆ ಧಾರಣೆಸೂಚಿ ಜೀವನ ವೆಚ್ಚ 1929=100 |
|---|---|---|---|---|---|---|---|---|---|---|---|
| | | ನೋಟು (ಬ್ಯಾಂಕು + ಸರಕಾರಿ) | ಕೇಂದ್ರ ಬ್ಯಾಂಕಿನ ದರ್ಶನಿ ಹೊಣೆ | ಚಿಲ್ಲರೆ ನಾಣ್ಯ | ಒಟ್ಟು | ದರ್ಶನಿ ಡಿಪಾಜಿಟ್ | ಸೇವಿಂಗ್ಸ್ ಲೆಕ್ಕ | ಇತರ ಡಿಪಾಜಿಟ್ | ಒಟ್ಟು | | |
| ಯುನೈಟೆಡ್ ಕಿಂಗ್‌ಡಂ (ಪೌಂಡು) | 1929 | 37·2 | 16·0 | 8·4 | 61·6 | 119 5 | 40·9 / 48·3 | 101·6 | 221·1 | 145·7 | 100 |
| | 1932 | 37·4 | 14·5 | 6·8 | 58·7 | 121·5 | 46·1 / 47·9 | 118·0 | 239·5 | 147·6 | 86 |
| | 1934 | 40·9 | 15·7 | 7·1 | 63·7 | .. | 53·7 / 50·5 | .. | 240·7 | .. | 86 |
| ಇಂಡಿಯಾ (ರೂಪಾಯಿ) | 1929 | 179·4 | .. | .. | .. | .. | (99·1) | .. | 204·6 | .. | 100 |
| | 1932 | 174·8 | .. | .. | .. | .. | (145·4) | .. | 217·6 | .. | 76 |
| | 1934 | 183·9 | .. | .. | .. | .. | .. | .. | .. | .. | 65 |
| ಅಮೇರಿಕದ ಸಂಯುಕ್ತ ಸಂಸ್ಥಾನಗಳು (ಡಾಲರು) | 1929 | 261·3 | 241·9 | 184·7 | 687·9 | 2403·2 | (1061·1) | 1895·3 | 4298·5 | 2700·1 | 100 |
| | 1932 | 377·4 | 202·8 | 163·4 | 743 6 | 1632·2 | (1180·8) | 1427·5 | 3059·7 | 2045·1 | 75 |
| | 1934 | 439·3 | 413·8 | 69·3 | 922·4 | 1750·7 | (1181·0) | .. | 3130·1 | .. | 81 |
| ಜಪಾನ್ (ಯೆನ್) | 1929 | 177·1 | 53·3 | 42·5 | 272·9 | 258·0 | (34·8) | 352·3 | 610·3 | 462·0 | 100 |
| | 1932 | 156·2 | 38·4 | 41·4 | 236·0 | 232·2 | (43·8) | 364·7 | 596·9 | 416·3 | 85 |
| | 1934 | 180·4 | 54·2 | 43·5 | 258·1 | 281·2 | (48·3) | 427·7 | 708·9 | 471·0 | 88 |

## III ಧಾರಣೆವಾಸಿ

ಕಾರಣಗಳು—

೧ ಜನಸಂಖ್ಯೆಯಲ್ಲಿ ಹೆಚ್ಚು ಕಡಮೆ
೨ ಉದ್ಯೋಗ, ವರಮಾನಗಳಲ್ಲಿ ಹೆಚ್ಚು ಕಡಮೆ
೩ ಜೀವನ ವೆಚ್ಚದ ಮಟ್ಟದಲ್ಲಿ ಹೆಚ್ಚು ಕಡಮೆ
೪ ಪೇಟೆಯ ವಿಸ್ತಾರದಲ್ಲಿ ಹೆಚ್ಚು ಕಡಮೆ
(ಇತರ ಕಾರಣಗಳಿಂದ)
೫ ಅದೇ ಬಯಕೆಯನ್ನು ತೀರಿಸುವ ಬೇರೆ ಪದಾರ್ಥಗಳ ನಿರ್ಮಾಣದಲ್ಲಿ ಹೆಚ್ಚು ಕಡಮೆ
೬ ಜನರ ಅಭ್ಯಾಸ, ದೃಷ್ಟಿರೀತಿಯ ಹೆಚ್ಚು ಕಡಮೆ

= **ಕೊಳ್ಳುವ ಗಿರಾಕಿ**

---

೧ ಮಳೆ ಬೆಳೆ ಪ್ರಕೃತಿ ಸಹಾಯಗಳ ಕಾರಣದಿಂದ ಉತ್ಪತ್ತಿಯಲ್ಲಿ (ಆಹಾರಪದಾರ್ಥ + ಮೂಲ ಸಾಮಗ್ರಿ) ವ್ಯತ್ಯಾಸ
೨ ಕೈಗಾರಿಕೆಗಳ ಉತ್ಪತ್ತಿ, ಕಾರ್ಯಪಟುತ್ವಗಳಲ್ಲಿ ವ್ಯತ್ಯಾಸಗಳು :—
ಕೆಲಸಗಾರರ ಉತ್ತಮ ಶ್ರಮ, ಕುಶಲತೆ
ಯಂತ್ರಾದಿಗಳ ಸಹಾಯ
ಹೊಸ ತಿಳಿವಳಿಕೆ, ಸುವ್ಯವಸ್ಥೆಗಳಿಂದ
೩ ಉತ್ಪತ್ತಿಯ ವೆಚ್ಚ ಇಳಿಯುವುದರಿಂದ, ಏರುವುದರಿಂದ
೪ ವರ್ತಮಾನ ಜನ ಪದಾರ್ಥಗಳಿಗೆ ವಾಹನ ಸೌಕರ್ಯಗಳ ಹೆಚ್ಚು ಕಡಮೆ
೫ ದೇಶದಿಂದ ದೇಶಕ್ಕೆ ಸಾಮಾನು ಧಾರಾಳವಾಗಿ ಹೋಗಿಬರಲು ಇರುವ ರಾಜಕೀಯ ಸೌಲಭ್ಯ, ಅಡ್ಡಿ, ಉತ್ತೇಜನ, ಇತ್ಯಾದಿ

= **ಮಾರಾಟಕ್ಕೆ ಒದಗುವ ಸರಬರಾಯಿ**

**ಧಾರಣೆವಾಸಿ**

ಸರಕಾರ — ನಾಣ್ಯ, ನೋಟು
ಬ್ಯಾಂಕುಗಳು — ನೋಟು, ಚೆಕ್ಕು

ಕೊಳ್ಳುವ ಗಿರಾಕಿ → **ಹಣದ ಮೊತ್ತ**
↓
**ಧಾರಣೆವಾಸಿ**
↑
ಮಾರಾಟಕ್ಕೆ ಒದಗುವ ಸರಬರಾಯಿ → **ಪದಾರ್ಥಗಳ ಪರಿಮಾಣ**

ಒಳದೇಶದವರು ಒದಗಿಸುವುದು ↑ ಹೊರದೇಶದವರು ಒದಗಿಸುವುದು ↑

# ಅನುಬಂಧ ೨

## I ಹಣದ ರಚನೆ ಮತ್ತು ಚಲನೆ



| ದೇಶ, ಹಣ (ಕೋಟಿ) | ವರ್ಷದ ಕೊನೆ | ಕೇಂದ್ರ ಬ್ಯಾಂಕು ಮತ್ತು ಖಜಾನೆ | | | | ವ್ಯಾಪಾರದ ಬ್ಯಾಂಕುಗಳು | | | | ಒಟ್ಟು ಹಣ | ಚಿಲ್ಲರೆ ಧಾರಣೆಗಳ ಸೂಚಕ ಸಂಖ್ಯೆ 1929=100 |
|---|---|---|---|---|---|---|---|---|---|---|---|
| | | ನೋಟು (ಬ್ಯಾಂಕು + ಸರಕಾರಿ) | ಕೇಂದ್ರ ಬ್ಯಾಂಕಿನ ಚಾಲ್ತಿ ಠೇವಣಿ | ಚಿಲ್ಲರೆ ನಾಣ್ಯ | ಒಟ್ಟು | ಚಾಲ್ತಿ ಠೇವಣಿ | ಕ್ಲಿಯರಿಂಗ್ ಚೆಕ್ಕು | ಇತರ ಠೇವಣಿ | ಒಟ್ಟು | | |
| ಯುನೈಟೆಡ್ ಕಿಂಗ್‌ಡಂ (ಪೌಂಡು) | 1929 | 37·2 | 16·0 | 8·4 | 61·6 | 119 5 | 40·9 / 48·3 | 101·6 | 221·1 | 145·7 | 100 |
| | 1932 | 37·4 | 14·5 | 6·8 | 58·7 | 121·5 | 46·1 / 47·9 | 118·0 | 239·5 | 147·6 | 86 |
| | 1934 | 40·9 | 15·7 | 7·1 | 63·7 | .. | 53·7 / 50·5 | .. | 240·7 | .. | 86 |
| ಇಂಡಿಯಾ (ರೂಪಾಯಿ) | 1929 | 179·4 | .. | .. | .. | .. | (99·1) | .. | 204·6 | .. | 100 |
| | 1932 | 174·8 | .. | .. | .. | .. | (145·4) | .. | 217·6 | .. | 76 |
| | 1934 | 183·9 | .. | .. | .. | .. | .. | .. | .. | .. | 65 |
| ಅಮೇರಿಕದ ಸಂಯುಕ್ತ ಸಂಸ್ಥಾನಗಳು (ಡಾಲರು) | 1929 | 261·3 | 241·9 | 184·7 | 687·9 | 2403·2 | (1061·1) | 1895·3 | 4298·5 | 2700·1 | 100 |
| | 1932 | 377·4 | 202·8 | 163·4 | 743 6 | 1632·2 | (1180·8) | 1427·5 | 3059·7 | 2045·1 | 75 |
| | 1934 | 439·3 | 413·8 | 69·3 | 922·4 | 1750·7 | (1181·0) | .. | 3130·1 | .. | 81 |
| ಜಪಾನ್ (ಯೆನ್) | 1929 | 177·1 | 53·3 | 42·5 | 272·9 | 258·0 | (34·8) | 352·3 | 610·3 | 462·0 | 100 |
| | 1932 | 156·2 | 38·4 | 41·4 | 236·0 | 232·2 | (43·8) | 364·7 | 596·9 | 416·3 | 85 |
| | 1934 | 180·4 | 34·2 | 43·5 | 258·1 | 281·2 | (48·3) | 427·7 | 708·9 | 471·0 | 88 |

II

# ಲಂಡನ್ನಿನ 11 ಕ್ಲಿಯರಿಂಗ್ (ವ್ಯಾಪಾರ) ಬ್ಯಾಂಕುಗಳ ಲೆಕ್ಕ

ವಾರದ ಸರಾಸರಿ ಎಣಿಕೆ (ಸೆಪ್ಟೆಂಬರ್ 1936)

| ಆಸ್ತಿ | £ ಕೋಟಿ | ದೇಣೆ | ಕೋಟಿ |
|---|---|---|---|
| 1 ನಾಣ್ಯ, ಬ್ಯಾಂಕು ನೋಟು, ಬ್ಯಾಂಕ್ ಆಫ್ ಇಂಗ್ಲಂಡಿನಲ್ಲಿರುವ ಶಿಲ್ಕು .. .. | 22·9 | 1 ಪೂರ್ತಿ ಸಂದಿರುವ ಬಂಡವಾಳ .. .. | 7·7 |
| 2 ಗ್ರೇಟ್ ಬ್ರಿಟನ್ ಮತ್ತು ಐರ್ಲಂಡಿನ ಇತರ ಬ್ಯಾಂಕುಗಳಲ್ಲಿ ಉಳಿದಿರುವ ಶಿಲ್ಕು ಮತ್ತು ಇತರ ಬ್ಯಾಂಕುಗಳಿಗೆ ವಸೂಲಿಗಾಗಿ ಕಳುಹಿಸಿರುವ ಚೆಕ್ಕುಗಳು ಮತ್ತು ಸಂಚಾರದಲ್ಲಿರುವ ಹಣ .. .. .. | 5·7 | 2 ಆಪದ್ಧನ .. .. .. | 5·7 |
| 3 ಕೇಳಿದಾಗ ಹಿಂದಕ್ಕೆ ಬರುವ ಕಿರುಸಾಲದ ಹಣ .. | 16·6 | 3 ಚಾಲ್ತಿ, ಡಿಪಾಜಿಟ್ ಮತ್ತು ಇತರ ಲೆಕ್ಕ .. | 225·7 |
| 4 ವಟ್ಟಕ್ಕೆ ಕೊಂಡ ಹುಂಡಿಗಳು .. .. | 34·4 | 4 ಒಪ್ಪಿಕೆ, ಸಲಿಕೆ, ಇತ್ಯಾದಿ .. .. | 10·2 |
| 5 ಬಡ್ಡಿಗೆ ಮತ್ತು ಸಂಪಾದನೆಗೆ ಹೂಡಿದ ಹಣ .. | 64·8 | 5 ಚಲಾವಣೆಯಲ್ಲಿ ನೋಟು .. .. | ·1 |
| | 2·5 | | |
| 6 ಕುಳಕ್ಕೆ ಕೊಟ್ಟ ಮುಂಗಡ, ಇತ್ಯಾದಿ .. | 87·7 | | |
| 7 ಕುಳಗಳಿಗಾಗಿ ಒಪ್ಪಿಕೆ ಹೊತ್ತಿರುವ, ಸಲಿಕೆ ಹಾಕಿರುವ ಹಣದ ಲೆಕ್ಕ .. .. | 10·2 | | |
| 8 ಬ್ಯಾಂಕ್ ಕಟ್ಟಡ, ಇತ್ಯಾದಿ .. .. | 4·6 | | |
| ಒಟ್ಟು .. | 249·46 | ಒಟ್ಟು .. | 249·46 |

ಡಿಪಾಜಿಟ್ ಮತ್ತು ಇತರ ವ್ಯವಹಾರದೊಡನೆ ಹೋಲಿಸಿದರೆ ನಗದಿನ ಪ್ರಮಾಣ 10·17

III

# ಸಗಟು ಮತ್ತು ಚಿಲ್ಲರೆ ಧಾರಣೆವಾಸಿ

| ವರ್ಷ, ತಿಂಗಳ ಸರಾಸರಿ | ಬ್ರಿಟನ್ | | ಇಂಡಿಯಾ | | ಅಮೇರಿಕಾದ ಸಂಯುಕ್ತ ಸಂಸ್ಥಾನಗಳು | | ಜಪಾನ್ | |
|---|---|---|---|---|---|---|---|---|
| ಊರ ಸಂಖ್ಯೆ, ಊರುಗಳು | | 630 | | ಬೊಂಬಾಯಿ | | ಒಟ್ಟು ದೇಶ | | ಟೋಕಿಯೊ |
| ಮೂಲ ತೇದಿ | ಸಗಟು | ಚಿಲ್ಲರೆ | ಸಗಟು | ಚಿಲ್ಲರೆ | ಸಗಟು | ಚಿಲ್ಲರೆ | ಸಗಟು | ಚಿಲ್ಲರೆ |
| 1913 | 100 | 100 (1914 vi) | 100 | 100 (1914) | 100 | 100 (1923) | 100 | 100 (1914) |
| 1929 | 127·2 | 164 | 141 | 149 | 136·5 | 100 | 166·2 | 181 |
| 1932 | 86·1 | 144 | 91 | 137 | 92·8 | 77·7 | 121·7 | 155 |
| 1933 | 86·9 | 140 | 87 | 110 | 94·5 | 74·8 | 135·6 | 136 |
| 1934 | 90·3 | 141 | 89 | 109 | 107·4 | 79·4 | 134·2 | 137 |
| 1935 | 94·3 | 143 | 91 | 104 | 114·7 | 83·1 | 140·3 | 145 |
| 1936 (i-vi) | 98·1 | 145·5 | 91 | .. | 114·2 | 84·9 | 145·7 | .. |

IV

## ಕೇಂದ್ರ ಬ್ಯಾಂಕುಗಳ ಲೇವಾದೇವಿ ಹಣ (ಕೋಟಿ ಲೆಕ್ಕದಲ್ಲಿ)

| ಬ್ಯಾಂಕುಗಳು | ಚಿನ್ನ | ನೋಟು ಚಲಾವಣೆ ಮತ್ತು ಠೇವು | ಬೆಳ್ಳಿ | ಸರಕಾರದ ಬಾಂಡ್ | ಬ್ಯಾಂಕುಗಳು | ಇತರರು | ಸರಕಾರದ ಸಾಲಪತ್ರಗಳು | ಮತ್ತು, ಹುಂಡಿ | ಬ್ಯಾಂಕ ಬಡ್ಡಿ ದರ | ಚಿನ್ನದ ಪ್ರಮಾಣ |
|---|---|---|---|---|---|---|---|---|---|---|
| ಬ್ಯಾಂಕ್ ಆಫ್ ಇಂಗ್ಲಂಡ್ 14-10-1936 (ಪೌಂಡು) | 24·9 | 44·6 | 6·3 | 3·2 | 8·2 | 4·1 | 8·0 | ·9 | 1·9 | 40·8% |
| ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ 9-10-1936 (ರೂಪಾಯಿ) | 4·4+6·8 (ನಾಣ್ಯ) | 167 | 5·0 | 8·4 | 26·1 | | 6·7 +2·3 +5·5 | .. | 5·0 | 55·1% |
| ಜಪಾನ್ 1-9-1936 (ಯೆನ್) | 53·5+6·4 (ಇತರ ನಾಣ್ಯ) | 120 | .. | 27·9 | 7·2 | | 35·6 | 71·7 | 3·0 | .. |
| ಅಮೇರಿಕಾದ ಫೆಡರಲ್ ರಿಸರ್ವ್ ಬ್ಯಾಂಕುಗಳು ಮತ್ತು ಸರಕಾರ 15-10-1936 (ಡಾಲರ್) | 858·1 +1100·3 + 251·2 | 409·3 +631·6 +255·6 | 884·5 | 13·5 | 661·6 | .. | 243·0 | ·8+2·6 | (3·0) | .. |

Economist 17-10-1936

V

# ಪ್ರಪಂಚದಲ್ಲಿರುವ ಚಿನ್ನದ ಹಂಚಿಕೆ

£ 10 ಲಕ್ಷ (ಒಂದು ಔನ್ಸಿಗೆ 84/11½ ಷಿಲ್ಲಿಂಗುಗಳ ಬೆಲೆಯಂತೆ)

| ವರ್ಷ | ಕೈಗಾರಿಕೆ ಕಲೆಗಳಿಗೆ | ಇಂಡಿಯಾಕ್ಕೆ | ಚೀನಾ ದೇಶಕ್ಕೆ | ಒಟ್ಟು ಹಣಕ್ಕೆ ಬಾರದಿರುವ ಭಾಗ | ಹಣದ ಕೆಲಸಕ್ಕೆ ಬಳಸಲ್ಪಟ್ಟದ್ದು | ಪ್ರಪಂಚದ ಉತ್ಪತ್ತಿ | ಈಗ್ಗೆ ಪ್ರಪಂಚದಲ್ಲಿ ಹಣವಾಗಿರುವ ಚಿನ್ನ | ಈಗ್ಗೆ ಚಿನ್ನದ ಉತ್ಪತ್ತಿ | ಪ್ರಪಂಚದ ಜನಸಂಖ್ಯೆ (ಕೋಟಿ) | ತಲೆಯೊಂದಕ್ಕೆ ಚಿನ್ನದ ಪಾಲು |
|---|---|---|---|---|---|---|---|---|---|---|
| 1493-1839 | (292) | (62) | (28) | (382) (66%) | (196) (36%) | 578 | 196 (34%) | 578 | .. | .. |
| ಹಿಂದಿನ ಹತ್ತು ವರ್ಷಗಳಲ್ಲಿ 1849 | 28 | 7 | ? | 35 (60%) | 23 (40%) | 58 | 219 (34%) | 636 | .. | .. |
| 1859 | 37 | 21 | ? | 58 (23%) | 198 (77%) | 256 | 417 (47%) | 892 | .. | .. |
| 1869 | 74 | 59 | ? | 133 (51%) | 126 (49%) | 259 | 543 (47%) | 1,151 | .. | .. |
| 1879 | 117 | 14 | 5 | 136 (59%) | 96 (41%) | 232 | 639 (46%) | 1,383 | .. | .. |
| 1889 | 103 | 30 | 13 | 146 (67%) | 72 (33%) | 218 | 711 (44%) | 1,601 | .. | .. |
| 1899 | 117 | 28 | 12 | 157 (39%) | 247 (61%) | 404 | 958 (48%) | 2,005 | 153·7 (1900) | 154ಪೆನ್ನಿ |
| 1909 | 174 | 81 | 39 | 294 (40%) | 442 (60%) | 736 | 1,400 (51%) | 2,741 | 168·3 (1910) | 206 ,, |
| 1919 | 212 | 146 | 21 | 379 (42%) | 521 (58%) | 900 | 1,921 (53%) | 3,641 | 182·7 (1920) | 258 ,, |
| 1929 | 162 | 195 | 0 | 357 (46%) | 415 (54%) | 772 | 2,336 (53%) | 4,413 | 199·0 (1929) | 282 ,, |
| ಒಟ್ಟು | 1,316 30% | 643 (14%) | 118 (3%) | 2,077 (47%) | 2,336 (53%) | 4,413 | .. | .. | .. | .. |

## VI ಪ್ರಪಂಚದ ಒಟ್ಟು ವ್ಯಾಪಾರದ ಬೆಲೆ ($ ಕೋಟಿ)

| ಭೂಖಂಡ | 1929 (=100) | | | 1932 | | | 1935 | | |
|---|---|---|---|---|---|---|---|---|---|
| | ಆಮದು | ರಫ್ತು | ಒಟ್ಟು | ಆಮದು | ರಫ್ತು | ಒಟ್ಟು | ಆಮದು | ರಫ್ತು | ಒಟ್ಟು |
| ಯೂರೋಪ್, ರಷ್ಯ ಬಿಟ್ಟು | 1,913·4 | 1,543·5 | 3,456·9 | 804·0 | 619·7 | 1,423·7 | 679·0 | 528 8 | 1,207·8 |
| | | | | (42%) | (40%) | | (35%) | (34%) | |
| ಯೂರೋಪ್, ರಷ್ಯ ಸೇರಿ | 1,986·3 | 1,612·7 | 3,599·0 | 850·1 | 658·5 | 1,503 6 | 691·4 | 547·7 | 1,239·1 |
| | | | | (43%) | (41%) | | (35%) | (3[illegible]%) | |
| ಯೂರೋಪ್, ರಷ್ಯ ಸೇರಿ (ಇಟಲಿ, 1935 ಕಡೆಯ ಮೂರು ತಿಂಗಳು ಬಿಟ್ಟು) | 1,958·7 | 1,591·0 | 3,549·7 | 840·2 | 649·3 | 1,489·5 | 691·4 | 547·7 | 1,239·1 |
| | | | | (43%) | (41%) | | (35%) | (34%) | |
| ಉತ್ತರ ಅಮೇರಿಕಾ .. | 567·6 | 642·8 | 1,210·4 | 173·1 | 209·4 | 382·5 | 154·9 | 184·5 | 339·4 |
| | | | | (30%) | (33%) | | (27%) | (29%) | |
| ದಕ್ಷಿಣ ಅಮೇರಿಕಾ .. | 270·7 | 316·7 | 587·4 | 74·9 | 117·7 | 192·6 | 80·3 | 111·8 | 192·1 |
| | | | | (28%) | (37%) | | (30%) | (35%) | |
| ಆಫ್ರಿಕಾ .. .. | 169·9 | 148·3 | 318·2 | 80·7 | 83·8 | 167·5 | 76·8 | 83·0 | 159·8 |
| | | | | (48%) | (59%) | | (45%) | (56%) | |
| ಏಷ್ಯಾ .. .. | 467·9 | 493·8 | 961·7 | 190·4 | 176·8 | 367·2 | 173·7 | 179·2 | 352·9 |
| | | | | (41%) | (36%) | | (57%) | (36%) | |
| ಓಷನಿಯಾ .. .. | 97·1 | 88·4 | 185·5 | 27·7 | 39·6 | 67 3 | 32·2 | 39·5 | 71·7 |
| | | | | (29%) | (45%) | | (33%) | (45%) | |
| ಒಟ್ಟು .. | 3,531·9 | 3,281·0 | 6,812·9 | 1,387·0 | 1,279 6 | 2,666·6 | 1,209·3 | 1,145·7 | 2,355·0 |
| | 100 | 100 | 100 | (39%) | (39%) | 39 | (34%) | (35%) | 34·5 |

VII

# ವಿದೇಶಿ ವ್ಯಾಪಾರದ ಬೆಲೆ ವಿವರ ($ ಲಕ್ಷ)

| ದೇಶ | ವರ್ಷ | ಪದಾರ್ಥ | ಬಡ್ಡಿ ಡಿವಿಡೆಂಡ್ | ಇತರ ಸಹಾಯ | ಒಟ್ಟು ಪದಾರ್ಥ, ಸಹಾಯ | ಚಿನ್ನ | ಒಟ್ಟು | ಬಂಡವಾಳದ ಸಂಚಾರ | | | ಕಸುರು |
|---|---|---|---|---|---|---|---|---|---|---|---|
| | | | | | | | | ನಿಡು ವಾಯಿದೆ | ಕಿರು ವಾಯಿದೆ | ಒಟ್ಟು | |
| ಯುನೈಟೆಡ್ ಕಿಂಗ್‌ಡಂ | 1929 | —18,542 | +12,166 | +11,388 | + 5,012 | + 730 | + 5,742 | .. | .. | .. | .. |
| | 1932 | —10,062 | + ೬,259 | + 3,015 | — 1,788 | — 526 | — 2,314 | .. | .. | .. | .. |
| | 1935 | — 7,593 | + 5,382 | + 3,287 | + 1,076 | — 2,051 | — 975 | .. | .. | .. | .. |
| ಇಂಡಿಯಾ | 1928—29 | + 2,428 | — 1,186 | — 1,139 | + 103 | — 774 | — 671 | + 19 | + 652 | + 671 | .. |
| | 1931—32 | + 696 | — 1,087 | — 561 | — 952 | + 1,813 | + 861 | + 368 | — 1,229 | — 861 | .. |
| | 1934—35 | + 250 | — 722 | — 310 | — 782 | + 1,167 | + 385 | — 192 | — 193 | — 385 | .. |
| ಅಮೇರಿಕಾದ | 1929 | + 3,820 | + 6,990 | — 6,810 | + 4,000 | — 1,200 | + 2,800 | — 900 | — 950 | — 1,050 | + 950 |
| ಸಂಯುಕ್ತ | 1932 | + 1,500 | + 4,550 | — 5,040 | + 1,010 | — 110 | + 900 | + 2,470 | — 4,890 | — 2,420 | —1,520 |
| ಸಂಸ್ಥಾನಗಳು | 1935 | — 160 | + 1,700 | — 2,210 | — 1,120 | —10,650 | —11,770 | + 3,310 | + 5,94( | + 9,250 | —2,520 |
| ಜಪಾನ್ | 1929 | — 755 | — 91 | + 934 | + 88 | — 3 | + 85 | — 243 | — 19 | — 262 | — 177 |
| | 1932 | — 160 | — 106 | + 424 | + 158 | + 315 | + 473 | — 472 | — 454 | — 926 | + 453 |
| | 1934 | — 236 | +350 | | + 124 | .. | + 124 | .. | .. | .. | .. |

+ ನಿವ್ವಳ ಬಂದದ್ದು — ನಿವ್ವಳ ಹೋದದ್ದು

## VIII ಒಟ್ಟು ಬಂಡವಾಳ ಎತ್ತಿದ ಲೆಕ್ಕ*

| ತಿಂಗಳ ಸರಾಸರಿ | ಯುನೈಟೆಡ್ ಕಿಂಗ್‌ಡಂ ಕೋಟಿ £ | ಬ್ರಿಟಿಷ್ ಇಂಡಿಯಾ ಕೋಟಿ Rs. | ಅಮೇರಿಕಾದ ಸಂಸ್ಥಾನಗಳು ಕೋಟಿ $ | ಜಪಾನ್ ಕೋಟಿ Y |
|---|---|---|---|---|
| 1913 | 1·6 | 5·6 | .. | 4·5 |
| 1929 | 2·4 | 5·6 | 84·9 | 22·2 |
| 1931 | ·9 | 2·7 | 25·9 | 26·1 |
| 1932 | 1·6 | 3·3 | 9·9 | 31·8 |
| 1933 | 2·0 | .. | 6·0 | 55·1 |
| 1934 | 1·4 | .. | 11·8 | 20·4 |
| 1935 | 1·5 | .. | 41·3† | .. |
| 1936 (i-viii) | 1·6 | .. | 16·0 | .. |
| ಒಟ್ಟು ವಿದೇಶಗಳಲ್ಲಿ ಈವರೆಗೆ ಹೂಡಿರುವ ಬಂಡವಾಳ ಸು. | 400·0 | — 1,000·0 | 1,000·0 | .. |
| ಒಟ್ಟು ಸ್ವದೇಶದಲ್ಲಿ ಈವರೆಗೆ ಹೂಡಿರುವ ಬಂಡವಾಳ ಸು. | 525·0 | 300·0 | 7,000 | 1,000·0 |

* Economist 26-9-1936. † ಹೊಸ ಬಂಡವಾಳ.

IX

## ತೆರಿಗೆಯ ವರಮಾನದ ಬಾಬುಗಳು

| ದೇಶಗಳು | ಆದಾಯ ಮತ್ತು ಆಸ್ತಿಯ ಮೇಲೆ ಎತ್ತಿದ ತೆರಿಗೆ % | | ಕಾರ್ಯವ್ಯವಹಾರಗಳ ಮೇಲೆತ್ತಿದ್ದು, ಸಾವಿನ ತೆರಿಗೆಗಳು % | | ಸುಂಕದ ವರಮಾನ % | | ಒಳತೆರಿಗೆ: ತಿನ್ನುವ ಪದಾರ್ಥಗಳಮೇಲೆ ಬಿದ್ದದ್ದು, ಸರ್ವಮಾನ್ಯಗಳಮೇಲೆ, ವ್ಯಾಪಾರದ ಸರಕಿನಮೇಲೆ, ಇತ್ಯಾದಿ % | |
|---|---|---|---|---|---|---|---|---|
| | 1929 | 1936 | 1929 | 1936 | 1929 | 1936 | 1929 | 1936 |
| ಯುನೈಟೆಡ್ ಕಿಂಗ್‌ಡಂ | 43·9 | 40·5 | 15·6 | 14·8 | 17·2 | 26·5 | 22·8 | 18·1 |
| ಅಮೇರಿಕಾದ ಸಂಯುಕ್ತ ಸಂಸ್ಥಾನಗಳು .. | 65·7 | 48·1 | 3·8 | 7·0 | 16·9 | 6·4 | 13·6 | 38·4 |
| ಜಪಾನ್ .. .. | 30 0 | 29·2 | 10·9 | 11·8 | 11·8 | 11·7 | 47·3 | 47·3 |

## ವೆಚ್ಚದ ಬಾಬುಗಳು (1928)

| ದೇಶ | ಹಣದ ಮೊತ್ತ | ಸಾಲಕ್ಕಾಗಿ ವೆಚ್ಚ | % | ಸೈನ್ಯ ಮತ್ತು ಪೋಲೀಸ್ | % | ಮುಲ್ಕಿವೆಚ್ಚ ಮತ್ತು ಸಾಮಾನ್ಯ | % | ಒಟ್ಟು | % |
|---|---|---|---|---|---|---|---|---|---|
| ಯುನೈಟೆಡ್ ಕಿಂಗ್‌ಡಂ .. | £ ಲಕ್ಷ | 3,690 | 45 | 1,220 | 15 | 3,270 | 40 | 8,180 | 100 |
| ಅಮೇರಿಕಾದ ಸಂಯುಕ್ತ ಸಂಸ್ಥಾನಗಳು .. | $ ಲಕ್ಷ | 34,170 | 30½ | 32,720 | 29½ | 30,940 | 40 | 97,830 | 100 |

X

# ಸರಕಾರಗಳ ಸಾಲ (ಲಕ್ಷ)

| ದೇಶ | ವರ್ಷ | ಒಟ್ಟು ಸಾಲ | ಒಳಸಾಲ | | | ಹೊರಸಾಲ | ಲೆಕ್ಕದ ವರ್ಷ | ಸಾಲದ ವೆಚ್ಚ | | | |
|---|---|---|---|---|---|---|---|---|---|---|---|
| | | | | | | | | ಬಡ್ಡಿ | | ತೀರುವೆ | |
| | | | ಗಟ್ಟಿ | ಫ್ಲಡಿ | ಒಟ್ಟು | | | ಒಳ | ಹೊರ | ಒಳ | ಹೊರ |
| ಅಮೇರಿಕಾದ ಸಂಯುಕ್ತ ಸಂಸ್ಥಾನಗಳು ($) | 1935 | 2,87,009 | 1,48,471 | 1,38,478 | 2,87,009 | .. | 1935–36 | 7,420 | .. | 3,520 | .. |
| | 1936-7 | 3,13,516 | .. | .. | 3,13,516 | .. | 1936–37 | 8,050 | .. | 5,800 | .. |
| ಇಂಡಿಯಾ (Rs) | 1933 | 1,21,248 | 44,691 | 25,847 | 70,538 | 50,710 | 1933–34 | 3,007 | 1,973 | 300 | .. |
| | 1935 | 1,23,574 | 43,828 | 28,410 | 72,238 | 51,336 | 1935–36 | 3,114 | 1,892 | 300 | .. |
| ಜಪಾನ್ (Y) | 1933 | 73,745 | 56,638 | 3,203 | 59,841 | 13,904 | 1933–34 | 3,501 | | 54 | 149 |
| | 1935 | 96,128 | 76,875 | 5,224 | 82,099 | 14,029 | 1935–36 | .. | | .. | .. |
| ಯುನೈಟೆಡ್ ಕಿಂಗ್‌ಡಂ (£) | 1933 | 78,597 | 59,888 | 8,105 | 67,993 | 10,604 | 1933–34 | 2,163 | | 77 | |
| | 1935 | 80,240 | 60,570 | 9,300 | 69,870 | 10,370 | 1936–37 | 1,240 | | .. | |

## ಸರಾಸರಿ ರೂಪಾಯಿನ ಮಾರುವ ದರ — ಬೆಳ್ಳಿ ಚಿನ್ನದ ಬೆಲೆ

| ವರ್ಷ | 1 ರೂ. ಗೆ ಪೆನ್ನಿಗಳು | ವರ್ಷ | 1 ರೂ. ಗೆ ಪೆನ್ನಿಗಳು | ಬೆಳ್ಳಿ | | ಚಿನ್ನ | |
|---|---|---|---|---|---|---|---|
| | | | | ಔನ್ಸಿಗೆ ಪೆನ್ನಿ | 100 ತೊಲೆಗೆ ರೂ. | ಇಂಗ್ಲಂಡಿನಲ್ಲಿ 1 ಔನ್ಸಿಗೆ ಷಿಲಿಂಗು | ಇಂಡಿಯಾದಲ್ಲಿ ತೊಲೆ 1ಕ್ಕೆ ರೂ. |
| 1835-1836ರಿಂದ1839-1840 | 23·100 | 1919 | $20\frac{15}{16}$ | | | | |
| 1840-1841 ,, 1844-1845 | 22·850 | 1920 | $24\frac{3}{32}$ | | | | |
| 1845-1846 ,, 1849-1850 | 22·000 | ಪ್ರತಿಹುಂಡಿದರ | | | | | |
| 1850-1851 ,, 1854-1855 | 23·900 | (ಅತಿ ಹೆಚ್ಚು | $34\frac{27}{32}$ | | | | |
| 1855-1856 ,, 1859-1860 | 24·325 | 12-2-20) | | | | | |
| 1860-1861 ,, 1864-1865 | 23·892 | 1921 | $16\frac{1}{32}$ | | | | |
| 1864-1865 ,, 1869-1870 | 23·310 | 1922 | $15\frac{1}{32}$ | | | | |
| 1870-1871 ,, 1874-1875 | 22·576 | 1923 | $16\frac{9}{32}$ | | | | |
| 1874-1875 ,, 1879-1880 | 20·534 | 1924 | $17\frac{1}{4}$ ಹೆಚ್ಚು | | | | |
| 1880-1881 ,, 1884-1885 | 19·644 | 1927-28 | $18\frac{3}{32}$ | $24\frac{5}{16}$ ರಿಂದ 27 | $56\frac{1}{4}$ ರಿಂದ $60\frac{1}{8}$ | | |
| 1884-1885 ,, 1889-1890 | 17·107 | 1928-29 | $18\frac{1}{32}$ | $25\frac{5}{16}$ ,, $28\frac{3}{4}$ | $57\frac{3}{4}$ ,, $65\frac{7}{16}$ | | |
| 1889-1890 ,, 1894-1895 | 15·491 | 1929-30 | $17\frac{31}{32}$ | $18\frac{5}{16}$ ,, $25\frac{15}{16}$ | $46\frac{7}{16}$ ,, $58\frac{13}{16}$ | | |
| 1894-1895 ,, 1899-1900 | 15·094 | 1930-31 | $17\frac{13}{16}$ | $12\frac{1}{8}$ ,, $19\frac{13}{16}$ | $38\frac{5}{8}$ ,, $56\frac{7}{8}$ | | |
| 1899-1900 ,, 1904-1905 | 16 012 | 1931-32 | $18\frac{5}{32}$ | $12\frac{1}{8}$ ,, $21\frac{9}{16}$ | $41\frac{3}{8}$ ,, $65\frac{7}{8}$ | $84/9\frac{3}{4}$ ರಿಂದ128/9 | $21\frac{7}{32}$ ರಿಂದ $30\frac{3}{4}$ |
| 1904-1905 ,, 1909-1910 | 16·026 | 1932-33 | $18\frac{5}{32}$ | $17\frac{1}{4}$ ,, $20\frac{1}{2}$ | | 112/9 ,, 134/8 | $29\frac{5}{32}$ ,, $33\frac{15}{64}$ |
| 1909-1910 ,, 1914-1915 | 16·055 | 1933-34 | $18\frac{1}{16}$ | $19\frac{1}{2}$ ,, 25 | | 132/ ,, 143/ | |
| 1914-1915 ,, 1919-1920 | 17·583 | 1935 | $18\frac{1}{32}$ | 24 ,, 35 | | 141/ ,, 149/ | |
| 1919-1920 ,, 1924-1925 | 17.0145 | 1936 | $18\frac{1}{8}$ | $20\frac{1}{16}$ (16-2-1937) | $50\frac{9}{16}$ (17-2-1937) | $142/0\frac{1}{2}$ (16-2-1937) | $35\frac{15}{64}$ (17-2-1937) |

| | | | |
|---|---|---|---|
| ಸರಾಸರಿ ಯುದ್ಧಕ್ಕೆ ಮುಂಚೆ | .. | 24-7-5 ರಿಂದ | 25-6-3 |
| 1893ರಿಂದ 1915ರಲ್ಲಿ | .. | 23-4-0 ,, (1899) | 32-4-0 (1894) |

# XII ಬ್ರಿಟಿಷ್ ಇಂಡಿಯಾದ ಹೊರ ವ್ಯಾಪಾರದ ಸ್ವರೂಪ (ಲಕ್ಷ Rs.)

| ಬಾಬುಗಳು | ದೇಶಕ್ಕೆ ಬಂದದ್ದು—ಆಯ (ರಫ್ತು ಕಾರಣ) | | | | ಹೊರಗೆ ಹೋದದ್ದು—ವ್ಯಯ (ಆಮದು ಕಾರಣ) | | | |
|---|---|---|---|---|---|---|---|---|
| | 1929—30 | 1930—31 | 1931—32 | 1932—33 | 1929—30 | 1930—31 | 1931—32 | 1932—33 |
| I ಸಾಮಾನುಗಳ ಲೆಕ್ಕ :— | | | | | | | | |
| 1 ಸಾಮಾನು (ದಿನಸಿ) .. | 32,046 | 22,828 | 16,304 | 13,701 | 26,303 | 18,655 | 13,503 | 13,665 |
| 2 ಲೆಕ್ಕಾಚಾರ :— | | | | | | | | |
| (a) ಗಡಿಯು ವ್ಯಾಪಾರಕ್ಕೆ .. | 2,000 | 1,600 | 1,100 | 900 | 1,800 | 1,500 | 1,000 | 800 |
| (b) ಬೆಲೆಯು ತಪ್ಪೆಣಿಕೆಗೆ .. | .. | .. | .. | .. | 562 | 560 | 675 | 683 |
| II ಬಡ್ಡಿ, ಡಿವಿಡೆಂಡುಗಳು :— | | | | | (i) | (i) | (i) | (i) |
| 3 ನಿಡುಬಂಡವಾಳದ ಮೇಲೆ .. | 308 | 216 | 97 | 63 } | 3,590 | 3,590 | 3,601 | 3,530 |
| 4 ಕಿರುಬಂಡವಾಳದ ಮೇಲೆ .. | 122 | 16 | 28 | 26 } | | | | |
| III ಇತರ ಸೇವೆಗಳು :— | | | | | | | | |
| 5 ಹಡಗಿನ ರುಸುಮು .. | .. | .. | .. | .. | .. | .. | .. | .. |
| 6 ರೇವಿನ ತೆರಾಣಿ (Port fees) .. | 280 | 250 | 240 | 225 | .. | .. | .. | .. |
| 7 ದಲ್ಲಾಳಿ, ವಿಮೆ, ತರಗು .. | .. | .. | .. | .. | 120 | 120 | 100 | 100 |
| 8 ಅಂಚೆ, ತಂತಿ, ಟೆಲಿಫೋನ್ .. | 14 | 12 | .. | .. | 9 | 9 | 10 | 12 |

| | | | | | | | | |
|---|---|---|---|---|---|---|---|---|
| 9 ಪ್ರಯಾಣಿಕರು, ರಾಜಕೀಯ ವ್ಯವಹಾರ (Diplomatic expenditure) (ii) .. | .. | .. | .. | .. | 450 | 450 | 400 | 400 |
| 10 ನಗದು (Reparations) .. | 33 | 32 | 8 | .. | .. | .. | .. | .. |
| 11 ಇತರ ಸರಕಾರದ ಆಯ-ವ್ಯಯ .. | 1,146 | 850 | 908 | 883 | 2,695 | 2,156 | 2,440 | 2,212 |
| IV ಚಿನ್ನ :— | | | | | | | | |
| 12 ಚಿನ್ನ, ನಾಣ್ಯ, ಗಟ್ಟಿ .. | 1 | 49 | 6,077 | 6,684 | 1,423 | 1,325 | 280 | 132 |
| ಒಟ್ಟು .. | 35,950 | 25,853 | 24,762 | 22,482 | 36,952 | 28,365 | 22,609 | 21,534 |
| ಅಧಿಕ (+) ನ್ಯೂನ (—) | | | | | | | | |
| (a) ದಿನಸಿ, ಸೇವೆ .. | + 420 | —1,236 | —3,044 | —5,504 | | | | |
| (b) ಚಿನ್ನ .. | —1,422 | —1,276 | +5,797 | +6,552 | | | | |
| (c) ದಿನಸಿ, ಸೇವೆ, ಚಿನ್ನ .. | —1,002 | —2,512 | +2,753 | + 948 | | | | |

(i) ಇದರಲ್ಲಿ ನಾಲ್ಕು ವರುಷಗಳಲ್ಲೂ ಸರಕಾರದ ಭಾಗ: 1,900 ಲಕ್ಷಗಳು
2,306 ,,
2,047 ,,
1,991 ,,

(ii) ಒಲಸೆಕೋಡವರ ಬಂಡವರ ಸಂದಾಯಗಳು ಮತ್ತು ಇತರ ಬಾಬುಗಳು ಸೇರಿವೆ.

XIII

# ಇಂಡಿಯಾ ದೇಶದ ಕೇಂದ್ರ ಸರಕಾರದ ಆಯ-ವ್ಯಯ (ನಿವ್ವಳ)

(ಲಕ್ಷ ರೂಪಾಯಿ)

| ಆದಾಯದ ಬಾಬುಗಳು | 1929—30 | 1933—34 | ವೆಚ್ಚದ ಬಾಬುಗಳು | 1929—30 ಆಯ | 1929—30 ವ್ಯಯ | 1933—34 ಆಯ | 1933—34 ವ್ಯಯ |
|---|---|---|---|---|---|---|---|
| 1 ಸುಂಕಗಳು .. | 5,030 | 5,027 | 1 ಅರಣ್ಯಶಾಖೆ ಮತ್ತು ಬಂಡವಾಳದ ಬಾಬತು .. | .. | 5 | .. | 2 |
| 2 ವರಮಾನದ ತೆರಿಗೆಗಳು .. | 1,599 | 1,721 | 2 ನೀರಾವರಿ .. | .. | 20 | .. | 5 |
| | | | 3 ರೆಯಿಲ್ವೆಗಳು .. | 612 | .. | .. | .. |
| 3 ಉಪ್ಪು .. | 550 | 760 | 4 ಅಂಚೆ, ತಂತಿ .. | .. | 81 | .. | 61 |
| | | | 5 ಸಾಲದ ವೆಚ್ಚ .. | .. | 1,218 | .. | 1,585 |
| 4 ಅಫೀಮು .. | 255 | 63 | 6 ಮುಲ್ಕಿ ಆಡಳಿತ .. | .. | 1,149 | .. | 877 |
| | | | 7 ಹಣ, ಟಂಕಸಾಲೆ .. | 199 | .. | 110 | .. |
| 5 ಇತರ .. | 162 | 129 | 8 ಸಿವಿಲ್ ಕೆಲಸಗಳು .. | .. | 236 | .. | 172 |
| | | | 9 ಸಂಕೀರ್ಣ .. | .. | 350 | .. | .. |
| | | | 10 ಸೈನ್ಯದ ವೆಚ್ಚ .. | .. | 5,510 | .. | 4,620 |
| | | | 11 ಪ್ರಾಂತಗಳ ಚಂದ ಮತ್ತು ಇತರ ಪ್ರಾಂತದ ಲೆಕ್ಕಗಳು | .. | .. | .. | 100 |
| | | | 12 ವಿಶೇಷ ಬಾಬುಗಳು .. | 189 | .. | .. | 9 |
| ಒಟ್ಟು .. | 7,596 | 7,700 | ಒಟ್ಟು .. | 8,596 | 8,569 | 7,810 | 7,786 |

## XIV ಇಂಡಿಯಾ ದೇಶದ ಪ್ರಾಂತ ಸರಕಾರಗಳು (ಆದಾಯ-ವೆಚ್ಚ)

| ಸರಕಾರಗಳು | 1929—30 ಆದಾಯ | 1929—30 ವೆಚ್ಚ | 1933—34 ಆದಾಯ | 1933—34 ವೆಚ್ಚ |
|---|---|---|---|---|
| 1 ಮದರಾಸ್ .. .. | 18·08 | 16·84 | 17·27 | 16·88 |
| 2 ಬೊಂಬಾಯಿ .. .. | 15·91 | 15·80 | 14·90 | 15·18 |
| 3 ಬಂಗಾಳ .. .. | 11·35 | 11·33 | 9·28 | 11·32 |
| 4 ಸಂಯುಕ್ತ ಪ್ರಾಂತಗಳು .. .. | 12·98 | 12·33 | 11·51 | 11·47 |
| 5 ಪಂಜಾಬ್ .. .. | 11 27 | 11·32 | 10·85 | 10·25 |
| 6 ಬರ್ಮಾ, ಷಾನ್ ಸಂಸ್ಥಾನಗಳು .. .. | 10·31<br>·51 | 10·98<br>·51 | 9·26<br>·29 | 9·00<br>·31 |
| 7 ಬಿಹಾರ್, ಒರಿಸ್ಸಾ .. .. | 5·94 | 6·09 | 5·09 | 5·21 |
| 8 ಮಧ್ಯಪ್ರಾಂತಗಳು—ಬೆರಾರ್ .. .. | 5·28 | 5·42 | 4·64 | 4·66 |
| 9 ಅಸ್ಸಾಂ .. .. | 2·71 | 2·97 | 2·07 | 2·42 |
| 10 ಕೊಡಗು .. .. | ·15 | ·15 | ·13 | ·14 |
| 11 ವಾಯವ್ಯ ಪ್ರಾಂತಗಳು .. .. | .. | .. | 1·65 | 1·60 |
| ಒಟ್ಟು .. | 94·57 | 93·80 | 88·58 | 90·23 |
| | + 77 | | — 1·65 | |

XV

# ಇಂಡಿಯಾ ಸರಕಾರದ ಸಾಲದ ವಿವರಗಳು
## 31–3–1934ರಲ್ಲಿ

| | | | |
|---|---|---|---|
| | (ಕೋಟಿ ರೂಪಾಯಿ) | | |
| (A) ಇಂಡಿಯಾದಲ್ಲಿ— | | | |
| (a) ಕಡಗಳು .. .. .. .. | 435·17 | | |
| ಜನರ ಕೈಯಲ್ಲಿದ್ದ ಖಜಾನೆ ಹುಂಡಿ .. .. | 33·31 | | |
| ಜನರ ಕೈಯಲ್ಲಿ ನೋಟಿನ ನಿಧಿಯಲ್ಲಿದ್ದ ಹುಂಡಿ .. .. | 25·93 | | |
| ಬ್ಯಾಂಕಿನಿಂದ ತೆಗೆದ ಕೈಸಾಲ .. .. .. | .. | | |
| ಒಟ್ಟು ಕಡ, ವಗೈರೆ .. | | 494·41 | |
| ಇತರ ಹೊಣೆಗಳು— | | | |
| ಪೋಸ್ಟ್ ಆಫೀಸ್ ಸೇವಿಂಗ್ಸ್ ಬ್ಯಾಂಕುಗಳು .. .. | 52·32 | | |
| ಕ್ಯಾಷ್ ಸರ್ಟಿಫಿಕೇಟುಗಳು .. .. .. | 63·72 | | |
| ಪ್ರಾವಿಡೆಂಟ್ ಫಂಡು, ಇತ್ಯಾದಿ .. .. .. | 82·14 | | |
| ತೇವಾನ ಮತ್ತು ನಿಧಿಯ ಹಣಗಳು .. .. | 15·36 | | |
| (b) ಪ್ರಾಂತಗಳ ಶಿಲ್ಕು .. .. .. | 4·42 | | |
| ಇತರ ಹೊಣೆಗಳು ಒಟ್ಟು .. | | 217·96 | |
| ಇಂಡಿಯಾದಲ್ಲಿ ಒಟ್ಟು .. .. | | | 712·37 |
| (B) ಇಂಗ್ಲಂಡಿನಲ್ಲಿ— | £ 10 ಲಕ್ಷ | | |
| ಕಡಗಳು .. .. .. .. | 320·61 | | |
| ಯುದ್ಧಕ್ಕೆ ನೆರವು .. .. .. | 16·72 | | |

| | | | |
|---|---|---|---|
| ರೆಯಿಲ್ವೆ ಸಾಲ ಸಂಬಂಧದಲ್ಲಿ ಹೊತ್ತಿರುವ ಕೆಲವು ಹೊಣೆಯು ಹಣ .. .. .. | 45·35 | | |
| ಇಂಡಿಯಾ ಹುಂಡಿ .. .. .. | .. | | |
| ಇಂಪೀರಿಯಲ್ ಬ್ಯಾಂಕ್ ಕಡ .. .. | .. | | |
| ಪ್ರಾವಿಡೆಂಟ್ ಫಂಡು, ಇತ್ಯಾದಿ .. .. .. | 1·02 | | |
| ಒಟ್ಟು ಇಂಗ್ಲೆಂಡಿನಲ್ಲಿ .. | 383·70 | | |
| (1 ರೂ. ಗೆ 1/6 ಅಂತೆ ರೂ. ನಲ್ಲಿ ಬೆಲೆ) .. | | 511·60 | |
| A : B = 7 : 5. ಬಡ್ಡಿ ತೆರಬೇಕಾದ ಹೊಣೆಗಳು ಒಟ್ಟು .. | | | 1,223·97 |

## ಈ ಹೊಣೆಗಳಿಗೆ ಪ್ರತಿಯಾಗಿ ಇರುವ ಧನಸಂಪತ್ತಿ

| | | |
|---|---|---|
| (A) (i) ರೆಯಿಲ್ವೆಗಳಿಗೆ ಕೊಟ್ಟಿರುವ ಮುಂಗಡ ಬಂಡವಾಳ .. | 757·20 | |
| (ii) ಇತರ ವಾಣಿಜ್ಯ ಶಾಖೆಗಳಿಗೆ ,, .. | 22·55 | |
| (iii) ಪ್ರಾಂತಗಳಿಗೆ ,, .. | 176·72 | |
| (iv) ದೇಶೀಯ ಸಂಸ್ಥಾನಗಳಿಗೆ ಕೊಟ್ಟದ್ದು ಮತ್ತು ಇತರ .. | 21·20 | |
| ಒಟ್ಟು ಬಡ್ಡಿ ದುಡಿಯುವ ಬಾಬುಗಳು .. | 977·67 | |
| ಖಜಾನೆ ಲೆಕ್ಕಕ್ಕೆ ಇರುವ ನಗದು, ಚಿನ್ನ, ಬೆಳ್ಳಿ ಬಂಡವಾಳದ ಪತ್ರಗಳು .. .. .. | 44·79 | |
| ಒಟ್ಟು | | 1022·46 |
| (B) ಯಾವ ಪ್ರತಿಫಲವನ್ನೂ ತಾರದ ಸಾಲದ ಭಾಗ .. .. .. | | 201·51 |

A : B = **10 : 2.**

# ಅನುಬಂಧ ೩

## ಅರ್ಥ ಕೋಶ

### ಅ

ಅಂಚು—Margin, Border
ಅಂತರ—Difference
ಅಂತರ ರಾಷ್ಟ್ರೀಯ—International
ಅಂದಾಜು—Estimate, Forecast
ಅಡವಾನ, ಅಡ—Pledge, Mortgage
ಅರ್ಥ—Means, Wealth
ಅರ್ಥಶಾಸ್ತ್ರ—Economics
ಅಧಿಕಾರಪಡೆದ—Authorised
ಅಧಿಕಾರಪತ್ರ—Letter of Authority
ಅಧಿಕಾರಿ—Authority
ಅಭಿವೃದ್ಧಿ—Development, Progress
ಅಭಿವರ್ಧಕ—Promoter
ಅಮಿತ—Unlimited
ಅಲ್ಪಾವಧಿ—Short term
ಅವ್ಯವಸ್ಥೆ—Disorder, Disorganisation
ಅವ್ಯವಸ್ಥಿತ—Disorganised
ಅಸಲು, ಅಸಲು ಕುಳ—Principal
ಅಸಲು ಕಂತು—Amortisation
ಅಸಲು ಕರೀದಿ—Prime Cost, Cost of Purchase, Cost of Production
ಅಸಾಮಾಜಿಕ—Unsocial, Anti-Social
ಅಳತೆ—Measure
ಅಳಿತ—Measurement

### ಆ

ಆಕಾರ—Area,Shape, Revenue charge
ಆಕೃತಿ—Configuration
ಆಕರ್ಷಣ—Attraction
ಆಗಮ—Technique
ಆದಾಯ—Income
ಆಧಾರ—Basis, Security
ಆಧಾರಮಾಡು—ಇಡು—Offer Security
ಆನುಕೂಲ್ಯ—Facility
ಆಪದ್ಧನ—Provident Fund, Reserve
ಆಬ್ಕಾರಿ—Excise
ಆಮದು—Import
ಆಯ—Income
ಆವರ್ತ—Cycle
ಆಸಕ್ತಿ—Interest
ಆಸ್ತಿ—Asset, Property

### ಇ

ಇಡುಗಂಟು—Deposit
ಇಬ್ಬಂದಿ—Hybrid
ಇಬ್ಬಗೆ—Two Kinds
ಇಳಿಕೆ—Subtraction, Reduction
ಇಳಿತಾಯ, ಇಳಿಮಾನ—Depreciation
ಇಳಿಮುಖ—Falling

### ಉ

ಉತ್ಕಟ—Critical
ಉತ್ಕಟ ಸಮಯ—Crisis
ಉತ್ಪತ್ತಿ—Yield, Production
ಉತ್ಪತ್ತಿಮಂಡಲ—Zone of Production
ಉತ್ಪತ್ತಿಯ ವೆಚ್ಚ—Expense of Production
ಉತ್ಸಾಹಿ—Enthusiast

**ಉದಾರ**—Liberal, Large
**ಉದ್ಧರಿ**—Credit
**ಉಪಯೋಗ**—Utility, Usefulness

ಊ

**ಊನ**—Defective

ಋ

**ಋಣ**—Debt
**ಋಣ ವಿಮೋಚನೆ**—Debt Redemption
**ಋಣ ವಿಮೋಚಕ ನಿಧಿ**—Sinking Fund

ಎ

**ಎಣಿಕೆ**—Calculation, Reckoning, Expectation
**ಎತ್ತು**—Raise
**ಎರಡನೆಯ ವಟ್ಟ**—Rediscount
**ಎರವಲು**—Credit, Borrowed

ಏ

**ಏರಿಳಿ**—Rise and Fall

ಒ

**ಒಂದೇ**—Identical
**ಒಡೆತನ**—Ownership
**ಒತ್ತೆ**—Pledge, Security
**ಒಪ್ಪಂದ**—Contract, Agreement
**ಒಪ್ಪಿಕೆ**—Acceptance
**ಒಲಸೆಹೋಗು**—Emigrate
**ಒಳ**—Internal, Inner

ಕ

**ಕಂತು**—Instalment
**ಕಚ್ಚಾ ಸಾಮಾನು**—Raw Material, Unfinished Goods
**ಕಟ್ಟಡ**—Structure, Building
**ಕಟ್ಟಡಕ**—Agreement, Covenant, Contract
**ಕಡ**—Loan
**ಕಡಮೆ, ಕಡಮೆಮಾಡು**—Less, Lessen
**ಕಡ್ಡಾಯ**—Compulsory, Obligatory
**ಕರ**—Duty, Cess
**ಕರೀದಿ**—Cost, Price
**ಕರೆ**—Margin
**ಕಾಮಗಾರ**—Worker, Labourer
**ಕಾವಲು**—Protectorate, Gaurdianship
**ಕಾರ್ಯಕಾರಿ**—Effective
**ಕಾರ್ಯನಕ್ಷೆ**—Plan
**ಕಾರ್ಯಭಾರಿ**—Agent
**ಕಾರ್ಯರೀತಿ**—Technique
**ಕಿರುವಾಯಿದೆ**—Short Period
**ಕ್ರಿಯಾಮಂಡಲ**—Field of action
**ಕುಗ್ಗು**—Fall, Depression
**ಕುದು, ಕುದುವಿಡು**—Pledge
**ಕುಳ**—Member, Factor, Customer
**ಕೂಡಿಡು**—Save
**ಕೂಡಿಸು**—Assemble, Collect
**ಕೂಡುಬಂಡವಾಳ**—Joint-stock Capital
**ಕೂಡು ಕುಟುಂಬ**—Joint Family
**ಕೇಳಿದಾಗ ಹಿಂದಿರುಗುವ ಹಣ**—Money at Call
**ಕೇಂದ್ರ**—Central
**ಕೈಸಾಲ**—Hand loan
**ಕೈಹಣ**—Cash on hand, Money on hand, Till money
**ಕೋಶ**—Fund, Reserve
**ಕೌನ್ಸಿಲ್ ಹುಂಡಿ**—Council Bill
**ಕೊಂಡಿ**—Link

## ಖ

ಖಜಾನೆ, ಖಜಾನೆ ಹುಂಡಿ—Treasury, Treasury Bill
ಖಾಯಂ—Permanent, Fixed
ಖಾಸಗಿ, ಖಾಸಗಿ ಆಸ್ತಿ—Private, Private property

## ಗ

ಗಟ್ಟಿ—Fixed, Substantive
ಗಣತಿ—Census
ಗತಿ—Movement
ಗರ್ತ—Slough of a Depression
ಗಾತ್ರ—Size
ಗಿರಣಿ—Mill, Factory
ಗಿರವಿ—Pledge, Mortgage, Security
ಗಿರಾಕಿ—Demand, Custom
ಗುಣಿತ—Multiple
ಗೊತ್ತಾದ ಗಿರಾಕಿ—Custom

## ಚ

ಚಕ್ರ—Cycle, Wheel
ಚಕ್ರಾಧಿಪತ್ಯ, ಚಕ್ರಾಧಿಪತ್ಯದ ದೃಷ್ಟಿ—Empire, Imperial point of View
ಚಂದಾ, ಚಂದಾ ಎತ್ತಿದ—Subscription, Subscribed, Contributed
ಚಲಾವಣೆ, ಚಲಾವಣೆಯಲ್ಲಿರುವ—Current, Circulating
ಚಾಲಕ—Director, Manager
ಚಾಲತಿ, ಚಾಲತಿ ಹಣ—Current, Currency
ಚೆಕ್ಕು ನಿಕಾಲೆ—Clearing
ಚಿಲ್ಲರೆ—Retail
ಚೌಕಾಸಿ—Higgling

## ಜ

ಜನತೆ—People, Nation
ಜನಸಂಖ್ಯೆ—Population
ಜನಜೀವನ—Life of the People
ಜನಾಂಗ ಸಂಘ—League of Nations
ಜಪ್ತಿ—Attachment
ಜವಾಬ್ದಾರಿಯು—Responsible
ಜೀವನ ವೆಚ್ಚ—Cost of Living
ಜೂಜು—Gambling

## ತ

ತಕ್ಕಡಿ—Balance
ತಗ್ಗು, ತಗ್ಗಿಸು—Dear, Depress
ತರಗು—Brokerage
ತರಗಿನ ದಲ್ಲಾಳಿ, ವರ್ತಕ—Broker, Commission Agent
ತಲೆ—Head, Chief
ತಲೆಗಂದಾಯ—Poll Tax
ತಂತಿ, ತಂತಿಯ ರವಾನೆ—Telegraph, Telegraphic Transfer (T. T.)
ತೀರುವೆ—Redemption, Amortization
ತೀವ್ರತೆ—Intensity
ತುಂಬಿಕೊಡು—Make up
ತೂಕದ ಸರಿ—Balance, Weightage
ತೆರಾಣೆ—Payment
ತೆರಿಗೆ—Tax
ತೇಜಿ ವರ್ತಕ—Bull

## ದ

ದಂಡ—Penalty, Fine, Indemnity
ದರ—Rate
ದರಖಾಸ್ತು—Application
ದರ್ಶನಿ—Sight

ದಲ್ಲಾಳ—Broker, Commission Agent
ದಲ್ಲಾಳಿ—Brokerage, Commission
ದವಸ—Produce
ದ್ರವ್ಯ—Material, Money
ದೀರ್ಘಾವಧಿ—Long term
ದುಗುಣಿ—Double
ದುಸ್ಸಾಹಸ—Speculation

ಧ

ಧಾತು—Tone
ಧಾರಣೆ—Rate, Price
ಧಾರಣೆವಾಸಿ—Prices

ನ

ನಗದು—Cash
ನಯು—Delicacy
ನಷ್ಟ—Loss
ನಷ್ಟ ತುಂಬಿಕೊಡುವುದು—Compensate, Reparation
ನಚ್ಚಿಕೆ, ನಂಬಿಕೆ—Credit, Faith, Trust
ನಾಣ್ಯ, ನಾಣ್ಯಪದ್ಧತಿ—Coin, System of Coinage
ನಿಡುವಾಯಿದೆ—Long term
ನಿಧಿ—Reserve, Fund
ನಿರೂಪ—Command, Order
ನಿರೋಧ—Obstruction, Prevention
ನಿವ್ವಳ—Net
ನಿಷೇಧ—Negative
ನಿಷ್ಫಲ—Unproductive
ನಿಕ್ಷೇಪ—Hoard
ನೀತಿ—Policy, Ethic
ನೇರ—Direct, Open

ಪ

ಪತ್ತು—Credit
ಪದಾರ್ಥ—Material
ಪದಾರ್ಥದ ಬದಲಾಬದಲಿ—Barter
ಪದಾರ್ಥಗಳ ಬೆಲೆ, ಪಟ್ಟಿ—Invoice, Inventory
ಪದ್ಧತಿ—Custom, System
ಪರಂಪರೆ—Series
ಪರಸ್ಪರ ಸಹಾಯ—Co-operation
ಪರಿಮಾಣ—Quantity
ಪರೀಕ್ಷೆ—Examination
ಪರೀಕ್ಷಾಪ್ರಯೋಗ—Experiment
ಪರೋಕ್ಷ—Indirect
ಪೀಡೆ—Pest
ಪುಡಿಸಾಲ—Floating or Unfunded Debt
ಪುದುವಟ್ಟು—Deposit
ಪುರೋಭಿವೃದ್ಧಿ—Progress
ಪೇಟೆ—Market
ಪೇಟೆಗಿಡುವುದು—Marketing
ಪೇಟೆಯ ವ್ಯವಸ್ಥೆ—Market organisation
ಪೇಟೆಯಲ್ಲಿ ಸುಲಭವಾಗಿ ಮಾರಬಲ್ಲ—Negotiable
ಪೈಪೋಟಿ—Competition
ಪೊಗದಿ—Tribute, Subsidy
ಪೌರ—Civic
ಪ್ರಕೃತಿ—Nature
ಪ್ರಕೃತಿಯಿಂದ ಉತ್ಪತ್ತಿ ರೂಡಿಸುವ ಕೈಗಾರಿಕೆಗಳು—Extractive Industries
ಪ್ರಕೃತಿ ಸಂಪತ್ತು—Natural Wealth
ಪ್ರಕೃತಿದತ್ತ ಸಹಾಯ—Nature's aid
ಪ್ರಗತಿ—Progress
ಪ್ರಜೆ—Subject
ಪ್ರಜಾಧಿಕಾರ, ಪ್ರಜಾಧಿಪತ್ಯ—Democracy
ಪ್ರಜಾಗಣತಿ—Census

ಪ್ರತಿ—Substitute, Opposite, Copy
ಪ್ರತಿನಿಧಿ—Representative
ಪ್ರತಿ ಹುಂಡಿ—Reverse Council
ಪ್ರಭಾವ—Influence
ಪ್ರಭಾವಮಂಡಲ—Sphere of Influence
ಪ್ರಮಾಣ—Size, Proof, Proportion
ಪ್ರಮಿತಿ—Standard

ಫ

ಫಲ—Product, Result, Fruit
ಫಲಕಾರಿ—Fruitful, Effective
ಫಲವಿಭಾಗ—Division of Product
ಫಲವತ್ತು—Fertile
ಫಿರ್‌ವಟಾವ್—Rediscount

ಬ

ಬಡತಿ—Promotion
ಬಡ್ಡಿ—Interest
ಬಡ್ಡಿಗೆ ಹಾಕು—ಹೂಡು—Invest
ಬನಿ—Flexibility, Elasticity
ಬಹುಕಾಲ ನಿಲ್ಲುವ—Durable
ಬಹುಮತ—Majority opinion
ಬಂಡವಾಳ—Capital
ಬಂಡವಾಳಪತ್ರ—Capital stock
ಬಂಡವಾಳ ಭಾಗ—Share
ಬಂಡವಾಳಗಾರ—Capitalist
ಬಂಡವಾಳ ಪದ್ಧತಿ—Capitalism
ಬಾಬು—Item
ಬೆರೆ—Mix
ಬೆರೆದು ಒಂದಾಗು—Amalgamate
ಬೆಲೆ—Value
ಬೆಲೆ ಇಳಿದೀತೆಂಬ ಭಯದಿಂದ ಮಾರುವವ —Bear
ಬೆಳವಣಿಗೆ—Development, Growth
ಬೆಳಸು—Crop
ಬೆಂಬಲ—Backing
ಬೆಂಗಾವಲು—Cover, Support
ಬೇಕಾದರೆ ತಾವು ಮಾತ್ರ ಕೊಳ್ಳುವ ಮಾರುವ ಅಧಿಕಾರ—Option

ಭ

ಭಾಗ—Share, Part
ಭಾರ—Burden
ಭೋಗ—Luxury
ಭೋಗ್ಯ—Mortgage with possession

ಮ

ಮತ—Vote, Opinion
ಮನೆವಾರ್ತೆ ವೆಚ್ಚ—Home charges
ಮಹಾಜನ—Sahukar, Public
ಮಳಿಗೆ—Stores
ಮಂಡಲ—System
ಮಂಡಿ—Wholesale shop
ಮಂದಿ—Slackness, Depression, Bearishness
ಮಾದರಿ—Sample, Model
ಮಾರಾಟ—Sale, Exchange
ಮಾರುವೆ—Exchange
ಮಾರುವೆ ದರ—Exchange Rate
ಮಾರುವೆ ನೀತಿ—Exchange policy
ಮಾರುವೆ ಹುಂಡಿ—Exchange Bill
ಮಿತ—Limited
ಮೀಸಲು—Earmarked
ಮುದ್ದತ್—Future, Forward
ಮುರಿ—Convert
ಮುರಿಯಬಲ್ಲ—Convertible
ಮುರಿಸಲಾಗದ—Inconvertible
ಮುಲ್ಕಿ—Civil

ಮುಂಗಡ—Advance
ಮೂಲ—Origin
ಮೂಲಧನ—Capital
ಮೂಲಸಾಮಗ್ರಿ—Raw Material
ಮೇಲ್ತೆರಿಗೆ—Super-Tax, Surcharge
ಮೇಸ್ತ್ರಿ—Overseer
ಮೊದಲನೆ—Primary, First

ಯ

ಯಜಮಾನ—Principal. Owner
ಯಂತ್ರ—Machine
ಯಂತ್ರಶಕ್ತಿ—Machanical Power
ಯಂತ್ರ ಸಾಮಗ್ರಿ—Machinery
ಯಾನವಾಹನ—Transport
ಯುಕ್ತಿ—Reason, Argument
ಯೋಗ್ಯ—Eligible, Proper
ಯೋಜಿಸು—Yoke, Employ

ರ

ರಚನೆ—Structure, Constitution
ರಫ್ತು—Export
ರವಾನೆ—Remittance, Transmission
ರಸೀತಿ—Receipt
ರಕ್ಷಣೆ—Protection
ರಾಜಕೀಯ—Political
ರಾಷ್ಟ್ರ—Nation
ರಿಯಾಯಿತಿ—Concession
ರೂಢಿಸು—Extract, Derive
ರಾಕ್ಷಸ—Giant

ಲ

ಲಕ್ಷಣ—Feature
ಲಾಭ—Profit
ಲಾಭದ ಶೇಕಡ ಭಾಗ—Dividend
ಲಾಭಾಳಿ, ಲಾಭಖೋರ—Profiteer
ಲೆಕ್ಕದ ಸಾಲ—Credit, Loan of Account
ಲೇಣೆ—Asset, Receipt
ಲೇವಾದೇವಿ—Financial Transaction
ಲೋಹದ ಗಟ್ಟಿ—Ingot, Bullion
ಲೋಹಕೋಶ—Metallic Reserve

ವ

ವಟ್ಟ—Discount
ವರಮಾನ—Income
ವರ್ಗಾಯಿಸು—Transfer
ವರ್ತಕ—Merchant, Dealer, Jobber
ವಸತಿ—Colony
ವಸೂಲಿ—Collection
ವಾಹನ—Vehicle, A means of Transport
ವಿದೇಶಿ—Foreign
ವಿನಿಮಯ—Exchange
ವಿನೋದ—Entertainment
ವಿಫಲ—Unproductive
ವಿಭಾಗ—Division
ವಿಮೆ—Insurance
ವಿಮೋಚನ—Redemption, Clearance
ವಿರೋಧ—Opposition, Hostility
ವಿವೇಚನೆಮಾಡು—Discriminate
ವಿಶೇಷ—Special
ವಿಶ್ವಾಸ—Confidence, Trust, Faith
ವಿಜ್ಞಾನ—Science
ವೆಚ್ಚ—Expense
ವೇಗ—Rapidity, Velocity
ವೈಶಿಷ್ಟ್ಯ—Speciality
ವ್ಯವಹಾರ—Transaction

ಶ್ರ

ಶ್ರಮ—Labour
ಶ್ರಮಕರ—Labourer
ಶ್ರಮ ವಿಭಾಗ—Division of Labour
ಶಾಸ್ತ್ರಕ್ಕೆ ಅಥವಾ ರಚನೆಗೆ ಸಂಬಂಧಿಸಿದ—Scientific, Technical
ಶಿಲ್ಕು—Balance
ಶಿಲ್ಪ—Engineering
ಶಿಕ್ಷಣ—Education, Discipline
ಶೇಕಡ—Percentage

ಸ

ಸಗಟು—Wholesale
ಸಟ್ಟ—Speculation
ಸದಸ್ಯ—Member
ಸಮಷ್ಟಿ—Entire Society
ಸಮಧಾತು—Even tone
ಸಮತೆ—Equilibrium
ಸಮರಸ—Harmony
ಸಮತಾನ—In Tune
ಸಮಾಜ—Society
ಸಮಾಜ ಸಮತಾವಾದ—Socialism
ಸಮ್ಮೇಳನ—Combination, Federation
ಸರಕಾರ—Government
ಸರಕು—Merchandise
ಸರಬರಾಯಿ—Supply
ಸರಾಫ್ ಕಟ್ಟೆ—Money market
ಸರ್ವಮಾನ್ಯ, ಸರ್ವಾಧಿಕಾರ—Monopoly
ಸಹಕಾರ—Co-operation
ಸಹಾಯದ್ರವ್ಯ—Subsidy, Subvention, Grant-in-aid
ಸಹಾಯದೃಷ್ಟಿ—Positive
ಸಂಕುಚಿತ—Conservative, Narrow
ಸಂಗತಿ—Fact
ಸಂತತಿ—Descendents, Issue
ಸಂದಾಯ—Payment
ಸಂಪತ್ತು—Wealth
ಸಂಪ್ರದಾಯ—Tradition
ಸಂಸ್ಕರಣ—Reform
ಸಂಸ್ಕೃತಿ—Culture
ಸಂಸ್ಥೆ—Institution
ಸಾಗಿಸುವ ವೆಚ್ಚ—Cost of Transport
ಸಾಗುವಳಿ—Cultivation
ಸಾಮಂತ—Protected, Subordinate
ಸಾಲ—Debt
ಸಾಂದ್ರತೆ—Density
ಸಾಮ್ರಾಜ್ಯವಾದ—Imperialism
ಸಾವಿನ ತೆರಿಗೆ—Death Duty
ಸಾಹಸ ವ್ಯಾಪಾರ—Speculation
ಸುಖಸೌಕರ್ಯ—Comfort
ಸುಂಕ—Customs, Fisc
ಸುಂಕದ ಪೌಳಿ—Tariff wall
ಸುವ್ಯವಸ್ಥಿತ—Well Organized
ಸೂಚಿಕೆ—Indicator
ಸೂಚೀ ಸಂಖ್ಯೆ—Index number
ಸೇವೆ—Service
ಸೋಡಿ—Rebate
ಸ್ಥಳ, ಸ್ಥಳೀಯ—Local
ಸ್ಪರ್ಧೆ—Competition
ಸ್ವರ್ಣ—Gold
ಸ್ವತಂತ್ರ—Independent, Free
ಸ್ವಾಧೀನ—Dependent

ಹ

ಹಣ—Money
ಹದ—Temper

ಹಾಳತ—Economy, Thrift
ಹಿಡಿತ—Restraint, Control
ಹಿಡುವಳಿ—Holding
ಹಿಗ್ಗು—Expand
ಹುಟ್ಟುವಳಿ—Yield, Earning
ಹೂಡು—Invest, Employ
ಹೂತಿಡು—Hoard
ಹೆಗ್ಗಡೆ—Chief, Principal
ಹೆಪ್ಪು ಕಟ್ಟಿಸು—Freeze
ಹೆಸರಿಗಿರುವ ಬೆಲೆ—Nominal Value
ಹೇರು—Load, Incidence
ಹೇರುಪಟ್ಟಿ—Bill of Lading
ಹೊಣೆ—Liability
ಹೊಣೆ ಒಪ್ಪಿಕೆ—Acceptance
ಹೊರೆ—Burden, Load, Incidence
ಹೊಂದಿಕೆ—Adjustment

## ಕ್ಷ

ಕ್ಷಾಮ—Famine
ಕ್ಷೇಮ—Welfare
ಕ್ಷೇತ್ರ—Field

---

449—36.— ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು